ಈ ದೇವತೆಗಳ ಒಳಗೇನು, ತದನ್ಯರಾದ ದೇವಗಂಧರ್ವರ ಪರಿಯಂತ ದೇವತೆಗಳ ಒಳಗೇನು, ವಿದ್ಯಮಾನಗಳಾದ ಜ್ಞಾನೇಚ್ಛಾಕ್ರಿಯಾಶಕ್ತಿಗಳಲ್ಲಿ, ಚತುರಾತ್ಮನು–ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ಈ ನಾಲ್ಕು ರೂಪದಿಂದ ಯುಕ್ತನಾಗಿ ಶ್ರೀ ಪರಮಾತ್ಮ ಜ್ಞಾನೇಚ್ಛಾದಿ ಪ್ರೇರಣೆ ಮಾಡೋವನಾಗಿದ್ದಾನೆ ಎಂತ ತಾತ್ಪರ್ಯ.

**ತೋರುತಿಪ್ಪನು ಚಕ್ರದಲಿ ಹಿಂ ।**
**ಕಾರನಾಮಕ ಶಂಖದಲಿ ಪ್ರತಿ ।**
**ಹಾರ ಗದೆಯಲಿ ನಿಧನ ಪದ್ಮದಲಿಪ್ಪ ಪ್ರಸ್ತಾವ ॥**
**ಕಾರುಣಿಕನುದ್ಗೀಥ ನಾಮದಿ ।**
**ಮಾರಮಣನೈರೂಪಗಳ ಶಂ ।**
**ಖಾರಿ ಮೊದಲಾದಾಯುಧಗಳೊಳು ಸ್ಮರಿಸಿ ಧರಿಸುತಿರು ॥ ೨೮ ॥**

ಶಂಖಚಕ್ರಾದಿ ಮುದ್ರಾಗತ ಭಗವದ್ರೂಪಗಳ ಹೇಳತಾರೆ.

ಚಕ್ರದಲಿ–ಚಕ್ರಮುದ್ರಾದಲ್ಲಿ, ಹಿಂಕಾರನಾಮಕ–ಹಿಂಕಾರಶಬ್ದವಾಚ್ಯನಾದ ಶ್ರೀ ಪರಮಾತ್ಮ, ಶಂಖದಲಿ–ಶಂಖಮುದ್ರಾದಲ್ಲಿ, ಪ್ರತಿಹಾರ–ಪ್ರತಿಹಾರನಾಮಕ ಶ್ರೀಪರ ಮಾತ್ಮ, ಗದೆಯಲಿ–ಗದಾಮುದ್ರೆಯಲ್ಲಿ, ನಿಧನ–ನಿಧನನಾಮಕ ಶ್ರೀಪರಮಾತ್ಮ, ಪದ್ಮ ದಲಿ–ಪದ್ಮಮುದ್ರಾದಲ್ಲಿ, ಪ್ರಸ್ತಾವ–ಪ್ರಸ್ತಾವನಾಮಕ ಶ್ರೀಪರಮಾತ್ಮ, ಕಾರುಣಿಕನು–ಸೃಷ್ಟ್ಯಾದಿಗಳಿಗೆ ಮೂಲಕಾರಣನಾದವ ಶ್ರೀ ನಾರಾಯಣದೇವರು. ಈ ನಾರಾಯಣ ಸಾಂಕೇತವಾದ ನಾರಾಯಣ ಮುದ್ರಾದಲ್ಲಿ, ಉದ್ಗೀಥನಾಮದಿ–ಉದ್ಗೀಥ ಎಂಬ ನಾಮ ದಿಂದ ಇದ್ದಾನೆ. ಮಾರಮಣ–ಲಕ್ಷ್ಮೀಪತಿಯಾದ ಶ್ರೀ ನಾರಾಯಣದೇವರ ಅಂಶರೂಪ ಗಳು ಇವ್ರಗಳೇ, ಐರೂಪಗಳ–ಹಿಂಕಾರಾದಿ ಐದು ರೂಪಗಳ ತಿಳಿದು, ಶಂಖಾರಿ ಮೊದ ಲಾದ–ಈ ಪೂರ್ವೋಕ್ತ ಶಂಖಚಕ್ರಾದಿ, ಆಯುಧಗಳೊಳು–ಪಂಚಮುದ್ರಾಗಳು. ಈ ಪಂಚಮುದ್ರೆಗಳು ಶ್ರೀ ಪರಮಾತ್ಮನ ಆಯುಧಗಳು. ಈ ಆಯುಧಗಳಲ್ಲಿ, ಸ್ಮರಿಸಿ–ಶ್ರೀ ಪರಮಾತ್ಮನ ರೂಪಗಳನ್ನು ಸ್ಮರಣೆಮಾಡಿ, ಧರಿಸುತಿರು–ದ್ವಾದಶನಾಮಗಳಲ್ಲಿ ಈ ಮುದ್ರೆಗಳು ಧಾರಣೆ ಮಾಡಬೇಕು. ಈ ಪಂಚಮುದ್ರೆಗಳಿಗೆ ಕೃದ್ಧೋಲ್ಕ, ಮಹೋಲ್ಕ, ವೀರೋಲ್ಕ, ದ್ಯುಲ್ಕ, ಸಹಸ್ರೋಲ್ಕ ಎಂತ ಐದು ಭಗವದ್ರೂಪಗಳು ಅಭಿಮಾನಿಗಳು ಬ್ಯಾರೆ ಇರೋದಾಗಿ ಅದೆ. ಈ ಐದು ರೂಪಗಳು ೧. ತಮ, ೨. ಮೋಹ, ೩. ಮಹಾ ಮೋಹ, ೪. ತಾಮಿಸ್ರ, ೫. ಅಂಧತಾಮಿಸ್ರ ಎಂಬ ಐದು ಅವಿದ್ಯೆಗಳು ದೇಹದಲ್ಲಿ ಅದೆ ಎಂತ ಸಂಧ್ಯಂತರದಲ್ಲಿ ಉಕ್ತವಾಗಿ ಅದೆ. ತನ್ನಾಮ ನರಕಗಳು ಬ್ಯಾರೆ ಅವೆ. ಈ ನರಕಾಭಿಮಾನಿಗಳು ಈ ಭಗವದ್ರೂಪಗಳೇನೇ. ಈ ಪಂಚಮುದ್ರಾಂತರ್ಗತ ಶ್ರೀ ಪರ ಮಾತ್ಮನ ರೂಪಗಳೇ ಪಂಚ ಅವಿದ್ಯಾಗಳ ಪರಿಹರಿಸಿ ಈ ಪಂಚ ನರಕಗಳು ಸಂಹಾರ ಮಾಡತದೆ ಅಂತ ಅನುಸಂಧಾನದಿಂದ ಮುದ್ರಾಧಾರಣ ಮಾಡಬೇಕೆಂತ ತಾತ್ಪರ್ಯ. ಇದರಿಂದ ಕ್ರಮಾತ್ ಅವಿದ್ಯಾ ತತ್ಕಾರ್ಯ ಪರಿಹಾರವಾಗಿ ತನ್ನಾಮ ನರಕಭೋಗಗಳು

ಪರಿಹಾರವಾಗತದೆ ಎಂತ ಸತ್ಯತೀರ್ಥೀಯ ಗ್ರಂಥದಲ್ಲಿ ಉಕ್ತವಾಗಿ ಅದೆ. ಆದಕಡಿಯಿಂದ ದ್ವಾದಶನಾಮಗಳಲ್ಲಿ ಋಗ್ವೇದ, ಯಜುರ್ವೇದ ಬ್ರಹ್ಮಕರ್ಮಗಳಲ್ಲಿ ಊರ್ಧ್ವಪುಂಡ್ರ ಸ್ತೋತ್ರ ವಿವರವಾಗಿ ಅದೆ. ಊರ್ಧ್ವಪುಂಡ್ರಸ್ತೋತ್ರಪ್ರಕಾರ ಪಂಚಮುದ್ರಾಗಳ ಧಾರಣ ಮಾಡಬೇಕೆಂತ ತಾತ್ಪರ್ಯ.

**ತನುವೆ ರಥ ವಾಗಾಭಿಮಾನಿಯೆ ।**
**ಗುಣವೆನಿಸುವಳು ಶ್ರೋತ್ರದಲಿ ರೋ ।**
**ಹಿಣಿ ಶಶಾಂಕರು ಪಾಶಪಾಣಿಗಳಶ್ವವೆಂದೆನಿಸಿ ॥**
**ಇನನು ಸಂಜ್ಞಾದೇವಿಯರು ಇಹ ।**
**ರನಲಲೋಚನ ಸೂತನೆನಿಸುವ ।**
**ಪ್ರಣವಪಾದ್ಯ ಪ್ರಾಣನಾಮಕ ರಥಿಕನೆನಿಸುವನು ॥ ೨೯ ॥**

ದೇಹವನ್ನು ರಥಾನುಸಂಧಾನದಿಂದ ಶ್ರೀ ಪರಮಾತ್ಮಗೆ ಅರ್ಪಿಸೋ ಕ್ರಮವನ್ನ ಹೇಳತಾರೆ.

ತನುವೆ ರಥ–ಈ ಸ್ಥೂಲದೇಹವೇ ರಥ (ಎಂದರೆ ತದಭಿಮಾನಿ ಬ್ರಹ್ಮದೇವರು), ವಾಗಾಭಿಮಾನಿಯೇ ಗುಣ–ವಾಕ್ಯಗಳಿಗೆ ಅಭಿಮಾನಿಯಾದ ಸರಸ್ವತೀದೇವೇರು ಕುದರಿಗಳಿಗೆ ಕಟ್ಟತಕ್ಕ ಹಗ್ಗಗಳು ಎಂತ, ಎನಿಸುವಳು–ಎನಿಸೋವಳಾಗತಾಳೆ. ಶ್ರೋತ್ರದಲಿ–ಕಿವಿಗಳಲ್ಲಿ ಅಭಿಮಾನಿಗಳಾಗಿ ಇರತಕ್ಕ, ಶಶಾಂಕರೋಹಿಣಿ–ಚಂದ್ರದೇವರು, ಇವನ ಪತ್ನಿ ರೋಹಿಣೀದೇವೇರು ಮತ್ತು, ಇನನು ಸಂಜ್ಞಾದೇವಿಯರು–ನೇತ್ರಾಭಿಮಾನಿಗಳಾದ ಸೂರ್ಯದೇವರು, ಇವನ ಪತ್ನಿ ಸಂಜ್ಞಾದೇವೇರು, ಅಶ್ವವೆಂದೆನಿಸಿ–ಈ ನಾಲ್ಕು ಮಂದಿ ಕುದರಿಗಳು ಎಂತ ಎನಿಸತಾರೆ. ಕುದರಿಗಳಿಂದ ಹ್ಯಾಂಗೆ ಸಂಚಾರ ಮಾಡತದೋ, ಶ್ರವಣಾಭಿಮಾನಿಗಳು, ನೇತ್ರಾಭಿಮಾನಿಗಳು ಶ್ರವಣದರ್ಶನಾದಿಗಳ ದ್ವಾರಾ ದೇಹವನ್ನು ಹಾಂಗೆ ಸಂಚಾರ ಮಾಡಿಸತಾರೆ. ಪಾಶಪಾಣಿ – ಪಾಣ್ಯಭಿಮಾನಿ ದಕ್ಷ ಪಾಶನಾಗಿ ಕುದರಿಗಳು ಕಟ್ಟತಕ್ಷ ಹಗ್ಗವಾಗಿದ್ದಾನೆ. ಪಾಶಪಾಣಿ ಎಂತ ಗಣೇಶಗೂ ನಾಮವದೆ. ಚಂದ್ರರೋಹಿಣಿ ಸರಸ್ವತ್ಯಾಖ್ಯ ಹಗ್ಗದಿಂದಲೂ ಕಟ್ಟಿಸಿಕೊಂಡಿದ್ದಾರೆ. ಇಹ ಅನಲ ಲೋಚನ–ಮನೋಭಿಮಾನಿಯಾದ ರುದ್ರದೇವರು ಈ ಕುದರಿಗಳಿಗೆ ಬಾಯಿಗಳಿಗೆ ಲಗಾಮು ರೂಪದಿಂದ ಇದ್ದಾನೆ. ಪ್ರಣವಪಾದ್ಯ–ಓಂಕಾರಪ್ರತಿಪಾದ್ಯನಾದ ಬಿಂಬರೂಪಿಯಾದ ಶ್ರೀ ಪರಮಾತ್ಮ, ರಥಿಕನೆನಿಸುವನು–ದೇಹರಥಾಂತರ್ಗತನಾಗಿ ಪ್ರಭು ಎಂತ ಎನಿಸತಾನೆ. ಪ್ರಾಣನಾಮಕ–ಶ್ರೀ ವಾಯುದೇವರು, ಸೂತನೆನಿಸುವ–ರಥಕ್ಕೆ ಕಟ್ಟಿರತಕ್ಕ ಕುದುರಿಗಳನ್ನು ನಡೆಸತಕ್ಕ ಸೂತ ಎಂತ ಕರಿಸತಾನೆ.

**ತಾ॥** ರಥಿಕನ ಆಜ್ಞಾ ವಾಯುದೇವರಿಗೆ, ವಾಯುದೇವರ ಆಜ್ಞಾ ರುದ್ರದೇವರಿಗೆ, ರುದ್ರದೇವರ ಆಜ್ಞಾ ಇಂದ್ರಿಯಾಭಿಮಾನಿ ದೇವತಿಗಳಿಗೆ. ಈ ಪ್ರಕಾರ ದೇಹಾಖ್ಯ ರಥ

ಸಂಚಾರ ಮಾಡತದೆ ಎಂತ ತಾತ್ಪರ್ಯ. ಈ ಕ್ರಮದಿಂದ ಸಂಚಾರ ಮಾಡತಕ್ಕ ದೇಹ ವನ್ನು ದೇವರಥತ್ವೇನ ಅನುಸಂಧಾನ ಮಾಡಿ ಎಲ್ಲೆಲ್ಲಿ ಸಂಚಾರ ಮಾಡತಾನೋ ಅದೆಲ್ಲಾ ಶ್ರೀ ಪರಮಾತ್ಮಗೆ ಮೆರವಣಿಗೆ ಎಂತ ತಿಳಿದು ಸಂಚಾರ ಯಾವತ್ತು ಬಿಂಬಮೂರ್ತಿಗೆ ರಥತ್ವೇನ ಸಮರ್ಪಣ ಮಾಡಬೇಕು ಎಂತ ತಾತ್ಪರ್ಯ.

ಪ್ರಮಾಣ :– "ವಿಷ್ಣೋರಾಯತನಂ ದಿವ್ಯಂ ದೇಹಾಖ್ಯಂ ವೈಷ್ಣವಂ ರಥಂ | ಸೂರ್ಯಶ್ಚ ಸೂರ್ಯಭಾರ್ಯಾ ಚ ಚಕ್ಷುರ್ದ್ವಯಸಮಾಶ್ರಿತೌ || ವಾಜಿರೂಪೌ ತಥಾ ಸೋಮಸ್ತತ್ಪತ್ನೀ ಚ ಶ್ರುತಿಸ್ಥಿತೌ | ಹಯಪಾಶೌ ವಹಂತ್ಯೇತೇ ತದ್ಬಂಧಃ ಪ್ರಗ್ರಹಾ ತ್ಮಕಃ || ಉಮಾ ವಾಜಿಸ್ಥಿತಾ ಜ್ಞೇಯಾ ತತ್ಪತಿರ್ಮನಸಿ ಸ್ಥಿತಃ | ಸಂಪ್ರೋಕ್ತಸ್ಸಾರಥಿ ಸ್ತಸ್ಮಿನ್ ರಥೇ ಪ್ರಾಣಃ ಪ್ರತಿಷ್ಠಿತಃ || ಪ್ರಕೃಷ್ಟಜ್ಞಾತ್ವಾತ್ಪ್ರಾಣೋ ಪ್ರಾಣೋऽಹಂ ಸ್ಮೃತಃ | ಅಧಿತಿಷ್ಠತಿ ವಿಷ್ಣುಸ್ತು ತಸ್ಮಾದ್ದೇಹಮಲಂ ಚರೇತ್ || " ಇತಿ ಮಾನಸಸ್ಮೃತಿಃ.

**ಅಮಿತಮಹಿಮನಪಾರಗುಣಗಳ |**
**ಸಮಿತವರ್ಣಾತ್ಮಕ ಶ್ರುತಿ ಸ್ಮೃತಿ |**
**ಗಮಿಸಲಾಪವೆ ತದಭಿಮಾನಿಗಳೆಂದೆನಿಸಿಕೊಂಬ ||**
**ಕಮಲಸಂಭವ ಭವ ಸುರೇಂದ್ರಾ |**
**ದ್ಯಮರರನುದಿನ ತಿಳಿಯಲರಿಯರು |**
**ಸ್ವಮಹಿಮೆಗಳಾದ್ಯಂತಮಧ್ಯಗಳರಿವ ಸರ್ವಜ್ಞ || ೩೦ ||**

ದೇಹಾಂತರ್ಗತನಾಗಿದ್ದು ಸರ್ವ ವ್ಯಾಪಾರಗಳ ನಡಿಸತಕ್ಕ ಶ್ರೀ ಪರಮಾತ್ಮನ ಮಹಿಮಾ ದಾರೂ ಅರಿಯರೆಂದು ಹೇಳತಾರೆ.

ಅಮಿತಮಹಿಮನ – ಅಪಾರವಾದ ಮಹಾಮಹಿಮೆಗಳು ಉಳ್ಳಂಥಾ ಶ್ರೀ ಪರ ಮಾತ್ಮನ, ಅಪಾರಗುಣಗಳ–ಅಂತರಹಿತವಾದ ಗುಣಗಳ, ವರ್ಣಾತ್ಮಕ–ಅಕಾರಾದಿ ಐವತ್ತೊಂದು ಅಕ್ಷರಗಳಿಂದ ಪ್ರಚುರವಾದ, ಶ್ರುತಿ–ಅನಂತ ಅಪೌರುಷೇಯವಾದ ವೇದ ಗಳು, ಸ್ಮೃತಿ–ಪೌರುಷೇಯಗಳಾದ ಭಾರತಾದಿ ಪುರಾಣಗಳು, ಗಮಿಸಲಾಪವೆ–ಸಾಕ ಲ್ಯೇನ ತಿಳಿದುಕೊಳ್ಳಲಾಪವೇ ಎಂದರೆ ತಿಳಿದುಕೊಳ್ಳಲಾರವು ಎಂತ ತಾತ್ಪರ್ಯ. ತದಭಿ ಮಾನಿಗಳೆಂದೆನಿಸಿಕೊಂಬ–ಈ ಶ್ರುತಿ ಸ್ಮೃತಿಗಳಿಗೆ ಅಭಿಮಾನಿಗಳು ಎಂತ ಕರಿಸತಕ್ಕ, ಕಮಲಸಂಭವ–ಬ್ರಹ್ಮದೇವರು, ಭವಸುರೇಂದ್ರಾದ್ಯಮರರು–ರುದ್ರದೇವರು, ಇಂದ್ರದೇವರು ಇನ್ನೂ ಯಾವತ್ತು ದೇವತೆಗಳು, ಸ್ವಮಹಿಮೆಗಳ–ಶ್ರೀ ಪರಮಾತ್ಮನ ಮಹಾಮಹಿಮ ವನ್ನ, ತಿಳಿಯಲರಿಯರು–ಸಾಕಲ್ಯೇನ ತಿಳಿಯೋದಕ್ಕೆ ಅರಿಯರು. ಅಂಥಾ ಜ್ಞಾನ ರಮಾಬ್ರಹ್ಮಾದಿಗಳಿಗೆ ಇಲ್ಲ. ಸಮಿತ–ತಮ್ಮ ತಮ್ಮ ಯೋಗ್ಯತಾನುಸಾರ ಮಿತದಿಂದ ಸಹಿತವಾದ ಗುಣಗಳ ಕಾಣೋವರಾಗತಾರೆ. ಅನುದಿನದಿ–ಶ್ರೀ ಪರಮಾತ್ಮನು ಪ್ರತಿದಿವಸ ದಲ್ಲೂ ರಮಾ ಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರ ಏಕಕಾಲಾವಚ್ಛೇದೇನ ಅವರವರ ಯಾವತ್ತು ಸ್ವರೂಪ ಬಾಹ್ಯಗುಣಗಳನ್ನು, ಸರ್ವಜ್ಞ–ಸರ್ವಜ್ಞನಾದ ಪ್ರಯುಕ್ತ ತಿಳಿ ದಿದ್ದಾನೆ. ಆದ್ಯಂತಮಧ್ಯಗಳರಿವ– ಈ ರಮಾಬ್ರಹ್ಮಾದಿಗಳ ಉತ್ಪತ್ತಿಯೇನು, ಸ್ಥಿತಿ

ಯೇನು, ಲಯವೇನು, ಸರ್ವವೂ ತಿಳಿದಿದ್ದಾನೆ. ಇವರು ಶ್ರೀ ಪರಮಾತ್ಮನ ಸರ್ವಜ್ಞತೆ ಇಷ್ಟೇ ಅಲ್ಲ, ಅದು ಆದ್ಯಂತ ಶೂನ್ಯಗಳು, ಇದು ಅನುಪಚಾರಿಕ ದೃಷ್ಟಾಂತವೆಂದು ತಾತ್ಪರ್ಯ.

**ವಿತ್ತ ದೇಹಾಗಾರ ದಾರಾ ।**
**ಪತ್ಯ ಮಿತ್ರಾದಿಗಳೊಳಗೆ ಹರಿ ।**
**ಪ್ರತ್ಯಗಾತ್ಮನು ಎಂದೆನಿಸಿ ನೆಲೆಸಿಪ್ಪನೆಂದರಿದು ।**
**ನಿತ್ಯದಲಿ ಸಂತೃಪ್ತಿ ಬಡಿಸುತ ।**
**ಉತ್ತಮಾಧಮಮಧ್ಯಮರ ಕೃತ ।**
**ಕೃತ್ಯನಾಗುನ್ಮತ್ತನಾಗದೆ ಭೃತ್ಯ ನಾನೆಂದು ॥ ೩೧ ॥**

ಸಂಸಾರದಲ್ಲಿ ಇರತಕ್ಕ ಕ್ರಮವನ್ನ ಹೇಳತಾರೆ.

ವಿತ್ತದೇಹಾಗಾರ–ದ್ರವ್ಯ, ತನ್ನ ದೇಹ, ತನ್ನ ಮನೆ, ದಾರಾಪತ್ಯಮಿತ್ರ–ಹೆಂಡತಿ, ಮಕ್ಕಳು, ಸ್ನೇಹಿತರು ಇವರಲ್ಲಿ, ಆದಿಗಳೊಳಗೆ–ಇನ್ನೂ ಪರಕೀಯರು ಇವರಲ್ಲಿ, ಹರಿ–ಅವರವರಿಗೆ ಬಿಂಬರೂಪಿ ಪರಮಾತ್ಮ, ಪ್ರತ್ಯಗಾತ್ಮನು–ತದಾಕಾರದಿಂದ ಪ್ರತ್ಯೇಕವಾದ ತನ್ನ ಸ್ವಸ್ವರೂಪ ದೇಹದಿಂದ ತದಾತ್ಮಕನು ಆಗಿದ್ದಾನೆ ಎಂತ, ಎಂದೆನಿಸಿ–ಕರಸಿದವನಾಗಿ ಅವರಲ್ಲಿ, ನೆಲೆಸಿಪ್ಪ–ಆವಾಸನಾಗಿದ್ದಾನೆ, ಎಂದರಿದು–ಎಂತ ತಿಳಿದವನಾಗಿ, ನಿತ್ಯದಲಿ–ಪ್ರತಿದಿನದಲ್ಲೂ ದ್ರವ್ಯಾದಿಗಳ ರಕ್ಷಣವೇನು, ಮನಿಗಳನ್ನು ಅಲಂಕಾರ ಮಾಡೋಣವೇನು, ದಾರಾ, ಪುತ್ರ, ಸ್ವಜನ, ಪರಜನಾದಿಗಳನ್ನು ಸಂರಕ್ಷಣೆ ಮಾಡೋಣವೇನು, ಜಡಜೀವರ ರಕ್ಷಣ ಎಂದರೆ, ವೃಕ್ಷಾದಿಗಳನ್ನು ಸಂರಕ್ಷಣ ಮಾಡೋಣವೇನು, ಶುದ್ಧಜಡಗಳಾದ ವಸ್ತುಗಳನ್ನು ಪರಿಶುದ್ಧ ಮಾಡೋಣವೇನು, ಇತ್ಯಾದಿಗಳು ಯಾವತ್ತು ಶ್ರೀಪರಮಾತ್ಮನ ಸೇವಾ ಎಂತ ತಿಳಿದೂನೂ, ಉತ್ತಮಾಧಮಮಧ್ಯಮರ–ತನಕಿಂತಲೂ ಜ್ಞಾನದಿಂದ ಶ್ರೇಷ್ಠರಾದವರಲ್ಲೂನು, ತನಗೆ ಸಮಾನರಾದವರಲ್ಲೂನು, ತನಗೆ ನೀಚರಾದವರಲ್ಲೂನೂ ತಾರತಮ್ಯಾನುಸಾರ ನಡಕೊಂಡು ಅವರುಗಳಲ್ಲಿ ಶ್ರೀಹರಿ ಪ್ರತ್ಯಗಾತ್ಮನಾಗಿದ್ದಾನೆ ಎಂತ ತಿಳಿದು ಅಂಥಾವರುಗಳನ್ನು, ಸಂತೃಪ್ತಿಬಡಿಸುತ–ಛಂದಾಗಿ ಅನ್ನವಸ್ತ್ರಾದಿಗಳನ್ನು ಕೊಟ್ಟು ಪರಮಾತ್ಮ ತೃಪ್ತನಾಗಲಿ ಎಂತ ಅವರನ್ನ ತೃಪ್ತಿಪಡಿಸುತ್ತಾ, ಕೃತಕೃತ್ಯನಾಗು–ಮಾಡ ತಕ್ಕ ವ್ಯಾಪಾರದಿಂದ ಧನ್ಯನಾಗು. ಉನ್ಮತ್ತನಾಗದೆ–ನನಗೆ ಏನೂ ಕಡಿಮೆ ಇಲ್ಲ ಎಂತ ಅಹಂಕಾರಪಡದೆ ಮದಾಂಧನಾಗದೆ ಯೋಗ್ಯನಾಗಿ ಶ್ರೀಪರಮಾತ್ಮಗೆ, ಭೃತ್ಯ ನಾನೆಂದು–ಭೃತ್ಯ ಎಂತ ಎನಿಸಿದವನಾಗು.

**ತಾ॥** ಅಹಂಮಮತಾದಿಗಳು ತ್ಯಾಗಮಾಡಿ, ಸದಾ ಶ್ರೀ ಪರಮಾತ್ಮ ಸರ್ವೋತ್ತಮನೆಂದು ತಿಳಿದು, ಸಂಸಾರದಲ್ಲಿ ಇದ್ದೂ ವಿರಕ್ತನಾಗಿ ಮಹಾಪುರುಷಾರ್ಥವನ್ನು ಸಂಪಾದಿಸಬೇಕು ಎಂತ ಹೇಳೋವರಾಗಿದ್ದಾರೆ, ಎಂತ ತಾತ್ಪರ್ಯ. ಇದರಲ್ಲಿ ಮಿಥ್ಯಾವಾದಿಗಳು ವ್ಯಾವರ್ತನರು.

**ದೇವದೇವೇಶನ ಸುಮೂರ್ತಿ ಕ ।**
**ಳೇವರಗಳೊಳಗನವರತ ಸಂ ।**
**ಭಾವಿಸುತ ಪೂಜಿಸುತ ನೋಡುತ ಸುಖಿಸುತಿರು ಬಿಡದೆ ॥**
**ಶ್ರೀವರ ಜಗನ್ನಾಥವಿಠ್ಠಲನು ।**
**ತಾ ಒಲಿದು ಕಾರುಣ್ಯದಲಿ ಭವ ।**
**ನೋವ ಪರಿಹರಿಸುವನು ಪ್ರವಿತತ ಪತಿತಪಾವನನು ॥ ೩೨ ॥**

ಶ್ರೀ ಪರಮಾತ್ಮನ್ನ ತನ್ನ ಹೃದಯಾಕಾಶದಲ್ಲಿ ಪೂಜಾದಿಗಳು ಮಾಡತಕ್ಕವಗೆ, ಒಲಿದು ಪೂರ್ವೋಕ್ತ ಸಂಸಾರದಲ್ಲಿ ಬರತಕ್ಕ ದುಃಖಗಳ ಪರಿಹಾರ ಮಾಡತಾನೆ ಎಂತ ಹೇಳತಾರೆ.

ದೇವ–ರುದ್ರಾದಿ ತೃಣಾಂತದವರಿಗೆ, ದೇವ–ದೇವನಾದ ಶ್ರೀ ಮುಖ್ಯಪ್ರಾಣದೇವರಿಗೆ, ಈಶನ–ಸ್ವಾಮಿಯಾದ ಶ್ರೀ ಪರಮಾತ್ಮನ, ಸುಮೂರ್ತಿಕಳೇವರಗಳೊಳಗೆ–ಯಾವತ್ತು ಜೀವರ ಸ್ಥೂಲ, ಅನಿರುದ್ಧ, ಲಿಂಗ, ಸ್ವರೂಪ ಏತಾದೃಶವಾದ ದೇಹಗಳ ಒಳಗೆ ಪೂರ್ವೋಕ್ತ ಪ್ರಕಾರ ಆವಾಸನಾಗಿದ್ದಾನೆ ಎಂದು, ಅನವರತ–ನಿರಂತರದಲ್ಲೂ, ಸಂಭಾವಿಸುತ–ಅನುಸಂಧಾನದಿಂದ ಮನಸಾ ಛಂದಾಗಿ ಭಾವನಾ ಮಾಡುತಾ, ಪೂಜಿಸುತ–ವಾಸನಾ ರೂಪವಾದ ಉಪಾಸ್ಯಮೂರ್ತಿಯನ್ನು ಹೃದಯಾಕಾಶದಲ್ಲಿ ನಿಲ್ಲಿಸಿ, ತದಂತರ್ಗತ ಶ್ರೀಪರ ಮಾತ್ಮ ಇದ್ದಾನೆ, ಎಂತ ತಿಳಿದು ಪೂಜಾದ್ರವ್ಯಗತ ಪರಮಾತ್ಮಗೂ, ಪ್ರತಿಮಾಂತರ್ಗತ ಪರಮಾತ್ಮಗೂ, ಐಕ್ಯಚಿಂತನಿಯಿಂದ ಪೂಜಾ ಮಾಡುತಾ, ನೋಡುತ–ವಾಸನಾಪ್ರತೀಕ ವನ್ನು ನೋಡುತಾ, ಬಿಡದೆ–ವಾಸನಾಪ್ರತೀಕೋಪಾಸನಾ ಬಿಡದೆ, ಸುಖಿಸುತಿರು–ಜ್ಞಾನ, ಭಕ್ತಿ, ವೈರಾಗ್ಯಗಳಿಂದ ಸುಖವಂತನಾಗಿರು. ಈ ಪ್ರಕಾರ ಇದ್ದರೆ, ಶ್ರೀವರ–ಲಕ್ಷ್ಮೀದೇವೇರಿಗೆ ಪತಿಯಾದ ಜಗನ್ನಾಥವಿಠ್ಠಲನು–ಶ್ರೀ ನಾರಾಯಣದೇವರು, ತಾ ಒಲಿದು–ಪ್ರತಿಮಾಂತರ್ಗತನಾದ ತಾನು ಪ್ರತ್ಯಕ್ಷನಾಗಿ, ಕಾರುಣ್ಯದಲಿ–ಅತ್ಯಂತ ಅಂತಃ ಕರಣದಿಂದ, ಭವನೋವ–ಸಂಸಾರದಲ್ಲಿ ಬರತಕ್ಕ ಅನೇಕ ವಿಧವಾದ ದುಃಖಗಳ, ಇನ್ನೂ ಜನನಾದಿಗಳಿಗೆ ಕಾರಣವಾದ ಲಿಂಗದೇಹವನ್ನು, ಪರಿಹರಿಸುವನು–ಬಾರದಂತೆ ಮಾಡಿ ಸುಖವನ್ನು ಕೊಡತಾ ಇರತಾನೆ. ಅಂತ್ಯದಲ್ಲಿ, ವಿರಜಾಸ್ನಾನದಿಂದ ಪರಿಹಾರ ಮಾಡಿ ತನ್ನ ಸ್ಥಾನದಲ್ಲಿ ಇಟ್ಟು ಸುಖಪಡಿಸೋವನಾಗತಾನೆ. ಪ್ರವಿತತ–ಅಪರಿಚ್ಛಿನ್ನವ್ಯಾಪ್ತನು, ಪತಿತಪಾವನನು–ಸ್ವರೂಪತಃ ಮುಕ್ತಿಯೋಗ್ಯನಾದ ಜೀವನ ಕರ್ಮವಶಾತ್ ಪಾಪ ಕಾರ್ಯಗಳಿಂದ ಪತಿತನಾಗಿದ್ದವನ, ಪರಿಯವಸಾನಕ್ಕೆ ಪವಿತ್ರನ್ನ ಮಾಡಿ ಮೋಕ್ಷ ಕೊಡ ತಕ್ಕವನು ಎಂತ ತಾತ್ಪರ್ಯ.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ಮಾತೃಕಾಸಂಧಿವ್ಯಾಖ್ಯಾನಂ ಸಂಪೂರ್ಣಂ**

॥ ಶ್ರೀ ಕೃಷ್ಣಾರ್ಪಣಮಸ್ತು ॥

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಒಂಬತ್ತನೆಯ ಸಂಧಿ

## ಉದಾತ್ತಾನುದಾತ್ತ ಸಂಧಿ

**ಹರಿಕಥಾಮೃತಸಾರ ಗುರುಗಳ ।**
**ಕರುಣದಿಂದಾಪನಿತು ಪೇಳುವೆ ।**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು || ಪ ||**

**ಮೂಲ :**

**ಹರಿಯ ಪಂಚಾಶದ್ವರಣ ಸು ।**
**ಸ್ವರವುದಾತ್ತಾನುದಾತ್ತ ಪ್ರಚಯ ।**
**ಸ್ವರಿತ ಸಂಧಿ ವಿಸರ್ಗ ಬಿಂದುಗಳೊಳಗೆ ತದ್ವಾಚ್ಯ ||**
**ಇರುವ ತತ್ತನ್ನಾಮರೂಪಗ ।**
**ಳರಿತುಪಾಸನಗೈವರಿಳೆಯೊಳು ।**
**ಸುರರೆ ಸರಿ ನರರಲ್ಲ ಅವರಾಡುವುದೆ ವೇದಾರ್ಥ || ೧ ||**

**ಟೀಕಾ :**

ಹಿಂದಿನ ಸಂಧಿಯಲ್ಲಿ ಅಜಾದಿ ವರ್ಣವಾಚ್ಯ ಭಗವದ್ರೂಪಗಳು ಹೇಳಲ್ಪಟ್ಟಿತು. ಈ ಸಂಧಿಯಲ್ಲಿ ೫೧ ವರ್ಣಗಳಿಗೆ ವ್ಯಂಜಕಗಳಾದ ಉದಾತ್ತ ಅನುದಾತ್ತಾದಿ ಮೊದಲಾದದ್ದರಿಂದ ವಾಚ್ಯನಾದ ಪರಮಾತ್ಮ ದೇಹದಲ್ಲಿ ಇದ್ದಾನೆಂತಲೂ, ಇನ್ನೂ ವೇದಸ್ವರಗಳು ತದ್ಗತ ಭಗವದ್ರೂಪಗಳ ಉಪಾಸನಾಕ್ರಮ ವಿಚಾರ ಹೇಳತಾರೆ.

ಮಹನ್ಮೇಘಸ್ವರೋ ಉದಾತ್ತಸ್ವರಃ ಓಂಕಾರಸಹಿತಂ ವ್ಯಂಜಯತಿ ।
ಭೇರೀಶಬ್ದೋನುದಾತ್ತಾಖ್ಯಂ ವರ್ಣಂ ವ್ಯಂಜಯತಿ ।
ಘಂಟಾಶಬ್ದಃ ಸ್ವರಿತಾಖ್ಯಂ ವರ್ಣಂ ವ್ಯಂಜಯತಿ ।
ಸ್ವರ್ಣಚಂಚ್ವಾದಿಶಬ್ದೋನುದಾತ್ತಾಖ್ಯಂ ವರ್ಣಂ ವ್ಯಂಜಯತಿ ।
ಶ್ವಾಸಾದಿಶಬ್ದೋ ಮಂದ್ರಾಖ್ಯಂ ವರ್ಣಂ ವ್ಯಂಜಯತಿ ।
ಪ್ರಚಯಾಖ್ಯಂ ವರ್ಣಂ ವ್ಯಂಜಯಿತ್ವಾ ಚಾಂಚಲ್ಯಂ ಪ್ರಕಾಶಯತಿ ।

ವೇದಸ್ವರಗಳು ಇತ್ಯಾದಿ ತಾರತಮ್ಯಗಳಿಂದ ಇರೋದಾಗಿ ಅದೆ. ಇದರ ವಿಸ್ತಾರ ಐತರೇಯ ಭಾಷ್ಯದಲ್ಲಿ ವಿಸ್ತಾರವಾಗಿ ಹೇಳತದೆ.

ಹರಿಯು–ಗುಣಪೂರ್ಣನಾದ ಶ್ರೀ ನಾರಾಯಣದೇವರ ನಾಮಗಳೇ, ಪಂಚಾಶದ್ವರಣ–ಅ, ಕ ಇತ್ಯಾದಿ ೫೦ ಅಕ್ಷರಗಳು ಎಂದರೆ, ಆಯಾ ವರ್ಣಸಾಂಕೇತದಿಂದ, ಅ ಎಂದರೆ ಅಜನಾಮಕನು, ಕ ಎಂದರೆ ಕಪಿಲನಾಮಕನು ಈ ರೀತ್ಯಾ ಯಾವತ್ತು ಅಕ್ಷರಗಳು ಶ್ರೀ ಪರಮಾತ್ಮನ ನಾಮಗಳೇವೇ. ಈ ವರ್ಣಗಳೇ ಅನಂತ ವೇದಗಳು. ಯಾವತ್ತು ಪೌರುಷೇಯಗಳು, ಸ್ವರಗಳು. ಈ ವರ್ಣಗಳು ಉದಾತ್ತಾದಿ ಸ್ವರಗಳಿಂದ ಯುಕ್ತವಾಗಿ ಅದೆ. ಯಾವತ್ತು ಸ್ವರಗಳು ಉದಾತ್ತಾದಿ ಸ್ವರಗಳಲ್ಲೇ ಅಂತರ್ಭೂತವು. ಯಾವತ್ತು ಪೌರುಷೇಯಾಪೌರುಷೇಯಗಳು, ಪ್ರಾಕೃತಾದಿ ಭಾಷೆಗಳು, ಅದನನುಸರಿಸಿದ ಸ್ವರಗಳು, ಅಕಾರಾದಿ ವರ್ಣಗಳಲ್ಲಿ ಉದಾತ್ತಾದಿ ಸ್ವರಗಳಲ್ಲಿ ಅಂತರ್ಭೂತಗಳು. ಸುಸ್ವರ–ಸಮೀಚೀನ ಸ್ವರಗಳು, ಅಸಮೀಚೀನ ಸ್ವರಗಳು, ಎಂತ ಎರಡು ಪ್ರಕಾರ. ಹ್ಯಾಂಗೆಂದರೆ, ವರ್ಣ ವಿಪರ್ಯಾಸದಿಂದ ವರ್ಣಸಮೂಹಗಳು ಸೇರಿ ದುಷ್ಟವಾದ ಬೈಯಿ (ಬೈಗಳು) ಆಗೋದಾಗತದೆ. ಅದೇ ಪ್ರಕಾರವೇ ಸ್ತೋತ್ರವೂ ಆಗೋದಾಗತದೆ. ತದ್ವತ್ ಉದಾತ್ತಾದಿ ಸ್ವರಗಳು ದಾವ ದಾವ ಸ್ಥಾನದಲ್ಲಿ ನೀಚೋಚ್ಚಗಳಿಂದ ಉಚ್ಚರಿಸಬೇಕೋ, ಆ ಪ್ರಕಾರ ಉಚ್ಚರಿಸಿದರೇ, ಸುಸ್ವರವಾಗುತ್ತದೆ. ತದ್ವ್ಯತಿರಿಕ್ತ ಉಚ್ಚಸ್ವರ ಸ್ಥಾನದಲ್ಲಿ ನೀಚಸ್ವರವ್ಯೂ ನೀಚಸ್ವರಸ್ಥಾನದಲ್ಲಿ ಉಚ್ಚಸ್ವರವೂ ಉಚ್ಚರಿಸಿದರೆ, ಅದೇ ಅಪಸ್ವರವಾಗುತ್ತದೆ. ಈ ರೀತಾ, ಸುಸ್ವರ, ಅಪಸ್ವರ, ಉದಾತ್ತಾದಿ ಸ್ವರಗಳಲ್ಲಿ ಅನೇಕ ವಿಧದಿಂದ ಅಂತರ್ಭೂತಗಳೇವೇ. ಸ್ವರಗಳು ಎಷ್ಟು ಪ್ರಕಾರ ಎಂದರೆ, ಅಕ್ಷರಗಳು ಐವತ್ತಕ್ಕೆ ಮ್ಯಾಲೆ ಹ್ಯಾಂಗಿಲ್ಲವೋ ಸ್ವರಗಳೂನೂ ಅದೇ ಪ್ರಕಾರ ಇರೋದಾಗಿ ಅದೆ. ಆಯಾ ಸ್ವರಗಳು, ಅದರ ನಾಮಲಕ್ಷಣ ವಿವರ :–

**ಉದಾತ್ತ :–** ಉಚ್ಚಸ್ವರವು ಎಂದರೆ, ಅತ್ಯಂತವಾಗಿ ಹೆಚ್ಚಾದ ಉಚ್ಚಸ್ವರ.

**ಅನುದಾತ್ತ :–** ಅದರಕ್ಕಿಂತಲೂ ಕಿಂಚಿತ್ತು ಕಡಿಮೆ ಆದ ಉಚ್ಚಸ್ವರ.

**ಪ್ರಚಯ :–** ಉಚ್ಚನೀಚಗಳಿಲ್ಲದ ಸಮಾನಸ್ವರ.

**ಸ್ವರಿತ :–** ಒಂದು ಅಕ್ಷರ, ಅದನನುಸರಿಸಿದ ಒಂದು ಸೊನ್ನೆ, ಸಹಿತವಾದ ಅಕ್ಷರ ಉಚ್ಚಾರ ಸ್ವರ. ಇದು ಕಂಪನಸ್ವರ.

**ಸಂಧಿ :–** ಅಕ್ಷರಗಳ ಸಂಧಿಕಾಲದಲ್ಲಿ ಉಚ್ಚರಿಸತಕ್ಕ ಸ್ವರ.

**ವಿಸರ್ಗ :–** ಎರಡು ಸೊನ್ನೆಗಳಿಂದ ಸಹಿತವಾದ ವರ್ಣ ಉಚ್ಚಾರ ಸ್ವರಕ್ಕೆ, ವಿಸರ್ಗ ಎಂತ ನಾಮ.

**ಬಿಂದು :–** ಅರ್ಧಾಕ್ಷರ ಉಚ್ಚಾರ ಮತ್ತು ಎಡಭಾಗದಲ್ಲಿ ಸೊನ್ನೆಸಹಿತವಾದ ಉಚ್ಚಾರ ಸ್ವರ. ಇದಕ್ಕೆ, ಬಿಂದು ಎಂತ ನಾಮ.

ಮತ್ತು ಸಂಗೀತಶಾಸ್ತ್ರರೀತ್ಯಾ, ಉದಾತ್ತಾದಿ ಸಪ್ತಸ್ವರಗಳು ಎಂತಲೂ ತಾತ್ಪರ್ಯವೇ. ವೇದದಲ್ಲೇನು, ಸಂಗೀತದಲ್ಲೇನು, ಇದೇ ಉದಾತ್ತಾದಿ ಸಪ್ತಸ್ವರಗಳು ವರ್ಣಾಶ್ರಯಗಳಾಗಿ

ಇರೋದಾಗಿ ಅದೆ. ಗಳೊಳಗೆ–ಸಪ್ತಸ್ವರಗಳೊಳಗೆ ಐವತ್ತು ಅಕ್ಷರಗಳ ಒಳಗೆ ಇವುಗಳಲ್ಲಿ, ತದ್ವಾಚ್ಯ–ಆಯಾ ಸ್ವರವರ್ಣವಾಚ್ಯನಾಗಿ, ತದಂತರ್ಗತನಾಗಿ, ಇರುವ–ಇರತಕ್ಕ ಶ್ರೀ ಪರಮಾತ್ಮನ, ಅದರದರಲಿ, ತತ್ತನ್ನಾಮರೂಪಗಳರಿತು–ಆಯಾ ಸ್ವರಾಕ್ಷರನಾಮಗಳೇ ಅಂತರ್ಗತನಾದ ಪರಮಾತ್ಮನ ನಾಮಗಳೆಂತಲೂ, ಆಯಾ ಸ್ವರಾಕ್ಷರರೂಪಗಳೇ ಅಂತ ರ್ಗತನಾದ ಪರಮಾತ್ಮನ ಆಕಾರಗಳೆಂತಲೂ, ತಿಳಿದವನಾಗಿ, ಉಪಾಸನೈವರು–ಪ್ರತಿ ಮಾದಿಗಳು ಇಟ್ಟುಕೊಂಡು ತದ್ಗತ ಪರಮಾತ್ಮನ ಅನುಸಂಧಾನ ಮಾಡಿ ಉಪಾಸನೆ ಮಾಡಿದೋಪಾದಿಯಲಿ ದಾರಾದರೂ ಉಪಾಸನ ಮಾಡತಾರೋ, ಅಂಥಾ ಉಪಾಸನಾ ಮಾಡತಕ್ಕವರು, ಇಳೆಯೊಳು–ಭೂಮಿಯಲ್ಲಿ, ಸುರರೇ ಸರಿ–ದೇವತೆಗಳು ಸಾಧನಪೂರ್ತಿ ಗಾಗಿ ಮಾನುಷತ್ವೇನ ಅವತಾರ ಮಾಡಿದ್ದೇ ನಿಶ್ಚಯವು. ನರರಲ್ಲ–ಅವರು ಮಾನುಷ ಗಣ ಪ್ರವಿಷ್ಟರಲ್ಲ ಅಂದರೆ, ಮನುಷ್ಯರಲ್ಲ. ಅವರಾಡುವುದೇ ವೇದಾರ್ಥ–ಅವರು ಆಡೋ ಮಾತುಗಳೆಲ್ಲ ವೇದಾರ್ಥಗಳೇ ಅಂದರೆ, ವೇದದಲ್ಲಿ ಪ್ರಯೋಜನಾರ್ಥ ಈಶ್ವರನ ಮಾಹಾತ್ಮ್ಯ ಇವರು ಆಡತಕ್ಕ ಮಾತು ಸಾಂಕೇತವಾದ ಪ್ರತಿವರ್ಣದಲ್ಲಿ ಶ್ರೀಪರಮಾತ್ಮನ ಮಾಹಾತ್ಮ್ಯಪ್ರತಿಪಾದನಪೂರ್ವಕ ಅನುಸಂಧಾನದಿಂದ ಮಾತುಗಳಾಡತಾರೆ. ಆದ್ದರಿಂದ ಸರ್ವವೂ ವೇದಾರ್ಥಗಳೆಂತಲೇ ತಾತ್ಪರ್ಯ.

**ವಿಶೇಷಾರ್ಥ :–** "ಉಕ್ತಂ ಚ ಶ್ರೀಮದಾನಂದತೀರ್ಥಪೂಜ್ಯಪಾದೈಃ–ದಾರ್ಢ್ಯ ಮೇವಾನುದಾತ್ತಾರ್ಥಃ ಉದಾತ್ತಸ್ಯೋಚ್ಚತಾರ್ಥತಾ । ನೀಚತಾ ಸ್ವರಿತಸ್ಯಾರ್ಥಃ ಪ್ರಚಯಸ್ಯ ಯಥಾ ಸ್ಥಿತಿಃ । ಸಮಾಹಾರೇಽಖಿಲಾರ್ಥಾಃ ಸ್ಯುಃ ಸ್ವರಾರ್ಥಾನಾಮಿಯಂ ಸ್ಥಿತಿಃ ॥" ಈ ಪ್ರಮಾಣರೀತ್ಯಾ ತಿಳಿದು, ತನ್ನಾಮ, ತದ್ರೂಪ, ತದಾಕಾರಪೂರ್ವಕ ಸಮಸ್ತವರ್ಣಗಳು ಸ್ವರಾದಿಗಳು ಭಗವತ್ಪರತ್ವೇನ ನಿರ್ವಚನ ಮಾಡುತ್ತಾ ಉಪಾಸನಾ ಮಾಡತಕ್ಕವರೇ, ದೇವತೆಗಳೆಂದು ಭಾವ ತೋರಿಸಿದ್ದಾರೆಂದು ತಾತ್ಪರ್ಯ.

**ಈಶನಲಿ ವಿಜ್ಞಾನ ಭಗವ ।**
**ದ್ದಾಸರಲಿ ಸದ್ಭಕ್ತಿ ವಿಷಯನಿ ।**
**ರಾಶೆ ಮಿಥ್ಯಾವಾದಿಯಲಿ ಪ್ರದ್ವೇಷ ನಿತ್ಯದಲಿ ॥**
**ಈ ಸಮಸ್ತ ಪ್ರಾಣಿಗಳಲಿ ರ ।**
**ಮೇಶನಿಹನೆಂದರಿದು ಅವರಭಿ ।**
**ಲಾಷೆಗಳ ಪೂರಯಿಸುವುದೆ ಮಹಯಜ್ಞ ಹರಿಪೂಜೆ ॥ ೨ ॥**

ಪೂಜಾ ಮಾಡತಕ್ಕ ಮುಖ್ಯವಾದ ಬ್ರಾಹ್ಮಣಾಧಿಷ್ಠಾನವನ್ನ ಹೇಳತಾರೆ.

ವಿಷಯನಿರಾಶೆ–ಪ್ರಾಕೃತ ವಿಷಯಾದಿಗಳಲ್ಲಿ ಭೋಗೇಚ್ಛಾರಹಿತನಾಗಿ ತ್ಯಾಗದಿಂದ ರಹಿತವಾದ ಸತ್ಕರ್ಮಯುಕ್ತನಾಗಿ, ನಿಸ್ಸಂಗನಾಗಿ, ವಿರಕ್ತನಾಗಿ, ಮಿಥ್ಯಾವಾದಿಯಲಿ ಪ್ರದ್ವೇಷ–ಭಗವದ್ದ್ವೇಷಿಯಾದ ಮಾಯಾವಾದಿಯಲ್ಲಿ, ಅವನ ಶಾಸ್ತ್ರದಲ್ಲಿ ಛಂದಾಗಿ ಅಂತ

ರಂಗದ್ವೇಷಪೂರ್ವಕವಾಗಿ, ಭಗವದ್ದಾಸರಲಿ–ಶ್ರೀ ಪರಮಾತ್ಮನ ದಾಸರಾದ ಬ್ರಹ್ಮಾದಿ ದೇವತೆಗಳಲ್ಲಿ, ಇತರರಾದ ಭಗವದ್ಭಕ್ತರಲ್ಲಿ, ಸದ್ಭಕ್ತಿ–ಅವರವರಲ್ಲಿ ಯೋಗ್ಯತಾತಾರ ತಮ್ಯಾನುಸಾರ ಸಮೀಚೀನವಾದ ಅಂತಃಕರಣಪೂರ್ವಕ ಭಕ್ತಿ, ಇಂಥಾ ಭಕ್ತಿಪೂರ್ವಕ ವಾಗಿ, ಈಶನಲಿ ವಿಜ್ಞಾನ–ಶ್ರೀ ಪರಮಾತ್ಮನಲ್ಲಿ ವಿಶೇಷಜ್ಞಾನ ಇರಬೇಕು. ನಿತ್ಯದಲಿ– ಪ್ರತಿದಿನದಲ್ಲೂನೂ, ಈ ಸಮಸ್ತ ಪ್ರಾಣಿಗಳಲ್ಲಿ–ಏತಾದೃಶ ಸರ್ವಪ್ರಾಣಿಗಳಲ್ಲಿ, ರಮೇಶ ಇಹನೆಂದು–ಲಕ್ಷ್ಮೀಪತಿಯಾದ ಶ್ರೀ ನಾರಾಯಣ ಇದ್ದಾನೆಂದು, ಅರಿತು–ಆದ್ದರಿಂದ ಆಯಾ ಅಧಿಷ್ಠಾನಾಂತರ್ಗತ ರಮಾಪತಿಯಾದ ಶ್ರೀ ನಾರಾಯಣದೇವರು ಇದ್ದಾನೆಂದು ಅರಿತವನಾಗಿ, ಅವರಭಿಲಾಷೆಗಳ–ತನ್ನ ಯೋಗ್ಯತಾನುಸಾರ ಅವರ ಅಭಿಪ್ರಾಯವನ್ನ, ಪೂರೈಸುವುದೇ–ಪೂರ್ಣಮಾಡಿದ ಕಾಲಕ್ಕೂ, ಆದರ ಉಪಚಾರಗಳಿಂದ ಅಲ್ಪ ಪೂಜಾ, ಅಲ್ಪ ಸೇವಾದಿಂದಲೇ ಸಂತುಷ್ಟರಾಗುವಂತೆ ಅವರವರು ಪೂರ್ಣ ಸಂತೋಷವನ್ನು ಐದಿಸಿ, ನಿರ್ವಾಹಮಾಡೋಣ ದಾವದದೆ ಅದೇ, ಮಹಯಜ್ಞ ಹರಿಪೂಜೆ–ಶ್ರೀ ಪರಮಾತ್ಮನ ಪ್ರೀತಿಗೋಸುಗ ಮಾಡತಕ್ಕ ಮಹಯಜ್ಞ ಎಂತಲೂ, ಪೂಜಾ ಎಂತಲೂ, ಅನಿಸುತ್ತದೆ.

**ವಿಶೇಷಾರ್ಥ :**– ಶ್ರೀ ಪರಮಾತ್ಮನಲ್ಲಿ ವಿಶೇಷ ಜ್ಞಾನ ಇರಬೇಕು ಎಂತ ಹೇಳಿ ದ್ದಾರೆ. ಹ್ಯಾಂಗೆಂದರೆ ಬ್ರಹ್ಮಾದಿ ದೇವತೆಗಳು ತಾರತಮ್ಯಾನುಸಾರ ಅಧಿಕ ನ್ಯೂನಗಳಿಂದ ಪರಮಾತ್ಮನ ದಾಸತ್ವೇನ ಅನುಸಂಧಾನದಿಂದ ಭಕ್ತಿ, ಶ್ರೀ ಪರಮಾತ್ಮನಲ್ಲಿ ಮಾಹಾತ್ಮ್ಯ ಜ್ಞಾನಪೂರ್ವಕ ಸುದೃಢ ಸ್ನೇಹ ಮಾಡುತ ಸರ್ವೋತ್ತಮತ್ವೇನ ತಿಳಿದು ಭಕ್ತಿಮಾಡೋಣ ದಾವದದೆ, ಇದೇ ದೇವರಲ್ಲಿ ವಿಜ್ಞಾನಭಕ್ತಿ. ಇಂಥಾ ವಿಶೇಷಜ್ಞಾನದಿಂದ ಭಕ್ತಿ ಇರಬೇಕು. ಈ ಅಧಿಕಾರಿಗಳು ಪರಮಾತ್ಮಗೆ ಉತ್ತಮಾಧಿಷ್ಠಾನರು. ತದನ್ಯರು ತಾರತಮ್ಯಾನುಸಾರ ಮಧ್ಯಮ, ಅಧಮ, ಅಧಮಾಧಮ ಅಧಿಷ್ಠಾನಗಳೆಂದು ತಿಳಿಯಬೇಕು. ಭಗವದ್ದ್ವೇಷಿ ಗಳು ಸರ್ವರೂ ನೀಚಾಧಿಷ್ಠಾನಗಳೆಂದು ತಿಳಿಯಬೇಕು. ಅವರಲ್ಲಿ ವಿಜ್ಞಾನಾದಿ ಸರ್ವವೂ ಇದ್ದರೆ ಉತ್ತಮಾಧಿಷ್ಠಾನ ಕೆಲವು ಅದೆ, ಕೆಲವು ಇಲ್ಲ. ಇದು ಯಾವತ್ತು ಮಧ್ಯಮಾಧಿ ಕಾರಿಗಳಲ್ಲೇ ಸೇರತದೆ ಎಂತ ಅರ್ಥ. ಮತ್ತು ಅಧಿಷ್ಠಾನ ಉತ್ತಮವಾದ ಕಾಲಕ್ಕೂ ಅಂತರ್ಗತ ಶ್ರೀ ಪರಮಾತ್ಮನ ತಿಳಿಯದೆ ಅಧಿಷ್ಠಾನಕ್ಕೆ ಪೂಜಾ ಮಾಡಿದರೆ ದೋಷ, ನಿಷ್ಫಲ ಎಂದರೆ, ಪಾರತ್ರಿಕ ಫಲವಿಲ್ಲ. ಐಹಿಕದಲ್ಲಿ ಅಲ್ಪಫಲದಿಂದ ಪರಿಯವಸಾನವಾಗು ತ್ತದೆ. ಮತ್ತು ಪೂರ್ವೋಕ್ತಪ್ರಕಾರ ಅನುಸಂಧಾನಕ್ರಮವನ್ನು ತಿಳಿದು ಪೂಜಾದಿಗಳ ಮಾಡುವವರಿಗೆ ಅನ್ನೋದಕಾದಿಗಳು ಕೊಡೋಣದರಿಂದ, ದೇಹದಲ್ಲಿ ಪಂಚಾಗ್ನಿಗಳು, ನಾಡೀ ಅಂತರ್ಗತ ಭಗವದ್ರೂಪಗಳು, ಅನುಸಂಧಾನ ಮಾಡಿ, ಭೋಜನದ್ರವ್ಯಗಳ ಆಹುತಿಗಳನ್ನಾಗಿ ಯಜ್ಞತ್ವೇನ ಅನುಸಂಧಾನಮಾಡಿ ಅನ್ನೋದಕಾದಿಗಳು ಕೊಡಬೇಕು. ಈ ಪ್ರಕಾರ ಅಂತರ್ಗತ ಹರಿಪೂಜಾ ಎಂತ ತಿಳಿದು, ಪೂಜಾದಿಗಳು ಮಾಡಬೇಕು. ಚಲ ಪ್ರತಿಮಾ ಭಗವದ್ಭಕ್ತರು, ಅಚಲ ಪ್ರತಿಮಾ ಲೋಹಾದಿ ಪ್ರತೀಕಗಳು, ಸರ್ವ ವಿಧ ದಿಂದಲೂ ಚಲಪ್ರತಿಮಾನೇ ಶ್ರೇಷ್ಠವು.

**ತ್ರಿದಶ ಏಕಾತ್ಮಕನೆನಿಸಿ ಭೂ ।**
**ಉದಕ ಶಿಖಿಯೊಳು ಹತ್ತು ಕರಣದಿ ।**
**ಅಧಿಪರೆನಿಸುವ ಪ್ರಾಣಮುಖ್ಯಾದಿತ್ಯರೊಳು ನೆಲೆಸಿ ॥**
**ವಿದಿತನಾಗಿದ್ದನವರತ ನಿರ ।**
**ವಧಿಕಮಹಿಮನು ಸಕಲ ವಿಷಯವ ।**
**ನಿಧನನಾಮಕ ಸಂಕರುಷಣಾಹ್ವಯನು ಸ್ವೀಕರಿಪ ॥ ೩ ॥**

ಪೂರ್ವೋಕ್ತಪ್ರಕಾರ ಮಾಡಿದ ಪೂಜಾವನ್ನೇ ಶ್ರೀ ಪರಮಾತ್ಮ ಸ್ವೀಕರಿಸುತ್ತಾನೆ ಎಂತ ಹೇಳತಾರೆ.

ತ್ರಿದಶ–ಹದಿಮೂರು, ಏಕ–ಒಂದು, ಭೂ ಉದಕ ಶಿಖಿಯೊಳು–ಪೃಥಿವ್ಯಾದಿ ಪಂಚಭೂತಗಳು ಪಂಚತನ್ಮಾತ್ರಗಳು ಅಂತು ಹತ್ತು, ಒಟ್ಟು ೨೪, ಆತ್ಮಕನೆನಿಸಿ– ಈ ೨೪ ತತ್ವಗಳಲ್ಲಿ ತದಾಕಾರ ತದ್ರೂಪ ತನ್ನಾಮದಿಂದ ಪ್ರಚುರನೆನಿಸಿ, ಕರ್ತೃ, ಭೋಕ್ತೃ ಶರೀರಗಳಲ್ಲಿ ಇದ್ದಾನೆ. ಮತ್ತು ಹತ್ತು ಕರಣದಲಿ–ದಶೇಂದ್ರಿಯಗಳಲ್ಲಿ ತದನ್ಯ ತತ್ವಗಳಲ್ಲಿ, ಅಧಿಪರೆನಿಸುವ–ಅಭಿಮಾನಿಗಳು ಎಂತ ಕರಿಸತಕ್ಕ, ಪ್ರಾಣಮುಖ್ಯ–ದೇವತಾಶ್ರೇಷ್ಠರಾದ ಮಹತ್ತತ್ವಾಭಿಮಾನಿಗಳಾದ ಮುಖ್ಯಪ್ರಾಣದೇವರು, ಆದಿತ್ಯರೊಳು–ನೇತ್ರಾಭಿಮಾನಿ ಸೂರ್ಯ,ಇವರೇ ಮೊದಲಾದ ತತ್ವಾಭಿಮಾನಿಗಳಲ್ಲಿ, ನೆಲಸಿ–ತದಾಕಾರ ತನ್ನಾಮದಿಂದ ಅವರ ಅಂತರ್ಗತನಾಗಿ ನಿಂತು, ಮತ್ತು ವಿದಿತನಾಗಿದ್ದು–ಭೋಗಯೋಗದ್ರವ್ಯಗಳಲ್ಲಿ, ತದಭಿಮಾನಿಗಳಲ್ಲಿ ಪೂರ್ವೋಕ್ತಪ್ರಕಾರ ವ್ಯಾಪ್ತನಾಗಿದ್ದು, ಅನವರತ–ನಿರಂತರದಲ್ಲೂ, ನಿರವಧಿಕಮಹಿಮನು-ಸದೃಶಶೂನ್ಯವಾದ ಮಹಿಮೋಪೇತನಾದ, ನಿಧನನಾಮಕ-ಜಗತ್ತು ಸಂಹಾರಕರ್ತನಾದ, ಸಂಕರ್ಷಣಾಹ್ವಯನು–ಸಂಕರ್ಷಣನಾಮಕ ಪರಮಾತ್ಮನು, ಸಕಲ ವಿಷಯವ–ಭೋಗಯೋಗ್ಯಗಳಾದ ಪ್ರಾಕೃತ ಸರ್ವವಿಷಯಗಳ ತನ್ನ ಸ್ವಾಖ್ಯ ವಿಷಯಗಳ ದೇಹಗತ ಚತುರ್ವಿಂಶತಿತತ್ವಗತ ತದಭಿಮಾನಿ ದೇವತಾಂತರ್ಗತ ತನ್ನ ರೂಪಗಳಿಂದ, ಸ್ವೀಕರಿಪ–ತನ್ನ ಸ್ವಾಖ್ಯಗಳು ತಾನು ಸ್ವೀಕರಿಸೋವನಾಗತಾನೆ.

**ತಾ॥** ಪೂರ್ವೋಕ್ತಪ್ರಕಾರ, ಭಗವದ್ಭಕ್ತರ ಭೋಜನ ಮಾಡಿಸಿದ ಕಾಲದಲ್ಲಿ, ಅನುಸಂಧಾನವಿರಬೇಕು. ಈ ಪ್ರಕಾರ ಜ್ಞಾನಿಗಳಾದ ಭಗವದ್ಭಕ್ತರು ಭೋಜನ ಮಾಡತಾರೆ. ಆದ್ದರಿಂದ ಮಹಾಯಜ್ಞಾಖ್ಯ ಪೂಜಾನೇ ಆಯಿತು. ಕರ್ತೃಭೋಕ್ತೃಗಳಿಗೆ ಇಂಥಾ ಅನುಸಂಧಾನವಿರಬೇಕೆಂತ ತಾತ್ಪರ್ಯ.

**ದಹಿಕ ದೈಶಿಕ ಕಾಲಿಕತ್ರಯ ।**
**ಗಹನ ಕರ್ಮಗಳುಂಟು ಇದರೊಳು ।**
**ವಿಹಿತ ಕರ್ಮಗಳರಿತು ನಿಷ್ಕಾಮಕನು ನೀನಾಗಿ ॥**

**ಬೃಹತಿನಾಮಕ ಭಾರತೀಶನ ।**
**ಮಹಿತರೂಪವ ನೆನೆದು ಮನದಲಿ ।**
**ಅಹರಹರ್ಭಗವಂತಗರ್ಪಿಸು ಪರಮ ಭಕುತಿಯಲಿ ॥ ೪ ॥**

ವಿಹಿತಕರ್ಮಗಳು ಆಚರಣೆ ಮಾಡು ಎಂತಲೂ, ಅವಿಹಿತ ಕರ್ಮಗಳು ಆಚರಣೆ ಮಾಡಬ್ಯಾಡ ಎಂತಲೂ ಹೇಳತಾರೆ.

ದಹಿಕ–ಎಂದರೆ ದೇಹಸಂಬಂಧ ಕರ್ಮ, ದೈಶಿಕ–ಎಂದರೆ ದೇಶವನ್ನು ಅನುಸರಿಸಿದ ಕರ್ಮ, ಕಾಲಿಕ–ಎಂದರೆ ಕಾಲವನ್ನು ಅನುಸರಿಸಿದ ಕರ್ಮ, ಅಂತು ಮೂರು ವಿಧ ಕರ್ಮಗಳು. ಅದಕ್ಕೆ ವಿವರ :– ಈ ದೇಹಸಂಬಂಧ ಕರ್ಮ ಎಂದರೆ, ದೇಶಕಾಲಕ್ಕೆ ಸಂಬಂಧಪಡದ ತೀರ್ಥಯಾತ್ರಾದಿಗಳು, ನಮಸ್ಕಾರ ಪ್ರದಕ್ಷಿಣೆ ಜಪಾದಿಗಳು, ಈ ದೃಷ್ಟಾಂತವನ್ನು ಅನುಸರಿಸಿದ ದೇಹಸಂಬಂಧ ತದ್ವ್ಯತಿರಿಕ್ತ ಅನೇಕ ಕರ್ಮಗಳು ಎಂತ ತಾತ್ಪರ್ಯ. ದೈಶಿಕ ಎಂದರೆ, ದೇಶಭೇದದಿಂದ ಆಚರಿಸತಕ್ಕ ಕರ್ಮಗಳು. ಅನೇಕ ದೇಶಭೇದಗಳಲ್ಲಿ ಇರತಕ್ಕ ತೀರ್ಥಗಳಲ್ಲಿ ಶ್ರಾದ್ಧಾದಿಗಳು, ಇನ್ನೂ ಅನೇಕ ವಿಧವಾದ ದೇಶಾಚಾರಗಳು. ಈ ದೃಷ್ಟಾಂತದಿಂದ ಸ್ವದೇಶಾಚಾರ ವ್ಯತಿರಿಕ್ತ ಅನ್ಯದೇಶಾಚಾರಗಳು ತೆಗೆದುಕೋಬೇಕು. ಕಾಲಿಕ ಎಂದರೆ ಕಾಲವನ್ನನುಸರಿಸಿದ ಕರ್ಮಗಳು. ಅದು ದಾವದು ಎಂದರೆ, ಚಾತುರ್ಮಾಸ್ಯಾದಿ ವ್ರತಗಳು, ಭೀಷ್ಮಪಂಚಕ, ವಿಷ್ಣುಪಂಚಕ, ಗ್ರಹಣ, ಪರ್ವ ಕಾಲಗತ ಕರ್ಮಗಳು, ಷಣ್ಣವತಿ ಶ್ರಾದ್ಧಾದಿಗಳು, ಅವಿಧವಾನವಮಿ ಇತ್ಯಾದಿ ಕಾಲಕೃತ ಕರ್ಮಗಳು. ಈ ದೃಷ್ಟಾಂತದಿಂದ ತದನ್ಯಗಳು ತೆಗೆದುಕೋಬೇಕು. ತ್ರಯ–ಏತಾದೃಶ ತ್ರಿವಿಧವಾದ, ಗಹನ–ಅಂತ್ಯಗಾಣದ, ಕರ್ಮಗಳುಂಟು–ಕರ್ಮಗಳು ಇರೋದಾಗಿ ಅದೆ. ಇದರೊಳು– ಈ ಅಂತ್ಯಕಾಣದ ಕರ್ಮಗಳಲ್ಲಿ, ವಿಹಿತಕರ್ಮಗಳರಿತು–ಮಾಡೋದಕ್ಕೆ ಸಾಧ್ಯವಾದದ್ದು ಬಿಡದೆ, ಮಾಡಬೇಕಾದ ವಿಹಿತ ಕರ್ಮಗಳು ದಾವದೋ ಅದನ್ನ ತಿಳಿದು, ನಿಷ್ಕಾಮಕನು ನೀನಾಗಿ–ನೀನು ಫಲಾಪೇಕ್ಷಾರಹಿತನಾಗಿ ಮಾಡುತ್ತಾ ಆ ಕರ್ಮಗಳಲ್ಲಿ, ಬೃಹತಿನಾಮಕ–ಬೃಹತೀ ನಾಮಕ, ಭಾರತೀಶನ–ಭಾರತೀಪತಿಯಾದ ಮುಖ್ಯಪ್ರಾಣ ದೇವರ ಚಿಂತಿಸಿ, ಮಹಿತನ–ತದಂತರ್ಗತ ಮ ಎಂದರೆ ರಮಾದೇವೇರಿಗೆ, ಹಿತನ–ಪ್ರೀತಿ ಕರನಾದ ಶ್ರೀ ಪರಮಾತ್ಮನ, ರೂಪವ ನೆನೆದು–ತದಾಕಾರ, ತನ್ನಾಮ, ತದ್ರೂಪವನ್ನ ನೆನೆದು, ಮನದಲಿ–ಹೃದಯಸ್ಥ ಮನಾಂತರ್ಗತನಾದ, ಭಗವಂತಗೆ–ಬಿಂಬರೂಪಿ ಪರ ಮಾತ್ಮಗೆ, ಅಹರಹಃ–ಹಗಲೂ ರಾತ್ರಿಗಳಲ್ಲಿ ಮಾಡಿದ ಕರ್ಮ ಹಗಲು ರಾತ್ರಿಗಳಲ್ಲಿ, ಪರಮಭಕುತಿಯಲಿ–ಅತ್ಯಂತ ಭಕ್ತಿಯಿಂದ, ಅರ್ಪಿಸು–ಭಗವದ್ರೂಪಗಳಿಂದ ಭಗವದ್ರೂಪ ಗಳಿಗೆ ಪೂರ್ವೋಕ್ತಪ್ರಕಾರ ಅರ್ಪಿಸೋವನಾಗು. ಅರ್ಪಣ ಎಂದರೆ, ಸರ್ವವೂ ಇದೇ ಪ್ರಕಾರವೆಂದು ತಾತ್ಪರ್ಯ.

**ವಿಶೇಷಾರ್ಥ :–** ಪ್ರಕಾರಾಂತರ ಅರ್ಥ :– ದಹಿಕ ಎಂದರೆ, ಸ್ವರೂಪದೇಹದ ಸಂಬಂಧ. ದೈಶಿಕ ಎಂದರೆ, ಅಸ್ಪೃಜ್ಯದೇಶದಲ್ಲಿ ಅನಾದಿಯಿಂದ ವಿದ್ಯಮಾನವಾಗಿ ಇರತಕ್ಕ

ಲಿಂಗದೇಹದ ಸಂಬಂಧ. ಕಾಲಿಕ ಎಂದರೆ, ಸೃಷ್ಟಿಕಾಲಕ್ಕೆ ಪ್ರಾಪ್ತವಾದ ಅನಿರುದ್ಧಶರೀರದ ಸ್ಥೂಲದೇಹಸಂಬಂಧ. ತ್ರಯ ಎಂದರೆ, ಈ ಮೂರು ದೇಹಗಳ ಸಂಬಂಧದಿಂದ ಮಾಡ ತಕ್ಕ ಗಹನಕರ್ಮಗಳುಂಟು. ಎಂದರೆ, ಮೂರೂ ಸೇರಿಕೊಂಡು ಸ್ಥೂಲದೇಹದ ದ್ವಾರಾ ಮಾಡತಕ್ಕ ಕರ್ಮಗಳು ಗಹನವಾಗಿ ಉಂಟು ಎಂತ ತಾತ್ಪರ್ಯ. ಆಯಾ ದೃಷ್ಟಾಂತ ದಿಂದ ಅದನದನನುಸರಿಸಿದ ಕರ್ಮಗಳು ಯಾವತ್ತು ತೆಗೆದುಕೋಬೇಕು. ತ್ರಯ ಎಂದರೆ, ಪೂರ್ವೋಕ್ತ ಪ್ರಕಾರ ಮೂರು ವಿಧ ದೇಹಸಂಬಂಧ. ದೇಹದಿಂದ ಸ್ಥೂಲದೇಹ ದ್ವಾರಾ ಮಾಡತಕ್ಕ ಕರ್ಮಗಳಲ್ಲೇನು ಗಹನ ಕರ್ಮಗಳುಂಟು ಎಂದರೆ, ತಿಳಕೊಂಬೋದಕ್ಕೂ, ಅನುಷ್ಠಾನಮಾಡೋದಕ್ಕೂ ಗಹನ ಶಕ್ಯವಲ್ಲದ ಕರ್ಮಗಳು ಅನೇಕ ಇರೋದಾಗಿ ಅವೆ. ಈ ಗಹನಕರ್ಮದೊಳಗೆ ಈ ವಿಹಿತಕರ್ಮಗಳರಿತು ಎಂದರೆ, ತನಗೆ ಮಾಡೋದಕ್ಕೆ ವಿಹಿತವಾದ, ಸದ್ಗತಿಮಾರ್ಗ ತೋರಿಸತಕ್ಕ, ಕರ್ಮ ದಾವದದೋ, ಆ ಕರ್ಮಗಳನ್ನ ಗುರುಗಳ ದ್ವಾರಾ ತಿಳಕೊಂಡವನಾಗಿ, ಆ ತಿಳಕೊಂಡ ಕರ್ಮಗಳ, ನಿಷ್ಕಾಮಕನು ಹೋಗ ಲ್ಪಟ್ಟ ಕಾಮನಾಫಲವುಳ್ಳವನು ನೀನಾಗಿ ಎಂದರೆ ಕರ್ಮಮಾಡತಕ್ಕವನಿಗೆ ಸಂಬೋಧನ, ಬೃಹತಿ ನಾಮಕ ಭಾರತೀಶನ ಎಂದರೆ, ಭಾರತೀಪತಿಯಾದ ಬೃಹತಿ ಎಂಬ ನಾಮದಿಂದ ವಾಚ್ಯನಾದ ಪ್ರಾಣದೇವರ ಮಹಿತ ರೂಪವ ನೆನೆದು ಎಂದರೆ, ಮಹಿತ ಎಂದರೆ ಪೂಜ್ಯ ರಾದ ವಾಯುದೇವರು ಎಂತ ತಾತ್ಪರ್ಯ. ದಾರಿಂದ ಪೂಜ್ಯ ಎಂದರೆ, ತೃಣಜೀವರ ಆರಂಭ ಮಾಡಿ ಭಾರತೀ ಪರ್ಯಂತ ಮುಕ್ತಿಯೋಗ್ಯರಾದವರಿಂದ ಪೂಜ್ಯನು. ಮತ್ತು ವಾಯುದೇವರಲ್ಲಿ ಮಹಿತನ ಎಂದರೆ, ರಮಾದೇವೇರಿಗೆ ಹಿತಪತಿಯಾದ ಪರಮಾತ್ಮನ ನೆನೆದು, ಎಲ್ಲಿ ನೆನೆದು ಎಂದರೆ, ಮನದಲ್ಲಿ ವಾಯ್ವಂತರ್ಗತನಾಗಿ ನೆನೆದು, ಅಹರಹಃ– ಹಗಲುರಾತ್ರಿಗಳಲ್ಲಿ ಮಾಡತಕ್ಕ ಕರ್ಮಗಳು ಭಗವಂತಗರ್ಪಿಸು. ಷಡ್ಗುಣೈಶ್ವರ್ಯಾದಿ ಸಂಪದ್ಯುಕ್ತನಾದ ಭಗವಂತನಿಗೆ ಅರ್ಪಿಸು. ಪರಮಭಕುತಿಯಲಿ ಎಂದರೆ, ಸುಮ್ಮನೆ ಕೃಷ್ಣಾರ್ಪಣ ಎಂತ ಅರ್ಪಣ ಅಲ್ಲ. ಉತ್ತಮವಾದ ಭಕ್ತಿ ಎಂಥಾದ್ದು ಎಂದರೆ, ದಾರಾ ಪುತ್ರಾದಿ ದ್ರವ್ಯಾದಿಗಳಲ್ಲಿ ಈಗ್ಗೆ ದಾವ ಭಕ್ತಿ ಅದೋ, ಆ ಭಕ್ತಿ ದ್ರವ್ಯಾದಿಗಳಿಂದ ಬಿಡಿಸಿ ಪರಮಾತ್ಮನಲ್ಲಿ ಇಡೋಣ ದಾವದೋ, ಇದೇ ಪರಮಭಕ್ತಿ ಎಂತ ತಾತ್ಪರ್ಯ. ಇಂಥಾ ಭಕ್ತಿಯಿಂದ ಅರ್ಪಿಸಬೇಕು. ವಿಹಿತಕರ್ಮಗಳು ಅರಿತು ಎಂದರೆ, ವಿಹಿತಕರ್ಮ ದಾವದು ಎಂದರೆ, ತನ್ನ ಸ್ವರೂಪ ಅಭಿವ್ಯಕ್ತ ಆಗೋದಕ್ಕೆ ವಿಹಿತವಾದ ಕರ್ಮ ದಾವದೋ ಅದೇನೇ ವಿಹಿತಕರ್ಮ. ಆ ಕರ್ಮ ಎಂಬುದು ಭೇದಜ್ಞಾನ, ಸ್ವಾಮಿಭೃತ್ಯ ನ್ಯಾಯ, ಅಹಂ ಮಮತಾ ತ್ಯಾಗ, ಲಾಭಾಲಾಭಗಳಲ್ಲಿ ಸಮಬುದ್ಧಿ, ಸುಖದುಃಖಾದಿಗಳಲ್ಲಿ ಸಮಬುದ್ಧಿ, ಭಗವದ್ಭಕ್ತರ ಅಭಿಲಾಷೆ ಪೂರ್ತಿಗೊಳಿಸೋಣ, ಏತಾದೃಶವಾದ ವಿಹಿತಕರ್ಮಗಳು. ಇನ್ನು ಗುರುಸೇವಾ, ಗುರುಭಕ್ತರ ಸೇವಾ, ಇದೇ ವಿಹಿತಕರ್ಮ. ತತ್ಸಜಾತೀಯಗಳು ಯಾವತ್ತು ತೆಗೆದುಕೋಬೇಕು. ಪರಮಾತ್ಮಗೆ ಅರ್ಪಣೆ ಎಂದರೆ ಜಡಕರ್ಮ ಅರ್ಪಣೆ ಎಂತ ತಾತ್ಪರ್ಯವಲ್ಲ. ಪ್ರತಿ ಕರ್ಮದಲ್ಲಿ ಬೃಹತೀ ನಾಮಕ ಪ್ರಾಣದೇವರನ್ನ, ತದಂತ ರ್ಗತ ಪರಮಾತ್ಮನನ್ನ, ತಿಳಿದು ತನ್ನ ಮನದಲ್ಲಿ ವಾಯ್ವಂತರ್ಗತ ಪರಮಾತ್ಮನ ಚಿಂತಿಸಿ

ಮನೋಂತರ್ಗತ ಮನಃಶಬ್ದವಾಚ್ಯ ಪರಮಾತ್ಮನಲ್ಲಿ ಐಕ್ಯಚಿಂತನೆ ಮಾಡೋಣ, ಕರ್ಮಾಂತರ್ಗತ ಕರ್ಮರೂಪಿ ಪರಮಾತ್ಮನ್ನ ಚಿಂತಿಸಿ ಆತನಲ್ಲಿ ಐಕ್ಯಚಿಂತನೆ ಮಾಡೋಣ ಎಂಬುದು, ಪರಮಾತ್ಮಗೆ ಕರ್ಮಸಮರ್ಪಣೆ ಎಂತ ತಾತ್ಪರ್ಯ. ಈ ರೀತ್ಯಾ ಪರಮಾತ್ಮಗೆ ಕರ್ಮ ಅರ್ಪಣೆ ಮಾಡಬೇಕು. ಇಂಥಾ ಸತ್ಕರ್ಮ ಮಾಡಿ, ಸದ್ಗತಿ ಐದಬೇಕೆಂದು ತಾತ್ಪರ್ಯ. ತದ್ವ್ಯತಿರಿಕ್ತ ಅನೇಕ ಕರ್ಮಗಳು ಮಾಡಿದರೂ ಗತಿ ಆಗಲಾರದು ಎಂತ ತಿಳಿಯಬೇಕು.

**ಮೂರು ವಿಧ ಕರ್ಮಗಳೊಳಗೆ ಕಂ ।**
**ಸಾರಿ ಭಾರ್ಗವ ಹಯವದನ ಸಂ ।**
**ಪ್ರೇರಕನು ತಾನಾಗಿ ನವರೂಪಗಳನೆ ಧರಿಸಿ ॥**
**ಸೂರಿ ಮಾನವ ದಾನವರೊಳು ವಿ ।**
**ಕಾರಶೂನ್ಯನು ಮಾಡಿ ಮಾಡಿಸಿ ।**
**ಸಾರಭೋಕ್ತನು ಸ್ವೀಕರಿಸಿ ಕೊಡುತಿಪ್ಪ ಜೀವರಿಗೆ ॥ ೫ ॥**

ಪೂರ್ವೋಕ್ತ ತ್ರಿವಿಧ ಕರ್ಮಗಳ ವಿವರ, ಕರ್ಮಾಭಿಮಾನಿಗಳ ಹೇಳತಾರೆ.

ಮೂರು ವಿಧ ಕರ್ಮಗಳೊಳಗೆ–ದೈಹಿಕ, ದೈಶಿಕ ಮತ್ತು ಕಾಲಿಕ ಈ ಮೂರು ವಿಧ ಕರ್ಮಗಳೊಳಗೆ, ಕಂಸಾರಿ–ಶ್ರೀಕೃಷ್ಣದೇವರು (ದೈಹಿಕ ಕರ್ಮಗಳಲ್ಲಿ), ಹಯವದನ–ಹಯವದನದೇವರು (ಕಾಲಿಕ ಕರ್ಮದಲ್ಲಿ), ಭಾರ್ಗವ–ಶ್ರೀಪರಶುರಾಮದೇವರು (ದೈಶಿಕ ಕರ್ಮದಲ್ಲಿ), ಈ ಪ್ರಕಾರ ಕರ್ಮತ್ರಯದಲ್ಲಿ ಇರೋವನಾಗಿ, ನವರೂಪಗಳನೆ ಧರಿಸಿ–ಈ ತ್ರಿವಿಧ ಕರ್ಮಗಳಲ್ಲಿ ೯ ರೂಪಗಳ ಧರಿಸಿ, ಸಂಪ್ರೇರಕನು ತಾನಾಗಿ– ಸಂ–ಛಂದಾಗಿ ಆಯಾ ಜೀವರಲ್ಲಿದ್ದು ಪ್ರೇರಿಸತಕ್ಕವ ತಾನೇ ಆಗಿ ಅಂದರೆ, ಜೀವಾಂತರ್ಗತ ಪ್ರೇರಕನು ಸಾಕ್ಷಾತ್ತು ಪರಮಾತ್ಮನ ವ್ಯತಿರಿಕ್ತ ಅನ್ಯ ಬ್ರಹ್ಮವಾಯ್ವಾದಿಗಳ ಪ್ರೇರಣೆ ಇಲ್ಲದಂತೆ ತಿಳೀಬೇಕು. ಈ ಪ್ರಕಾರ ಪ್ರೇರಿಸುತ್ತಾ, ಸೂರಿ ಮಾನವ ದಾನವರೊಳು– ಸೂರಿ–ದೇವತೆಗಳು, ಮಾನವ–ನಿತ್ಯಸಂಸಾರಿಗಳು, ದಾನವ–ದೈತ್ಯರು, ದೇಹಾಭಿಮಾನಿಗಳಾಗಿ, ತತ್ವನಿಯಾಮಕರಾಗಿಯೂ ತ್ರಿವಿಧರಾದವರೊಳು, ತ್ರಿವಿಧ ಕರ್ಮಗಳೊಳು ಇದ್ದು, ವಿಕಾರ ಶೂನ್ಯನು–ವಿಕಾರಶೂನ್ಯವಾದ ಶರೀರವುಳ್ಳವನಾಗಿ ಪರಮಾತ್ಮನು, ಮಾಡಿ ಮಾಡಿಸಿ–ಜೀವರ ಕಡಿಯಿಂದ, ತ್ರಿವಿಧ ಕರ್ಮಗಳನ್ನು ಪರಮಾತ್ಮ ತನ್ನ ವ್ಯತಿರಿಕ್ತ ಚಲಿಸೋದಕ್ಕೆ ಅಸ್ವತಂತ್ರರಾದ ವಿಕಾರಸಹಿತವಾದ ಶರೀರವುಳ್ಳವರಿಗೆ, ಕರ್ಮದಿಂದ ವಿಕಾರ ಐದಿಸಿ ಅವರಿಂದ ಕರ್ಮಗಳು ಮಾಡಿಸಿ, ಸಾರಭೋಕ್ತನು–ಸಾರಭೂತವಾದ ತನ್ನ ಸ್ವಾಖ್ಯಗಳ ಭೋಗ ಮಾಡತಕ್ಕ ಶ್ರೀ ಪರಮಾತ್ಮನು, ಸ್ವೀಕರಿಸಿ ಕೊಡುತಿಪ್ಪ ಜೀವರಿಗೆ – ತನ್ನ ಸ್ವಾಖ್ಯವನ್ನು ತಾನು ಸ್ವೀಕರಿಸಿ, ಜಡಕರ್ಮಭೋಗವನ್ನು ಆಯಾ ದೇಹಗತ ಜೀವರಿಗೆ ಕೊಡೋವನಾಗತಾನೆ.

**ತಾ||** ಈ ಪ್ರಕಾರ ಮಾಡತಕ್ಕ ಕರ್ಮಗಳಲ್ಲಿ ಪೂರ್ವೋಕ್ತ ಪ್ರಕಾರ ಅನುಸಂಧಾನ ಮಾಡಿ ಕರ್ಮಗಳು ಪರಮಾತ್ಮಗೆ ಅರ್ಪಿಸಿ, ನಿರ್ಲಿಪ್ತನಾಗಿ, ಬಿಂಬಕ್ರಿಯಾ ದ್ವಾರಾ ಪ್ರತಿಬಿಂಬಕ್ರಿಯಾ ತಿಳಿಯುತ್ತಾ, ಜೀವರಲ್ಲಿ ಸ್ವಾಧೀನ ಸ್ವಾತಂತ್ರ್ಯಾರೋಪಣೆ ಮಾಡದೆ ಅಸ್ವತಂತ್ರವಾದ ಸ್ವಾತಂತ್ರ್ಯ ಉಳ್ಳವನೆಂದು ತಿಳಿದು ಅವರವರ ಅನಾದಿಸ್ವರೂಪವನ್ನು ಶ್ಲಾಘನ, ಉದಾಸೀನ, ನಿಂದಾ ಮಾಡತಾ ಇರಬೇಕೆಂತ ತಾತ್ಪರ್ಯ.

**ವಿಶೇಷಾರ್ಥ :–** ಕರ್ಮಗಳು ಮೂರು ವಿಧ. ದಾವದೆಂದರೆ, ೧. ಸಾತ್ವಿಕ ಕರ್ಮ ಅಂದರೆ, ಮುಕ್ತಿಯೋಗ್ಯರು ಮಾಡತಕ್ಕದ್ದು. ೨. ರಾಜಸಕರ್ಮ ಅಂದರೆ, ಮಿಶ್ರ ಕರ್ಮ ಅಂದರೆ, ಉದಾಸೀನ ಕರ್ಮ ಅಂದರೆ, ನಿತ್ಯಸಂಸಾರಿಗಳು ಮಾಡತಕ್ಕದ್ದು. ೩. ತಾಮಸಕರ್ಮ, ಇದು ಪಾಪಕರ್ಮ. ತಮೋಯೋಗ್ಯರು ಮಾಡತಕ್ಕದ್ದು. ಭೇದಜ್ಞಾನ, ಮಿಶ್ರಜ್ಞಾನ, ಮಿಥ್ಯಾಜ್ಞಾನ ಎಂತ ತಾತ್ಪರ್ಯ. ಇಂಥಾದ್ದೇ ತ್ರಿವಿಧ ಕರ್ಮವು. ಈ ಮೂರು ವಿಧ ಕರ್ಮಗಳೊಳಗೆ ಒಂದೊಂದರಲ್ಲಿ ಸಾತ್ವಿಕಾದಿ ಭೇದದಿಂದ ಮೂರು ಮೂರು ಪ್ರಕಾರ ಇರೋದಾಗಿ ಅದೆ. ಅದಕ್ಕೆ ಮೂರು ಮೂರು ಭಗವದ್ರೂಪ ಗಳು. ಆ ರೂಪಗಳು ದಾವದು ಎಂದರೆ, ಸಾತ್ವಿಕ ಕರ್ಮ ಒಂದು, ಇದರಲ್ಲಿ ಕಂಸಾರಿ ಎಂದರೆ, ಕಂಸಗೆ ಶತ್ರು ಆದಂಥಾ ಕೃಷ್ಣ. ಈ ಸಾತ್ವಿಕ ಕರ್ಮದೊಳಗೆ ಮೂರು ವಿಧ, ಮೂರು ವಿಧ ಭಗವದ್ರೂಪಗಳು. ಅದರ ವಿವರ :– ೧. ಸಾತ್ವಿಕ ಕರ್ಮ, ಸಾತ್ವಿಕಕ್ಕೆ ಕೃಷ್ಣ. ೨. ಸಾತ್ವಿಕ ರಾಜಸಕ್ಕೆ ಭಾರ್ಗವ ಎಂದರೆ, ಪರಶುರಾಮದೇವರು. ೩. ಸಾತ್ವಿಕ ತಾಮಸಕ್ಕೆ ಹಯವದನ. ಅಂತು ಮೂರು ಭಗವದ್ರೂಪಗಳು. ಎರಡು, ರಾಜಸಕರ್ಮ, ಇದರಲ್ಲಿ ಭಾರ್ಗವ ಎಂದರೆ, ಪರಶುರಾಮ. ರಾಜಸಸಾತ್ವಿಕಕ್ಕೆ ಕೃಷ್ಣ. ರಾಜಸರಾಜಸ ಕರ್ಮಕ್ಕೆ ಪರಶುರಾಮದೇವರು. ರಾಜಸತಾಮಸ ಕರ್ಮಕ್ಕೆ ಹಯವದನದೇವರು. ಅಂತು ಮೂರು ಭಗವದ್ರೂಪಗಳು. ಮೂರು ತಾಮಸಕರ್ಮ. ಇದಕ್ಕೆ ಹಯವದನ ದೇವರು. ತಾಮಸಸಾತ್ವಿಕ ಕರ್ಮಕ್ಕೆ ಕಂಸಾರಿಯಾದ ಕೃಷ್ಣದೇವರು, ತಾಮಸರಾಜಸ ಕರ್ಮಕ್ಕೆ ಪರಶುರಾಮದೇವರು, ತಾಮಸತಾಮಸ ಕರ್ಮಕ್ಕೆ ಹಯವದನದೇವರು. ಅಂತು ಮೂರು ಭಗವದ್ರೂಪಗಳು. ನಿತ್ಯಸಂಸಾರಿಗಳಿಗೆ ಸಾಂಶತ್ವ ಉಂಟು ಎಂಬುದು ಹಿಂದೆ ಸಂಧ್ಯಂತರದಲ್ಲಿ ವಿವರಿಸಿ ಅದೆ. ಬಿಂಬಕ್ರಿಯಾ ಎಂದರೆ, ಬಿಂಬಶಬ್ದವಾಚ್ಯ ಸ್ಥೂಲ ದೇಹದಲ್ಲಿ ದೇಹಾಕಾರದಿಂದ ಇರತಕ್ಕ ಬಿಂಬ ಎಂತ ತಾತ್ಪರ್ಯವೇ ಹೊರ್ತು, ಜೀವಾಂತ ರ್ಗತ ಬಿಂಬನೂ ಅಲ್ಲ, ದೇಹಾಂತರ್ಗತ ಅಂಗುಷ್ಟಮಾತ್ರ ಬಿಂಬನೂ ಅಲ್ಲ. ಎಂದರೆ, ಏಕದೇಶಗತ ಅಣುವಾದ ಜೀವ ಪ್ರಕಾಶತಃ ಸ್ಥೂಲದೇಹದಲ್ಲಿ, ತದಾಕಾರದಿಂದ ಹ್ಯಾಂಗೆ ವ್ಯಾಪ್ತನೋ ತದ್ವತ್ ಏಕದೇಶ ಬಿಂಬನು ಸ್ಥೂಲದೇಹದಲ್ಲಿ ಸ್ಥೂಲಾಕಾರನಾಗಿ ವ್ಯಾಪ್ತ ನಾಗಿ ಇದ್ದಾನೆ. ಪ್ರತಿಬಿಂಬನಾದ ಜೀವ ಎಂಬವ ಸ್ಥೂಲದೇಹಾಕಾರನಾಗಿ ವ್ಯಾಪ್ತನಾಗಿ ಇದ್ದಾನೆ. ಪ್ರತಿಬಿಂಬನಾದ ಜೀವ ಎಂಬವ ಸ್ಥೂಲದೇಹಾಕಾರದಂತೆ ಇರತಕ್ಕವ. ಇವಗೆ ಬಿಂಬ, ದೇಹಾಕಾರನಾಗಿ ಇರತಕ್ಕ ಪರಮಾತ್ಮನೇ. ಬಿಂಬಕ್ರಿಯಾ ಪ್ರತಿಬಿಂಬಕ್ರಿಯಾ ಎಂಬುದು, ಇಂಥಾ ಬಿಂಬ, ಇಂಥಾ ಪ್ರತಿಬಿಂಬರಲ್ಲಿ ಸಮನ್ವಯವು. ತದ್ವ್ಯತಿರಿಕ್ತ ಅತ್ಯಣು

ಮನೋಂತರ್ಗತ ಮನಃಶಬ್ದವಾಚ್ಯ ಪರಮಾತ್ಮನಲ್ಲಿ ಐಕ್ಯಚಿಂತನೆ ಮಾಡೋಣ, ಕರ್ಮಾಂತರ್ಗತ ಕರ್ಮರೂಪಿ ಪರಮಾತ್ಮನ್ನ ಚಿಂತಿಸಿ ಆತನಲ್ಲಿ ಐಕ್ಯಚಿಂತನೆ ಮಾಡೋಣ ಎಂಬುದು, ಪರಮಾತ್ಮಗೆ ಕರ್ಮಸಮರ್ಪಣೆ ಎಂತ ತಾತ್ಪರ್ಯ. ಈ ರೀತ್ಯಾ ಪರಮಾತ್ಮಗೆ ಕರ್ಮ ಅರ್ಪಣೆ ಮಾಡಬೇಕು. ಇಂಥಾ ಸತ್ಕರ್ಮ ಮಾಡಿ, ಸದ್ಗತಿ ಐದಬೇಕೆಂದು ತಾತ್ಪರ್ಯ. ತದ್ವ್ಯತಿರಿಕ್ತ ಅನೇಕ ಕರ್ಮಗಳು ಮಾಡಿದರೂ ಗತಿ ಆಗಲಾರದು ಎಂತ ತಿಳಿಯಬೇಕು.

**ಮೂರು ವಿಧ ಕರ್ಮಗಳೊಳಗೆ ಕಂ ।**
**ಸಾರಿ ಭಾರ್ಗವ ಹಯವದನ ಸಂ ।**
**ಪ್ರೇರಕನು ತಾನಾಗಿ ನವರೂಪಗಳನೆ ಧರಿಸಿ ॥**
**ಸೂರಿ ಮಾನವ ದಾನವರೊಳು ವಿ ।**
**ಕಾರಶೂನ್ಯನು ಮಾಡಿ ಮಾಡಿಸಿ ।**
**ಸಾರಭೋಕ್ತನು ಸ್ವೀಕರಿಸಿ ಕೊಡುತಿಪ್ಪ ಜೀವರಿಗೆ ॥ ೫ ॥**

ಪೂರ್ವೋಕ್ತ ತ್ರಿವಿಧ ಕರ್ಮಗಳ ವಿವರ, ಕರ್ಮಾಭಿಮಾನಿಗಳ ಹೇಳತಾರೆ.

ಮೂರು ವಿಧ ಕರ್ಮಗಳೊಳಗೆ—ದೈಹಿಕ, ದೈಶಿಕ ಮತ್ತು ಕಾಲಿಕ ಈ ಮೂರು ವಿಧ ಕರ್ಮಗಳೊಳಗೆ, ಕಂಸಾರಿ—ಶ್ರೀಕೃಷ್ಣದೇವರು (ದೈಹಿಕ ಕರ್ಮಗಳಲ್ಲಿ), ಹಯವದನ—ಹಯವದನದೇವರು (ಕಾಲಿಕ ಕರ್ಮದಲ್ಲಿ), ಭಾರ್ಗವ—ಶ್ರೀಪರಶುರಾಮದೇವರು (ದೈಶಿಕ ಕರ್ಮದಲ್ಲಿ), ಈ ಪ್ರಕಾರ ಕರ್ಮತ್ರಯದಲ್ಲಿ ಇರೋವನಾಗಿ, ನವರೂಪಗಳನೆ ಧರಿಸಿ—ಈ ತ್ರಿವಿಧ ಕರ್ಮಗಳಲ್ಲಿ ೯ ರೂಪಗಳ ಧರಿಸಿ, ಸಂಪ್ರೇರಕನು ತಾನಾಗಿ— ಸಂ—ಛಂದಾಗಿ ಆಯಾ ಜೀವರಲ್ಲಿದ್ದು ಪ್ರೇರಿಸತಕ್ಕವ ತಾನೇ ಆಗಿ ಅಂದರೆ, ಜೀವಾಂತರ್ಗತ ಪ್ರೇರಕನು ಸಾಕ್ಷಾತ್ತು ಪರಮಾತ್ಮನ ವ್ಯತಿರಿಕ್ತ ಅನ್ಯ ಬ್ರಹ್ಮವಾಯ್ವಾದಿಗಳ ಪ್ರೇರಣೆ ಇಲ್ಲದಂತೆ ತಿಳೀಬೇಕು. ಈ ಪ್ರಕಾರ ಪ್ರೇರಿಸುತ್ತಾ, ಸೂರಿ ಮಾನವ ದಾನವರೊಳು— ಸೂರಿ—ದೇವತೆಗಳು, ಮಾನವ—ನಿತ್ಯಸಂಸಾರಿಗಳು, ದಾನವ—ದೈತ್ಯರು, ದೇಹಾಭಿಮಾನಿಗಳಾಗಿ, ತತ್ವನಿಯಾಮಕರಾಗಿಯೂ ತ್ರಿವಿಧರಾದವರೊಳು, ತ್ರಿವಿಧ ಕರ್ಮಗಳೊಳು ಇದ್ದು, ವಿಕಾರ ಶೂನ್ಯನು—ವಿಕಾರಶೂನ್ಯವಾದ ಶರೀರವುಳ್ಳವನಾಗಿ ಪರಮಾತ್ಮನು, ಮಾಡಿ ಮಾಡಿಸಿ—ಜೀವರ ಕಡಿಯಿಂದ, ತ್ರಿವಿಧ ಕರ್ಮಗಳನ್ನು ಪರಮಾತ್ಮ ತನ್ನ ವ್ಯತಿರಿಕ್ತ ಚಲಿಸೋದಕ್ಕೆ ಅಸ್ವತಂತ್ರರಾದ ವಿಕಾರಸಹಿತವಾದ ಶರೀರವುಳ್ಳವರಿಗೆ, ಕರ್ಮದಿಂದ ವಿಕಾರ ಐದಿಸಿ ಅವರಿಂದ ಕರ್ಮಗಳು ಮಾಡಿಸಿ, ಸಾರಭೋಕ್ತನು—ಸಾರಭೂತವಾದ ತನ್ನ ಸ್ವಾಖ್ಯಗಳ ಭೋಗ ಮಾಡತಕ್ಕ ಶ್ರೀ ಪರಮಾತ್ಮನು, ಸ್ವೀಕರಿಸಿ ಕೊಡುತಿಪ್ಪ ಜೀವರಿಗೆ – ತನ್ನ ಸ್ವಾಖ್ಯವನ್ನು ತಾನು ಸ್ವೀಕರಿಸಿ, ಜಡಕರ್ಮಭೋಗವನ್ನು ಆಯಾ ದೇಹಗತ ಜೀವರಿಗೆ ಕೊಡೋವನಾಗತಾನೆ.

ತಕ್ಕ ರಸದಲ್ಲಿ ದೋಷವಿಲ್ಲ. ಅವರವರ ಸ್ವರೂಪಭೂತ ರಸ ಸ್ವೀಕಾರ ಮಾಡತಾರೆ. ದೇವತೆಗಳು ಸ್ವೀಕಾರ ಮಾಡತಕ್ಕ ರಸದಲ್ಲಿಯೂ ದೋಷವಿಲ್ಲ. ಅವರವರ ಸ್ವೀಕಾರ ರಸ ಹೋಗತಾ ಜೀವಭೋಗ್ಯರಸ ಮಾತ್ರ ಇರುತ್ತದೆ. ಜೀವರ ಸ್ವರೂಪಭೂತ ರಸವಿಲ್ಲ. ಜಡರಸ, ದೇಹಕ್ಕೆ ಉಪಚಯವಾಗತಕ್ಕ ರಸ ಇರೋದಾಗಿ ಅದೆ. ಇದರಲ್ಲಿ ಇರತಕ್ಕ ದೋಷ ದಾವದರಿಂದ ಪರಿಹಾರವಾಗಬೇಕು ಅಂದರೆ, ಅಗ್ನ್ಯಂತರ್ಗತ ಪರಶುರಾಮದೇವ ರಿಂದ ಸಂಹಾರವಾಗಬೇಕು ಎಂತ ನೇಮ. ಅನ್ನದೋಷ ಪರಿಹಾರಾರ್ಥ, ವೈಶ್ವದೇವಾಖ್ಯ ಹೋಮ ಎಂತ ಅನುಸಂಧಾನಮಾಡಿ, ಅಗ್ನಿಯಲ್ಲಿ ಅನ್ನವನ್ನು ಕೊಟ್ಟರೆ ಆ ಅನ್ನಗತ ದೋಷ ಬಾಧಿಸದಂತೆ ಪರಮಾತ್ಮ ಮಾಡತಾನೆ. ತತ್ಪೂರ್ವದಲ್ಲಿ ಅಗ್ನಿಪಚನ ಮಾಡಿ ದಾಗ್ಯೂ ಇವನ ಪ್ರಾರ್ಥನಾ ಅನುಸರಿಸಿ ಫಲವಾದ್ದರಿಂದ, ದೋಷಪರಿಹಾರಾರ್ಥವಾಗಿ ಈ ಅನುಸಂಧಾನದಿಂದ ಅಗ್ನಿಯಲ್ಲಿ ವೈಶ್ವದೇವಾಖ್ಯ ಹೋಮ ಮಾಡೋವನಾಗಬೇಕು. ಈ ಕಾರಣದಿಂದ, ಅನಲ ಪಕ್ವಗೈಸಿದ ಅನ್ನವನ್ನು ಮತ್ತೂ ಅನಲದಲಿ ಹೋಮಿಸಬೇಕು ಎಂತ ತಾತ್ಪರ್ಯ. ವೈಶ್ವದೇವ ಮಾಡದ ಅನ್ನ, ದೇವರು, ಪ್ರಾಣದೇವರು ಉಭಯರ ನಿವೇದನ ಆಗಿದ್ದಾಗ್ಯೂ ಮಹಾನಿಷೇಧ ಎಂತ ಗರುಡಪುರಾಣದಲ್ಲಿ ಹೇಳತದೆ. ಏಕಾದಶೀ ಅನ್ನ ಭೋಜನವೂ ಎರಡೂ ಸಮಾನ ದೋಷದಿಂದ ಯುಕ್ತವಾದದ್ದು ಎಂತ ಉಕ್ತ ವಾಗಿ ಅದೆ. ದೋಷಗಳು ಪರಿಹಾರವಾಗಬೇಕಾದರೆ ಪಾಪಗಳು ಅರ್ಪಿಸಬೇಕೆಂಬೋದಕ್ಕೆ ಪ್ರಮಾಣ :—

"ವಚನಾನ್ನಿವೃತ್ತಿಃ ವಚನಾತ್ಪ್ರವೃತ್ತಿಃ" ಮತ್ತು "ಯದನ್ಹಾ ಯದ್ರಾತ್ರ್ಯಾ ಪಾಪಮಕಾರಿಷಂ ಮನಸಾ ವಾಚಾ ಹಸ್ತಾಭ್ಯಾಂ ಪದ್ಭ್ಯಾಂ ಉದರೇಣ ಶಿಶ್ನಾ ಅಹ ಸ್ತದವಲುಂಪತು ಯತ್ಕಿಂಚ ದುರಿತಂ ಮಯಿ" ಎಂತ ಇರುವ ಪ್ರಮಾಣಾನುಸಾರ ಪಾಪ ಸವಿತ್ರಂತರ್ಗತ ಶ್ರೀನಾರಾಯಣದೇವರಿಗೆ ಅರ್ಪಿಸಬೇಕಾದ್ದೇ. ಅಧಿಕಾರಭೇದ, ಅನುಷ್ಠಾನ ಭೇದದಿಂದ ಪಾಪ ಪರಿಹಾರಾಪರಿಹಾರಗಳು ಆಗತಾ ಇರುತ್ತವೆ. ಅರ್ಪಿತಮಾತ್ರದಿಂದ ನಿರ್ಲೇಪನಾಗಲಾರ. ಯದ್ಯಪಿ ಪ್ರಮಾಣಾನುಸಾರ ಅರ್ಪಿಸಬೇಕು. ಈ ರೀತ್ಯಾ ಮಾಡೋಣದರಿಂದ "ಯದನ್ಹಾತ್ ಕುರುತೇ ಪಾಪಂ ತದನ್ಹಾತ್ ಪ್ರತಿಮುಚ್ಯತೇ। ಯದ್ರಾತ್ರ್ಯಾತ್ ಕುರುತೇ ಪಾಪಂ ತದ್ರಾತ್ರ್ಯಾತ್ ಪ್ರತಿಮುಚ್ಯತೇ।" ಎಂತಲೂ ಪ್ರಮಾಣ ಹೇಳತದೆ. ಆದ್ದರಿಂದ ಅರ್ಪಿಸೋವನಾಗಬೇಕು.

**ಕುದುರೆ ಬಾಲದ ಕೊನೆಯ ಕೂದಲು।**
**ತುದಿ ವಿಭಾಗವ ಮಾಡಿ ಶತವಿಧ।**
**ವದರೊಳೊಂದನು ನೂರುಭಾಗವ ಮಾಡಲೆಂತಿಹುದೊ॥**
**ವಿಧಿ ಭವಾದಿ ಸಮಸ್ತ ದಿವಿಜರ।**
**ಮೊದಲುಮಾಡಿ ತೃಣಾಂತಜೀವರೊ।**
**ಳಧಿಕ ನ್ಯೂನತೆಯಿಲ್ಲವೆಂದಿಗು ಜೀವ ಪರಮಾಣು॥ ೭॥**

ಜೀವಾಂತರ್ಗತ ಪರಮಾತ್ಮ ಒಬ್ಬನೇ ನಿಯಾಮಕ. ಬ್ರಹ್ಮವಾಯ್ವಾದಿಗಳ ನಿಯಾಮಕತ್ವ ಇಲ್ಲ, ಎಂತ ಹಿಂದೆ ಹೇಳಲ್ಪಟ್ಟಿದೆ. ಅದಕ್ಕೆ ಕಾರಣವೂ, ಜೀವನ ಪರಿಮಿತಿಯೂ ಹೇಳತಾರೆ. ಇಲ್ಲಿಂದ ಜೀವನ ಸ್ವರೂಪದೇಹದ ವಿಚಾರ ಹೇಳತಾರೆ.

ಕುದುರೆಬಾಲದ_ಕುದುರೆ ಬಾಲಗತ, ಕೂದಲು_ಒಂದು ಕೂದಲನ್ನು ತೆಗೆದು ಕೊಂಡು, ಕೊನೆಯ_ಆ ಕೂದಲು ಕೊನೆಯನ್ನು, ಶತವಿಭಾಗ ಮಾಡಿ_ನೂರು ಪ್ರಕಾರ ವಿಶೇಷಾಕಾರದಿಂದ ಖಂಡಿಸಿದರೆ, ನೂರು ಭಾಗಗಳು ಖಂಡಖಂಡವಾಗಿ ಪ್ರತ್ಯೇಕಪ್ರತ್ಯೇಕ ವಾಗತದೆ. ಅದರೊಳು_ಭಾಗವಾಗಿ ಇರತಕ್ಕ ಆ ನೂರರ ಒಳಗೆ, ಒಂದನು_ಒಂದು ಭಾಗ ತೆಗೆದುಕೊಂಡು ಆ ಒಂದರನ್ನ, ನೂರು ಭಾಗವ ಮಾಡಲು_ನೂರಾಗಿ ಖಂಡಿಸಿದರೆ ಆ ನೂರರೊಳಗೆ ಒಂದು ಭಾಗ, ಎಂತಿಹುದೊ_ಎಷ್ಟು ಪರಿಮಿತವಾದ ಸೂಕ್ಷ್ಮದಿಂದ ಇರೋದೋ ಅಷ್ಟೇ ಪರಿಮಿತದಿಂದ, ವಿಧಿಭವಾದಿ_ಬ್ರಹ್ಮ ರುದ್ರ ಮೊದಲಾದ, ಸಮಸ್ತ ದಿವಿಜರ_ಸಮಸ್ತರಾದ ಸಾಂಶರಾದ ದೇವತೆಗಳ, ಮೊದಲುಮಾಡಿ_ಆರಂಭ ಮಾಡಿ ಮತ್ತು ನಿರಂಶರಾದ ಮಾನುಷ ಗಂಧರ್ವರು ಆರಂಭಮಾಡಿ, ತೃಣಾಂತ ಜೀವರೊಳು_ತೃಣಾಂತ ತ್ರಿವಿಧ ಜೀವರಲ್ಲಿ, ಜೀವ ಪರಮಾಣು_ಜೀವಸ್ವರೂಪ ಪರಮಾಣು ಎಂಬುದು ಪೂರ್ವೋಕ್ತ ದೃಷ್ಟಾಂತದಷ್ಟೇ ಪರಮಸೂಕ್ಷ್ಮವಾದದ್ದು. ಎಂದಿಗೂ-ಅನಾದ್ಯನಂತ ಕಾಲಕ್ಕೂ, ಅಧಿಕನ್ಯೂನತೆಯಿಲ್ಲ_ಅದರಕಿಂತಲೂ ಅಧಿಕವಾಗೋಣವೂ ಇಲ್ಲ, ಕಡಿಮೆಯಾಗೋಣವೂ ಇಲ್ಲ. ಶಶ್ವದೇಕಪ್ರಕಾರ ಇರುತ್ತಾರೆ. ಇದು ಬ್ರಹ್ಮಾದಿ ಸರ್ವ ಜೀವರಿಗೂ ಒಂದೇ ನೇಮ. ತುದಿ_ಇದರಕಿಂತಲೂ ಕೊನೀದಾದ ಪರಮಾಣುಸ್ವರೂಪ ರಮಾದೇವೇರು. ಇವರಕಿಂತಲೂ ಕೊನಿಯಾದವನು ಅಪರಿಚ್ಛಿನ್ನನಾದ ಶ್ರೀ ಪರಮಾತ್ಮ, ಪರಮಾಣುಸ್ವರೂಪನೆಂದು ತಾತ್ಪರ್ಯ.

**ವಿಶೇಷಾರ್ಥ** :_ ಪ್ರಮಾಣ. ಅಣುಭಾಷ್ಯೇ ಚತುರ್ಥಾಧ್ಯಾಯೇ "ವೃದ್ಧಿಹ್ರಾಸವಿವರ್ಜಿತಾಃ" | "ಮುಕ್ತಾನಂದಾದೀನಾಂ ವೃದ್ಧಿಹ್ರಾಸೋ ನ ವಿದ್ಯತೇ | ಕಿಂತು ಏಕ ಪ್ರಕಾರೇಣೈವ ಅವಸ್ಥಾನಂ ಕುತಃ ? ಸ ಏಷ ಏತಸ್ಮಿನ್ ಬ್ರಹ್ಮಣಿ ಸಂಪನ್ನೋ ನ ಜಾಯತೇ, ನ ಮ್ರಿಯತೇ, ನ ಹೀಯತೇ, ನ ವರ್ಧತೇ, ನ ಸಹತೇ, ಸ್ಥಿತ ಏವ ಸದಾ ಭವಿಷ್ಯತಿ || " ಇತಿ ಶ್ರುತಿಃ.

ಪ್ರಕಾಶಸಂಹಿತಾಯಾಂ – " ಅನಂತರೂಪೈಃ ಸರ್ವಾಂಗಂ ಸ್ವರೂಪೇಣ ಹ್ಯಣೋರ್ವೃದ್ಧಿಃ ನ ಯುಜ್ಯತೇ | ನೋ ಹಾನಿಃ ಪುನರಾವೃತ್ತಿಃ ದುಃಖಾಜ್ಞಾನಭಯಾದಯಃ || " ದೇವತೆಗಳಿಗೆ ಅಣಿಮಾದಿಗಳು ಹೇಳಿ ರುದ್ರಾದ್ಯಪೇಕ್ಷಯಾ ವಾಯುಬ್ರಹ್ಮರು ಅಣುಗಳಾಗುತ್ತಾರೆಂತ ಪ್ರಮಾಣಗಳು ಅವೆ. ಆ ಪ್ರಮಾಣಗಳು ಸ್ವರೂಪವ್ಯತಿರಿಕ್ತ ತಮ್ಮ ತಮ್ಮ ಸ್ಥೂಲಶರೀರಗಳ ವಿಚಾರವೆಂದು ತಾತ್ಪರ್ಯ.

ಜೀವರ ಪರಮಾಣುಪ್ರಮಾಣ :_ " ಅಶ್ವಬಾಲಾಗ್ರಮಾದಾಯ ವಿಭಜ್ಯ ಶತಧಾ ಹಿ ತತ್ | ಪುನಶ್ಚ ಶತಧಾ ಭಿನ್ನಂ ಕಿಯನ್ಮಾನಂ ಭವಿಷ್ಯತಿ | ತಾವದ್ಬ್ರಹ್ಮಾದಿ ಜೀವಾನಾಂ ಪರಿಮಾಣಂ ಪ್ರಕೀರ್ತಿತಂ || "

**ಜೀವನಂಗುಷ್ಠಾಗ್ರಮೂರುತಿ ।**
**ಜೀವನಂಗುಟಮಾತ್ರ ಮೂರುತಿ ।**
**ಜೀವನ ಪ್ರಾದೇಶ ಜೀವಾಕಾರ ಮೂರ್ತಿಗಳು ॥**
**ಏವಮಾದಿ ಅನಂತ ರೂಪದಿ ।**
**ಯಾವದವಯವಗಳೊಳು ವ್ಯಾಪಿಸಿ ।**
**ಕಾವ ಕರುಣಾಳುಗಳ ದೇವನು ಈ ಜಗತ್ರಯವ ॥ ೮ ॥**

ಜೀವಾಂತರ್ಗತ ಪರಮಾತ್ಮನ ವ್ಯತಿರಿಕ್ತ ಅನ್ಯ ದೇವತೆಗಳು ಇಲ್ಲ ಎಂತ ಮೇಲೆ ಹೇಳಲ್ಪಟ್ಟಿತು. ಜೀವಾಂತರ್ಗತನಾದ ಪರಮಾತ್ಮ ಜೀವಾಪೇಕ್ಷಯಾ ಅಣುರೂಪ ತೆಗೆದು ಕೊಂಡು ಇದ್ದಾನೆ ಎಂತಲೂ, ಅಂಥಾ ಅಣು ಆಗತಕ್ಕ ಸಾಮರ್ಥ್ಯ ಬ್ರಹ್ಮವಾಯ್ವಾದಿ ಗಳಿಗೆ ಇಲ್ಲ ಎಂತಲೂ ಹೇಳತಾರೆ.

ಜೀವನಂಗುಷ್ಠಾಗ್ರಮೂರುತಿ– ಪೂರ್ವೋಕ್ತ ಪ್ರಕಾರ ಜೀವ ಅತ್ಯಣು. ಅವನಲಿ ಅವನ ಕರಗತ ಅವನ ಹೆಬ್ಬೆಟ್ಟಿನ ಅಗ್ರಭಾಗಪರಿಮಿತವಾದ ಭಗವದ್ರೂಪ ಒಂದು. ಅಗ್ರ ಎಂದರೆ ಹೆಬ್ಬೆಟ್ಟು ಕೀಲು ಆರಂಭ ಮಾಡಿ ಮ್ಯಾಲೆ ಭಾಗಕ್ಕೆ ಅಗ್ರಭಾಗ ಎಂತ ಸಾಂಕೇತ. ಜೀವನಂಗುಟಮಾತ್ರ ಮೂರುತಿ– ಜೀವನ ಕರಗತ ಆದ್ಯಂತ ಅಂಗುಷ್ಟ ಪರಿಮಿತ ಮೂರ್ತಿಯೊಂದು, ಜೀವನ ಪ್ರಾದೇಶ–ಜೀವನ ಪ್ರಾದೇಶ ಮೂರ್ತಿಯೊಂದು. ಪ್ರಾದೇಶ ಎಂದರೆ, ಅಂಗುಷ್ಟತರ್ಜನೀ ಬೆರಳು ದೂರಮಾಡಿದರೆ ಆಗತಕ್ಕ ಅಳತೆ ಪರಿಮಿತಿಗೆ ಪ್ರಾದೇಶ ಎಂತ ಹೆಸರು. ಇಷ್ಟು ಮಾತ್ರ ಪರಿಮಿತಿ ರೂಪ ಒಂದು. ಎಂದರೆ, ಪಾದ ಆರಂಭ ಮಾಡಿ ಶಿರದವರಿಗೂ ಅಖಂಡರೂಪ, ಏವಮಾದಿ–ಈ ಪ್ರಕಾರ ಇವೇ ಮೊದ ಲಾದ, ಮೂರ್ತಿಗಳು–ಭಗವದ್ರೂಪಗಳು, ಅನಂತರೂಪದಿ–ಅನಂತರೂಪಗಳಿಂದ, ಯಾವದವಯವಗಳೊಳು–ರೋಮ, ನಖ, ಬೆರಳುಗಳು ಯಾವತ್ತು ಜೀವನ ಚಿದಾನಂದ ಶರೀರಕ್ಕೆ ಅವಯವ ಸಾಂಕೇತಗಳು. ಇಂಥಾ ಯಾವತ್ತು ಅವಯವಗಳಲ್ಲಿ ತದಾಕಾರ, ಖಂಡಾಖಂಡ ರೂಪಗಳಿಂದಲೂ, ಈ ತನ್ನ ಒಂದೊಂದು ರೂಪದಲಿ ನವನಾರೀಕುಂಜರ ದೃಷ್ಟಾಂತದಿಂದಲೂ, ಅನೇಕ ವಿಧವಾದ ಅನಂತ ರೂಪಗಳಿಂದ ಸಹಿತವಾದ ಒಂದೊಂದು ರೂಪನಾಗಿ, ವ್ಯಾಪಿಸಿ ಕಾವ–ಈ ಪ್ರಕಾರ ರೂಪಗಳಿಂದ ವ್ಯಾಪಿಸಿ ಜೀವನಲಿ ಇದ್ದು ಸಂರಕ್ಷಣೆ ಮಾಡತಾನೆ. ಎಂದರೆ, ಸ್ಥೂಲದೇಹಾಂತರ್ಗತನಾದ ಪರಮಾತ್ಮ ಸ್ಥೂಲದೇಹ ದಿಂದ ಹೊರಗೆ ಹೊರಟರೆ ಸ್ಥೂಲದೇಹಕ್ಕೆ ನಾಶ ಕಾಣತದೆ. ಇಲ್ಲದಿದ್ದರೆ ಇಲ್ಲ. ತದ್ವತ್ ಜೀವಾಂತರ್ಗತನಾದ ಪರಮಾತ್ಮ ಹೊರಗೆ ಹೊರಟರೆ ಜೀವ ನಾಶ ಕಾಣಬೇಕಾದೀತು. ಅತ ಏವ ಜೀವಾಂತರ್ಗತನಾದ ಪರಮಾತ್ಮ ಅನಾದ್ಯನಂತ ಕಾಲಕ್ಕೂ, ಜೀವನ ಬಿಟ್ಟು ವಿಯೋಗನಾಗದೇ ನಾಶರಹಿತನ್ನಾಗಿ ಮಾಡಿ, ರಕ್ಷಿಸುತ್ತಾ ಇರತಾನೆ. ಕರುಣಾಳುಗಳ ದೇವನು–ಇಂಥಾ ಸರ್ವೋತ್ತಮನಾದ ದೇವರಲ್ಲಿ, ಪರಮಾಂತಃಕರಣಪೂರ್ವಕ ಭಕ್ತಿ ಇರತಕ್ಕ ಜೀವರಿಗೆ ಸ್ವಾಮಿ ಎಂತ ಕರಿಸತಕ್ಕ ಶ್ರೀಪರಮಾತ್ಮನು, ಈ ಜಗತ್ತ್ರಯವ–

ಈ ವಿಧವಾದ ತ್ರಿವಿಧ ಜೀವರ ಅಂತರ್ಗತನಾಗಿ ಅವರವರ ಸ್ವರೂಪ ನಾಶ ಬಾರದಂತೆ ರಕ್ಷಿಸುತ್ತಾ ಇರತಾನೆಂತ ತಾತ್ಪರ್ಯ. ಜಗಚ್ಛಬ್ದ ಜೀವಪರವೆಂದು ತಾತ್ಪರ್ಯ.

ಜೀವಾಂತರ್ಗತದಲ್ಲಿ ಏವಮಾದಿ ರೂಪಗಳಿಂದ ಪರಮಾತ್ಮ ಇದ್ದಾನೇ ಹೊರ್ತು ಅನ್ಯರಾದ ಬ್ರಹ್ಮವಾಯ್ವಾದಿಗಳು ಇಲ್ಲ ಎಂತ ಮ್ಯಾಲೆ ಹೇಳಿದೆ. ಯಾಕೆಂದರೆ ಅತ್ಯಂತ ಅಣುತರದಲ್ಲಿ ತದಪೇಕ್ಷಯಾ ಅಣುತರವಾಗೋ ಸಾಮರ್ಥ್ಯವಿಲ್ಲವಾದ್ದರಿಂದ ಪ್ರವೇಶ ಕೂಡದು. ಹಾಂಗೆ ಅಣುತರವಾಗೋ ಸಾಮರ್ಥ್ಯ ಅದೆ ಎಂತ ಪ್ರಮಾಣವಿದ್ದರೆ ಅಂಗೀ ಕರಿಸತಕ್ಕದ್ದು. ಸ್ವರೂಪಾಪೇಕ್ಷಯಾ ಅಣುತ್ವ ಆಗೋದಿಲ್ಲ. ಮಹತ್ತು ಆಗೋದಿಲ್ಲ ಎಂತ ಪ್ರಮಾಣವದೆ. ಅಣುತ್ವ ಇಲ್ಲದಮ್ಯಾಲೆ ಅಣುತರತ್ವ ಇಲ್ಲ ಎಂಬೋದು ಅರ್ಥಾತ್ ಸಿದ್ಧಿಯು. ಸ್ವರೂಪಾಪೇಕ್ಷಯಾ ಅಣುತ್ವಸಿದ್ಧಿ ಇಲ್ಲ ಎಂಬುದಕ್ಕೆ ಪ್ರಮಾಣ ದಾವದೆಂದರೆ ಅಣುಭಾಷ್ಯ ನಾಲ್ಕನೇ ಅಧ್ಯಾಯದ ಪ್ರಮಾಣ ಹಿಂದಿನ ಶ್ಲೋಕದಲ್ಲೇ ಹೇಳಿಯದೆ. ಅದಕ್ಕೆ ಅರ್ಥ :— ಮೋಕ್ಷದಲ್ಲಿ ಆನಂದ ಎಂಬುದು ವೃದ್ಧಿಹ್ರಾಸಾದಿಗಳಿಂದ ಯುಕ್ತ ವಾಗೋದಿಲ್ಲ. ಅನಾದಿಸ್ವರೂಪದಲ್ಲಿ ಅನಾದಿಯಿಂದ ಎಷ್ಟು ವಿದ್ಯಮಾನವಾಗಿ ಅದೋ ಅಷ್ಟು ಭೋಗಿಸುತ್ತಾನೆ. ಅದಕ್ಕೆ ವೃದ್ಧಿ ಹ್ರಾಸ ಎರಡೂ ಇಲ್ಲ. ಅಸ್ಮಿನ್ ಬ್ರಹ್ಮಣಿ ಎಂದರೆ ಈ ಚತುರ್ಮುಖ ಬ್ರಹ್ಮದೇವರು, ಸಂಪನ್ನಃ—ಇವನಿಂದ ಯುಕ್ತರಾದ, ಯಾವತ್ತು ಜೀವರೇನು, ನ ಜಾಯತೇ—ಪರಮಾತ್ಮನಿಂದ ಹುಟ್ಟಿದವರಲ್ಲ, ನ ಮ್ರಿಯತೇ—ಪರಮಾತ್ಮ ನಿಂದ ಸ್ವರೂಪಾಪೇಕ್ಷಯಾ ಶುಷ್ಕಗಳು ಆಗೋದಿಲ್ಲ ಎಂತ ತಾತ್ಪರ್ಯ. ನ ವರ್ಧತೇ— ಪರಮಾತ್ಮನಿಂದ ಜೀವರ ಸ್ವರೂಪ ಪೂರ್ವದಕ್ಕಿಂತಲೂ ದೊಡ್ಡದೂ ಆಗೋದಿಲ್ಲ, ನ ಸಹತೇ—ಪರಮಾತ್ಮನಿಂದ ಅಣುಗಳು ಆಗೋದಿಲ್ಲ ಎಂದರೆ, ಸ್ವರೂಪಾಪೇಕ್ಷಯಾ ಅಣು ಆಗೋದಿಲ್ಲ ಎಂತ ತಾತ್ಪರ್ಯ. ಸ್ಥಿತ ಏವ ಸದಾ ಭವತಿ ಎಂದರೆ, ಅನಾದಿಯಿಂದ ದಾವ ಸ್ಥಿತಿಯಿಂದ ಇದ್ದಾನೋ ಅಂಥಾ ಸ್ಥಿತಿಯಿಂದಲೇ, ಸದಾ ಭವತಿ—ಕಾಲತ್ರಯದಲ್ಲೂ ಇರುತ್ತಾನೆ. ಅದಕ್ಕೆ ಅನ್ಯಥಾ ಆಗೋದಿಲ್ಲ. ಸ ಏವ ಎಂದರೆ ಜೀವರು ಎನತಕ್ಕ ಯಾವತ್ತು ಮಂದಿ ಎಂತ ತಾತ್ಪರ್ಯ.

ಪರಮಾತ್ಮನಿಂದ ಸ್ಥೂಲದೇಹಗಳು ಕೊಡಲ್ಪಡುತ್ತವೆ. ಪರಮಾತ್ಮನಿಂದ ಪ್ರಾಪ್ತ ವಾದ ಸ್ಥೂಲದೇಹ ಯೋಗ್ಯತಾನುಸಾರ ಸ್ಥೂಲಾಣುಗಳನ್ನು ಅವಧಿಯುಕ್ತವಾಗಿ ಹೊಂದ ತಾರೆ. ಅವಾದರೂ ಜೀವಾಪೇಕ್ಷಯಾ ಅಣು ಅಲ್ಲ. ಆವರಣಾಪೇಕ್ಷಯಾ ದೊಡ್ಡದೂ ಆಗೋದಿಲ್ಲ. ಇದರಲ್ಲಿ ತಾರತಮ್ಯ ತಿಳಿಯಬೇಕು. (ಮುಂದಿನ ಶ್ಲೋಕದಲ್ಲಿ ಹೇಳಿದ ಪ್ರಕಾಶಸಂಹಿತಾಪ್ರಮಾಣಕ್ಕೆ ಅರ್ಥ.) ಅನಂತರೂಪಗಳಿಂದ ಯುಕ್ತನಾದ ಪರಮಾತ್ಮನ ಸರ್ವಾಂಗದಲ್ಲಿ ಸಾಯುಜ್ಯ ಬ್ರಹ್ಮದೇವರಿಗೆ ಉಂಟು. ಅಷ್ಟೇ ಹೊರ್ತು ಮುಕ್ತಸ್ಯ ಅಂದರೆ, ಮುಕ್ತನಾದ ಬ್ರಹ್ಮಗೆ, ಸ್ವರೂಪೇಣ—ಸ್ವರೂಪದಿಂದ ಇಲ್ಲ. ದಾವದು ಇಲ್ಲ ಎಂದರೆ, ಸ್ವರೂಪೇಣ ಅನಾದಿಯಾದ ಬಂಧಕರಹಿತವಾದ ತನ್ನ ನಿಜಸ್ವರೂಪದಿಂದ, ಹ್ಯಣೋಃ ವೃದ್ಧಿಃ—ಅಣುತ್ವ ದೊಡ್ಡದಾಗೋಣವೂ ಇದು ಎರಡು ಆಗೋಣವೂ, ನ ಯುಜ್ಯತೇ—

ಇಲ್ಲ ಎಂತ ಪ್ರಮಾಣದ ಅರ್ಥ. ಅಂದರೆ, ಬ್ರಹ್ಮದೇವರ ಜೀವನ ಸ್ವರೂಪಕ್ಕೆ ಅಣು ಮಹತ್ತು ಆಗೋ ಯೋಗ್ಯತಾ ಇಲ್ಲ ಎಂತ ಪ್ರಮಾಣದ ಅರ್ಥ ಇಲ್ಲ ಎಂತಲೇ ಹೇಳತದೆ. ಮತ್ತು ಪರಮಾತ್ಮನ ಸಾಮರ್ಥ್ಯದಿಂದ ಕೂಡ ತದಾ ಏನು ಎಂದರೆ, ನ ಯುಜ್ಯತೇ– ಅದೂನೂ ಕೂಡೋದಿಲ್ಲ. ಅಣು ವೃದ್ಧಿಗಳು ಆಗತಾರೆಂಬ ಪ್ರಮಾಣ ತೋರಿಸಿದರೆ ಅಂಗೀಕಾರವೇ. ಜೀವಾಪೇಕ್ಷಯಾ ಅಣುತ್ವ ಹೇಳಿದರೆ, ಆವರಣಾಪೇಕ್ಷಯಾ ಘನತ್ವವೂ ಹೇಳಬೇಕು. ಎರಡೂನೂ ಕೂಡೋದಿಲ್ಲ. ಬ್ರಹ್ಮದೇವರಿಗೆ ಅಣುತ್ವ ಇಲ್ಲದ ಮ್ಯಾಲೆ ವಾಯ್ವಾದಿ ಜೀವರು ತದಂತರ್ಭೂತರೇವೇ. ದಾರಿಗೂ ಇಲ್ಲ ಎಂತಲೇ ತಾತ್ಪರ್ಯ. ಅತ ಏವ, ಜೀವಾಂತರ್ಗತ ಪರಮಾತ್ಮ ಒಬ್ಬನೇ ನಿಯಾಮಕನೆಂದು ತಿಳಿಯಬೇಕು.

(೧) ಜೀವನಂಗುಷ್ಠಾಗ್ರಮೂರುತಿ. ಜೀವನ ಸ್ವರೂಪದೇಹದ ಅಂಗುಟ ಎಂದರೆ ಒಳಗೈಯಿಯಲ್ಲಿ ವಿದ್ಯಮಾನವಾದ ಹೆಬ್ಬೆರಳು. ಇದಕ್ಕೆ ಮಧ್ಯದಲ್ಲಿ ಇರತಕ್ಕ ಕೀಲು. ಈ ಕೀಲಿಗೆ ಮೇಲುಭಾಗದಲ್ಲಿ ಇರತಕ್ಕ ಪರಿಮಿತ ದಾವದದೆ, ಅದೇ ಅಂಗುಟಕ್ಕೆ ಅಗ್ರಭಾಗ ಅಂದರೆ ಮ್ಯಾಲೆ ಭಾಗ. ಈ ಅಗ್ರಕ್ಕೆ ಸದೃಶವಾದ ಮೂರ್ತಿ ದಾವದದೆ, ಇದಕ್ಕೆ ಅಂಗುಟಾಗ್ರಮೂರುತಿ ಎಂತ ಹೆಸರು. ಇವನೇ ಮೂಲೇಶನಾಮಕ ಪರಮಾತ್ಮ. ಈ ಪರಿಮಿತದಿಂದ ಇರತಕ್ಕ ರೂಪ ಒಂದು.

(೨) ಜೀವನಂಗುಟಮಾತ್ರಮೂರುತಿ ಎಂದರೆ ಜೀವನ ಸ್ವರೂಪದೇಹದ ಹೆಬ್ಬೆರಳು ಆದ್ಯಂತ ಪರಿಮಿತಿ ಎಷ್ಟೋ ಅಷ್ಟುಮಾತ್ರ ಮೂರುತಿ ಒಂದು. ಇವನೇ ಅಗ್ರೇಶ, ಜೀವಾಕಾರರೂಪವುಳ್ಳವನು.

(೩) ಜೀವನ ಪ್ರಾದೇಶಮೂರುತಿ ಎಂದರೆ ಜೀವನ ಹೆಬ್ಬೆರಳು ಜೀವನ ತರ್ಜನೀ ಬೆರಳು ಎರಡೂನೂ ದೂರಮಾಡಿದರೆ ಎಷ್ಟು ಪರಿಮಿತವಾಗತದೋ ಆ ಪರಿಮಿತದಿಂದ ಇರತಕ್ಕ ರೂಪ ಒಂದು. ಇದೇ ಜೀವನ ಪ್ರಾದೇಶರೂಪ ಎಂತ ಹೆಸರು. ಅಷ್ಟದಳ ಕಮಲ ನೋಡಿ.

(೪) ಜೀವಾಕಾರ ಮೂರುತಿ ಎಂದರೆ ಜೀವನ ರೋಮಗಳು, ಜೀವನ ಬೊಟ್ಟು ಗಳು, ಜೀವನ ಉಗುರುಗಳು, ಜೀವನ ಪ್ರತಿ ಪ್ರತಿ ಖಂಡಖಂಡವಾದ ಜೀವನಕಿಂತಲೂ ಅತ್ಯಣುವಾದ ಅವಯವಗಳು. ಇಂಥಾ ಯಾವತ್ತು ಅವಯವಗಳೊಳು ವ್ಯಾಪಿಸಿ ಇದ್ದಾನೆ.

**ಬಿಂಬ ಜೀವಾಂಗುಷ್ಟಮಾತ್ರದಿ ।**
**ಇಂಬುಗೊಂಡಿಹ ಸರ್ವರೊಳು ಸೂ ।**
**ಕ್ಷ್ಮಾಂಬರದಿ ಹೃತ್ಕಮಲಮಧ್ಯನಿವಾಸಿಯೆಂದೆನಿಸಿ ॥**
**ಎಂಬರೀತಗೆ ಕೋವಿದರು ವಿ ।**
**ಶ್ವಂಭರಾತ್ಮಕ ಪ್ರಾಜ್ಞ ಭಕ್ತಕು ।**
**ಟುಂಬಿ ಸಂತೈಸುವನು ಈ ಪರಿ ಬಲ್ಲ ಭಜಕರನು ॥ ೯ ॥**

ಮ್ಯಾಲೆ ಹೇಳಿದ ಅಂಗುಟಾಗ್ರ, ಅಂಗುಟಮಾತ್ರ, ಅಂಗುಟಪ್ರಾದೇಶ ಮೂರು ರೂಪಗಳೊಳಗೆ ಬಿಂಬ ದ್ಯಾವದೆಂದರೆ, ಅದರನ್ನ ಹೇಳತಾರೆ : ಆ ಮೂರು ರೂಪಗಳಿಗೆ ಪ್ರಕಾರಾಂತರ ನಾಮಾಂತರ ರೂಪಗಳು ಉಂಟು. ಅದರ ವಿವರ ಹೇಳತಾರೆ :–

೧. ಅಂಗುಟಾಗ್ರವೇ ಮೂಲೇಶ. ಇವ ಕರ್ಣಿಕಾಮೂಲದಲ್ಲಿ ಇರತಕ್ಕವ. ದಳಗಳಲ್ಲಿ ಸಂಚಾರಮಾಡತಕ್ಕವ. ಇವನ ಪಾದಮೂಲದಲ್ಲೇ ಜೀವ ಇರೋವನಾಗಿದ್ದಾನೆ. ಇವನೇ ಅಷ್ಟಬಾಹು, ದ್ವಿಪಾದ, ಒಂದು ಶಿರ, ಇವುಗಳಿಂದ ಯುಕ್ತನಾಗಿ ನಾರಾಯಣ ಎಂತ ಕರಿಸತಾನೆ.

೨. ಅಗ್ರೇಶ. ಇವ ಅಂಗುಟಪರಿಮಿತವಾದ ರೂಪವುಳ್ಳವ. ಕಮಲಕರ್ಣಿಕಾಮಧ್ಯ ದಲ್ಲಿ ಇರತಕ್ಕವ. ಇವನ ಆಕಾರ ಜೀವಾಕಾರದಂತೆ ಇರುತ್ತದೆ. ಇವನೇ ಬಿಂಬರೂಪಿ ಎಂತ ಕರಿಸತಾನೆ. ಇವಗೆ ಪ್ರಾಜ್ಞ ಎಂತಲೂ ಹೆಸರು.

೩. ಪ್ರಾದೇಶಮೂರುತಿ. ಈ ಅಗ್ರೇಶನ ಮ್ಯಾಲೆ ಭಾಗದಲ್ಲಿ ಶೋಭಿತವಾದ ದಿವ್ಯ ರತ್ನಮಯ ಮಂಟಪದಲ್ಲಿ ಇರತಕ್ಕವ. (ಈ ಮೂರುತಿಯನ್ನು ಅಷ್ಟದಳ ಕಮಲ ಪೀಠದಲ್ಲಿ ತೋರಿಸಲಿಲ್ಲ, ಊಹೆ ಮಾಡಿಕೊಳ್ಳಬೇಕು.)

ಅಂತು ಮೂರು ರೂಪಗಳು ಅಷ್ಟದಳಕಮಲದಲ್ಲಿ ಇರೋದಾಗಿ ಅವೆ. ಈ ಪ್ರಕಾರ ಸ್ಥೂಲದೇಹದಲ್ಲಿ, ಸ್ವರೂಪದೇಹದಲ್ಲಿ ಇರೋವರಾಗಿದ್ದಾರೆ. ಈಗ ಹೇಳತಕ್ಕದ್ದೆಲ್ಲಾ ಸ್ವರೂಪದೇಹದ ವಿಚಾರ ಎಂದರೆ ಏಳನೇ ಶ್ಲೋಕ ಆರಂಭಮಾಡಿಕೊಂಡು ಪೂರ್ವೋಕ್ತ ಜೀವಾಂತರ್ಗತ ಮೂರು ರೂಪಗಳೊಳಗೆ ಜೀವಾಕಾರ ಬಿಂಬ ದ್ಯಾರೆಂದರೆ, ಬಿಂಬ ಜೀವಾಂಗುಷ್ಟಮಾತ್ರದಿ– ಬಿಂಬ–ಬಿಂಬರೂಪಿ ಎನತಕ್ಕ ಪರಮಾತ್ಮ ಜೀವನ ಅಂಗುಷ್ಟ ಪರಿಮಿತದಿಂದ ಜೀವಾಕಾರನಾಗಿ, ಇಂಬುಗೊಂಡಿಹ–ಆವಾಸಮಾಡಿಕೊಂಡು ಇದ್ದಾನೆ. ಎಲ್ಲಿ ಅಂದರೆ, ಸರ್ವರೊಳು–ಸರ್ವ ಪ್ರಾಣಿಗಳೊಳು, ಸೂಕ್ಷ್ಮಾಂಬರದಿ– ಅಂಬರ– ಆಕಾಶ. ಆಕಾಶದಲ್ಲಿ ಎರಡು ಪ್ರಕಾರ ; ಸೂಕ್ಷ್ಮಾಕಾಶ, ಸ್ಥೂಲಾಕಾಶ. ಸೂಕ್ಷ್ಮಾಕಾಶ ಎಂಬುದು ಜೀವನ ಸ್ವರೂಪದೇಹಗತ ಆಕಾಶ, ಸ್ಥೂಲಾಕಾಶ ಎಂಬುದು ಪಾಂಚಭೌತಿಕ ಸ್ಥೂಲದೇಹಗತ ಆಕಾಶ. ಈ ಎರಡರಲ್ಲಿ ಅಂಗುಷ್ಠಮಾತ್ರ ಜೀವಾಕಾರ ಬಿಂಬ ಇದ್ದಾನೆ. ಸ್ಥೂಲದೇಹದಲ್ಲಿ ದ್ಯಾವ ಅಂಗುಷ್ಠಪರಿಮಿತನಾದ ಪರಮಾತ್ಮ ಎಂದರೆ "ಜೀವಾಂಗುಷ್ಠ ಮಿತೋ ಜೀವೇ ಸ್ಥೂಲಾಂಗುಷ್ಠಮಿತೋ ಹೃದಿ" ಎಂಬ ಪ್ರಮಾಣಾನುಸಾರ ಸ್ಥೂಲ ದೇಹಗತನಾದ ಪರಮಾತ್ಮ ಸ್ಥೂಲಾಂಗುಷ್ಠಪರಿಮಿತನಾದ ಜೀವಾಕಾರ ಬಿಂಬ ಇದ್ದಾ ನೆಂದು ತಿಳಿಯಬೇಕು. ಸ್ಥೂಲಾಂಬರ ಒಂದು ಇರೋಣದರಿಂದಲೇ ಸೂಕ್ಷ್ಮಾಂಬರ ಎಂತ ಪ್ರಯೋಗ. ಈ ಜೀವನ ಸ್ವರೂಪದೇಹಗತ, ಸೂಕ್ಷ್ಮಾಂಬರದಿ–ಜೀವಾಪೇಕ್ಷಯಾ ಸೂಕ್ಷ್ಮವಾಗಿ ಇರತಕ್ಕ, ಅಂಬರದಿ–ಆಕಾಶದಿ ವಿದ್ಯಮಾನವಾದ, ಹೃತ್ಕಮಲ–ಹೃದಯ ಮಧ್ಯದಲ್ಲಿ ಇರತಕ್ಕ ಅಷ್ಟದಳಕಮಲ, ಮಧ್ಯನಿವಾಸಿ–ಈ ಕಮಲಕ್ಕೆ ಮಧ್ಯದಲ್ಲಿ ಇರ ತಕ್ಕದ್ದು ಕಮಲಕರ್ಣಿಕಾ. ಇದರ ಮಧ್ಯದಲ್ಲಿ, ನಿವಾಸಿ–ಆವಾಸಮಾಡಿಕೊಂಡು ಇದ್ದಾನೆ.

ಅಗ್ರೇಶನು ಎಂದೆನಿಸಿ–ಅಗ್ರೇಶ ಎನಿಸಿದವನಾಗಿ ಇದ್ದಾನೆಂದು, ಎಂಬರೀತಗೆ–ಅಂಬೋರು ಈತನ, ದಾರೆಂದರೆ, ಕೋವಿದರು–ಜ್ಞಾನಿಗಳಾದವರು. ಈ ಅಗ್ರೇಶನಲ್ಲದೇ, ವಿಶ್ವಂಭರಾತ್ಮಕರೂಪ ಒಂದು. ಈ ರೂಪ ದಾವದೆಂದರೆ, ವಿಶ್ವ–ಜಗತ್ತು (ಜಗಚ್ಛಬ್ದ ಜೀವಪರ) ವಿಶ್ವಶಬ್ದ ಸಂಕೇತಕರಾದ ಸರ್ವಜೀವರನ, ಭರ–ಅವರವರ ಭಾರವನ್ನು ವಹಿಸಿದವ ಎಂದರೆ, ದಳಗಳಲ್ಲಿ ಸಂಚಾರ ಮಾಡುತಾ ಅವರವರ ಕಡಿಯಿಂದ ಯೋಗ್ಯತಾನುಸಾರ ಸಾಧನೆ ಮಾಡಿಸತಕ್ಕ ಭಾರ ವಹಿಸಿದವ, ಇವನೇ ಮೂಲೇಶ. ಮತ್ತು ತನ್ನ ಪಾದಮೂಲದಲ್ಲಿ ವಿಶ್ವಶಬ್ದ ಸಂಕೇತಕರಾದ ಜೀವರಲ್ಲಿ ಸೇರಿದ ವಾಯುದೇವರು, ಈ ವಾಯುದೇವರ ಪಾದ ಮೂಲದಲ್ಲಿ ಜೀವರನ ಈ ಪ್ರಕಾರ ಯಾವತ್ತು ಜೀವರ ಧರಿಸಿದಕಡಿಯಿಂದ ವಿಶ್ವಂಭರನಾದವ ಮೂಲೇಶ ಎಂತ ತಾತ್ಪರ್ಯ. ಆತ್ಮ ಎಂದರೆ ಆತ್ಮರೂಪಿ ಪರಮಾತ್ಮ ಎಂತ ತಾತ್ಪರ್ಯ. ಪ್ರಾಜ್ಞ–ಪ್ರಾದೇಶನಾಮಕನಿಗೂ ಪ್ರಾಜ್ಞ ಎಂತ ಸಂಕೇತ ಉಂಟು. ಭಕ್ತಕುಟುಂಬಿ–ಸಂರಕ್ಷಣ ಮಾಡೋದರಲ್ಲಿ ಕುಟುಂಬಸ್ಥಾನಾಪನ್ನನಾದವ, ಮತ್ತು ಭಕ್ತರ ಸಮೂಹವೇ ಸಂಸಾರವಾಗಿ ಉಳ್ಳವ, ಕುಟುಂಬದೋಪಾದಿಯಲ್ಲಿ ಸುಖಪಡಿಸತಕ್ಕವ. ಪ್ರಾಜ್ಞ ಎಂದರೆ ಪ್ರಾಜ್ಞನಾಮಕನಾದ ಅಗ್ರೇಶ ಎಂತ ತಾತ್ಪರ್ಯ. ಮೂರು ರೂಪಗಳಿಗೆ ವಿವರ :–

(೧) ಮೂಲೇಶ ಎಂಬ ರೂಪ. ಜೀವರ ಕಡಿಯಿಂದ ಸಾಧನೆ ಮಾಡಿಸತಕ್ಕ ರೂಪ. ಇವಗೆ ವಿಶ್ವಂಭರ ಎಂತ ಹೆಸರು.

(೨) ಜೀವಾಕಾರನಾದ ಅಗ್ರೇಶ ಸಾಧನದಿಂದ ತನ್ನ ಅಪರೋಕ್ಷ ಕೊಡತಕ್ಕವ. ಇವಗೆ ಆತ್ಮ ಎಂತ ಹೆಸರು.

(೩) ಪ್ರಾದೇಶ ಜೀವರ ಸ್ವರೂಪಾನಂದವನ್ನು ಕೊಟ್ಟು ಸಂರಕ್ಷಣೆ ಮಾಡತಕ್ಕವ. ಇವಗೆ ಅಂತರಾತ್ಮ ಎಂತ ಹೆಸರು.

ಅಂತು ಮೂರು ರೂಪಗಳು. ಕಾರ್ಯವನ್ನು ಈ ಪ್ರಕಾರ ಅನುಸಂಧಾನ ಮಾಡಬೇಕೆಂದು ತಾತ್ಪರ್ಯ. ಭಕ್ತಕುಟುಂಬಿ ಪ್ರಾಜ್ಞನಾಮಕ ಪರಮಾತ್ಮ, ಸಂತೈಸುವನು–ಸಂರಕ್ಷಣೆ ಮಾಡುವನು. ಈ ಪರಿ–ಈ ಪೂರ್ವೋಕ್ತಪ್ರಕಾರ, ಬಲ್ಲ–ಅನುಸಂಧಾನಪೂರ್ವಕ ಅರಿತ, ಭಜಕರನು–ಪರಮಾತ್ಮನ ಭಜಿಸಿದವರನ್ನ ಸಂರಕ್ಷಣೆ ಮಾಡತಾನೆ. ಆದ್ದರಿಂದ ಪೂರ್ವೋಕ್ತ ಅನುಸಂಧಾನದಿಂದ ಭಜನ ಮಾಡಬೇಕೆಂತ ತಾತ್ಪರ್ಯ.

**ಪುರುಷನಾಮಕ ಸರ್ವಜೀವರೊ ।**
**ಳಿರುವ ದೇಹಾಕಾರ ರೂಪದಿ ।**
**ಕರಣನಿಯಾಮಕ ಹೃಷೀಕಪನಿಂದ್ರಿಯಂಗಳಲಿ ॥**
**ತುರಿಯನಾಮಕ ವಿಶ್ವ ತಾ ಹ ।**
**ನ್ನೆರಡು ಬೆರಳುಳಿದುತ್ತಮಾಂಗದಿ ।**
**ಎರಡಧಿಕ ಎಪ್ಪತ್ತು ಸಾವಿರ ನಾಡಿಯೊಳಗಿಪ್ಪ ॥ ೧೦ ॥**

ಇನ್ನು ಜೀವರ ಸ್ವರೂಪಗತ ವಿದ್ಯಮಾನಗಳನ್ನ ಹೇಳತಾರೆ. ಹಿಂದೆ ಜೀವನ ಯಾವದವಯವಗಳಲ್ಲಿ ಅವಯವಾಕಾರರೂಪ ಒಂದು ಹೇಳಲ್ಪಟ್ಟಿದೆ. ಆ ರೂಪ ದಾವ ದೆಂದರೆ ಹೇಳತಾರೆ.

ಪುರುಷನಾಮಕ–ಪುರುಷ ಎಂತ ನಾಮ ಪಡೆದ ರೂಪ ಒಂದು, ಜೀವನಲ್ಲಿ ಇರೋ ದಾಗಿ ಅದೆ. ಸರ್ವ ಜೀವರೊಳು ಇರುವ–ಸಮಸ್ತ ಜೀವರಲ್ಲೂನೂ ಒಂದೊಂದು ರೂಪ ದಿಂದ ಇದ್ದಾನೆ. ಅವಗೆ ಆವಾಸಸ್ಥಾನ ದಾವದು ಎಂದರೆ, ಜೀವರ ಉಂಗುಷ್ಟ ಆರಂಭ ಮಾಡಿ ಶಿರದವರಿಗೂ ಯಾವದವಯವಗಳಲ್ಲಿ ದೇಹಾಕಾರ ರೂಪದಿಂದ ಇರುತ್ತಾನೆ. ಇದೇ ಇವಗೆ ಆವಾಸಸ್ಥಾನ. ಈ ಪ್ರಕಾರ ಇರತಕ್ಕ ರೂಪಕ್ಕೆ ಪುರುಷರೂಪ ಎಂತ ಹೆಸರು. ಪುರುಷ ಎಂತ ಹ್ಯಾಂಗೆ ಹೆಸರು ಬಂತು ಅಂದರೆ ಜೀವಗೆ ಪುರುಷ ಎಂತ ನಾಮ ಉಂಟು. ಹ್ಯಾಂಗೆ ಎಂದರೆ "ದ್ವಾವಿಮೌ ಪುರುಷೌ ಲೋಕೇ" ಎಂಬ ಪ್ರಮಾಣಾನು ಸಾರ ಕ್ಷರಪುರುಷರು ಜೀವರು, ಅಕ್ಷರಪುರುಷಳು ರಮಾ. ಆದ್ದರಿಂದ ಪುರುಷಶಬ್ದ ಸಂಕೇತಕ ರಾದ ಜೀವರಲ್ಲಿ ಜೀವಾಕಾರದಂತೆ ಇರತಕ್ಕ ರೂಪಕ್ಕೆ ಪುರುಷ ಎಂತ ಅಧಿಷ್ಠಾನವನ್ನು ಅನುಸರಿಸಿ ಬರೋದಾಯಿತು. ಜೀವನ ದೇಹಾಕಾರದಿಂದ ಪುರುಷರೂಪಿ ಪರಮಾತ್ಮ ಜೀವರ ಸ್ವರೂಪದೇಹದಲ್ಲಿ ಇದ್ದಾನೆ. ಕರಣನಿಯಾಮಕ ಹೃಷೀಕಪ– ಜೀವರ ಸ್ವರೂಪ ದೇಹಗತ ಇಂದ್ರಿಯಗಳ ನಿಯಮನ ಮಾಡತಕ್ಕವ, ಹೃಷೀಕಪ–ಹೃಷೀಕ ಎಂದರೆ ಇಂದ್ರಿಯಗಳು, ಪ ಎಂದರೆ ಪಾಲನ ಮಾಡತಕ್ಕವ, ಅಂದರೆ ಇಂದ್ರಿಯಗಳಿಗೆ ನಿಯಮನ ಮಾಡಿ ಪಾಲಿಸತಕ್ಕವ ಎಂತ ತಾತ್ಪರ್ಯ. ಇಂದ್ರಿಯಂಗಳಲಿ ತುರಿಯನಾಮಕ–ಇಂದ್ರಿ ಯಾಭಿಮಾನಿಯಾದವ ತುರ್ಯನಾಮಕ ವಾಸುದೇವನು, ವಿಶ್ವ ತಾ ಹನ್ನೆರಡು ಬೆರಳುಳಿ ದುತ್ತಮಾಂಗದಿ–ಉತ್ತಮಾಂಗ ಶಿರಸ್ಸು, ಶಿರಸ್ಸು ಆರಂಭಮಾಡಿ ಎಣಿಕೆ ಹಾಕಿದರೆ ದಕ್ಷಿಣಾಕ್ಷಿ ಮುಖದವರಿಗೆ ಹನ್ನೆರಡು ಬೆರಳು ಆಗತದೆ. ಆದ್ದರಿಂದ ದಕ್ಷಿಣಾಕ್ಷಿ ಮುಖದಲ್ಲಿ ವಿಶ್ವ ಇದ್ದಾನೆಂದು ತಿಳಿಯಬೇಕು. ಇದೇ ವಿಶ್ವರೂಪಿ ಪರಮಾತ್ಮ, ಎರಡಧಿಕ ಎಪ್ಪತ್ತು ಸಾವಿರ ನಾಡಿಯೊಳಗಿಪ್ಪ–ಜೀವನ ಸ್ವರೂಪ ದೇಹಗತ ಎಪ್ಪತ್ತೆರಡುಸಾವಿರ ರೂಪದಿಂದ ಇದ್ದಾನೆ. ಈ ಪ್ರಕಾರ ಜೀವರ ಸ್ವರೂಪ ದೇಹದಲ್ಲಿ ದೇಹಾಕಾರನಾಗಿ ಇಂದ್ರಿಯಗಳ ನಿಯಾಮಕನಾಗಿ, ಇಂದ್ರಿಯಾಭಿಮಾನಿಯಾಗಿ, ನಾಡೀ ಅಂತರ್ಗತನಾಗಿ ಪರಮಾತ್ಮನ ವ್ಯತಿರಿಕ್ತ ಬ್ರಹ್ಮವಾಯುಗಳ ಪ್ರವೇಶ ಎಂಬುದು ಇಲ್ಲ, ಎಲ್ಲಾ ಪರಮಾತ್ಮನೇ ಎಂತ ತಿಳಿಯಬೇಕು.

**ವ್ಯಾಪಕನು ತಾನಾಗಿ ಜೀವ ಸ್ವ ।**
**ರೂಪದೇಹದ ಒಳಹೊರಗೆ ನಿ ।**
**ರ್ಲೇಪನಾಗಿಹ ಜೀವಕೃತ ಕರ್ಮಗಳನಾಚರಿಸಿ ॥**
**ಶ್ರೀ ಪಯೋಜಭವೇಶರಿಂದ ಪ್ರ ।**
**ದೀಪವರ್ಣ ಸ್ವಮೂರ್ತಿ ಮಧ್ಯಗ ।**
**ತಾ ಪೊಳೆವ ವಿಶ್ವಾದಿರೂಪದಿ ಸೇವೆ ಕೈಕೊಳುತ ॥ ೧೧ ॥**

ಇನ್ನೂ ಜೀವಾಂತರ್ಗತ ವಿಚಾರವನ್ನೇ ಹೇಳುತಾರೆ.

**ವಿಶೇಷಾರ್ಥ :–** ವ್ಯಾಪಕನು ತಾನಾಗಿ–ಪೂರ್ವೋಕ್ತ ಪ್ರಕಾರ ವ್ಯಾಪ್ತನಾಗಿದ್ದಾನೆ. ಜೀವನಲಿ ಎಂತ ತಾತ್ಪರ್ಯ. ಮತ್ತು ಜೀವನಲ್ಲಿ ತಾನಾಗಿ ಎಂದರೆ ಪರಮಾತ್ಮನು ತಾನಾಗೇ ಬ್ರಹ್ಮವಾಯುಗಳ ಅಪೇಕ್ಷೆ ಇಲ್ಲದೇನೇ ಜೀವ ಸ್ವರೂಪದೇಹದ ಒಳಗೆ ಮತ್ತು ಹೊರಗೆ ಅಂದರೆ ಒಳಗೆ ಇದ್ದು ಕಾಣದಂತೆ ಇರತಕ್ಕ ಮನಸ್ಸು, ಇಂದ್ರಿಯಗಳ ಎಂದರೆ ಹೊರಗೆ ಕಾಣತಕ್ಕ ದಶೇಂದ್ರಿಯಗಳು, ಜೀವನ ಸ್ವರೂಪದೇಹಗತ ಒಳಹೊರಗೆ ಎಂತ ಸಾಂಕೇತ ದಿಂದ ಕರಿಸತಕ್ಕ ಏಕಾದಶೇಂದ್ರಿಯಗಳಲ್ಲಿ ನಿರ್ಲೇಪನಾಗಿಹ ಅಂದರೆ ಲೇಪನಾಗದೇ ಇದ್ದಾನೆಂತ ತಾತ್ಪರ್ಯ. ಯಾತರಿಂದ ನಿರ್ಲೇಪ ಎಂದರೆ, ಜೀವಕೃತ ಕರ್ಮಗಳನಾಚರಿಸಿ–ಜೀವನಾದವ ಸ್ಥೂಲದೇಹದಿಂದ ಆಚರಿಸತಕ್ಕ ಅಂದರೆ ಮಾಡತಕ್ಕ ಯಾವತ್ತು ಕರ್ಮಗಳು ಜೀವಾಂತರ್ಗತನಾಗಿ ಇದ್ದು ತಾನು, ಆಚರಿಸಿ–ಪ್ರಥಮತಃ ಜೀವನ ಸ್ವರೂಪಗತ ಸ್ವರೂಪೇಂದ್ರಿಯಗಳ ದ್ವಾರಾ (ಶಕ್ತ್ಯನುಸಾರ) ಆಚರಿಸಿ ಇದರ ಇಚ್ಛಾರೂಪವಾದ ಆಚರಣೆ ಮಾಡಿ ಜೀವಗೆ ಇಚ್ಛಾ ಕೊಟ್ಟು ತದನಂತರ ಅಲ್ಲಿಂದ ಆ ಕರ್ಮವನ್ನು ಸ್ಥೂಲ ದೇಹದಲ್ಲಿ ವ್ಯಕ್ತವಾಡಿ ಸ್ಥೂಲೇಂದ್ರಿಯಗಳ ದ್ವಾರಾ ಸ್ಥೂಲೇಂದ್ರಿಯಗಳಲ್ಲಿ ಇದ್ದುಕೊಂಡು ಕ್ರಿಯಾರೂಪದಿಂದ ಕರ್ಮಗಳ ಆಚರಣೆ ಮಾಡಿ ಮಾಡಿಸಿ ಹಾಗೇ ಆ ಕರ್ಮದಿಂದ ಪ್ರಾಪ್ತವಾಗತಕ್ಕ ಫಲಗಳನ್ನು ಜೀವೇಂದ್ರಿಯಗಳ ದ್ವಾರಾ ಆಚರಣೆ ಮಾಡಿ ಆ ಕರ್ಮಫಲ ಭೋಗಕ್ಕೆ ತಾನು ಲೇಪನಾಗದೇ ಜೀವಗೆ ಲೇಪ ಮಾಡುತ್ತಾ, ನಿರ್ಲೇಪನಾಗಿಹ–ತಾನು ಲೇಪರಹಿತನಾಗಿ ಇರೋವನಾಗಿದ್ದಾನೆ. ಮತ್ತು ಜೀವಕೃತಕರ್ಮಗಳನಾಚರಿಸಿ–ಜೀವ ಕೃತ ಕರ್ಮಗಳಲ್ಲಿ ಆ ಕರ್ಮಜನಿತ ಫಲಗಳಲ್ಲಿ ವಿದ್ಯಮಾನಗಳಾದ ತನ್ನ ಸ್ವ–ಸ್ವರೂಪ ಭೂತಗಳಾದ, ನಿರ್ಲೇಪನಾಗಿಹ–ತನ್ನ ರೂಪಗಳ ತಾನು ಆಚರಿಸಿ ಸ್ವೀಕಾರ ಮಾಡಿ ಜೀವಭೋಗ್ಯ ಕರ್ಮಫಲಗಳಿಗೆ ತಾನು ಸಂಬಂಧನಾಗದೇ ತಾನು ನಿರ್ಲೇಪನಾಗಿಹ. ಜೀವನ ಸ್ವರೂಪದೇಹದಲ್ಲಿ ನಿರ್ಲೇಪನಾಗಿಹ ಎಂತ ತಾತ್ಪರ್ಯ. ಮನ ಆದಿ ಏಕಾದಶ ಸಂಖ್ಯಾಕವಾದ ಜೀವನ ಸ್ವರೂಪೇಂದ್ರಿಯಗಳಿಂದ ಕರ್ಮಗಳು ಆಚರಿಸೋ ಕ್ರಮ. ಜೀವನಲ್ಲೀನೂ ಜೀವನ ಇಂದ್ರಿಯಗಳಲ್ಲೀನೂ ಇದ್ದು ಕರ್ಮಗಳ ಆಚರಿಸಿ ಹಾಗೇ ತತ್ಫಲಗಳಲ್ಲೀನೂ ಆಚರಿಸಿ ಜೀವನ ಭೋಜನ ಮಾಡಸತಾನೆ. ಎಂದರೆ ತತ್ವೇಶರ ದ್ವಾರಾನೇ ಆಗಬೇಕೇ ಹೊರತು ಅನ್ಯಥಾ ಕೂಡೋದಿಲ್ಲ. ಅಲ್ಲಿ ತತ್ವೇಶರು ದಾರೆಂದರೆ, ಜೀವನ ಸ್ವರೂಪದಲ್ಲಿ ವಾಯ್ವಾದಿ ತತ್ವೇಶರಿಗೆ ಪ್ರವೇಶ ಇಲ್ಲ ಎಂತ ಹಿಂದೆ ಪ್ರಮಾಣದ ಸಹಿತ ಉದಹರಿಸಲ್ಪಟ್ಟಿತು. ವಾಯ್ವಾದಿ ದೇವತೆಗಳ ಹೇಳಲಿಕ್ಕೆ ಇಲ್ಲ. ಸ್ವರೂಪದಲ್ಲಿ ತತ್ವೇಶರು ದಾರೆಂದರೆ ಅವರನ್ನ ಹೇಳಿದ್ದೇವೆ. ವ್ಯಾಪಕನು ತಾನಾಗಿ ಜೀವಸ್ವರೂಪದೇಹದ, ಒಳ ಹೊರಗೆ ನಿರ್ಲೇಪನಾಗಿಹ–ಹಿಂದೆ ಹತ್ತನೇ ಶ್ಲೋಕದಲ್ಲಿ ಜೀವನ ಅಣುಸ್ವರೂಪದಲ್ಲಿ ಏನು, ಇಂದ್ರಿಯಗಳಲ್ಲಿ ಏನು, ಇಂದ್ರಿಯನಿಯಾಮಕತ್ವ ಏನು, ಪರಮಾತ್ಮನೊಬ್ಬನೇ ಎಂತ ಹೇಳಿದ್ದಾರೆ. ಇಲ್ಲಿ ಬ್ರಹ್ಮವಾಯುಗಳ ಪ್ರಸಕ್ತಿ ಇಲ್ಲ. ಹನ್ನೊಂದನೇ ಶ್ಲೋಕದಲ್ಲಿ ಬ್ರಹ್ಮವಾಯುಗಳ ಪ್ರಸಕ್ತಿ ಮಾಡಿದ್ದಾರೆ. ೧೨ನೇ ಶ್ಲೋಕದಲ್ಲಿ ಜೀವಾಂತರ್ಗತ ವಾಯು

ದೇವರು ಇದ್ದಂತೆ ಮಾತ್ರ ಪ್ರಥಮತಃ ಪ್ರಶಂಸನ ಮಾಡಿ ತರುವಾಯ ಬ್ರಹ್ಮ, ವಾಯು, ಸರಸ್ವತೀ, ಭಾರತೀ ನಾಲ್ಕು ಮಂದಿ ಲಿಂಗದೇಹದಲ್ಲಿ ಇದ್ದಾರೆಂತ ಪ್ರಶಂಸನ ಮಾಡಿದ್ದಾರೆ. ಹದಿಮೂರನೇ ಶ್ಲೋಕದಲ್ಲಿ ಲಿಂಗದೇಹಕ್ಕೆ ಅಭಿಮಾನಿ ರಮಾದೇವೇರು ಎಂತ ಹೇಳಿದ್ದಾರೆ. ಒಂದು ರೀತ್ಯಾ ನೋಡಿದರೆ ಬ್ರಹ್ಮ ವಾಯುದೇವರು ಉಭಯರು ಸ್ವರೂಪದಲ್ಲಿ ಇದ್ದಂತೆ ಆಗುತ್ತದೆ. ಒಂದು ರೀತ್ಯಾ ನೋಡಿದರೆ ಬ್ರಹ್ಮ ವಾಯುಗಳು ಸ್ವರೂಪದಲ್ಲಿ ಇಲ್ಲ ಎಂತ ಆಗುತ್ತದೆ. ಈ ಪ್ರಕಾರ ಜೀವನ ಸ್ವರೂಪವಿಚಾರ ಹೇಳೋದಕ್ಕೆ ಪ್ರಾರಂಭ ಮಾಡಿದ ಏಳನೇ ಶ್ಲೋಕ ಆರಂಭ ಮಾಡಿ ಹದಿಮೂರನೇ ಶ್ಲೋಕದವರಿಗೂ ಆಗತಕ್ಕ ಶ್ಲೋಕಾರ್ಥಗಳು ಈ ಪ್ರಕಾರ ಆಗತಾ ಇರೋಣಾಗಿ ಅದೆ. ಹ್ಯಾಂಗೆ ಅಂದರೆ ಲಿಂಗದೇಹಕ್ಕೆ ರಮಾದೇವೇರೇ ಅಭಿಮಾನಿಗಳು ಎಂತ ಹೇಳೋಣದರಿಂದ ಸ್ವರೂಪದಲ್ಲೇನು, ಲಿಂಗದಲ್ಲೇನು, ಎರಡು ಸ್ಥಾನದಲ್ಲಿ ಬ್ರಹ್ಮವಾಯುಗಳ ವ್ಯಾಪ್ತಿ ಇಲ್ಲ ಎಂತಲೇ ಆಗುತ್ತದೆ. ಲಿಂಗದಲ್ಲಿ ವ್ಯಾಪ್ತಿ ಇಲ್ಲದೇ ಇದ್ದಮ್ಯಾಲೆ ಸ್ವರೂಪದಲ್ಲಿ ವ್ಯಾಪ್ತಿ ಇಲ್ಲ ಎಂಬುದು ಅರ್ಥಾತ್ ಸಿದ್ಧಿಯು. ಈ ಪ್ರಕಾರ ಪರಸ್ಪರ ವ್ಯತ್ಯಾಸಗಳಾಗಿ ಅರ್ಥವಾಗತಾ ಅದೆ. ನಿತಾಂತ ಹ್ಯಾಂಗೆ ತಿಳಿಯಬೇಕೆಂದರೆ ಅದರನ್ನ ಹೇಳತೇವೆ.

**ಅರ್ಥ:–** ವ್ಯಾಪಕನು ತಾನಾಗಿ ಜೀವನ ಸ್ವರೂಪದೇಹದ ಒಳಹೊರಗೆ – ವ್ಯಾಪಕನು–ವ್ಯಾಪ್ತನು, ಹ್ಯಾಂಗೆ ವ್ಯಾಪ್ತನು ಎಂದರೆ, ತಾನಾಗಿ–ಸರ್ವತತ್ವಾಭಿಮಾನಿ ದೇವತಾ ನಾಮರೂಪಗಳು ತಾನೇ ಆಗಿ, ಜೀವನ ಸ್ವರೂಪ–ಜೀವನ ಸಚ್ಚಿದಾತ್ಮಕವಾದ ಅಣುಸ್ವರೂಪದಲ್ಲಿ, ದೇಹ–ಸ್ಥೂಲದೇಹದಲ್ಲಿ (ಸ್ಥೂಲದೇಹ ಎಂತ ಯಾಕೆ ಮಾಡಬೇಕೆಂದರೆ), ಒಳಹೊರಗೆ ಎಂತ ಪ್ರಯೋಗಮಾಡಿ ಇರೋಣದರಿಂದ ಲಿಂಗದೇಹದ ಒಳಗೆ ಇರತಕ್ಕ ಜೀವನ ಸ್ವರೂಪ ಎಂತಲೂ, ಹೊರಗೆ ಎಂದರೆ ಸ್ವರೂಪಕ್ಕೆ ಹೊರಗೆ ಇರತಕ್ಕದ್ದು ಸ್ಥೂಲದೇಹ ಎಂತಲೂ ತಾತ್ಪರ್ಯ. ಇದರಿಂದ ಸ್ವರೂಪದಲ್ಲಿ ಬ್ರಹ್ಮ ವಾಯುಗಳ ವ್ಯಾವರ್ತನ ಮಾಡಿದ್ದಾಯಿತು. ಮತ್ತು ದೇಹ ಎಂದರೆ ಸ್ವರೂಪಕ್ಕೆ ಅನ್ಯವಾದ ಲಿಂಗದೇಹದಾರಭ್ಯ ಸ್ಥೂಲದೇಹದವರೆಗೂ ಗ್ರಾಹ್ಯವೇ. ಲಿಂಗಶರೀರದಲ್ಲಿ ಬ್ರಹ್ಮ ವಾಯುಗಳ ವ್ಯಾಪ್ತಿ ಎಂತ ಹೇಳಿದ ಉಕ್ತಿಗೆ ಅನಾದಿಲಿಂಗದಲ್ಲಿ ಎಂತ ತಾತ್ಪರ್ಯ ಮಾಡಕೂಡದು. ಯಾಕೆ ಎಂದರೆ ಅನಾದಿ ಲಿಂಗಶರೀರಕ್ಕೆ ರಮಾದೇವೇರು ಅಭಿಮಾನಿ ಎಂತ ಹದಿಮೂರನೇ ಶ್ಲೋಕದಲ್ಲಿ ಉಕ್ತವಾಗಿ ಇರೋಣದರಿಂದ ಅನಾದಿಲಿಂಗಶರೀರವೇ ಎಂತ ತಾತ್ಪರ್ಯ ಮಾಡಲಿಕ್ಕೆ ಇಲ್ಲ. ಆದ್ದರಿಂದ ಅನ್ಯಲಿಂಗದೇಹ ಗ್ರಾಹ್ಯಮಾಡಬೇಕು. ಅನ್ಯಲಿಂಗ ಎಂಬುದು ದಾವದೆಂದರೆ ಅನಾದಿಲಿಂಗದ ಮ್ಯಾಲೆ ಆವರಣವಾಗಿದೆ. ಇದು ಸೃಷ್ಟಿ ಪ್ರಾರಂಭದಲ್ಲಿ ಅನಾದಿಲಿಂಗಗತ ಗುಣತ್ರಯಗಳ ಪ್ರತ್ಯೇಕ ತೆಗೆದುಕೊಂಡು ವೈಷಯಿಕ ಸೃಷ್ಟಿ ನಿಮಿತ್ತ ಬ್ಯಾರೇ ಗುಣತ್ರಯಾತ್ಮಕ ಆವರಣ ಮಾಡಿ ಲಿಂಗದೇಹಕ್ಕೆ ಆವರಕವಾಗಿ ಅದೆ. ಇದಕ್ಕೆ ಅಣುಲಿಂಗ ವೈಷಯಿಕ ಎಂತಲೂ ನಾಮವುಂಟು. ಈ ಅಣುಲಿಂಗದಲ್ಲೇನು ಹೊರಗೆ ಎಂಬ ಉಕ್ತಿಯಿಂದ ಇದಕ್ಕೆ ಹೊರಭಾಗದಲ್ಲಿ ಇರತಕ್ಕ ಅನಿರುದ್ಧ ಸ್ಥೂಲದೇಹದಲ್ಲೇನು, ಬ್ರಹ್ಮವಾಯುಗಳ ವ್ಯಾಪ್ತಿ ಎಂತ ತಾತ್ಪರ್ಯ. ಸರ್ವಸಮ್ಮೇಳನೇ ಅಣುಲಿಂಗ

ದಾರಭ್ಯ ಸ್ಥೂಲದೇಹದವರಿಗೂ ಬ್ರಹ್ಮವಾಯುಗಳ ವ್ಯಾಪ್ತಿ ಎಂತಲೂ ಅನಾದಿಲಿಂಗದಲ್ಲಿ ಜೀವನ ಸ್ವರೂಪದಲ್ಲಿ ಬ್ರಹ್ಮ ವಾಯುಗಳ ವ್ಯಾಪ್ತಿ ಇಲ್ಲ ಎಂತಲೇ ಆಗೋದಾಯಿತು. ವ್ಯಾಪಕನು ತಾನಾಗಿ, ನಿರ್ಲೇಪನಾಗಿ ಇಹ–ಎಂದರೆ ಜೀವನ ಸ್ವರೂಪದೇಹದಾರಭ್ಯ ಸ್ಥೂಲದೇಹದವರಿಗೂ ಪರಮಾತ್ಮ ವ್ಯಾಪ್ತನಾಗಿ ಲೇಪರಹಿತನಾಗಿದ್ದಾನೆ. ಪದ್ಮಪತ್ರಗತ ಉದಕದೋಪಾದಿಯಲಿ ಎಂತ ತಾತ್ಪರ್ಯ.

ಶ್ರೀ ಪಯೋಜಭವೇರರಿಂದ ಪ್ರದೀಪವರ್ಣ– ಶ್ರೀ–ರಮಾದೇವೇರು, ಪಯೋಜ ಭವ–ಬ್ರಹ್ಮದೇವರು, ಈರ–ವಾಯುದೇವರು, ಇಂದ ಪ್ರದೀಪ ಎಂದರೆ ಪ್ರಕಾಶಮಾನ ನಾಗುತಾ ಇದ್ದಾನೆ. ಎಲ್ಲಿ ಎಂದರೆ ೧೩ನೇ ಶ್ಲೋಕದಲ್ಲಿ ಹೇಳಿದ ಕ್ರಮಕ್ಕೆ ರಮಾಭಿಮನ್ಯವಾದ ಅನಾದಿಲಿಂಗ ಶರೀರದಲ್ಲಿ ರಮಾದೇವೇರಿಂದ ಸಹಿತನಾಗಿದ್ದು ಅಣುಲಿಂಗದಲಿ ಪಯೋಜಭವೇರರಿಂದ ಸಹಿತನಾಗಿ ಇದ್ದು, ಪ್ರದೀಪ–ಪ್ರಕಾಶಮಾನ ನಾಗಿ ಇದ್ದಾನೆ. ಸ್ವಮೂರ್ತಿಗಣಮಧ್ಯಗ–ಜೀವನ ಸ್ವರೂಪದಲ್ಲಿ ತನ್ನ ಸ್ವಾಖ್ಯರೂಪ ಗಳಿಂದ ಯುಕ್ತನಾಗಿ, ಮಧ್ಯಗ – ಸ್ವರೂಪಹೃದಯಮಧ್ಯಗತನಾಗಿ ಇದ್ದಾನೆಂತ ತಾತ್ಪರ್ಯ. ಇಲ್ಲಿಗೆ ತಾರತಮ್ಯವೂ, ತಾರತಮ್ಯಾನುಸಾರ ನಿಯಾಮಕಸ್ಥಾನವೂ, ನಿಯಮನ ಮಾಡತಕ್ಕ ವರ್ಣವೂ ಹೇಳಿದಂತಾಯಿತು. ಸ್ವರೂಪದಲ್ಲಿ ಪರಮಾತ್ಮ ಒಬ್ಬನೇ ನಿಯಾಮಕ. ಲಿಂಗದಲ್ಲಿ ರಮಾಸಹಿತ ನಿಯಾಮಕ, ಅಣುಲಿಂಗದಲ್ಲಿ ಪಯೋ ಜಾಸನ ಸಮೀರ ಸಹಿತ ನಿಯಾಮಕ. ಸ್ವರೂಪದಲ್ಲಿ ರಮಾ ಇಲ್ಲವೇ ಹ್ಯಾಂಗೆ, ಆಕಿಗೆ ನಿಯಾಮಕತ್ವ ಉಂಟಾ ಇಲ್ಲವಾ ಎಂದರೆ ಮುಖ್ಯವೃತ್ತ್ಯಾ ಪರಮಾತ್ಮ, ಅಮುಖ್ಯವೃತ್ತ್ಯಾ ರಮಾ ಎಂತ ತಾತ್ಪರ್ಯ. (ಮುಖ್ಯಾಮುಖ್ಯತ್ವೇನ ನಿಯಾಮಕತ್ವ ತಿಳಿಯಬೇಕು). ವರ್ಣ ಎಂದರೆ ಆಯಾ ದೇಹಗಳು ದಾವ ದಾವ ವರ್ಣವಿಶಿಷ್ಟವಾಗಿ ದಾವ ಆಕಾರದಿಂದ ಇರುತ್ತದೋ ಅದರಂತೆ ಪರಮಾತ್ಮ ಇರುತ್ತಾನೆಂತ ವರ್ಣ ಶಬ್ದಕ್ಕೆ ತಾತ್ಪರ್ಯ. ತಾ ಪೊಳೆವ ವಿಶ್ವಾದಿರೂಪದಿ– ತಾ ಪೊಳೆವ–ತಾನೊಬ್ಬನೇ ಪ್ರಕಾಶಮಾನನಾಗಿ ಇರುತ್ತಾನೆ. ವಿಶ್ವ–ವಿಶ್ವರೂಪಿ ಪರಮಾತ್ಮ, ಆದಿ–ಎಂದರೆ ಸೃಷ್ಟಿಪ್ರಾರಂಭದಲ್ಲಿ, ರೂಪದಿ–ಎಂದರೆ ತತ್ವೇಶರೂಪಗಳ ತಾ ಧರಿಸಿ, ಜೀವನ ಸ್ವರೂಪಗತ ತನ್ನ ಸ್ವಾಖ್ಯಗಳಾದ ಅನಾದಿಯಿಂದ ಇರತಕ್ಕ ತತ್ವೇಶರೂಪದಲಿ ಪ್ರವೇಶಮಾಡಿ ಸೇವೆ ಕೈಕೊಳುತಾ ಎಂದರೆ ಸ್ವರೂಪದಲಿ ತನ್ನ ಸ್ವಾಖ್ಯ ತತ್ವೇಶರೂಪಗಳಿಂದ ಬಿಂಬರೂಪಿ ಪರಮಾತ್ಮ ಸೇವೆ ಕೈಕೊಳ್ಳುತ್ತಾ ಇರು ತ್ತಾನೆ. ರಮಾದೇವೇರಿಂದಲೂ ಸೇವೆ ತೊಗೋತಾ ಇರತಾನೆ. "ಪೂಜ್ಯಪೂಜಕ ರೂಪೇಣ ಕ್ರೀಡತೇ ಪುರುಷೋತ್ತಮಃ" ಎಂತ ಪ್ರಮಾಣ. ಸ್ವರೂಪದಲಿ ಈ ರೀತಿ ಎಂತ ತಾತ್ಪರ್ಯ.

ಅಮುಖ್ಯವೃತ್ತ್ಯಾ ರಮಾದೇವೇರನ್ನೂ ಜೀವನ ಸ್ವರೂಪಗತ ಪರಮಾತ್ಮನ ಸೇವಾದಿ ಗಳು ಮಾಡತಾ ಇರತಾಳೆಂತ ತಿಳಿಯಬೇಕು. ತದ್ವತ್ ಬ್ರಹ್ಮವಾಯುಗಳು ಆವಾಸ ವಾಗಿ ಇರತಕ್ಕ ಸ್ಥಾನದಲ್ಲಿ ಅವರವರ ಕಡಿಯಿಂದ ಸೇವೆ ಕೈಕೊಳ್ಳುತ್ತಾ ಇರುತ್ತಾನೆ ಎಂತ

ತಾತ್ಪರ್ಯ. ಆದ್ದರಿಂದ ಗರುಡ ಶೇಷ ಭವಾದಿ ನಾಮವ ಧರಿಸಿ ಪವನಸ್ವರೂಪ ದೇಹದಿ ಕರಣನಿಯಾಮಕನು ತಾನಾಗಿಪ್ಪ, ಹರಿ ಎಂದರೆ ಗರುಡ ಶೇಷ ಭವ ರುದ್ರ, ಆದಿ–ಇವರೇ ಮೊದಲಾದ ಯಾವತ್ತು ತತ್ವೇಶರು, ಇವರ ನಾಮಗಳು ಧರಿಸಿ, ಪವನ–ವಾಯು ಕರಣನಿಯಾಮಕನು ಅಂಬೋಣದರಿಂದ ಪವನಶಬ್ದ ವಾಯುಪರ ಮಾಡಿಕೊಂಡು ಜೀವಾಂತರ್ಗತ ವಾಯುದೇವರಿಗೆ ಪ್ರವೇಶ ಉಂಟು ಎಂದು ಹೇಳಿದ್ದಾರೆ. ಪವನಶಬ್ದ ಸಾವಕಾಶವೇ ಹೊರ್ತು ನಿರವಕಾಶವಲ್ಲ. ಯಾಕೆ ಎಂದರೆ, ಪವನ ಎಂದರೆ ಮುಖ್ಯ ವೃತ್ತ್ಯಾ ಪರಮಾತ್ಮನೇ ಹೇಳೋದಾಗಿದೆ. (ಇದು ವಿಷ್ಣುಸಹಸ್ರನಾಮದಲ್ಲಿ ವಿದಿತವಾಗಿ ಅದೆ). ಆದ್ದರಿಂದ ಇಲ್ಲಿ ಪವನಶಬ್ದ ಪರಮಾತ್ಮವಾಚಕವೇ ಹೊರ್ತು ವಾಯುವಾಚಕ ವಲ್ಲ. ಪವನಶಬ್ದವಾಚ್ಯನಾದ ಪರಮಾತ್ಮನನ್ನೇ ತೆಗೆದುಕೋಬೇಕು. ಯಾಕೆಂದರೆ, ತಾನಾಗಿಪ್ಪ, ಹರಿ–ಸ್ವರೂಪಗತ ಪವನಶಬ್ದದಿಂದ ತಾನಾಗಿ ಪರಮಾತ್ಮ ತಾನೇ ಆಗಿಪ್ಪ ಇರೋವನಾಗಿ ಇದ್ದಾನೆ. ದಾರು ಎಂದರೆ ಹರಿ, ಬಿಂಬರೂಪಿ ಪರಮಾತ್ಮ ಎಂತ ತಾತ್ಪರ್ಯ. ಹರಿ ಪವನರೂಪವ ಧರಿಸಿ–ಪವನರೂಪದಿಂದ ಗರುಡ ಶೇಷ ಭವಾದಿ ನಾಮವ ಧರಿಸಿ ಕರಣನಿಯಾಮಕನಾಗಿಪ್ಪ ಎಂದರೆ ಜೀವನ ಸ್ವರೂಪದ ಇಂದ್ರಿಯಗಳ ನಿಯಾಮಕನಾಗಿ ಇಪ್ಪ– ಅಂದರೆ ಸ್ವರೂಪದಲಿ ಪವನಶಬ್ದವಾಚ್ಯನಾದ ಶ್ರೀ ಪರಮಾತ್ಮ ಗರುಡ ಶೇಷ ಭವಾದಿ ನಾಮಗಳು ಧರಿಸಿ ಹ್ಯಾಂಗೆ ನಿಯಮನ ಮಾಡತಾನೆ ಎಂತ ಎಂದರೆ ತದ್ವತ್ ಸರಸಿಜಾಸನಾದಿ ನಾಲ್ಕು ಮಂದಿ ಸಂಗಡ ಕೂಡಿಕೊಂಡು ಅಣುಲಿಂಗದಲಿ ಇರತಕ್ಕ ವಾಯುದೇವರು ಗರುಡ ಶೇಷ ಭವಾದಿ ನಾಮಗಳು ಧರಿಸಿ, ತದ್ಗತ ಇಂದ್ರಿಯ ಗಳಿಗೆ ನಿಯಾಮಕನಾಗಿ ಇರುತ್ತಾನೆಂತ ತಾತ್ಪರ್ಯ. ಅನ್ಯರಾದ ರುದ್ರಾದಿಗಳಿಗೆ ಈ ಸ್ಥಾನದಲ್ಲಿ ಪ್ರವೇಶವಿಲ್ಲ. ತದ್ವತ್ ಅನಾದಿ ಲಿಂಗದಲಿ ರಮಾ ಗರುಡ ಶೇಷ ಭವಾದಿ ನಾಮಗಳಿಂದಲೂ ಸ್ವರೂಪದಲಿ ಪರಮಾತ್ಮನು ತಾನು ಇರೋವನಾಗಿದ್ದಾನೆ. ಇದು ತಾರತಮ್ಯ ಮತ್ತು ಶ್ರೀಪಯೋಜಭವೇರ ನಾಮಗಳಿಂದ ನಿಯಾಮಕನಾಗಿದ್ದಾನೆ. ಇಂಥಾ ರಮಾದೇವೇರು ಜೀವನ ಸ್ವರೂಪೇಂದ್ರಿಯಗಳ ಅಧಿಷ್ಠಾನದಲ್ಲಿ ದೇವತಾನಾಮ ಗಳಿಂದ ಇದ್ದು ಜೀವನ ಇಂದ್ರಿಯಗಳಿಗೆ ಪ್ರೇರಕರಾಗುತ್ತಾರೆ. ಅಲ್ಲಿ ಪರಮಾತ್ಮ ಗರುಡ ಶೇಷ ಭವಾದಿ ನಾಮಗಳ ಧರಿಸಿ ಕರಣನಿಯಾಮಕನಾಗಿ ಇರುತ್ತಾನೆಂತ ತಾತ್ಪರ್ಯ. ಅಂದರೆ ಅಧಿಭೂತಗೋಳಕ ಜೀವನ ಇಂದ್ರಿಯಗಳು, ಅಧಿದೈವ ರಮಾ, ಅಧ್ಯಾತ್ಮ ಪರಮಾತ್ಮ ಎಂತ ತಾತ್ಪರ್ಯ. ಅಂದರೆ ರಮಾಶರೀರಗತ ಇಂದ್ರಿಯಗಳಿಗೆ ಪಯೋಜಾಸ ನಾದಿ ನಾಮಗಳಿಂದ ಹ್ಯಾಂಗೆ ನಿಯಾಮಕನೋ ತದ್ವತ್ ರಮಾ ಪಯೋಜಾಸನಾದಿ ನಾಮಗಳಿಂದ ಜೀವೇಂದ್ರಿಯಗಳಲ್ಲಿ ಇದ್ದು ನಿಯಮನ ಮಾಡತಾಳೆ. ರಮಾ ಗೋಳಕ ದಲ್ಲಿ ಗರುಡ ಶೇಷ ಭವಾದಿ ನಾಮಗಳಿಂದ ಪರಮಾತ್ಮ ಇದ್ದು ಲಕ್ಷ್ಮೀದ್ವಾರಾ ಆಯಾ ಇಂದ್ರಿಯಗಳಿಗೆ ನಿಯಮನ ಮಾಡತಾನೆ ಎಂತ ತಾತ್ಪರ್ಯ, ಎಂಬುದು ರಮಾದೇವೇರಲ್ಲಿ ಅನ್ವಯ ಹೋಗತಾ ಸರಸಿಜಾಸನಾದಿಗಳು ನಾಲ್ಕು ಮಂದಿ ಲಿಂಗದಲ್ಲಿ ಇದ್ದಾರೆಂತ ತಾತ್ಪರ್ಯ ಎಂಬುದು ಆವರ್ತನ ಮಾಡಿಕೊಂಡು ವಾಯುದೇವರಲ್ಲೀನು, ಪೂರ್ವೋಕ್ತ

ದಂತೆ ಸಮನ್ವಯ ಮಾಡಿಕೋಬೇಕು. ಇದರಿಂದ ಪ್ರಮಾಣ ಪ್ರಮೇಯಕ್ಕೆ ಬಾಧಕ ಬರಲಿಲ್ಲ. ಇದು ಸಂಕೋಚಭಾಗವನ್ನ ವಿಸ್ತಾರಮಾಡಿಕೊಂಡು ದಿಕ್ಪ್ರದರ್ಶನ ರೀತ್ಯಾ ಬಾಧಕ ಬಾರದಂತೆ ಯೋಜನಾ ಮಾಡಿಕೋಬೇಕು. ಜೀವಕೃತಕರ್ಮಗಳನಾಚರಿಸಿ ಎಂದರೆ ಜೀವನಾದವ ಕರ್ಮಗಳು ಮಾಡಬೇಕಾದರೆ ಸ್ಥೂಲದೇಹದಿಂದ, ಕೃತ–ಮಾಡ ತಕ್ಕ ಕರ್ಮಗಳನಾಚರಿಸಿ–'ನ' 'ಆಚರಿಸಿ' ಎಂತ ಎರಡು ಪದ. 'ನ' ಎಂದರೆ ಜೀವ ತಾನು ಮಾಡತಕ್ಕ ಕರ್ಮಗಳ ಅನ್ಯಾಧೀನನಾದ ಪ್ರಯುಕ್ತ ಸ್ವತಃ ತಾನು ಆಚರಿಸೋಣ ಎಂಬುದು ನ–ಇಲ್ಲವು. ಇನ್ನು ಆಚರಿಸೋಣ ಎಂಬುದು ಹ್ಯಾಂಗೆ ಅಂದರೆ ಬಿಂಬಕ್ರಿಯಾ ದ್ವಾರಾ ಆಚರಿಸತಾನೆ ಎಂತ ತಾತ್ಪರ್ಯ. ಆದ್ದರಿಂದಲೇ ಆಚರಿಸಿ ಎಂದರೆ ಪರಮಾತ್ಮ ನಾದ ಬಿಂಬ ತನ್ನ ಕ್ರಿಯಾವನ್ನು ತಾನು ಆಚರಿಸಿ ತನ್ನ ಕ್ರಿಯಾ ದ್ವಾರಾ ಜೀವನಕಡಿ ಯಿಂದ ಆಚರಿಸತಾನೆ. ತದನಂತರ ಜೀವನ ಕ್ರಿಯಾ ದ್ವಾರಾ ದೇಹದಲ್ಲಿ ಕ್ರಿಯಾ ಆಗುತ್ತದೆ. ಇದು ಸ್ಥೂಲದೇಹದಲ್ಲಿ ದೇಹಾಕಾರದಂತೆ ವ್ಯಾಪ್ತನಾದ ಜೀವನ ವಿಚಾರ. ಪರಮಾಣುವಾದ ಲಿಂಗಗತ ಜೀವನ ವಿಚಾರವಲ್ಲ. ಈ ಸ್ಥೂಲದಲ್ಲೀನೂ " ಶ್ರೀಪಯೋಜ ಭವೇರರಿಂದ ಪ್ರದೀಪವರ್ಣ ಸ್ವಮೂರ್ತಿಮಧ್ಯಗ ತಾ ಪೊಳೆವ ವಿಶ್ವಾದಿರೂಪದಲಿ ಸೇವೆ ಕೊಳ್ಳುತಾ " ಇದೇ ಪ್ರಕಾರ ಇದ್ದಾನೆ. ಈ ಸ್ಥೂಲದೇಹದಲ್ಲಿ ಬ್ರಹ್ಮಾದಿ ಅಸ್ವತಂತ್ರ ದೇವತೆಗಳಿಂದಲೂ ತನ್ನ ಸ್ವಾಖ್ಯರೂಪಗಳಿಂದಲೂ ಸೇವೆ ಕೈಕೊಳ್ಳುತ್ತಾ ಇರುತ್ತಾನೆ ಅಂದರೆ ಇದ್ದಾನೆ. (ಇದರ ವಿವರ ತಂತ್ರಸಾರದಲ್ಲಿ ಪೀಠಪೂಜಾ, ಆವರಣಪೂಜಾ ಪ್ರಕರಣದಲ್ಲಿ ವಿಶದವಾಗಿ ಅದೆ ; ಕಂಕಣಾಕಾರ ಚಕ್ರದಲ್ಲೂ ವಿಶದವಾಗಿ ಅದೆ. ಕಂಕಣಾ ಕಾರ ಸುಳಾದಿ ನೋಡಿರಿ.) ಇನ್ನು ರುದ್ರಾದಿಗಳಿಗೆ ಆವಾಸಸ್ಥಾನ ಎಂಬುದು ದಾವ ದೆಂದರೆ ಅನಿರುದ್ಧಶರೀರ. ಇದರನ್ನ ಮುಂದಿನ ಶ್ಲೋಕದಲ್ಲಿ ಹೇಳತಾರೆ. ಈ ಪ್ರಕಾರ ತಾರತಮ್ಯದಿಂದ ಆವಾಸ. ಸರ್ವರೂ ಸೇರಿ ಸ್ಥೂಲಶರೀರದಲ್ಲಿ ಅಂದರೆ ಸ್ಥೂಲದೇಹದಲ್ಲಿ ಒಂದೊಂದು ಅಂಶದಿಂದ ವ್ಯಾಪ್ತರಾಗಿ ಕಾರ್ಯಗಳ ಮಾಡಸತಾರೆ. ಮತ್ತು ಗರುಡ ಶೇಷಾದಿ ನಾಮಗಳಿಂದ ಹರಿ ಹ್ಯಾಂಗೆ ಸ್ವರೂಪದಲ್ಲಿ ನಿಯಾಮಕನೋ ತದ್ವತ್ ಪವನ ನಾಮಕ ವಾಯುದೇವರು ಸ್ವರೂಪದಲ್ಲಿ ನಿಯಾಮಕರಾಗಿ ಇದ್ದಾರೆ. ಲಿಂಗದಲ್ಲೀನೂ ಇದ್ದಾರೆ ಅಂತಲೂ ಅರ್ಥ ಮಾಡತಾರೆ. ಹರಿಯಂತೆ ಎಂಬುದಕ್ಕೆ ಈ ಪ್ರಕಾರ ಅರ್ಥ ಮಾಡತಾರೆ. ಹಾಂಗೆ ಹೇಳಿದರೆ ಪಯೋಜಭವೇರರಿಂದ ಎಂತ ಹಿಂದಿನ ಶ್ಲೋಕ ದಲ್ಲಿ ಹೇಳಿ, ಮುಂದಿನ ಶ್ಲೋಕದಲ್ಲಿ ವಾಯುದೇವರ ಒಬ್ಬರನೇ ಹೇಳಿ ಅದರ ಮುಂದಿನ ಶ್ಲೋಕದಲ್ಲಿ ಲಿಂಗದೇಹಕ್ಕೆ ರಮಾನೇ ಅಭಿಮಾನಿ ಎಂತ ಹೇಳಿ ಇರೋಣದರಿಂದ ಪರಸ್ಪರ ವಿರೋಧ ಬಂತು. ಜೀವಾಂತರ್ಗತ ವಾಯುದೇವರು ಇದ್ದಾರೆ ಎಂಬುದು ಈ ಉಕ್ತಿಯಿಂದ ನಿರವಕಾಶವಾಗಲಿಲ್ಲ. ಪೂರ್ವೋಕ್ತ ಯೋಜನಾ ಎಂಬುದು ದಾವದಕ್ಕೂ ಬಾಧಕವಲ್ಲ. ಪ್ರಮಾಣವಿರುದ್ಧವೂ ಅಲ್ಲ. ಪ್ರತೀತಾರ್ಥವೇ ಸತ್ಯ ಎಂತ ನಂಬೋದಕ್ಕೆ ಪ್ರಮಾಣ ಕಾಣೆ. ಪ್ರವೇಶನಿರ್ಗಮಕಾಲ ಇಂಥಾದ್ದು ಎಂತ ಪ್ರಮಾಣ ಎಲ್ಲಿಯೂ ಉಕ್ತವಾಗಲಿಲ್ಲ. ಪ್ರವೇಶ ಅಂಗೀಕಾರ ಮಾಡಿದಮ್ಯಾಲೆ ಪ್ರಳಯಕಾಲದಲ್ಲಿ

ನಿರ್ಗಮರಾಗಿ ಅಂಶಿಯಲ್ಲಿ ಅಂಶ ಲಯವಾಗಿ ಪ್ರಳಯವಾಗಬೇಕು. ಪ್ರವೇಶನಿರ್ಗಮನಕ್ಕೆ ಪ್ರಮಾಣವಿಲ್ಲ. ಆದ್ದರಿಂದ ಪ್ರವೇಶ ಕೂಡೋದಿಲ್ಲ. ಇದರಮ್ಯಾಲೆ ಆರ್ಯಸಮ್ಮತಿಯೂ ಅನ್ಯನಿರವಕಾಶಪ್ರಮಾಣಗಳೂ ಇದ್ದರೇ ಪ್ರವೇಶ ಅಂಗೀಕಾರ್ಯವೇ ಸರಿ. ಪ್ರಮಾಣ :–

ವಿದ್ಯುದ್ವಾಭಸ್ವತ್ಸಮಾಭಾಸಶ್ಚಿದಾನಂದೈಕದೇಹವಾನ್ | ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ || ಬ್ರಹ್ಮವಾಯುಶಿವಾಹೀಶವಿಪೈಃ ಶಕ್ರಾದಿಕೈರಪಿ | ಸೇವ್ಯಮಾನೋಧಿಕಂ ಭಕ್ತ್ಯಾ ನಿತ್ಯನಿಶ್ಶೇಷಶಕ್ತಿಮಾನ್ || ಮೂರ್ತಯೋಷ್ಟಾವಪಿ ಧ್ಯೇಯಾಃ ಚಕ್ರಶಂಖವರಾಭಯೈಃ | ಯುಕ್ತಾಃ ಪ್ರದೀಪವರ್ಣಾಶ್ಚ ಸರ್ವಾಭರಣಭೂಷಿತಾಃ ||

ಟೀಕ :– ಮಿಂಚಿನಕಾಂತಿಯೋಪಾದಿಯಲ್ಲಿ ಕಾಂತಿಯುಕ್ತನಾದಂಥಾ ಚಿದಾನಂದೈಕದೇಹವಾನ್–ಚಿದಾನಂದನಾದಂಥಾ ಜೀವನ ಸ್ವರೂಪದಲ್ಲಿ, ಏಕ–ಮುಖ್ಯನಾದಂಥಾ, ಅಸದೃಶನಾದಂಥಾ, ದೇಹವಾನ್–ದೇಹನಾದಂಥಾ, ಗುಣಪೂರ್ಣನಾದಂಥಾ ಪರಮಾತ್ಮ, ಶ್ರೀದೇವೇರಿಂದಲೂ, ಭೂದೇವೇರಿಂದಲೂ ಕೂಡಿಕೊಂಡವನಾಗಿ ಆವಾಸವಾಗಿ ಇದ್ದಾನೆ. ಈ ಜೀವನಲ್ಲಿ ತನ್ನ ಸ್ವಾಖ್ಯಗಳಾದ, ಅಭಿನ್ನಗಳಾದ ಮೂರ್ತಿರೂಪಗಳ ಗಣಸಮೂಹದಿಂದ ಯುಕ್ತನಾಗಿ ಜೀವನ ಹೃದಯಾಕಾಶದಲ್ಲಿ ಮಧ್ಯಗತನಾಗಿ ಇರೋವನಾಗಿದ್ದಾನೆ. ಅನ್ಯಮೂರ್ತಿಗಳು ಎಂದರೆ ಬ್ರಹ್ಮವಾಯುಗಳು, ವಿಪ–ಗರುಡ, ಅಹೀಶ–ಶೇಷದೇವರು, ಶಕ್ರ–ಇಂದ್ರದೇವರು, ಆದಿಕೈಃ–ಈ ದೇವತಾನಾಮಗಳಿಂದ ರೂಪಗಳಿಂದ ಯುಕ್ತವಾದ ತನ್ನ ಸ್ವಮೂರ್ತಿಗಳ ಮಧ್ಯಗತನಾಗಿ ಇರೋವನಾಗಿದ್ದಾನೆ. ಇದ್ದುಕೊಂಡು ತನ್ನಿಂದ ತಾನೇ ಸೇವ್ಯಸೇವಕನಾಗಿ ಸ್ವರೂಪದಲ್ಲಿ ಇರೋವನಾಗಿದ್ದಾನೆ. "ಅಪಿ ಸೇವ್ಯಮಾನೋಧಿಕಂ ಭಕ್ತ್ಯಾ", ಅಪಿ–ಹಾಂಗೇ ಬ್ರಹ್ಮವಾಯುಶಿವಾಹೀಶ ವಿಪಶಕ್ರ ಎಂತ ನಾಮಾಂಕಿತರಾದ ಅಸ್ವತಂತ್ರರಾದ ಬ್ರಹ್ಮಾದಿಗಳು ಅಧಿಕ ಭಕ್ತಿಯಿಂದ ಸೇವೆ ಮಾಡತಾ ಇದ್ದಾರೆ. ಎಲ್ಲಿ ಎಂದರೆ ಸ್ಥೂಲದೇಹದಲಿ, ಎಂಬುದಕ್ಕೆ ಸೂಚನಾದಾವದೆಂದರೇ, ಶಿವಾದಿಗಳು ಕೂಡ ಸೇವೆ ಮಾಡತಾರೆ ಎಂತ ಹೇಳೋಣದರಿಂದ ಜೀವಾಂತರ್ಗತತ್ವ ರುದ್ರಾದಿಗಳಿಗೆ ಕೂಡೋದಿಲ್ಲವಾದ್ದರಿಂದ ಜೀವಾಂತರ್ಗತ ವಾಯುದೇವರ ಅಂಗೀಕಾರ ಮಾಡತಕ್ಕವರು ಕೂಡಾ ಈ ಉಕ್ತಿ ಸ್ಥೂಲದೇಹಪರ ಎಂತಲೇ ಅಂಗೀಕರಿಸಬೇಕು. ಆದ್ದರಿಂದ ಸ್ಥೂಲದೇಹದಲ್ಲಿ ಬ್ರಹ್ಮಾದಿ ಶಕ್ರಾದಿಗಳು ಅಧಿಕಭಕ್ತಿಯಿಂದ ಸ್ಥೂಲದೇಹಗತ ಭಗವಂತನ ಸೇವಾ ಮಾಡತಾರೆ. ಅತ ಏವ ಗರುಡ ಶೇಷ ಭವಾದಿ ನಾಮ ಧರಿಸಿ ಸ್ವರೂಪದಲ್ಲಿ ಪವನಶಬ್ದವಾಚ್ಯನಾದ ಪರಮಾತ್ಮ ಇದ್ದಾನೆಂತ ಮುಂದಿನ ಶ್ಲೋಕಕ್ಕೆ ಈ ಪ್ರಮಾಣ ಸೂಚನಾ. ನಿತ್ಯನಿಶ್ಶೇಷಶಕ್ತಿಮಾನ್–ಜೀವಾಂತರ್ಗತ ದೇಹಾಂತರ್ಗತ ಪರಮಾತ್ಮ ಎಂಥಾವನೆಂದರೆ, ನಿತ್ಯವಾದಂಥಾ ತಮ್ಮ ಶಕ್ತಿಗೆ ಸಾಧ್ಯವಲ್ಲದ, ಶೇಷ–ಉಳಿದ ಕಾರ್ಯಭಾಗಗಳು ಇಲ್ಲದೇ ಇರತಕ್ಕ ಶಕ್ತಿವಂತನಾದವ. ಮೂರ್ತಯೋಷ್ಟಾವಪಿ ಧ್ಯೇಯಾಃ–ಧ್ಯಾನಮಾಡೋದಕ್ಕೆ ಯೋಗ್ಯನಾದ ಪರಮಾತ್ಮ ಸ್ವಮೂರ್ತಿಗಳಾದ ವಿಶ್ವಾದಿ ಎಂಟು ರೂಪಗಳಿಂದ ಅಷ್ಟದಳ ಕಮಲಪತ್ರ ಎಂಟರಲಿ ಇದ್ದಾನೆಂತ ತಾತ್ಪರ್ಯ. ಶಂಖ

ಹಿಂದೆ ಸ್ವರೂಪದೇಹದಾರಭ್ಯ ಅನಿರುದ್ಧಶರೀರದವರಿಗೂ ದೇಹಗಳ ವಿಚಾರ ಹೇಳಿ ಈಗ ಸ್ಥೂಲದೇಹದ ವಿಚಾರ ಹೇಳತಾರೆ.

ಕೇಶ–ಶಿರಗತ ಶಿಖಾದಲ್ಲಿ ವಿದ್ಯಮಾನವಾದ ಒಂದು ಕೂದಲು ತೆಗೆದುಕೊಂಡು, ಸಾಸಿರ ವಿಧ–ಸಾವಿರ ವಿಧವಾಗಿ, ವಿಭಾಗವ ಗೈಸಲು–ಪ್ರತ್ಯೇಕ ಪ್ರತ್ಯೇಕವಾಗಿ ನಾರಿನ ಹಾಗೆ ಸೀಳಿದರೆ, ಎನಿತು–ಅದರ ಒಳಗೆ ಒಂದು ಭಾಗ ಎಷ್ಟು ಸಣ್ಣದೋ, ಅನಿತು–ಅಷ್ಟುಮಾತ್ರ ಸಣ್ಣದಾದ, ಸುಷುಮ್ನವು–ಸುಷುಮ್ನಾನಾಡಿಯು, ಇಹ–ಇರೋದಾಗಿ ಅದೆ. ಆ ಶಿರಾಂತದಿ ವ್ಯಾಪಿಸಿ–ಈ ನಾಡಿ, ಆ–ಎಂದರೆ ಮೂಲಾಧಾರ ಆರಂಭ ಮಾಡಿ ದೇಹಕ್ಕೆ ಅಂತವಾದ ಶಿರಪರಿಯಂತ ವ್ಯಾಪಿಸಿ ಬ್ರಹ್ಮರಂಧ್ರ ಸೇರಿ, ಈ ದೇಹಮಧ್ಯದಲಿ–ಈ ಸ್ಥೂಲದೇಹಮಧ್ಯದಲ್ಲಿ, ಇಹುದು–ಇರೋದಾಗಿ ಅದೆ. ಆ ಸುಷುಮ್ನಕೆ–ಆ ಸುಷುಮ್ನಾನಾಡಿಗೆ, ಪಶ್ಚಿಮಕೆ ವಜ್ರಿಕಾ–ಪಶ್ಚಿಮಭಾಗಕ್ಕೆ ವಜ್ರಿಕಾ ನಾಡಿ, ಉತ್ತರ ಆರ್ಯಾ–ಉತ್ತರಭಾಗಕ್ಕೆ ಆರ್ಯಾ ನಾಮಕ ನಾಡಿ, ಪೂರ್ವ ಪ್ರಕಾಶಿನೀ–ಪೂರ್ವಭಾಗಕ್ಕೆ ಪ್ರಕಾಶಿನೀ ನಾಡಿ, ದಕ್ಷಿಣಕ್ಕೆ ವೈದ್ಯುತಿ–ದಕ್ಷಿಣಭಾಗಕ್ಕೆ ವೈದ್ಯುತಿ ನಾಡಿ, ಪ್ರದೇಶದಲಿ–ಪೂರ್ವಾದಿ ನಾಲ್ಕು ದಿಕ್ಕಿನಲ್ಲೂನೂ, ಗಳಿಹವು–ನಾಲ್ಕು ನಾಡಿಗಳು ಇರೋವಾಗಿ ಅವೆ. ಮಧ್ಯ ಸುಷುಮ್ನಾ ನಾಡಿ, ಅಂತು ಐದು ನಾಡಿಗಳು ಮೂಲಾಧಾರ ಮೊದಲು ಮಾಡಿ ಬ್ರಹ್ಮರಂಧ್ರ ಪರಿಯಂತ ವ್ಯಾಪಿಸಿ ಅವೆ ಎಂತ ತಾತ್ಪರ್ಯ.

**ವಿಶೇಷಾರ್ಥ :**– ಮೂಲಾಧಾರ ಎಂದರೆ, ವೃಷಣಾಸನ ಮಧ್ಯಗತ ತುಂದಿಯಲ್ಲಿ ಉತ್ಪನ್ನವಾಗಿ ಬ್ರಹ್ಮರಂಧ್ರದವರಿಗೂ ವ್ಯಾಪಿಸಿ ಅದೆ. ದೇಹಮಧ್ಯ ಎಂದರೆ ಎಡಬಲ ಭಾಗಗಳ ತಪ್ಪಿಸಿ ಮಧ್ಯಭಾಗ ಎಂತ ತಾತ್ಪರ್ಯ. " ಸುಷುಮ್ನಾ ಪಂಚಪ್ರಭೇದಿನೀ " ಎನತಕ್ಕ ನಾಡಿಗಳು ಮೇಲೆ ಹೇಳಿದ್ದೇ ಎಂತ ತಿಳಿಯಬೇಕು.

**ಆ ನಳಿನಭವ ನಾಡಿಯೊಳಗೆ ತ್ರಿ ।**
**ಕೋಣ ಚಕ್ರವು ಇಪ್ಪದಲ್ಲಿ ಕೃ ।**
**ಶಾನುಮಂಡಲಮಧ್ಯಗನು ಸಂಕರುಷಣಾಹ್ವಯನು ॥**
**ಹೀನ ಪಾಪಾತ್ಮಕ ಪುರುಷನ ದ ।**
**ಹಾನಗೈಸುತ ದಿನದಿನದಿ ವಿ ।**
**ಜ್ಞಾನಮಯ ಶ್ರೀ ವಾಸುದೇವನ ಐದಿಸುವ ಕರುಣಿ ॥ ೧೮ ॥**

ಪಾಪಪುರುಷನ ದಹನವಿಚಾರ ಹೇಳತಾರೆ.

ಆ ನಳಿನಭವ ನಾಡಿಯೊಳಗೆ – ಪೂರ್ವೋಕ್ತ ಬ್ರಹ್ಮದೇವರ ನಾಮಧೇಯವಾದ ಉಪನಾಮ ಸುಷುಮ್ನಾಖ್ಯ ನಾಡಿ ಒಳಗೆ, ಬ್ರಹ್ಮನಾಡೀ ಒಳಗೆ, ತ್ರಿಕೋಣಚಕ್ರವು–ಅಷ್ಟದಳಕಮಲದ ಅಧೋಭಾಗದಲ್ಲಿ ಮೂರು ಮೂಲೆ ಯುಕ್ತವಾದ ಚಕ್ರವು, ಇಪ್ಪದು–ಇರೋದಾಗಿ ಅದೆ. ಅಲ್ಲಿ–ಆ ತ್ರಿಕೋಣಚಕ್ರದಲ್ಲಿ, ಕೃಶಾನುಮಂಡಲ–ಅಗ್ನಿಮಂಡಲ

ಇರೋದಾಗಿ ಅದೆ. ಮಧ್ಯಗನು–ಈ ಅಗ್ನಿಮಂಡಲ ಮಧ್ಯಗತನಾಗಿ, ಸಂಕರುಷಣಾಹ್ವಯನು–ಸಂಕರ್ಷಣನಾಮಕ ಪರಮಾತ್ಮನು, (ಅನೇ ಸಂಧಿ ೪ನೇ ಶ್ಲೋಕದಲ್ಲಿ ಪ್ರದ್ಯುಮ್ನನಿಂದ ಶೋಷಣ ಮಾಡಿದ), ಹೀನ–ಅತ್ಯಂತ ನೀಚನಾದ, ಪಾಪಾತ್ಮಕ ಪುರುಷನ–ಪಾಪಮಯವಾದ ಶರೀರಯುಕ್ತನಾದ ಕಲಿಪುರುಷನ, ದಹಾನಗೈಸುತ–ದಹನಮಾಡುತ್ತ, ಅನಂತರ, ದಿನದಿನದಿ–ಪ್ರತಿಪ್ರತಿದಿನದಲ್ಲೂ ದಹನದಿಂದ ಸ್ಮಶಾನಸದೃಶವಾದ ದೇಹವನ್ನ, ಕರುಣಿ–ಅತ್ಯಂತ ಕರುಣಾ ಉಳ್ಳ, ವಿಜ್ಞಾನಮಯ ವಾಸುದೇವನ–ಶಿರಗತ ವರ್ತುಲ ಮಂಡಲಮಧ್ಯಗತನಾದ ವರುಣಾಂತರ್ಗತನಾದ ಶ್ವೇತವರ್ಣವಿಶಿಷ್ಟನಾದ ವಿಜ್ಞಾನಮಯ ಸಾಂಕೇತನಾದ ವಾಸುದೇವನ, ಐದಿಸುವ–ಶಿರದಲ್ಲಿ ಬ್ರಹ್ಮನಾಡೀ ಒಳಗೆ ಇದ್ದು, ಅಲ್ಲಿಂದ ಅಮೃತವೃಷ್ಟಿ ಸುರಿಸಿ ಸ್ಮಶಾನಸದೃಶವಾದ ಮೈಲಿಗಿಯಾದ ದೇಹವನ್ನು ಪವಿತ್ರ ಮಾಡತಾನೆ. ಪಾಪಪುರುಷನ ದಹನಕಾಲದಲ್ಲಿ ಹೃದಯುಗತ ಬಿಂಬನ್ನ ಶಿರಗತ ವಾಸುದೇವನ ಕೂಡಾ ಸೇರಿಸಿ ಅಮೃತವೃಷ್ಟಿ ವಾಸುದೇವ ಐದಿಸಿದ ನಂತರ ಪುನಃ ಹೃದಯಸ್ಥಾನದಲ್ಲಿ ಇಡೋವನಾಗಬೇಕು. ದಹಿತನಾದ ಪಾಪಪುರುಷಗೆ ಮುಹೂರ್ತಕ್ಕೆ ಒಂದಾವರ್ತಿ ಉತ್ಪತ್ತಿಯು. ಈ ಪಾಪಪುರುಷ ಎಡಭಾಗ ಉತ್ತರದಿಕ್ಕು ಆಯಾ ನಾಮಕ ಪಿಂಗಳ ನಾಡಿಯಲ್ಲಿ ಇರುತ್ತಾನೆ. ಪುಣ್ಯಪುರುಷ ಬಲಭಾಗದ ದಕ್ಷಿಣದಿಕ್ಕಿನಲ್ಲಿ ವೈದ್ಯುತಿನಾಮಕ ಇಳಾನಾಡೀ ಒಳಗೆ ಇರತಾನೆ. ಪುಣ್ಯಪುರುಷ ವಾಯುದೇವರು. ಈ ವಾಯುದೇವರನ್ನ ನಾಭಿಕಮಲ ಅಧೋಭಾಗ ಷಟ್ಕೋಣಮಂಡಲಕ್ಕೆ ತಂದು ಅಲ್ಲಿ ಪೂಜಾದಿಗಳು ಮಾಡಿ ಅಲ್ಲಿಂದ ಹೃದಯ ಅಷ್ಟದಳಕಮಲ ಅಧೋಭಾಗ ತ್ರಿಕೋಣಮಂಡಲಕ್ಕೆ ತಂದು, ಅಲ್ಲಿ ಪೂಜಾದಿಗಳು ಮಾಡಿ ದೇಹದಲ್ಲಿ ಪುಣ್ಯಪುರುಷನ್ನ ಆವಾಹನ ಮಾಡಿ ಕರ್ಮಮಾಡಬೇಕು. ಪುಣ್ಯಪುರುಷನ ಧ್ಯಾನಶ್ಲೋಕ :–

ಅಶ್ವಮೇಧಶಿರಸ್ಕಂ ಚ ಮಹಾದಾನಭುಜದ್ವಯಂ |
ಸೋಮಪಾನಹೃದಾ ಯುಕ್ತಂ ಬ್ರಹ್ಮಚರ್ಯಕಟಿದ್ವಯಂ |
ತತ್ಸಂಯೋಗಪದದ್ವಂದ್ವಸಾಂಗೋಪಾಂಗಶುಭಕ್ರಿಯಂ |
ಸರ್ವವ್ರತಾಂಗರೋಮಾಣಂ ದಯಾದಾಕ್ಷಿಣ್ಯಲೋಚನಂ |
ಸಾರ್ಧತ್ರಿಕೋಟಿತೀರ್ಥಾಂಗಂ ಸರ್ವದೇವಮಯಂ ವಿಭುಂ |
ಸಿಂಹಾಸನೇ ಸಮಾಸೀನಂ ದೇವದೇವನಮಸ್ಕೃತಂ |
ಸರ್ವಾಯುಧೈರ್ಯುಪೇತಂ ಚ ಕುಕ್ಷೌ ಧರ್ಮಂ ವಿಚಿಂತಯೇತ್ ||

ಏವಂ ರೀತ್ಯಾ ಪುಣ್ಯಪುರುಷನ್ನ ಧ್ಯಾನ ಮಾಡಬೇಕೆಂತ ತಾತ್ಪರ್ಯ.

**ಮಧ್ಯನಾಡಿಯ ಮಧ್ಯದಲಿ ಹೃ |**
**ತ್ಪದ್ಮಮೂಲದಿ ಮೂಲಪತಿ ಪದ |**
**ಪದ್ಮಮೂಲದಲಿಪ್ಪ ಪವನನ ಪಾದಮೂಲದಲಿ ||**

**ಪೊಂದಿಕೊಂಡಿಹ ಜೀವಲಿಂಗನಿ ।**
**ರುದ್ಧ ದೇಹವಿಶಿಷ್ಟನಾಗಿ ಕ ।**
**ಪರ್ದಿ ಮೊದಲಾದಮರರೆಲ್ಲರು ಕಾದುಕೊಂಡಿಹರು ॥ ೧೯ ॥**

ದೇಹದಲ್ಲಿ ಜೀವರು ಇರತಕ್ಕ ವಿಚಾರ ಅಂದರೆ ಸ್ಥಾನ ಹೇಳತಾರೆ.

ಮಧ್ಯ–ಮೂಲಾಧಾರ ಆರಂಭಮಾಡಿ ದೇಹಮಧ್ಯದಲ್ಲಿ ಹೊರಟು ಶಿರಬ್ರಹ್ಮರಂಧ್ರ ಪರಿಯಂತ ವ್ಯಾಪಿಸಿ ಇರುವಂಥ, ನಾಡಿಯು–ಬ್ರಹ್ಮನಾಡಿಯಾದ ಸುಷುಮ್ನಾನಾಡಿಯು, ಮಧ್ಯದಲಿ–ಸಮಾನ ಮಧ್ಯಭಾಗ ಪ್ರದೇಶದ ನಾಡೀ ಒಳಭಾಗದಲ್ಲಿ, ಹೃತ್ಪದ್ಮ–ಹೃದಯಕ್ಕೆ ಸಮಾನಸ್ಥಾನದಲ್ಲಿ ಅಷ್ಟದಳಪದ್ಮ, ಮೂಲದಿ–ಈ ಕಮಲಮಧ್ಯದಲ್ಲಿ ಕರ್ಣಿಕಾ ಅದೆ. ಇದರ ಅಧೋಭಾಗವಾದ ಕರ್ಣಿಕಾಮೂಲದಲ್ಲಿ, ಮೂಲಪತಿ–ಅಷ್ಟಬಾಹುಗಳಿಂದ ಯುಕ್ತ ನಾದ, ದಳಸಂಚಾರಿಯಾದ, ಅಂಗುಷ್ಠಾಗ್ರಪರಿಮಿತನಾದ ಮೂಲೇಶ ಇರೋವನಾಗಿ ದ್ದಾನೆ. ಪದಪದ್ಮಮೂಲದಲಿ–ಈ ಮೂಲೇಶನಾಮಕ ಪರಮಾತ್ಮನ ಪಾದಗಳೆಂಬೋ ಪದ್ಮಗಳ ಮೂಲದಲ್ಲಿ ಎಂದರೆ, ಪಾದಕ್ಕೆ ಮೂಲ ಉಂಗುಷ್ಟಗಳೆರಡು, ಈ ಉಭಯ ಉಂಗುಷ್ಟಗಳ ಮಧ್ಯದಲ್ಲಿ, ಇಪ್ಪ ಪವನನ–ಇರತಕ್ಕ ಶ್ರೀ ವಾಯುದೇವರ, ಪಾದಮೂಲ ದಲಿ–ಪಾದಕ್ಕೆ ಮೂಲವಾದ ಅಂಗುಷ್ಠಗಳ ಮಧ್ಯದಲ್ಲಿ, ಲಿಂಗ–ಸಾದಿ, ಅನಾದಿಲಿಂಗಶರೀರ, ಅನಿರುದ್ಧ–ಅನಿರುದ್ಧಶರೀರ, ದೇಹವಿಶಿಷ್ಟನಾಗಿ–ದೇಹದಿಂದ ಸಹಿತನಾಗಿ, ಜೀವ–ಜೀವ ನಾದವನು, ಪೊಂದಿಕೊಂಡಿಹ–ಪೊಂದಿಕೊಂಡು ಇರೋವನಾಗಿ ಇದ್ದಾನೆ. ಕಪರ್ದಿ ಮೊದ ಲಾದ–ರುದ್ರದೇವರೇ ಮೊದಲಾದ, ಅಮರರೆಲ್ಲರು–ಅಷ್ಟದಿಕ್ಪಾಲಕರಾದ ಯಾವತ್ತೂ ದೇವತೆಗಳು ಆಯಾ ದಿಕ್ಕುಗತ ಆಯಾ ದಳಗಳಲ್ಲಿ, ಕಾದುಕೊಂಡಿಹರು–ಮೂಲೇಶನ ಪ್ರಾಣದೇವರ ಸೇವಾರ್ಥ ಕಾದುಕೊಂಡು ಇರೋವರಾಗಿದ್ದಾರೆ ಎಂತ ತಾತ್ಪರ್ಯ.

**ವಿಶೇಷಾರ್ಥ :–** ಅಷ್ಟದಿಕ್ಪಾಲಕರು ಎಲ್ಲಿ ಕಾದುಕೊಂಡಿದ್ದಾರೆ ಎಂದರೆ, ಅಷ್ಟ ದಿಕ್ಕುಗಳಿಗೆ ವ್ಯಾಪಿಸಿರುವ ಅಷ್ಟದಳಗಳಲ್ಲಿ ಕಾದುಕೊಂಡು ಇದ್ದಾರೆ. (೧೮ನೇ ಶ್ಲೋಕ ದಲ್ಲಿ ಹೇಳಿದ ಪ್ರಕಾರ) ಈ ಅಷ್ಟದಳ ಕಮಲಕ್ಕೆ ಅಧೋಭಾಗದಲ್ಲಿ ಇರತಕ್ಕ ತ್ರಿಕೋಣ ಮಂಡಲದಲ್ಲಿ ದಹನಮಾಡಿ ಶರೀರಶುದ್ಧಿ, ಅನಂತರ ದಕ್ಷಿಣಭಾಗದಲ್ಲಿ ಇರತಕ್ಕ ಜಯದೇವ ನೆಂಬ ಪುಣ್ಯಪುರುಷನ ಆವಾಹನಮಾಡಬೇಕು. ಹ್ಯಾಂಗೆಂದರೆ, ದಕ್ಷಿಣಭಾಗ ಸ್ಪರ್ಶ ಮಾಡಿಕೊಂಡು ಪುಣ್ಯಪುರುಷನ ಧ್ಯಾನಮಾಡಬೇಕು. ಪುಣ್ಯಪುರುಷನ ಧ್ಯಾನಶ್ಲೋಕ ೧೮ನೇ ನುಡಿಯಲ್ಲಿ ಹೇಳಿಯದೆ. ಇಂಥಾ ಪುಣ್ಯಗಳಿಂದ ಶರೀರವಾಗಿ ಉಳ್ಳ ಹನುಮದ್ದೇವ ರನ ಧ್ಯಾನಮಾಡಿ, ಷಟ್ದಳಪದ್ಮಕ್ಕೆ ಅಧೋಭಾಗ ಷಟ್ಕೋಣ ವಾಯುಮಂಡಲದಲ್ಲಿ ಆವಾಹನ ಮಾಡಿ ಷೋಡಶೋಪಚಾರ ಪೂಜಾ ಮಾಡಿ, ಆ ರೂಪದಿಂದ ಭೀಮರೂಪ ವನ್ನ ಧ್ಯಾನಮಾಡಿ ಭೀಮದೇವರ ಧ್ಯಾನಶ್ಲೋಕದಿಂದ ಧ್ಯಾನಮಾಡಿ, ಹನುಮರೂಪ ದಿಂದ ಭೀಮರೂಪ ತೆಗೆದುಕೊಂಡು ಅಷ್ಟದಳಕಮಲ ಅಧೋಭಾಗಗತ ತ್ರಿಕೋಣ ವಹ್ನಿಮಂಡಲದಲ್ಲಿ ಆವಾಹನ ಮಾಡಿ ಷೋಡಶಪೂಜಾ ಮಾಡಬೇಕು. ತದ್ವತ್

ಮಧ್ವಾಚಾರ್ಯರ ಧ್ಯಾನಶ್ಲೋಕದಿಂದ ಧ್ಯಾನಮಾಡಿ, ಭೀಮರೂಪದಿಂದ ತೆಗೆದು ಕೊಂಡು ಶಿರದಲ್ಲಿ ಆವಾಹನಮಾಡಿ ಷೋಡಶಪೂಜಾ ಮಾಡಬೇಕು. ಇಲ್ಲಿಗೆ ದೇಹ ಶುದ್ಧವಾಯಿತು.ಇಳಾ ಪಿಂಗಳಾ ನಾಡಿಗಳ ಎರಡರಲ್ಲಿ, ಎಡನಾಡಿಯಲ್ಲಿ ಪಾಪಪುರುಷ, ಬಲನಾಡಿಯಲ್ಲಿ ಪುಣ್ಯಪುರುಷ, ಈ ಪ್ರಕಾರ ತಿಳಿಯಬೇಕು. ಮೂಲೇಶಾದಿ ವಿಚಾರಕ್ಕೆ ಪ್ರಮಾಣಗಳು :—

ಬ್ರಹ್ಮಾಂಡಪುರಾಣೇ ವೆಂಕಟಗಿರಿಮಾಹಾತ್ಮ್ಯೇ ಸೂತಋಷಿ ಸಂವಾದೇ ಅಧ್ಯಾತ್ಮ ಮಾಲಿಕಾವರ್ಣನಂ ನಾಮ ಏಕೋತ್ತರಶತತಮೋಧ್ಯಾಯದಲ್ಲಿಯೂ, ಬೃಹಚ್ಛಲಾರಿ ಯಲ್ಲಿಯೂ, ಬೃಹದ್ಭಾಷ್ಯದಲ್ಲಿಯೂ ಅದೆ. ಜೀವಾಂಗುಷ್ಠ ಪರಿಮಿತದಿಂದ ಜೀವಾಕಾರ ನಾದಂಥಾ ಆಕಾರವುಳ್ಳ ಅಗ್ರೇಶನಾಮಕ ಪರಮಾತ್ಮ ಆತ್ಮ ಎಂತಲೂ, ಪ್ರಾಜ್ಞ ಎಂತಲೂ ಹೆಸರು ಉಳ್ಳವನಾಗಿ ವಿಯೋಗರಹಿತನಾಗಿ ಸರ್ವದಾ ಸರ್ವಕಾಲದಲ್ಲಿ ಜೀವಾಂತರ್ಗತ ನಾಗಿ ಇರೋವನಾಗಿದ್ದಾನೆ. ಈ ಅಗ್ರೇಶನ ಆಕಾರ ಎಂಥಾದ್ದೆಂದರೆ, ಜೀವವತ್ ಇರ ತಕ್ಕದ್ದು, ಜ್ಞಾನಾನಂದವೇ ಸ್ವರೂಪವಾಗಿ ಉಳ್ಳವ. ಅನಾದ್ಯನಂತಕಾಲಕ್ಕೂ ಮುಕ್ತಾ ಮುಕ್ತದ್ವಯಕಾಲದಲ್ಲೂ ಇದೇ ರೀತ್ಯಾನೇ ಇರತಕ್ಕವ. ಈ ಪ್ರಕಾರ ಜೀವಾಂತರ್ಗತದಲ್ಲಿ ಇರೋವನಾಗಿದ್ದಾನೆ. ಜೀವನಾದರೋ ಯೋಗ್ಯತಾನುಸಾರ ಜ್ಞಾನಾನಂದಸ್ವರೂಪ ವುಳ್ಳವ. ಇಂಥಾ ಜೀವನು ಅನುಭವಿಸತಕ್ಕ ಅವಿದ್ಯಾಕಾಮಕರ್ಮಗಳು ಸದಾ ಸರ್ವಕಾಲ ದಲ್ಲಿ ವಿಷ್ಣುಸಂಕಲ್ಪಾನುಸಾರದಿಂದ ಲಿಂಗಶರೀರದಲ್ಲಿ ವಿದ್ಯಮಾನಗಳಾಗಿ ಇಂಥಾ ಲಿಂಗ ಶರೀರ, ಜೀವಗೆ ಅನಾದಿಕಾಲದಿಂದ ಸಂಬಂಧವಾಗಿ ಅದೆ. ಈ ಅವಿದ್ಯಾಕಾಮಕರ್ಮ ಗಳು ಲಿಂಗದಲ್ಲಿ ಎಲ್ಲಿ ಅವೆ ಎಂದರೆ, ತೃತೀಯಪರಿಚ್ಛೇದವಾದ ತಮಃಪರಿಚ್ಛೇದದಲ್ಲಿ ಅಂಕುರ ರೂಪವಾದ ವ್ಯಾಪಾರರಹಿತವಾಗಿ ಬೀಜಾತ್ಮನಾ ಇರೋದಾಗಿ ಅದೆ. ಇಂಥಾ ಲಿಂಗ ದೇಹಕ್ಕೆ ನಾಶ ಎಂಬುದು ಎಂದಿಗೂ ಇಲ್ಲ. ಏನಾಗತದೆ ಎಂದರೆ, ಲಿಂಗದೇಹಭಂಗಾರ್ಥ ವಾಗಿ ಪರಮಾತ್ಮನ ಉಪಾಸನಾ ಮಾಡಿದರೆ ಭಗವದಪರೋಕ್ಷಾನಂತರದಲ್ಲಿ ಪ್ರಾರಬ್ಧ ಕರ್ಮದಿಂದ ಜಾಯಮಾನವಾಗತಕ್ಕ ಆಯಾ ದೇಹಗಳು, ಚರಮದೇಹಗಳು ಎನಿಸುತ್ತವೆ. ಆಯಾ ದೇಹಗಳ ತ್ಯಾಗಮಾಡತಾ ಇರತಾನೆ. ಆಯಾ ದೇಹಗಳಿಂದ ಮಾಡತಕ್ಕ ಕರ್ಮಗಳು ಜನ್ಮಾಂತರಕ್ಕೆ ಕಾರಣಗಳಲ್ಲ. ಪ್ರಾರಬ್ಧಕರ್ಮ ಜನ್ಮಗಳು ಎಷ್ಟು ಐದ ಬೇಕೆಂದು ಕ್ಲುಪ್ತವೋ ಅಷ್ಟುಮಾತ್ರ ಜನ್ಮಗಳ ಧರಿಸಿ ಪ್ರಾರಬ್ಧಕರ್ಮ ದೇಹಗಳ ತ್ಯಾಗ ಮಾಡತಾನೆ. ತದನಂತರ ಸ್ಥೂಲದೇಹಕ್ಕೆ ಕಾರಣವಾದ ಸೂಕ್ಷ್ಮಶರೀರ ಎನತಕ್ಕ ಅನಿರುದ್ಧಶರೀರ ಸರ್ವದಾ ಕಂಚುಕದೋಪಾದಿಯಲ್ಲಿ ಅಸಂಬಂಧವಾಗಿ ಸೊಳ್ಳಕಾಗಿ(ಸಡಿಲ ವಾಗಿ) ಲಿಂಗಕೆ ಮ್ಯಾಲೆ ಸುತ್ತಿಕೊಂಡು ಇರುತ್ತದೆ. ಇದು ಸರ್ಪಕಂಚುಕ (ಹಾವಿನ ಪರೆ) ಹ್ಯಾಗೆ ಬಿಡತದೋ ತದ್ವತ್ ಬಿಡೋವನಾಗತಾನೆ. ತದ್ವತ್ ಲಿಂಗದೇಹವು ವಿರಜಾ ನದೀ ಸ್ನಾನದಿಂದ ಲಕ್ಷ್ಮ್ಯಾತ್ಮಕ ವಿರಜಾನದಿಯಲ್ಲಿ ಬಿಡೋವನಾಗತಾನೆ. ಅಲ್ಲಿ ತೇಲುತಾ ಇರತದೆ. ಪ್ರಳಯಕಾಲಕ್ಕೆ ವಿರಜಾ ಲಕ್ಷ್ಮಿಯಲ್ಲಿ ಏಕೀಭೂತವಾಗೋ ಕಾಲಕ್ಕೆ ರಮಾ ದೇವೇರ ಉದರದಲ್ಲಿ ಇರತದೆ. ಅಷ್ಟೇ ಹೊರ್ತು ಲಿಂಗದೇಹಕ್ಕೆ ನಾಶ ಎಂಬುದು ಇಲ್ಲ.

ನಾಶ ಶಬ್ದ ಭಂಗಪರ್ಯಾಯು. ಭಂಗ ಎಂದರೆ ಜೀವನ ಬಿಟ್ಟು ದೂರ ಇರೋಣ. ಲಿಂಗಭಂಗಾನಂತರ ಅಹಂ ಮಮತಾ ಎಂಬ ಉಕ್ತಿ ಜೀವಗೆ ಅನ್ವರ್ಥಕವು. "ನಾನು ಎಂಬುದು ಮುಕ್ತಿಯಲ್ಲಿ ಕಾಣೊ" ಇದು ವಿಜಯರಾಯರ ವಾಕ್ಯ. ಅಹಂ ಎಂದರೆ ನಾನು (ಜೀವ), ಮಮ ಎಂದರೆ ನನ್ನ ಕರ್ಮ ಎಂತ ತಾತ್ಪರ್ಯ. ಇಂಥಾ ಜೀವ ಸೃಷ್ಟವಾಗಬೇಕಾದರೆ ಲಿಂಗದೇಹಸ್ಥ ಪೂರ್ವೋಕ್ತ ಅಂಕುರರಹಿತವಾಗಿ ಬೀಜಭೂತವಾಗಿ ಶಕ್ತ್ಯಾತ್ಮನಾ ಇರತಕ್ಕ ಕರ್ಮವೇ ಕಾರಣವು. ಜೀವರಾಶಿಗಳು ಅನಾದಿಯಿಂದ ಅಸೃಜ್ಯ ರಾಗಿ ರಾಶೀಭೂತರಾಗಿ ಬಿದ್ದು ಇರ್ತಾರೆ. ದಾವ ಕರ್ಮವೂ ಮಾಡೋದಿಲ್ಲ. ಸುಷುಪ್ತಿ ಐದಿರುತ್ತಾರೆ.

**ನಾಳಮಧ್ಯದಲಿಪ್ಪ ಹೃತ್ಕೀ ।**
**ಲಾಲಜದೊಳಿಪ್ಪಷ್ಟದಳದಿ ಕು ।**
**ಲಾಲಚಕ್ರದ ತೆರದಿ ಚರಿಸುವ ಹಂಸನಾಮಕನು ॥**
**ಕಾಲಕಾಲಗಳಲ್ಲಿ ಯಣ್ದೆಸೆ ।**
**ಪಾಲಕರ ಕೈಸೇವೆಕೊಳುತ ಕೃ ।**
**ಪಾಳು ಅವರಭಿಲಾಷೆಗಳ ಪೂರೈಸಿಕೊಡುತಿಪ್ಪ ॥ ೨೦ ॥**

ಮೂಲೇಶನ ವ್ಯಾಪಾರ ಹೇಳತಾರೆ.

ನಾಳ–ಸುಷುಮ್ನಾನಾಡೀ ಒಳಗೆ ಆದ್ಯಂತದವರಿಗೂ ಇರುವ ದ್ವಾರದ, ಮಧ್ಯದಲಿ–ಈ ನಾಳದ ಒಳಗೆ ಹೃದಯಕ್ಕೆ ಸರಿಯಾದ ಮಧ್ಯಭಾಗದಲ್ಲಿ, ಇಪ್ಪ–ಇರುವಂಥಾ (ಅಂದರೆ ಇರತಕ್ಕ ಮೂಲೇಶ), ಹೃತ್ಕೀಲಾಲಜದೊಳು–ಹೃತ್ಕಮಲದಲ್ಲಿ, ಇಪ್ಪ–ಇರತಕ್ಕ ಮೂಲೇಶ ಉಪನಾಮ, ಹಂಸನಾಮಕನು–ಹಂಸ ಎಂತ ನಾಮಯುಕ್ತನಾಗಿ, ಅಷ್ಟದಳದಿ–ಹೃದಯ ಕಮಲದ ಎಂಟು ದಳಗಳಲ್ಲಿ, ಕುಲಾಲಚಕ್ರದ ತೆರದಿ–ಕುಂಬಾರನ ಚಕ್ರ ತಿರುಗುವೋಪಾದಿ ಯಲ್ಲಿ, ಚರಿಸುತ–ಮೂಲೇಶ ತನ್ನ ಪಾದಮೂಲಗತ ಪ್ರಾಣದೇವರು, ಪ್ರಾಣದೇವರ ಪಾದಮೂಲಗತ ಅನಿರುದ್ಧಶರೀರವಿಶಿಷ್ಟನಾದ ಜೀವ, ಇಷ್ಟು ಮಂದಿಗಳ ಸಹಿತವಾಗಿ, ಸಂಚರಿಸುತ–ತಿರುಗುತ್ತಾ, ಕಾಲಕಾಲಗಳಲ್ಲಿ–ದಾವ ದಾವ ಕಾಲಗಳಲ್ಲಿ ದಾವ ದಾವ ದಳದಲ್ಲಿ ಸಂಚಾರ ಮಾಡತಾನೋ ಆಯಾ ಕಾಲಗಳಲ್ಲಿ, ಯಣ್ದೆಸೆಪಾಲಕರ–ಆಯಾ ದಳಗತ ಅಷ್ಟದಿಕ್ಪಾಲಕರ, ಕೈಸೇವೆಕೊಳುತಾ–ಸೇವೆ ಸ್ವೀಕಾರಮಾಡುತ್ತಾ, ಕೃಪಾಳು–ದಯಾಳು ವಾದ ಹಂಸನಾಮಕ ಮೂಲೇಶನು, ಅವರವರಭಿಲಾಷೆ–ಆಯಾ ಪ್ರಾಣಿಗಳ ಅಭಿಲಾಷೆ ಎಂದರೆ ದಾವ ದಾವ ದಳ ಸಂಚಾರದಿಂದ ದಾವ ದಾವ ಅಭಿಲಾಷೆ ಜೀವರಿಗೆ ಉಂಟಾಗ ಬೇಕೋ ಅಂಥಾ ದಳ ಸಂಚಾರದಿಂದ ಆದನನುಸರಿಸಿದ ಅಭಿಲಾಷೆ ಉತ್ಪತ್ತಿ ಮಾಡಿ ಆ ಆ ಅಭಿಲಾಷೆಯನ್ನು, ಪೂರೈಸಿಕೊಡುತಿಪ್ಪ–ಪೂರ್ವಕರ್ಮಾನುಸಾರವಾಗಿ, ತನ್ನ ಸಂಕಲ್ಪಾನುಸಾರ ದೇಹಗತ ತತ್ವಾಭಿಮಾನಿಗಳ ದ್ವಾರಾ ಪೂರ್ಣಮಾಡಿ ಸುಖದುಃಖಾದಿ ಗಳ ದೇವಾಸುರಗಣದೊಳಗೆ ವಿಭಾಗವ ಮಾಡಿ ಅವರಿಗೂ ಹಾಂಗೆ ದೇಹಗತನಾದ

ಜೀವಗೂ ಅವರವರ ಯೋಗ್ಯತಾ ತಾರತಮ್ಯಾನುಸಾರ ಕೊಡತಾ ಬಿಂಬರೂಪಿ ಪರಮಾತ್ಮ ದೇಹದಲ್ಲಿ ಇರೋವನಾಗಿ ಇದ್ದಾನೆ. ಮೂಲೇಶ ಅಭಿಲಾಷೆ ಉಂಟುಮಾಡತಕ್ಕವ, ಅಗ್ರೇಶನಾಮಕ ಬಿಂಬ, ಅದರನ್ನ ಪೂರ್ಣಮಾಡಿ ವಿಭಾಗ ಮಾಡಿಕೊಡತಕ್ಕವನೆಂದು ತಾತ್ಪರ್ಯ.

**ವಾಸವಾನುಜ ರೇಣುಕಾತ್ಮಜ ।**
**ದಾಶರಥಿ ವೃಜಿನಾರ್ದನಮಲಜ ।**
**ಲಾಶಯಾಲಯ ಹಯವದನ ಶ್ರೀಕಪಿಲ ನರಸಿಂಹಾ ।**
**ಈ ಸುರೂಪದಿ ಅವರವರ ಸಂ ।**
**ತೋಷಪಡಿಸುತ ನಿತ್ಯಸುಖಮಯ ।**
**ವಾಸವಾಗಿಹ ಹೃತ್ಕಮಲದೊಳು ಬಿಂಬನೆಂದೆನಿಸಿ ॥ ೨೦ ॥**

ಅಷ್ಟದಳದಲ್ಲಿ ಅಷ್ಟದಿಕ್ಪಾಲಕರ ಉಪಾಸ್ಯ ಭಗವದ್ರೂಪಗಳು ಎಂಟು ಅವೆ ಎಂತ ಹೇಳತಾರೆ.

ವಾಸವಾನುಜ– ಇಂದ್ರದೇವರ ಅನುಜನಾದ ಉಪೇಂದ್ರನಾಮಕ ಪರಮಾತ್ಮ ಪೂರ್ವದಳದಲ್ಲಿ ಇಂದ್ರದೇವರಿಂದ ಉಪಾಸ್ಯನು. ರೇಣುಕಾತ್ಮಜ–ಜಮದಗ್ನಿ ಋಷಿಪತ್ನಿಯಾದ ರೇಣುಕಾದೇವಿಯ ಮಗನಾದ ಶ್ರೀ ಪರಶುರಾಮದೇವರು ಅಗ್ನಿದಳದಲ್ಲಿ ಅಗ್ನಿದೇವರಿಂದ ಉಪಾಸ್ಯನು, ದಾಶರಥಿ–ದಶರಥರಾಯನ ಪುತ್ರ ಸೀತಾಪತಿಯಾದ ಶ್ರೀರಾಮಚಂದ್ರದೇವರು ದಕ್ಷಿಣದಿಕ್ಕಿನಲ್ಲಿ ಯಮದೇವರಿಂದ ಉಪಾಸ್ಯನು. ವೃಜಿನಾರ್ದನ–ಪಾಪಿಗಳಾದ ದೈತ್ಯರ ಸಂಹಾರಮಾಡತಕ್ಕ ವೃಜಿನಾರ್ದನರೂಪಿ ಪರಮಾತ್ಮ ನೈರುತ್ಯದಿಕ್ಕಿನಲ್ಲಿ ಇರುವ ದಳದಲ್ಲಿ ನಿರಋತಿಯಿಂದ ಉಪಾಸ್ಯನು. ಅಮಲಜಲಾಶಯಾಲಯ–ಪರಿಶುದ್ಧಗಳಾದ ಜಲಗಳಿಗೆ ಆಶ್ರಯಭೂತವಾದ ತಟಾಕಾದಿಗಳೇ ಮನಿಯಾಗಿ ಉಳ್ಳ ಮತ್ಸ್ಯರೂಪಿ ಪರಮಾತ್ಮನು ಪಶ್ಚಿಮದಿಕ್ಕಿನಲ್ಲಿ ಇರುವ ದಳದಲ್ಲಿ ವರುಣದೇವರಿಂದ ಉಪಾಸ್ಯನು. ಹಯವದನ–ಹಯವದನದೇವರು ವಾಯುದಿಕ್ಕುದಳದಲ್ಲಿ ಪ್ರವಹವಾಯು, ಇವನ ಉಪಾಸ್ಯ ಹಯವದನಮೂರ್ತಿಯು. ಶ್ರೀಕಪಿಲ–ತಪಸ್ಸೇ ಐಶ್ವರ್ಯವುಳ್ಳ ಎಂದರೆ ತಪಸ್ಸೇ ಐಶ್ವರ್ಯ ಎಂತ ಪ್ರದರ್ಶನ ಮಾಡಿದ ಕಪಿಲನಾಮಕ ಪರಮಾತ್ಮ ಉತ್ತರದಿಕ್ಕು ದಳದಲ್ಲಿ ಕುಬೇರನಿಂದ ಶ್ರೀಕಪಿಲನಾಮಕ ಪರಮಾತ್ಮ ಉಪಾಸ್ಯನು. ನರಸಿಂಹ–ನೃಸಿಂಹರೂಪಿ ಪರಮಾತ್ಮ ಈಶಾನ್ಯದಿಕ್ಕುದಳದಲ್ಲಿ ರುದ್ರದೇವರಿಂದ ನೃಸಿಂಹದೇವರು ಉಪಾಸ್ಯನು. ಈ ಸುರೂಪದಿ–ಈ ಪ್ರಕಾರ ದಿವ್ಯರೂಪಗಳಿಂದ ಆಯಾ ದಳಗಳಲ್ಲಿ ಇದ್ದು, ಆಯಾ ದಳಗತ ದಿಕ್ಪಾಲಕರಿಂದ ಸೇವಾ ತೆಗೆದುಕೊಳ್ಳುತ್ತಾ, ಅವರವರ–ಆಯಾ ದಿಗ್ದೇವತೆಗಳ, ಸಂತೋಷಪಡಿಸುತ–ತನ್ನ ದರ್ಶನದಿಂದ ಸಂತೋಷಪಡಿಸುತ, ನಿತ್ಯಸುಖಮಯ–ಸದಾ ಸುಖವೇ ಸ್ವರೂಪಿಯಾದ ಮೂಲೇಶನು, ಹೃತ್ಕಮಲದೊಳು–ಹೃದಯಕಮಲದ ಒಳಗೆ, ಬಿಂಬನೆಂದೆನಿಸಿ–ಬಿಂಬ ಎಂತ ಕರೆಸಿದವನಾಗಿ, ವಾಸವಾಗಿಹ–ವಾಸವಾಗಿ ಇರೋವನಾಗಿ

ಇದ್ದಾನೆ. ಮೂಲೇಶ, ಅಗ್ರೇಶ, ಪ್ರಾದೇಶ ಭಗವದ್ರೂಪಗಳೂನೂ ಬಿಂಬಸಾಂಕೇತರೇವೇ. ಆದರದರಲಿ ಮುಖ್ಯಬಿಂಬ ಅಗ್ರೇಶ ಎಂತ ತಾತ್ಪರ್ಯ.

**ಸುರಪನಾಲಯಕೈದಿದೊಡೆ ಮನ ।**
**ವೆರಗುವುದು ಸತ್ಪುಣ್ಯಮಾರ್ಗದಿ ।**
**ಬರಲು ವಹ್ನಿಯ ಮನೆಗೆ ನಿದ್ರಾಲಸ್ಯಹಸಿತೃಷೆಯು ।**
**ತರಣಿತನಯನಿಕೇತನದಿ ಸಂ ।**
**ಭರಿತ ಕೋಪಾಟೋಪ ತೋರುವು ।**
**ದರವಿದೂರನು ನಿರಋತಿಯಲಿ ಬರೆ ಪಾಪಗಳ ಮಾಳ್ಪ ॥ ೨೨ ॥**

ಮೂಲೇಶ ಅಷ್ಟದಳಸಂಚಾರದಿಂದ ಜೀವರಿಗೆ ಆಗತಕ್ಕ ಮನೋವಿಕಾರವನ್ನು ಹೇಳತಾರೆ.

ಸುರಪನಾಲಯಕೈದಿದೊಡೆ–ಮೂಲೇಶನು ಪೂರ್ವದಳವಾದ ಇಂದ್ರದೇವರ ಮನಿಯಲ್ಲಿ ಬಂದರೆ, ಸತ್ಪುಣ್ಯಮಾರ್ಗದಿ–ಸಮೀಚೀನವಾದ ಪುಣ್ಯಮಾರ್ಗದಲ್ಲಿ, ಮನವೆರಗುವುದು–ಜೀವನ ಮನಸ್ಸು ಎರಗುವುದು (ಪ್ರೇರಿಸೋವನಾಗತಾನೆ). ವಹ್ನಿಯ ಮನೆಗೆ ಬರಲು–ಈ ಮೂಲೇಶ ಆಗ್ನೇಯದಿಕ್ಕುದಳವಾದ ಅಗ್ನಿದೇವರ ಮನಿಗೆ ಬಂದರೆ, ನಿದ್ರಾಲಸ್ಯ–ಜೀವಗೆ ನಿದ್ರೆಯೇನು, ಪಾಲುಮಾರಿಕೆಯೇನು, ಹಸಿತೃಷೆಯು–ಕ್ಷುತ್ಪಿಪಾಸೆ ಉಂಟಾಗತದೆ. ತರಣಿತನಯನಿಕೇತನದಿ–ಸೂರ್ಯಪುತ್ರನಾದ ಯಮದೇವರ ಮನಿ ಎಂದರೆ ದಕ್ಷಿಣ ದಿಕ್ಕುದಳದಲ್ಲಿ ಮೂಲೇಶ ಬಂದರೆ, ಸಂಭರಿತ–ಜೀವಗೆ ಥಂದಾಗಿ, ಕೋಪ ಆಟೋಪ ತೋರುವುದು–ಕೋಪವೇನು, ಕೇವಲ ಆರ್ಭಟವೇನು ಇದರನ್ನು ಉಂಟುಮಾಡತಾನೆ. ಅರವಿದೂರನು–ದೋಷದೂರನಾದ ಮೂಲೇಶನು, ನಿರಋತಿಯಲಿ ಬರೆ–ನೈಋತ್ಯದಿಕ್ಕಿನ ದಳದಲ್ಲಿ ಬಂದರೆ, ಪಾಪಗಳ ಮಾಳ್ಪ–ಜೀವನಾದವ ಮೂಲೇಶನಿಂದ ನಾನಾವಿಧವಾದ–ಪಾಪಕರ್ಮಗಳ ಮಾಡೋವನಾಗತಾನೆ.

**ವರುಣನಲ್ಲಿ ವಿನೋದಹಾಸ್ಯವು ।**
**ಮರುತನೊಳು ಗಮನಾಗಮನ ಹಿಮ ।**
**ಕರ ಧನಾಧಿಪರಲ್ಲಿ ಧರ್ಮದ ಬುದ್ಧಿ ಜನಿಸುವುದು ।**
**ಹರನ ಮಂದಿರದಲ್ಲಿ ಗೋ ಧನ ।**
**ಧರಣಿ ಕನ್ಯಾದಾನಗಳು ಒಂ ।**
**ದರಘಳಿಗೆ ತಡಿಯದಲೆ ಕೊಡುತಿಹ ಚಿತ್ತ ಪುಟ್ಟುವುದು ॥ ೨೩ ॥**

ಇನ್ನೂ ದಳಸಂಚಾರವನ್ನೇ ಹೇಳತಾರೆ.

ವರುಣನಲ್ಲಿ ವಿನೋದಹಾಸ್ಯವು–ಮೂಲೇಶ ವರುಣದೇವನ ಮನಿಯಾದ ಪಶ್ಚಿಮ ದಿಕ್ಕುದಳಕ್ಕೆ ಬಂದರೆ, ವಿನೋದರೂಪವಾದ ಮಾತುಗಳು ಆಡೋಣ, ಹಾಸ್ಯಪರಿಹಾಸಾದಿ

ಗಳು ಮಾಡಿಸುತಾನೆ. ಮರುತನೊಳು ಗಮನಾಗಮನ–ವಾಯುದಿಕ್ಕಿನಲ್ಲಿ ಮೂಲೇಶ ಬರಲು ಗಮನಾಗಮನಬುದ್ಧಿ ಉಂಟುಮಾಡುತಾನೆ. ಹಿಮಕರಧನಾಧಿಪರಲ್ಲಿ– ಹಿಮಕರ– ಚಂದ್ರ, ಧನಾಧಿಪ–ಕುಬೇರ ಇವರ ಅಭಿಮನ್ಯವಾದ ದಿಕ್ಕು ಉತ್ತರದಿಕ್ಕು, ಮತ್ತು ಹಿಮ ಉತ್ಪತ್ತಿಯಾಗತಕ್ಕ ದಿಕ್ಕು ಉತ್ತರದಿಕ್ಕು ಎಂತಲೂ ಅರ್ಥ. ಈ ದಿಕ್ಕಿನಲ್ಲಿ ಇರುವ ಮನಿ ಕುಬೇರನ ಮನಿ. ಈ ದಳಕ್ಕೆ (ಮೂಲೇಶ) ಬಂದರೆ, ಧರ್ಮದ ಬುದ್ಧಿ ಜನಿಸುವುದು–ಜೀವನಿಗೆ ಧರ್ಮ ಮಾಡಬೇಕು ಎಂಬ ಬುದ್ಧಿಯನ್ನು ಉಂಟುಮಾಡುತಾನೆ. ಹರನ ಮಂದಿರದಲ್ಲಿ–ಈಶಾನ್ಯದಿಕ್ಕಿನಲ್ಲಿ ಇರುವ ದಳ ರುದ್ರದೇವರ ಮನಿ. ಈ ದಳಕ್ಕೆ ಮೂಲೇಶ ಬಂದರೆ, ಗೋಧನ–ಆಕಳುಗಳ, ದ್ರವ್ಯಗಳ, ಧರಣಿ–ಭೂಮಿಯು, ಕನ್ಯಾ–ವಿವಾಹವಾಗದ ಬಾಲೆಯರ, ದಾನಗಳ–ಇವು ಮೊದಲಾದ ದಾನಗಳನ್ನು, ಒಂದರಫಳಿಗೆ ತಡಿಯದಲೆ–ಅರ್ಧ ಘಳಿಗೆಯಾದರೂ ಸಾವಕಾಶಮಾಡದಲೆ, ಕೊಡುತಿಹ–ಕೊಡತಾ ಇರತಕ್ಕ, ಚಿತ್ತ ಪುಟ್ಟುವುದು–ಬುದ್ಧಿಯನ್ನ ಉಂಟುಮಾಡೋವನಾಗತಾನೆ. ಸರ್ವದಾನ ಮಾಡಬೇಕು ಎಂಬ ಇಚ್ಛಾ ಉಂಟಾಗಿ ತನ್ನಲ್ಲಿ ಇರತಕ್ಕ ಪದಾರ್ಥಗಳನ್ನು ದಾನ ಮಾಡಿಸೋ ಬುದ್ಧಿ ಕೊಡತಾನೆ ಎಂತ ತಾತ್ಪರ್ಯ.

**ಹೃದಯದೊಳಗೆ ವಿರಕ್ತಿ ಕೇಸರ ।**
**ಕೊದಗೆ ಸ್ವಪ್ನ ಸುಷುಪ್ತಿ ಲಿಂಗದಿ ।**
**ಮಧುಹ ಕರ್ಣಿಕೆಯಲ್ಲಿ ಬರೆ ಜಾಗ್ರತೆಯು ಪುಟ್ಟುವುದು ॥**
**ಸುದರುಶನ ಮೊದಲಾದ ಅಷ್ಟಾ ।**
**ಯುಧವ ಪಿಡಿದು ದಿಶಾಧಿಪತಿಗಳ ।**
**ಸದನದಲಿ ಸಂಚರಿಸುತೀಪರಿ ಬುದ್ಧಿಗಳ ಕೊಡುವ ॥ ೨೪ ॥**

ಶ್ರೀ ಮೂಲೇಶನಾಮಕ ಪರಮಾತ್ಮನ ದಳಸಂಚಾರ ಅವಶಿಷ್ಟವನ್ನು ಹೇಳತಾರೆ.

ಹೃದಯದೊಳಗೆ–ದಳಗಳ ಸಂಚಾರ ಬಿಟ್ಟು ಹೃದಯಕಮಲದೊಳಗೆ ತನ್ನ ಸ್ಥಾನವಾದ ಕಮಲಮಧ್ಯಗತ ಕರ್ಣಿಕಾ ಮ್ಯಾಲಕ್ಕೆ ಬಂದು ಅದರ ಸುತ್ತು ಸಂಚಾರ ಮಾಡಿದರೆ, ವಿರಕ್ತಿ–ವಿಷಯಭೋಗಾದಿಗಳಲ್ಲಿ ವಿರಕ್ತಿಬುದ್ಧಿ ಜನಿಸೋದಾಗತದೆ. ವಿರಕ್ತಿ ಮಾಡಬೇಕೆಂಬ ಜ್ಞಾನ ಉಂಟುಮಾಡತಾನೆ. ಕೇಸರಕೊದಗೆ ಸ್ವಪ್ನ–ಮೂಲೇಶ ಕಮಲ ಕರ್ಣಿಕಾಕ್ಕೆ ಸುತ್ತಿಕೊಂಡಿರುವ ಕಿಂಜಲ್ಕ ಸಂಕೇತ ಕೇಸರಗಳಲ್ಲಿ ಪ್ರವೇಶಮಾಡಿ ಅದರಲ್ಲಿ ಸಂಚಾರಮಾಡಿದರೆ ಸ್ವಪ್ನಸದೃಶವಾಗಿ ಬಾಹ್ಯವಿಷಯಾದಿಗಳಲ್ಲಿ ಚಿತ್ತ ಆಸಕ್ತವಾಗದೇ ಅಂತರಂಗಮನಸ್ಕನಾಗಿ ಪರಮಾತ್ಮನಲ್ಲಿ ಜ್ಞಾಪಕವೂ ಚರಾಚರ ಅಧಿಷ್ಠಾನಗಳಲ್ಲಿ, ಶ್ರೀ ಪರಮಾತ್ಮನಲ್ಲಿ ಜ್ಞಾಪಕರೂಪವಾದ ಜ್ಞಾನ ಉಂಟುಮಾಡತಾನೆ. ಸುಷುಪ್ತಿಲಿಂಗದಿ– ಕಮಲಕರ್ಣಿಕಾದಲ್ಲಿ ಕರ್ಣಿಕಾದ ಅಂಚುಭಾಗದಲ್ಲಿ ಸಂಚಾರಮಾಡಿದರೆ ಸುಷುಪ್ತಿಸದೃಶವಾದ ಆನಂದ ಪೂರ್ವೋಕ್ತ ಅನುಷ್ಠಾನದಿಂದ ಉಂಟುಮಾಡತಾನೆ. ಮಧುಹಕರ್ಣಿಕೆ

ಯಲಿ ಬರೆ–ಮಧುಯುಕ್ತವಾದ ಕಮಲಕರ್ಣಿಕೆಯಲ್ಲಿ ಸಂಚಾರ ಬಿಟ್ಟು, ಬರೆ–ಪುನಃ ಕ್ರಮಾತ್ ಅಷ್ಟದಳದಲ್ಲಿ ಬಂದರೆ. ಜಾಗ್ರತೆಯು ಪುಟ್ಟುವುದು–ಪೂರ್ವೋಕ್ತ ಪ್ರಕಾರ ವಿಷಯಾದಿ ವ್ಯಾಪಾರಗಳಲ್ಲಿ ಮನಸ್ಸು ಪ್ರವೇಶಮಾಡಿ ಕರ್ಮವ್ಯಾಪಾರಗಳಲ್ಲಿ ಎಚ್ಚರಿಕೆ ಉಂಟಾಗತದೆ. ಮತ್ತು ದಳಸಂಚಾರಕಾಲದಲ್ಲಿ ಜೀವರಿಗೆ ಜಾಗ್ರದವಸ್ಥಾ ಮಧ್ಯಗತ ನಾದರೆ, ಸ್ವಪ್ನಾವಸ್ಥಾ ಕಮಲಕರ್ಣಿಕಾದಲ್ಲಿ ಬಂದರೆ, ನಿದ್ರಾವಸ್ಥಾ ಮಧುಹಕರ್ಣಿಕೆಯಲ್ಲಿ ಇರೋಣ ಎಂಬುದು ಕ್ರಮಾತ್ ಬಿಟ್ಟು ದಳಗಳಲ್ಲಿ ಬಂದರೆ ಪುನಃ ಜಾಗ್ರದವಸ್ಥೆ ಪ್ರಾಪ್ತ ವಾಗತದೆ. (ಉಭಯಪ್ರಕಾರ ತಾತ್ಪರ್ಯ), ಸುದರ್ಶನ ಮೊದಲಾದ–ಶಂಖ ಚಕ್ರ ಮೊದಲಾದ, ಅಷ್ಟಾಯುಧವ ಪಿಡಿದು–ಎಂಟು ಆಯುಧ ಎಂಟು ಕರಗಳಲ್ಲಿ ಹಿಡಿದು, ದಿಶಾಧಿಪತಿಗಳ–ಅಷ್ಟದಿಕ್ಕುಗಳಿಗೆ ಅಧಿಪತಿಗಳಾದ ಇಂದ್ರಾದಿ ದೇವತೆಗಳ, ಸದನದಲಿ– ದೇಹಗತ ಹೃದಯಸ್ಥಕಮಲಗತ ಅಷ್ಟದಿಕ್ಕುಗಳ ವ್ಯಾಪಿಸಿದ ಅಷ್ಟದಳಗಳೆಂಬ ಮನಿಗಳಲ್ಲಿ, ಸಂಚರಿಸುತ–ಸಂಚಾರ ಮಾಡುತಾ ಇರತಕ್ಕ ಮೂಲೇಶ, ಜೀವರಿಗೆ, **ಈ ಪರಿ–ಈ** ಪೂರ್ವೋಕ್ತ ಪ್ರಕಾರ, ಬುದ್ಧಿಗಳ ಕೊಡುವ–ಜೀವನ್ನ ವಾಯುದೇವರನ್ನ ತನ್ನ ಪಾದ ಮೂಲದಲ್ಲಿ ಧರಿಸಿ, ಅವರಿಂದ ಸಹಿತನಾಗಿ ಸಂಚರಿಸುತ ನಾನಾವಿಧ ಬುದ್ಧಿಗಳ ಕೊಡೋವನಾಗತಾನೆ.

**ಸೂತ್ರನಾಮಕ ಪ್ರಾಣಪತಿ ಗಾ ।**
**ಯತ್ರಿ ಸಂಪ್ರತಿಪಾದ್ಯನಾಗೀ ।**
**ಗಾತ್ರದೊಳು ನೆಲೆಸಿರಲು ತಿಳಿಯದೆ ಕಂಡಕಂಡಲ್ಲಿ ।**
**ಧಾತ್ರಿಯೊಳು ಸಂಚರಿಸಿ ಪುತ್ರ ಕ ।**
**ಳತ್ರ ಸಹಿತನುದಿನದಿ ತೀರ್ಥ ।**
**ಕ್ಷೇತ್ರಯಾತ್ರೆಯ ಮಾಡಿದೆವು ಎಂದೆನುತ ಹಿಗ್ಗುವರು ॥ ೨೫ ॥**

ದೇಹದಲ್ಲಿ ಶ್ರೀಪರಮಾತ್ಮ ಇದ್ದಾನೆ ಎಂತ ಅನುಸಂಧಾನದಿಂದ ತಿಳಿಯದೆ ಇರಬಾರ ದೆಂದು ಹೇಳತಾರೆ.

ಸೂತ್ರನಾಮಕ–ಸೂತ್ರ ಎಂತ ನಾಮದಿಂದ ಪ್ರಸಿದ್ಧನಾದ, ಪ್ರಾಣಪತಿ–ಶ್ರೀ ವಾಯುದೇವರಿಗೆ ಸ್ವಾಮಿಯಾದ, ಮೂಲೇಶನಾದ ಶ್ರೀಪರಮಾತ್ಮ, ಗಾಯತ್ರಿ–ವೇದಕ್ಕೆ ಮಾತೃಭೂತವಾದ ಗಾಯತ್ರಿ ಮಂತ್ರದಿಂದ, ಸಂಪ್ರತಿಪಾದ್ಯನಾಗಿ–ಛಂದಾಗಿ ಸರ್ವೋ ತ್ತಮನೆಂದು ಹೇಳಿಸಿಕೊಳ್ಳಲ್ಪಟ್ಟವನಾಗಿ ಅಂದರೆ ಅನಂತವೇದಪ್ರತಿಪಾದ್ಯನಾಗಿ, ಗಾತ್ರ ದೊಳು ನೆಲಸಿರಲು–ದೇಹದಲ್ಲಿ ಅಷ್ಟದಳಕಮಲದಲ್ಲಿ ಚತುರ್ವಿಂಶತಿ ತತ್ವಗಳಲ್ಲಿ ಬುದ್ಧಿಗಳು ಹುಟ್ಟಿಸುತ್ತಾ, ತತ್ವಗಳ ದ್ವಾರಾ ಚಲನಾದಿ ಸರ್ವವ್ಯಾಪಾರಗಳು ತತ್ವೇಶರ ದ್ವಾರಾ ಮಾಡಿಸುತ್ತಾ ಈ ದೇಹದಲ್ಲಿ ಇರುತಿರಲಾಗಿ, ತಿಳಿಯದೆ–ದೇಹೇಂದ್ರಿಯಾದಿ ವ್ಯಾಪಾರ ಗಳು ಈ ರೀತ್ಯಾ ಆಗತದೆ ಎಂತ ತಿಳಿಯದೆ, ಅಜ್ಞಜನರು, ಧಾತ್ರಿಯೊಳು–ಈ ಭೂಮಿ ಯೊಳು ವಿದ್ಯಮಾನವಾದ, ಕಂಡಕಂಡಲ್ಲಿ ಸಂಚರಿಸಿ–ಅನೇಕ ತೀರ್ಥಕ್ಷೇತ್ರ ಸಂಚಾರ

ಮಾಡಿ, ಅನುದಿನದಿ–ಪ್ರತಿದಿನದಲ್ಲೂ, ಪುತ್ರಕಳತ್ರ ಸಹಿತ–ದಾರಾಪುತ್ರಾದಿಗಳ ಸಹಿತ, ತೀರ್ಥ–ಗಂಗಾದಿತೀರ್ಥಗಳು, ಕ್ಷೇತ್ರ–ಬದರಿ ಆದಿ ಪುಣ್ಯಕ್ಷೇತ್ರಗಳು, ಯಾತ್ರೆಯ– ಈ ಯಾತ್ರಾದಿಗಳನ್ನು, ಮಾಡಿದೆವು–ನಾವು ಮಾಡಿದೆವು, ಎಂದೆನುತ–ಎಂತ ಹೇಳಿಕೊಂಡವರಾಗಿ ಅಂದರೆ, ಬಿಂಬಕ್ರಿಯಾವನ್ನ ತಿಳಿಯದೆ ತಮ್ಮ ಮೇಲೇ ಸ್ವಾಮಿತ್ವ ಅಜ್ಞಾನದಿಂದ ಆರೋಪಣ ಮಾಡಿಕೊಂಡು ನಾವು ಮಾಡಿದೆವು ಎಂತ ಉಚ್ಚಾರನಾಡುತ್ತಾ, ಹಿಗ್ಗುವರು–ಆನಂದಪಡೋವರಾಗತಾರೆ. ಇದು ಪಾಪಬೀಜ ಪುಣ್ಯವಾಗಿ ಅಂಥಾ ಫಲವೇ ಕೊಡೋದಾಗತದೆ. ಆ ಫಲ ಎಂಬುದು ಲೋಗರು ನೋಡೋದಕ್ಕೆ ಮಹಾಸುಖವಾಗಿ ತೋರಿ ಅದರಿಂದ ತಾನು ದುಃಖಿಸುತ್ತಾ ಇರತಾನೆ. ಆದ್ದರಿಂದ ದೇಹಸ್ಥ ಶ್ರೀಪರಮಾತ್ಮನ ಅನುಸಂಧಾನದಿಂದ ತಿಳಿದು ಯಾತ್ರಾದಿಗಳು ಮಾಡಬೇಕೆಂತ ತಾತ್ಪರ್ಯ.

**ನಾರಸಿಂಹ ಸ್ವರೂಪದೊಳಗೆ ಶ ।**
**ರೀರನಾಮದಿ ಕರಿಸುವನು ಹದಿ ।**
**ನಾರು ಕಳೆಗಳು ಉಳ್ಳ ಲಿಂಗದಿ ಪುರುಷನಾಮಕನು ॥**
**ತೋರುವನು ಅನಿರುದ್ಧದೊಳು ಶಾಂ ।**
**ತೀರಮಣನನಿರುದ್ಧರೂಪದಿ ।**
**ಪ್ರೇರಿಸುವ ಪ್ರದ್ಯುಮ್ನ ಸ್ಥೂಲಕಳೇವರದೊಳಿದ್ದು ॥ ೨೬ ॥**

ಸ್ವರೂಪಾದಿ ಸ್ಥೂಲಾಂತ ದೇಹಗಳಲ್ಲಿ ಪ್ರೇರಕರೂಪಗಳಾದ ಭಗವದ್ರೂಪಗಳ ಹೇಳತಾರೆ.

ಸ್ವರೂಪದೊಳಗೆ–ಜೀವನ ಸ್ವರೂಪದೊಳಗೆ, ನಾರಸಿಂಹ–ಶ್ರೀ ನರಸಿಂಹದೇವರು ಅಂದರೆ ನರಸಿಂಹನಾಮಕ ಪರಮಾತ್ಮ, ಶರೀರನಾಮದಿ–ಆಯಾ ಜೀವರು ಮನುಷ್ಯರೋ, ಮೃಗರೋ, ಪಕ್ಷಿಗಳೋ, ಆಯಾ ಶರೀರಗಳ ನಾಮಗಳಿಂದ ಜೀವಾಕಾರನಾಗಿ ಶ್ರೀ ನರಸಿಂಹರೂಪದಿಂದ, ಕರಿಸುವನು–ಕರಿಸೋವನಾಗತಾನೆ. ಹದಿನಾರು ಕಳೆಗಳು ಉಳ್ಳ– ದಶೇಂದ್ರಿಯಗಳು (೧೦), ಪಂಚಭೂತಗಳು (೫), ಮನಸ್ಸು (೧), ಅಂತು ಹದಿನಾರು ಕಳಾಗಳು ಉಳ್ಳ, ಲಿಂಗದಿ–ಅನಾದಿಲಿಂಗ, ಅಣುಲಿಂಗ, ಮಹತ್ತತ್ವ ಈ ಶರೀರಗಳಲ್ಲಿ, ಪುರುಷನಾಮಕನು – ಪುರುಷರೂಪಿಯಾದ ಶ್ರೀ ಪರಮಾತ್ಮನು, ಅನಿರುದ್ಧದೊಳು– ಅನಿರುದ್ಧಶರೀರದ ಒಳಗೆ, ಶಾಂತೀರಮಣ–ಶಾಂತಿನಾಮಕ ಲಕ್ಷ್ಮೀದೇವೇರಿಗೆ ಪತಿಯಾದ, ಅನಿರುದ್ಧರೂಪದಿ–ಅನಿರುದ್ಧನಾಮಕ ಶ್ರೀಪರಮಾತ್ಮನು, ಸ್ಥೂಲಕಳೇವರದೊಳು–ಸ್ಥೂಲ ಶರೀರದಲ್ಲಿ, ಪ್ರದ್ಯುಮ್ನ–ಪ್ರದ್ಯುಮ್ನನಾಮಕ ಶ್ರೀಪರಮಾತ್ಮನು, ಇದ್ದು–ಅಂತರ್ಗತನಾಗಿ ಇದ್ದು, ಪ್ರೇರಿಸುವ–ಜೀವನಲ್ಲಿ ತನ್ನ ಸ್ವಾಖ್ಯ ಬ್ರಹ್ಮಾದಿ ತತ್ವದೇವತಾ ರೂಪಗಳ ದ್ವಾರಾ ಜೀವರಿಗೆ ಇಚ್ಛಾರೂಪವಾದ ಪ್ರೇರಣೆ ಪ್ರೇರಿಸೋವನಾಗತಾನೆ. ಲಿಂಗಾದಿಗಳಲ್ಲಿ ವಿದ್ಯಮಾನರಾಗಿರುವ ಬ್ರಹ್ಮಾದಿ ದೇವತೆಗಳಿಗೆ ಪುರುಷರೂಪದಿಂದ ಪ್ರೇರಿಸೋವನಾಗತಾನೆ. ಅನಿರುದ್ಧಶರೀರಗತ ರುದ್ರಾದಿ ದೇವತೆಗಳಿಗೆ ಅನಿರುದ್ಧ ರೂಪದಿಂದ ಪ್ರೇರಣೆ ಮಾಡೋವ

ನಾಗತಾನೆ. ಪ್ರದ್ಯುಮ್ನ ಸ್ಥೂಲದೇಹದೊಳು ಯಾವತ್ತೂ ದೇವತೆಗಳಿಗೆ ಪ್ರೇರಿಸಿ ಅನಂತರ ಸ್ಥೂಲದೇಹದಿಂದ ವ್ಯಾಪಾರ ಮಾಡಸತಾನೆ. ಒಂದು ವ್ಯಾಪಾರ, ಜೀವನಿಂದ ಆಗಬೇಕಾದರೆ ಈ ಪರಂಪರಾ ಒಂದು ಸ್ಥೂಲದೇಹದಲ್ಲಿ ಕಾರ್ಯಗಳು ಆಗತವೆ. ಈ ಪ್ರಕಾರ ಪ್ರತಿಕ್ಷಣದಲ್ಲಿ ಅನುಸಂಧಾನ ಇದ್ದ ಜ್ಞಾನಿಗಳಿಗೆ ತೋರುವನು. ಸ್ಥೂಲದೇಹ ಗತನಾದ ಬಿಂಬ ಅಪರೋಕ್ಷದಿಂದ ತೋರೋವನಾಗತಾನೆ ಎಂತ ತಾತ್ಪರ್ಯ.

**ಮೊದಲು ತ್ವಕ್ಚರ್ಮಗಳು ಮಾಂಸವು ।**
**ರುಧಿರ ಮೇದೋ ಮಜ್ಜವಸ್ಥಿಗ ।**
**ಳಿದರೊಳಗೆ ಏಕೋನಪಂಚಾಶನ್ಮರುದ್ಗಣವು ॥**
**ನಿಧನಹೀಂಕಾರಾದಿ ಸಾಮಗ ।**
**ಅದರ ನಾಮದಿ ಕರೆಸುತೊಂಬ ।**
**ತ್ತಧಿಕನಾಲ್ವತ್ತೆನಿಪ ರೂಪದಿ ಧಾತುಗಳೊಳಿಪ್ಪ ॥ ೨೭ ॥**

ಸ್ಥೂಲದೇಹಗತ ಸಪ್ತಧಾತುಸ್ಥ ದೇವತಾಭಗವದ್ರೂಪಗಳನ್ನು ಹೇಳತಾರೆ.

ಮೊದಲು – ಸ್ಥೂಲಶರೀರಕ್ಕೆ ಮ್ಯಾಲೆ ಮೊದಲು ಇರತಕ್ಕದ್ದು ತ್ವಕ್–ತ್ವಕ್ ನಾಮಕ ಚರ್ಮಪ್ರಭೇದವು, ಇದರಲ್ಲಿ, ನಿಧನ–ನಿಧನನಾಮಕ ಶ್ರೀಪರಮಾತ್ಮ ಇದ್ದಾನೆ. ೧) ಚರ್ಮ–ಈ ತ್ವಕ್ಕಿನ ಒಳಭಾಗದಲ್ಲಿ ಚರ್ಮ, ಇದರಲ್ಲಿ ಹೀಂಕಾರನಾಮಕ ಪರಮಾತ್ಮ ಇದ್ದಾನೆ. ೨) ಮಾಂಸ–ಈ ಚರ್ಮದ ಒಳಗೆ ಮಾಂಸ, ಇದರಲ್ಲಿ ಆದಿನಾಮಕ ಪರ ಮಾತ್ಮ ಇದ್ದಾನೆ. ೩) ರುಧಿರ–ಈ ಮಾಂಸದ ಒಳಗೆ ರಕ್ತ. ಈ ರಕ್ತದಲ್ಲಿ ಪ್ರಸ್ತಾವ ನಾಮಕ ಪರಮಾತ್ಮ ಇದ್ದಾನೆ. ೪) ಮೇದ–ಈ ರುಧಿರದೊಳಗೆ ಮೇದ. ಈ ಮೇದದ ಒಳಗೆ ಪ್ರತಿಹಾರನಾಮಕ ಪರಮಾತ್ಮ ಇದ್ದಾನೆ. ೫) ಮಜ್ಜ–ಈ ಮೇದದ ಒಳಗೆ ಮಜ್ಜ. ಇದರಲ್ಲಿ ಉದ್ಗೀಥನಾಮಕ ಪರಮಾತ್ಮ ಇದ್ದಾನೆ. ೬) ಅಸ್ಥಿ–ಈ ಮಜ್ಜದ ಒಳಗೆ ಎಲಬುಗಳು. ಇದರಲ್ಲಿ ಉಪದ್ರವನಾಮಕ ಪರಮಾತ್ಮ ಇದ್ದಾನೆ. ೭) ಸಾಮಗ– ನಿಧನಾದಿರೂಪಗಳು, ಸಪ್ತ ಸಾಮಗರೂಪಗಳು. ಸಪ್ತಸಾಮಗ ಎಂದರೆ ಸಪ್ತ ಕಾಲ ಎಂತ. ೬ನೇ ಸಂಧಿ ೧೪ನೇ ಶ್ಲೋಕದಲ್ಲಿ ವಿವರ ಮಾಡಲ್ಪಟ್ಟಿದೆ. ಅದರ ನಾಮದಿ ಕರಿಸುತ–ಈ ಧಾತುಗಳ ನಾಮದಿಂದ ಕರೆಸುತ, ಗಳು–ಈ ಸಪ್ತ ಭಗವದ್ರೂಪಗಳು, ಏಕೋನಪಂಚಾಶನ್ಮರುದ್ಗಣವು–ನಾಲ್ವತ್ತೊಂಭತ್ತು ಮರುತ್ತರು, ಒಂದೊಂದು ಧಾತು ಗಳೊಳು ಏಳೇಳು (೭×೭=೪೯) ಮರುತ್ತರ ಕ್ರಮದಿಂದ ಇದ್ದಾರೆ. ಒಂಬತ್ತಧಿಕ ನಾಲ್ವತ್ತೆನಿಪ ರೂಪದಿ–ನಿಧನಾದಿ ಸಪ್ತಸಾಮರೂಪಗಳು, ಸಪ್ತಧಾತುಗಳಲ್ಲಿ ೪೯ ರೂಪ ಗಳಿಂದ, ಧಾತುಗಳೊಳಿಪ್ಪ–ತ್ವಗಾದಿ ಸಪ್ತ ಧಾತುಗಳಲ್ಲಿ ಇದ್ದಾನೆ. ಹ್ಯಾಂಗೆಂದರೆ ಒಂದೊಂದು ಧಾತುಗಳೊಳಗೆ ಏಳು ಮರುತ್ತುಗಳು ನಾಮಸಂಕೇತ ಭಗವದ್ರೂಪ ಒಂದು. ಈ ಒಂದು ಭಗವದ್ರೂಪವೇ ಏಳು ರೂಪಗಳ ಧರಿಸಿ, ಏಳು ಮರುತ್ತುಗಳಲ್ಲಿ ಇರೋವ

ನಾಗಿ ಇದ್ದಾನೆ. ಇದೇ ರೀತ್ಯಾ ಸಪ್ತ ಧಾತುಗಳಲ್ಲಿ ಗಣನಾ ಮಾಡಿದರೆ ಧಾತು ಒಂದಕ್ಕೆ ಮರುತ್ತರು ಸಹ ಹದಿನಾಲ್ಕು ಪ್ರಕಾರ ಏಳು ಧಾತುಗಳಲ್ಲಿ (೯೮) ತೊಂಭತ್ತೆಂಟು ಭಗವದ್ರೂಪಗಳು ಆಗತವೆ ಎಂತ ತಾತ್ಪರ್ಯ.

**ಸಪ್ತಧಾತುಗಳೊಳಹೊರಗೆ ಸಂ ।**
**ತಪ್ತಲೋಹಗತಾಗ್ನಿಯಂದದಿ ।**
**ಸಪ್ತಸಾಮಗನಿಪ್ಪನನ್ನಮಯಾದಿಕೋಶದೊಳು ॥**
**ಲಿಪ್ತನಾಗದೆ ತತ್ತದಾಹ್ವಯ ।**
**ಕ್ಲ್ ಪ್ತಭೋಗವ ಕೊಡುತ ಸ್ವಪ್ನ ಸು ।**
**ಷುಪ್ತಿ ಜಾಗ್ರತಿಯೀವ ತೈಜಸ ಪ್ರಾಜ್ಞ ವಿಶ್ವಾಖ್ಯ ॥ ೨೮ ॥**

ಇನ್ನೂ ಸಪ್ತಧಾತುಗಳ ವಿಚಾರವೇ ಹೇಳತಾರೆ.

ಸಪ್ತಸಾಮಗ–ಪೂರ್ವೋಕ್ತ ಸಪ್ತಕಾಲನಾಮಕ ನಿಧನಾದಿ ಏಳು ಭಗವದ್ರೂಪಗಳು, ಸಪ್ತಧಾತುಗಳ–ಸ್ಥೂಲದೇಹಗತ ತ್ವಗಾದಿ ಏಳು ಧಾತುಗಳ, ಒಳಹೊರಗೆ–ಅಂತರ್ಬಹಿಯಲ್ಲಿ, ಸಂತಪ್ತಲೋಹಗತ–ಛಂದಾಗಿ ಅಗ್ನಿಯಲ್ಲಿ ಕಾಸಲ್ಪಟ್ಟ ಕಬ್ಬಿಣಗತ, ಅಗ್ನಿಯಂದದಿ–ಅಗ್ನಿಯೋಪಾದಿಯಲ್ಲಿ, ಇಪ್ಪನು–ಇರೋವನಾಗಿದ್ದಾನೆ. ಅನ್ನಮಯಾದಿ ಕೋಶದೊಳು–ಅನ್ನಮಯಾದಿ ಐದು ಕೋಶಗಳು ಸಪ್ತಧಾತುಗಳಲ್ಲಿ ಅಂತರ್ಭೂತಗಳು. ಸಪ್ತಧಾತುಗಳ ಸಂಗಡ ಅನ್ನಮಯಾದಿ ಕೋಶದಲ್ಲೂನೂ ನಿಧನಾದಿ ಭಗವದ್ರೂಪಗಳು ವ್ಯಾಪ್ತವಾಗಿ, ತತ್ತದಾಹ್ವಯ–ಆಯಾ ಕೋಶನಾಮಗಳಿಂದ ಇದ್ದು, ಲಿಪ್ತನಾಗದೆ–ಆಯಾ ಕೋಶಗಳಿಂದಾಗಲಿ, ತತ್ತತ್ಕಾರ್ಯಗಳಿಂದಾಗಲಿ ಅವುಗಳಿಗೆ ಸಂಬಂಧಪಡದೆ, ಕ್ಲ್ಪಪ್ತಭೋಗವ ಕೊಡುತ–ಆಯಾ ಜನ್ಮದಲ್ಲಿ ಆಯಾ ದೇಹದಿಂದ ಪೂರ್ವಕರ್ಮವನನುಸರಿಸಿ ಕ್ಲ್ಪಪ್ತವಾಗಿ ಭೋಗಮಾಡತಕ್ಕ ಸುಖದುಃಖಾದಿ ಭೋಗಗಳು ಕೊಡುತ್ತಾ ಇರುತ್ತಾನೆ. ಇದರ ಭೋಗಾರ್ಥ, ವಿಶ್ವ–ವಿಶ್ವನಾಮಕ ಪರಮಾತ್ಮ ದಕ್ಷಿಣನೇತ್ರದಲ್ಲಿ ಇದ್ದು, ಜಾಗ್ರತಿ–ಜಾಗ್ರದವಸ್ಥಾವನ್ನೀನು, ತೈಜಸ ಸ್ವಪ್ನ–ತೈಜಸನಾಮಕನು ಕಂಠದೇಶಗತನಾಗಿ ಸ್ವಪ್ನಾವಸ್ಥಾವನ್ನೀನು, ಪ್ರಾಜ್ಞ ಸುಷುಪ್ತಿ–ಪ್ರಾಜ್ಞನಾಮಕನು ಹೃದಯಸ್ಥನಾಗಿ ನಿದ್ರಾವಸ್ಥಾವನ್ನೀನು, ಆಖ್ಯ–ಈ ಮೂರು ರೂಪಗಳಿಂದ ಪ್ರಸಿದ್ಧನಾಗಿ, ಈವ–ಈ ಅವಸ್ಥಾತ್ರಯಗಳ, ಗುಣತ್ರಯಗಳ ದ್ವಾರಾ ಐದಿಸತಾನೆ ಎಂತ ತಾತ್ಪರ್ಯ, ಅಂದರೆ ಅರ್ಥ.

**ತೀವಿಕೊಂಡಿಹವಲ್ಲಿ ಮಜ್ಜ ಕ ।**
**ಳೇವರದಿ ಅಂಗುಲಿಯ ಪರ್ವದ ।**
**ಠಾವಿನಲಿ ಮುನ್ನೂರುಅರುವತ್ತೆನಿಪ ತ್ರಿಸ್ಥಳದಿ ॥**
**ಸಾವಿರದ ಎಂಭತ್ತು ರೂಪವ ।**
**ಕೋವಿದರು ಪೇಳುವರು ದೇಹದಿ ।**
**ದೇವತೆಗಳೊಡಗೂಡಿ ಕ್ರೀಡಿಸುವನು ರಮಾರಮಣ ॥ ೨೯ ॥**

ಅವಶಿಷ್ಟ ಸ್ಥೂಲದೇಹದ ವಿಚಾರ ಹೇಳತಾರೆ.

ಕಳೇವರದಿ–ಈ ಸ್ಥೂಲದೇಹದಲ್ಲಿ, ಮುನ್ನೂರುಅರುವತ್ತೆನಿಸ–೩೬೦ ಎಂತ ಅನಿಸ ತಕ್ಕ ಅಸ್ಥಿಗಳು ಸ್ಥೂಲಸೂಕ್ಷ್ಮಗಳಾಗಿ ಇರೋದಾಗಿ ಅವೆ. ಮಜ್ಜ–೬ನೇದಾದ ಮಜ್ಜ ಸಾಂಕೇತವಾದ ಧಾತು. ಅಲ್ಲಿ–ಆಯಾ ಅಸ್ಥಿಗಳಲ್ಲಿ, ತೀವಿಕೊಂಡಿಹವು–ಹತ್ತಿಕೊಂಡಿ ಹವು. ಅಂಗುಳಿಯ ಪರ್ವದ–ಬೆರಳುಗಳ ಕೀಲುಗಳು ಅವಕ್ಕೆ ಅನುಸರಿಸಿದ ಎಲುಬುಗಳು ದಾವ ರೀತ್ಯಾ ಅವೋ ಅದೇ ಪ್ರಕಾರ ದೃಶ್ಯಾದೃಶ್ಯಗಳಾಗಿ ಕೀಲುಗಳು ಎಲುಬುಗಳು ಅವೆ. ತಾವಿನಲಿ–ಮೂನ್ನೂರಅರುವತ್ತೆನಿಸ ಕೀಲುಗಳ ಸ್ಥಳದಲ್ಲಿ, ತ್ರಿಸ್ಥಳದಿ–ಮೂರು ಸ್ಥಾನದಿ ಅಂದರೆ ಕೀಲು ಒಂದು, ಕೀಲುಗಳಿಗೆ ಉಭಯಪಾರ್ಶ್ವಗತ ಎಲುಬುಗಳು ಎರಡು, ಅಂತೂ ಮೂರು. ಈ ಪ್ರಕಾರ ಒಂದೊಂದು ಕೀಲಿಗೆ ಪೂರ್ವ ಪರ ಮಧ್ಯ ಇರತಕ್ಕ ಮೂರು ಸ್ಥಳಗಳಲ್ಲಿ ಮಜ್ಜನಾಮಕ ಧಾತು ಲೇಪವಾಗಿ ಜಿಡ್ಡಿನಿಂದ ಯುಕ್ತವಾಗಿ ಅದೆ. ಭಂಡಿಚಕ್ರಕ್ಕೆ ಕಂದಣಿ ಎನತಕ್ಕ ಎಣ್ಣೆ (ಕೀಲೆಣ್ಣೆ) ಹ್ಯಾಂಗಿರಬೇಕೋ ಹಾಂಗೆ ಅದೆ. ಸಾವಿರದ ಎಂಭತ್ತು ರೂಪವ–ಮುನ್ನೂರ ಅರುವತ್ತಕ್ಕೆ ಒಂದೊಂದಕ್ಕೆ ಮೂರು ಮೂರು ಸ್ಥಾನದ ಮೇರೆಗೆ (೩೬೦ × ೩ = ೧೦೮೦) ಸಾವಿರದ ಎಂಭತ್ತು ಆಗತದೆ. ಇಷ್ಟು ಭಗವ ದ್ರೂಪಗಳು, ಕೋವಿದರು–ಜ್ಞಾನಿಗಳಾದವರು, ಈ ರೂಪಗಳನ್ನು, ದೇಹದಿ–ಈ ದೇಹ ದಲ್ಲಿ, ದೇವತೆಗಳ ಒಡಗೂಡಿ–ದೇವತೆಗಳ ಸಂಗಡ ಕೂಡಿಕೊಂಡು, ಇಹವೆಂದು, ಪೇಳು ವರು–ಹೇಳೋವರಾಗತಾರೆ. (ಈ ಪ್ರಕಾರ ಇದ್ದುಕೊಂಡು), ರಮಾರಮಣ–ಲಕ್ಷ್ಮೀಪತಿ ಯಾದ ನಾರಾಯಣದೇವರು, ಕ್ರೀಡಿಸುವನು–ಆಯಾ ಸ್ಥಾನಗಳಲ್ಲಿ ಇದ್ದು, ಆಟಗಳ ಆಡೋವನಾಗಿ ಇದ್ದಾನೆ. ಈ ರೂಪಗಳು ದಾವವೆಂದರೆ ಅಸ್ಥಿಗತ ಉಪದ್ರವನಾಮಕ ನಾಮಸಾಂಕೇತ ಭಗವದ್ರೂಪಗಳ ಅಂಶಗಳೆಂದು ತಾತ್ಪರ್ಯ. ಮತ್ತು ಮುನ್ನೂರ ಅರುವತ್ತು ದಿನಗಳಿಗೆ ಅಭಿಮಾನಿಗಳಾದ ದೇವತೆಗಳು ತದಂತರ್ಗತ ಭಗವದ್ರೂಪ ಗಳೆಂತಲೂ ತಾತ್ಪರ್ಯ.

**ಕೀಟ ಪೇಶಸ್ಕಾರ ನೆನವಿಲಿ ।**
**ಕೀಟಭಾವವ ತೊರೆದು ತದ್ವತ್ ।**
**ಖೇಟರೂಪವನೈದಿಯಾಡುವ ತೆರದಿ ಭಕುತಿಯಲಿ ॥**
**ಕೈಟಭಾರಿಯ ಧ್ಯಾನದಿಂದ ಭ ।**
**ವಾಟವಿಯನತಿಶೀಘ್ರದಿಂದಲಿ ।**
**ದಾಟಿ ಸಾರೂಪ್ಯವನು ಐದುವರಲ್ಪಜೀವಿಗಳು ॥ ೩೦ ॥**

ಶ್ರೀಪರಮಾತ್ಮನಲ್ಲಿ ಅಚಂಚಲಭಕ್ತಿ ಮಾಡಿದರೆ ಸಂಸಾರದುಃಖದಿಂದ ಮುಕ್ತನಾಗ ತಾನೆ ಎಂತ ಹೇಳತಾರೆ.

ಕೀಟ–ರೆಕ್ಕೆ ಇಲ್ಲದ ಸಣ್ಣಸಣ್ಣದಾದ ಹಸುರು ಹುಳುವು ಅಂದರೆ ಶಾಮನಾಮಕ ಅವರೇಹುಳುವು, ಇದರನ್ನ, ಪ–ಮತ್ತೊಂದು ರೆಕ್ಕೆಯುಕ್ತವಾದ ಹುಳುವು ವೃತ್ತಿಕಾದಿಂದ

ಆಲಯು ಷಣ್ಣದಾಗಿ ನಿರ್ಮಾಣಮಾಡಿ ಅದರಲ್ಲಿ ಇಟ್ಟು ಕೀಟದೇಹವನೆ ಹೋಗಲಾಡಿಸಿ ಅನ್ಯವಾದ ಪಖ(ರೆಕ್ಕೆ)ಯುಕ್ತವಾದ ತನ್ನ ಸದೃಶವಾದ ದೇಹಯುಕ್ತವನ್ನಾಗಿ ಮಾಡಿ ಸಂರಕ್ಷಣೆ ಮಾಡತದೆ. ಆ ಆಲಯಗತ ಪಖರಹಿತ ಕಣಜಹುಳು, ಯಶಸ್ಕಾರ–ತನ್ನ ಯಶಸ್ಸನ್ನು ಚಿಂತಿಸತಕ್ಕ, ತನ್ನ ತಂದುಬಿಟ್ಟ ಪಖಸಹಿತವಾದ ಪೂರ್ವೋಕ್ತ ಅವರೇ ಹುಳುವು, ನೆನವಿಲಿ–ಸದಾ ಅದರ ಜ್ಞಾಪಕದಿಂದಲೇ ಇರುತ್ತದೆ. ಅನ್ಯಜ್ಞಾಪಕದಿಂದ ಇರೋದಿಲ್ಲ. ಈ ಪ್ರಕಾರ ಜ್ಞಾಪಕದಿಂದ ಇರೋಣದರಿಂದ, ಕೀಟಭಾವವ ತೊರೆದು–ಪೂರ್ವದಲ್ಲಿ ಪಖಸಹಿತವಾದ ಕೀಟಭಾವದಿಂದ ಇರತಕ್ಕ ತನ್ನ ಕೀಟಸ್ವಭಾವವನ್ನು ಅಂದರೆ ಕೀಟಸ್ವಭಾವದ ದೇಹವನ್ನು ಬಿಟ್ಟು, ತದ್ವತ್ ತನ್ನ ತಂದಿಟ್ಟ ರೆಕ್ಕೆಯುಕ್ತವಾದ, ಖೇಟ–ಆಕಾಶದಲ್ಲಿ ಸಂಚರಿಸತಕ್ಕ ಹುಳುವು ದಾವದದೆ ಅದರ, ರೂಪವನೈದಿ–ರೂಪದೋಪಾದಿಯಲ್ಲಿ ಪಖಯುಕ್ತವಾದ ರೂಪವನ್ನು ಹೊಂದಿ ಆಡುವ ತೆರದಿ–ತಾನೂನೂ ಖೇಟನಾಮದಿಂದ ಕರಿಸಿ, ಅದರೋಪಾದಿಯಲಿ ಪಖಗಳಿಂದ ಆಕಾಶಮಾರ್ಗದಲ್ಲಿ ಆಡೋದಾಗತದೆ. ಇದರೋಪಾದಿಯಲ್ಲಿ (ಖೇಟಸದೃಶನಾದ ಪರಮಾತ್ಮ, ಕೀಟಸದೃಶ ಜೀವ), ಕೈಟಭಾರಿಯ–ಕೈಟಭನಾಮಕ ದೈತ್ಯಗೆ ಶತ್ರುವಾದ ಬಿಂಬರೂಪಿ ಪರಮಾತ್ಮನ ಧ್ಯಾನದಿಂದ–ಕೀಟದೋಪಾದಿಯಲ್ಲಿ ಸದಾ ತದೇಕಧ್ಯಾನ ಮಾಡೋಣದರಿಂದ, ಭವಾಟವಿಯ–ಅಹಂಮಮತಾಖ್ಯ ಸಂಸಾರ ಅಡವಿಯನ್ನು ಆದಿಯಲ್ಲಿ ದಾಟಿ ನಂತರ ಅದಕ್ಕೆ ಕಾರಣವಾದ ಲಿಂಗದೇಹಾಖ್ಯ ಅಡವಿಯನ್ನು ವಿರಜಾಸ್ನಾನದಿಂದ, ಅತಿಶೀಘ್ರದಿಂದಲಿ ದಾಟೆ–ಬ್ಯಾಗ ದಾಟಿದವನಾಗಿ, ಅಲ್ಪ–ಸಾಯುಜ್ಯಾದಿಗಳಿಗಿಂತ ಅಲ್ಪವಾದ, ಸಾರೂಪ್ಯ–ಸಾರೂಪ್ಯಮುಕ್ತಿಯನ್ನು, ಜೀವಿಗಳು–ಕೆಲವು ಪ್ರಾಣಿಗಳು, ಐದುವರು–ಹೊಂದೋವರಾಗತಾರೆ.

**ತಾ||** ಈ ದೃಷ್ಟಾಂತ ಸರ್ವಸಾಮ್ಯವಲ್ಲ. ಶ್ರೀಪರಮಾತ್ಮನಲ್ಲಿ ತದೇಕನಿಷ್ಠನಾಗಿ ಧ್ಯಾನರತನಾಗಿ ಇರಬೇಕೆಂಬೋದಕ್ಕೆ ದೃಷ್ಟಾಂತ. ಇದರಿಂದ ಅವರವರು ಲಿಂಗಭಂಗ ಐದಿ ಸಾರೂಪ್ಯ ಎಂದರೆ ಅವರವರ ಜೀವಾಕಾರವಾದ ಬಿಂಬರೂಪ ದಾವದದೆ ಆ ರೂಪವನ್ನ ಅಪರೋಕ್ಷದಿಂದ ಐದತಾರೆ. ಸಾರೂಪ್ಯ ಎಂದರೆ ಸಮಾನರೂಪ. ಇಲ್ಲಿ ಸಮಾನರೂಪ ದಾವದೆಂದರೆ ಜೀವನ ಆಕಾರಕ್ಕೆ ಸಮಾನವಾದ ರೂಪ ಬಿಂಬರೂಪ. ಇದರ ಅಪರೋಕ್ಷವಾಗತದೆ.

**ವಿಶೇಷಾರ್ಥ :–** ಪ್ರಮಾಣ :– " ಕೀಟಃ ಪೇಶಸ್ಕೃತಾ ರುದ್ಧಃ ಕುಡ್ಯಾಯಾಂ ತಮನುಸ್ಮರನ್ | ಸಂರಂಭಭಯಯೋಗೇನ ವಿಂದತೇ ತತ್ಸರೂಪತಾಂ || ಏವಂ ಕೃಷ್ಣೇ ಭಗವತಿ ಮಾಯಾಮನುಜ ಈಶ್ವರೇ | ವೈರೇಣ ಧೂತಪಾಪ್ಮಾನಸ್ತಮಾಪುರನುಚಿಂತಯಾ || " ಇತಿ ಭಾಗವತೇ ೭–೧–೨೭, ೨೮.

**ಈ ಪರಿಯ ದೇಹದೊಳು ಭಗವ |**
**ದ್ರೂಪಗಳ ಮರಿಯದಲೆ ಮನದಿ ಪ |**
**ದೇಪದೇ ಭಕುತಿಯಲಿ ಸ್ಮರಿಸುತಲಿಪ್ಪ ಭಕುತರನು ||**

**ಗೋಪತಿ ಜಗನ್ನಾಥವಿಠಲ ಸ |**
**ಮೀಪಗನು ತಾನಾಗಿ ಸಂತತ |**
**ಸಾಪರೋಕ್ಷಿಯ ಮಾಡಿ ಪೊರೆವನು ಎಲ್ಲ ಕಾಲದಲಿ || ೩೧ ||**

ಈ ಪೂರ್ವೋಕ್ತ ಚಿಂತನಾದಿಂದಲೇ ಅಪರೋಕ್ಷವೆಂದು ಹೇಳುತಾರೆ.

ಈ ಪರಿಯ—ಈ ಪೂರ್ವೋಕ್ತ ಪ್ರಕಾರ, ಎಲ್ಲ ಕಾಲದಿ—ಸರ್ವ ಕಾಲದಲ್ಲೂ, ದೇಹ ದೊಳು—ಸ್ಥೂಲಾದಿ ದೇಹಗಳಲ್ಲಿ ಇರತಕ್ಕ, ಭಗವದ್ರೂಪಗಳ—ಅನೇಕವಾಗಿ ಹೇಳಿರುವ ಭಗವದ್ರೂಪಗಳನ್ನು, ಮರಿಯದಲೆ—ದೇಹೇಂದ್ರಿಯಾದಿಗಳಿಂದ ನಡೆಯುವ ಶುಭಾಶುಭ ಕರ್ಮಗತ ಭಗವದ್ರೂಪಗಳ ವ್ಯಾಪಾರಗಳ ಮರಿಯದ ಹಾಂಗೆ, ಮನದಿ—ಮನಸ್ಸಿನಲ್ಲಿ, ಪದೇ ಪದೇ—ಬಾರಿಬಾರಿಗೂ, ಭಕುತಿಯಲಿ—ಕೇವಲ ಭಕ್ತಿಯಿಂದ, ಸ್ಮರಿಸುತಲಿಪ್ಪ—ಸ್ಮರಣೆ ಮಾಡುತಾ ಇರತಕ್ಕ. ಭಕುತರನು—ಭಗವದ್ಭಕ್ತರನ್ನು, ಗೋಪತಿ—ಅನಂತ ವೇದಗಳಿಂದ ಪ್ರತಿಪಾದ್ಯನಾದ, ಜಗನ್ನಾಥವಿಠ್ಠಲ—ವಿಠಲರೂಪಿಯಾದ ಶ್ರೀನಾರಾಯಣದೇವರು, ಸಮೀಪಗನು ತಾನಾಗಿ—ತನ್ನ ಇಚ್ಛಾದಿಂದ ತಾನೇ ಹೃದಯಾಕಾಶದಲ್ಲಿ ಅಪರೋಕ್ಷಕ್ಕೆ ಸಮೀಪಗನಾಗಿ, ಸಂತತ—ನಿರಂತರ ವಾಸನಾರೂಪವ ಧ್ಯಾನಮಾಡತಕ್ಕ ಅಧಿಕಾರಿ ಗಳಿಗೆ, ಸಾಪರೋಕ್ಷಿಯ ಮಾಡಿ—ವಾಸನಾರೂಪನ್ನ ದೂರಮಾಡಿ ನಿಜರೂಪವಾದ ತನ್ನ ಅಪರೋಕ್ಷದಿಂದ ಸಹಿತನನ್ನಾಗಿ ಮಾಡಿ, ಪೊರೆವನು—ಲಿಂಗಭಂಗ ಐದಿಸಿ ಸ್ವರೂಪಾನಂದ ವ್ಯಕ್ತಮಾಡಿ ಮೋಕ್ಷಸ್ಥಾನದಲ್ಲಿ ಇಟ್ಟು ಕಾಪಾಡುತ್ತಾನೆಂತ ತಾತ್ಪರ್ಯ.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ಉದಾತ್ತಾನುದಾತ್ತಸಂಧಿವ್ಯಾಖ್ಯಾನಂ ಸಂಪೂರ್ಣಂ**

|| ಶ್ರೀ ಕೃಷ್ಣಾರ್ಪಣಮಸ್ತು ||

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಹತ್ತನೆಯ ಸಂಧಿ

## ಸರ್ವಪ್ರತೀಕ ಸಂಧಿ

( ಸರ್ವಸಮರ್ಪಣ ಸಂಧಿ )

**ಅವತಾರಿಕಾ :–** ಹಿಂದಿನ ಸಂಧಿಯಲ್ಲಿ ಅಧಿಕಾರಿಯಾದವ ತೀರ್ಥಕ್ಷೇತ್ರಾದಿಗಳಲ್ಲಿ ಸಂಚಾರ ಮಾಡೋಕಾಲಕ್ಕೆ ಶ್ರೀಪರಮಾತ್ಮನ ಅನುಸಂಧಾನಯುಕ್ತನಾಗಿ ಸಂಚಾರ ಮಾಡಬೇಕೆಂತ ಹೇಳಿದ ವಿಚಾರ ಈ ಸಂಧಿಯಲ್ಲಿ ಹೇಳತಾರೆ.

**ಹರಿಕಥಾಮೃತಸಾರ ಗುರುಗಳ |**
**ಕರುಣದಿಂದಾಪನಿತು ಪೇಳುವೆ |**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು || ಪ ||**

**ಮೂಲ :**

**ಆವ ಪರಬೊಮ್ಮನತಿವಿಮಲಾಂ |**
**ಗಾವ ಬದ್ಧರು ಎಂದೆನಿಪ ರಾ |**
**ಜೀವಭವ ಮೊದಲಾದಮರರನುದಿನದಿ ಹರಿಪದವ ||**
**ಸೇವಿಪರಿಗನುಕೂಲರಲ್ಲದೆ |**
**ತಾವು ಇವರನ ಕೆಡಿಸಬಲ್ಲರೆ |**
**ಶ್ರೀವಿಲಾಸಾಸ್ಪದನ ದಾಸರಿಗುಂಟೆ ಅಪಜಯವು || ೧ ||**

**ಟೀಕಾ :**

ಶ್ರೀಪರಮಾತ್ಮನ ಭಕ್ತರಿಗೆ ಎಂದಿಗೂ ಅಪಜಯವಿಲ್ಲ ಎಂತ ಹೇಳತಾರೆ.

ಅತಿವಿಮಲ–ಅತ್ಯಂತವಾಗಿ ನಿರ್ದೋಷನಾದ ಶುಭ್ರವರ್ಣವಿಶಿಷ್ಟನಾಗಿ, ಆವ–ವೈಕುಂಠಸ್ಥಾನದಲ್ಲಿ ದಾವನು ಇರುವನೋ ಅಂಥಾ, ಪರಬೊಮ್ಮನ–ಗುಣಪೂರ್ಣನಾದ ನಾರಾಯಣಾಭಿನ್ನನಾದ ವಾಸುದೇವನ, ಅಂಗಾವ–ಶರೀರವೇನು, ಉಪಾಂಗವಾದ ಅವಯವಗಳೇನು, ಇವುಗಳಲ್ಲಿ, ಬದ್ಧರು–ತಮ್ಮ ತಮ್ಮ ಯೋಗ್ಯತಾನುಸಾರ ಅವರವರ ಸ್ಥಾನಗಳಲ್ಲಿ ಲಿಂಗಭಂಗಾನಂತರ ಅಂಗಸಾಯುಜ್ಯ, ಸರ್ವಾಂಗಸಾಯುಜ್ಯ ಭೋಗಿಸತಕ್ಕವರು, ಎಂದೆನಿಪ–ಎಂತ ಕರಿಸತಕ್ಕ, ರಾಜೀವಭವ–ಪದ್ಮಸೃಷ್ಟಿಕಾಲದಲ್ಲಿ ಶ್ರೀಪರಮಾತ್ಮನಾದ ಪದ್ಮನಾಭದೇವರ ನಾಭೀಪದ್ಮನಾಳದಿಂದ ಉತ್ಪನ್ನನಾದ ಬ್ರಹ್ಮದೇವರೇ, ಮೊದಲಾದಮರರನು–ಮೊದಲಾದ ಚತುರ್ವಿಂಶತಿ ತತ್ವಾಭಿಮಾನಿ ದೇವತೆಗಳು, ಅನು

ದಿನದಿ–ಪ್ರತಿದಿನದಲ್ಲೂ, ಹರಿಪದವ–ಹೃದಯಗತ ಬಿಂಬನಾದ ಪರಮಾತ್ಮನ ದರ್ಶನಾಪೇಕ್ಷಿತರಾಗಿ ವಾಸನಾಪ್ರತೀಕವನ್ನ ಹೃದಯದಲ್ಲಿ ಸಿಲ್ಲಿಸಿ, ತದಂತರ್ಗತ ಶ್ರೀಪರಮಾತ್ಮನ ಅನುಸಂಧಾನ ಮಾಡಿ ಆ ರೂಪದ ಪಾದದ್ವಯಗಳನ್ನು, ಸೇವಿಪರಿಗೆ–ಮಾನಸನಿರ್ಮಿತ ಪೂಜಾದ್ರವ್ಯಗಳಲ್ಲಿ ಅಂತರ್ಗತ ಪರಮಾತ್ಮನ್ನ ಚಿಂತಿಸಿ ಪ್ರತಿಮಾಂತರ್ಗತ, ಪೂಜಾ ಸಾಧನಾಂತರ್ಗತ ಭಗವದ್ರೂಪಗಳ ಪರಸ್ಪರ ಐಕ್ಯ ಚಿಂತಿಸುತ್ತಾ ಮಾನಸನಿರ್ಮಿತ ಪೂಜಾಸಾಧನಗಳಿಂದ ಪೂಜಾದಿಗಳ ಮಾಡುತಾ ಈ ಪ್ರಕಾರ, ಶ್ರೀದೇವರನ್ನ ಸೇವಾ ಮಾಡತಕ್ಕವರಿಗೆ, ತಾವು–ತತ್ವಾಭಿಮಾನಿಗಳಾದ ತಾವು, ಅನುಕೂಲರಲ್ಲದೆ-ಸರ್ವ ವಿಷಯದಿಂದಲೂ ಅನುಕೂಲರೇ ಹೊರ್ತು, ಪ್ರತಿಕೂಲರಲ್ಲ. ಭಗವದಾಜ್ಞಾದಿಂದ ಪ್ರತಿಕೂಲವಾದ ಅಜ್ಞಾನಾದಿಗಳು ಕೊಡದೇ, ಇವರ ಕೆಡಿಸಬಲ್ಲರೆ–ದೇಹಗತ ತತ್ವಾಭಿಮಾನಿ ಅಸುರರೇನು, ಬಾಹ್ಯಗತ ಅಸುರರೇನು, ಇಂಥಾ ಭಕ್ತಿಯುಕ್ತರಾದ ಅಧಿಕಾರಿಗಳ ಕೆಡಿಸೋದಕ್ಕೆ ಬಲ್ಲರೆ ಎಂದರೆ, ಅರಿಯರು. ಎಂದರೆ ಎಂದಿಗೂ ಸಾಧ್ಯವಿಲ್ಲ. ಕೆಡಿಸೋದಕ್ಕೆ ಸಮರ್ಥರಾಗಲಾರರು, ಶ್ರೀವಿಲಾಸಾಸ್ಪದನ–ಲೀಲಾವಿನೋದದಿಂದ ಆಟಗಳ ಆಡೋದಕ್ಕೆ ಶ್ರೀಲಕ್ಷ್ಮೀದೇವೇರೇ ಆಸ್ಪದನಾದ ಪರಮಾತ್ಮನ, ದಾಸರಿಗೆ–ಭೃತ್ಯರಾದ ಭಗವದ್ದಾಸರಿಗೆ, ಅಪಜಯವು–ಅಪಜಯವೆಂಬುದು, ಉಂಟೇ–ಉಂಟೇ ಅಂದರೆ, ಶುದ್ಧವಾಗಿ ಇಲ್ಲ ಎಂತ ತಿಳಿಯಬೇಕು.

**ತಾ||** ಶ್ರೀಪರಮಾತ್ಮನಲ್ಲಿ ಕೇವಲ ಏಕಾಂತಭಕ್ತಿ ಮಾಡುವ ಭಗವದ್ಭಕ್ತರಿಗೆ, ದೇವತೆಗಳು ಯಾವತ್ತೂ ಅನುಕೂಲರಾಗಿನ್ನೂ, ದೈತ್ಯರ ಬಾಧಾ ಇಲ್ಲಧಾಂಗೂನೂ ಇದ್ದು, ಸರ್ವತ್ರ ಜಯ ಹೊಂದಿ, ಸುಖಿತರಾಗಿ ಇರುತ್ತಾರೆ ಎಂತ ತಾತ್ಪರ್ಯ.

**ಶ್ರೀದನಂಘ್ರಿಸರೋಜಯುಗಳೇ ।**
**ಕಾದಶಸ್ಥಾನಾತ್ಮದೊಳಗಿ ।**
**ಟ್ಟಾದರದಿ ಸಂತುತಿಸುವವರಿಗೆ ಈ ನವಗ್ರಹವು ॥**
**ಆದಿತೇಯರು ಸಂತತಾದಿ ।**
**ವ್ಯಾಧಿಗಳ ಪರಿಹರಿಸುತವರನು ।**
**ಕಾದುಕೊಂಡಿಹರೆಲ್ಲರೊಂದಾಗೀಶನಾಜ್ಞೆಯಲಿ ॥ ೨ ॥**

ಇನ್ನೂ ಅಂಥಾ ಪೂರ್ವೋಕ್ತ ಭಕ್ತರನ್ನು ಭಗವದಾಜ್ಞಾದಿಂದ ದೇವತೆಗಳು ಸಂರಕ್ಷಿಸುತ್ತಾರೆ ಅಂತ ಹೇಳತಾರೆ.

ಶ್ರೀದನ–ಜ್ಞಾನ ಭಕ್ತಿ ವೈರಾಗ್ಯಗಳೆಂಬ ಐಶ್ವರ್ಯವೇನು, ತದ್ದ್ವಾರಾ ಜನನ ಮರಣಾದಿಗಳಿಂದ ರಹಿತರನ್ನಾಗಿ ಮಾಡಿ, ಸ್ವರೂಪಾನಂದವ್ಯಕ್ತಿರೂಪವಾದ ಐಶ್ವರ್ಯವೇನು, ಇನ್ನೂ ನಶ್ವರವಾದ ಪ್ರಾಕೃತ ಧನಧಾನ್ಯಾದಿ ಐಶ್ವರ್ಯವೇನು, ಇವುಗಳನ್ನು ಕೊಡತಕ್ಕ ಶ್ರೀಪರಮಾತ್ಮನ, ಅಂಘ್ರಿಸರೋಜಯುಗಳ–ಪಾದದ್ವಯಗಳೆಂಬ ಕಮಲಗಳ,

ಏಕಾದಶ–ಹನ್ನೊಂದನೇ ಇಂದ್ರಿಯವಾದ, ಸ್ಥಾನ–ಮನಸ್ಸು, ಇದಕ್ಕೆ ಸ್ಥಾನಭೂತ ವಾದದ್ದು, ಹೃದಯಗೋಳಕದೊಳಗೆ–ಅಷ್ಟದಳ ಕಮಲದೊಳಗೆ ಆತ್ಮನಾಮಕ ಬಿಂಬ ರೂಪಿ ಪರಮಾತ್ಮ ಇದ್ದಾನೆ. ಇವನ್ನ ತಿಳಿದು ಇವನ ಅಪರೋಕ್ಷಾರ್ಥವಾಗಿ, ಇಟ್ಟು–ವಾಸನಾರೂಪವಾದ ಅಷ್ಟದಳಕಮಲದಲ್ಲಿ, ತನಗೆ ಇಷ್ಟವಾದ ವಾಸನಾಮಯರೂಪವಾದ ಒಂದು ಪ್ರತಿಮಾವನ್ನ ಮನೋನುಸಂಧಾನದಿಂದ ಇಟ್ಟು, ಅಂತರ್ಗತ ತಿಳಿದು, ಅವನ ಜ್ಞಾನಾನಂದಾದಿಗಳನ್ನು ವಿಚಾರಮಾಡುತಾ, ಆ ಪ್ರತಿಮಾ ಪಾದದಲ್ಲಿ ಅಚಂಚಲವಾದ ಮನಸ್ಸು ಇಟ್ಟು, ಆದರದಿ–ಅತ್ಯಂತ ಆದರೋಪಚಾರದಿಂದ, ಸಂತುತಿಸುವವರಿಗೆ–ಛಂದಾಗಿ ಸ್ತೋತ್ರಮಾಡತಕ್ಕವರಿಗೆ, ಈ ಆದಿತೇಯರು–ಈ ಸ್ಥೂಲದೇಹಗತ ತತ್ವೇಶ ರಾದ ದೇವತೆಗಳು, ನವಗ್ರಹ–ಸೂರ್ಯಚಂದ್ರಾದಿ ನವಗ್ರಹದೇವತೆಗಳು, ಸಂತತ–ನಿರಂತರ ಶ್ರೀಪರಮಾತ್ಮನ ಸ್ಮೃತಿಯುಕ್ತರಾದ ಬಿಂಬಕ್ರಿಯಾ ತಿಳಿಯತಕ್ಕ ಅಧಿಕಾರಿ ಗಳಿಗೆ, ಆಧಿ–ಮನೋವ್ಯಸನರೂಪವಾದ ರೋಗ, ಅಹಂ ಎಂಬ ರೋಗ, ವ್ಯಾಧಿಗಳ–ಜ್ವರಾದಿ ರೋಗಗಳು ಮತ್ತು ಮಮ ಎಂಬ ರೋಗ (ಇವುಗಳ), ಪರಿಹರಿಸುತ–ಕ್ರಮೇಣ ಪರಿಹಾರ ಮಾಡುತ್ತಾ (ಅಧಿಕಾರಿಗಳನ್ನ), ಈಶನಾಜ್ಞೆಯಲಿ–ಪರಮಾತ್ಮನ ಆಜ್ಞಾದಿಂದ ಕೊಡದೇ, ಎಲ್ಲರೊಂದಾಗಿ–ಸರ್ವತತ್ವದೇವತೆಗಳೂ ಏಕಪ್ರಕಾರ ಆಯಾ ಇಂದ್ರಿಯ ಗಳಿಂದ ಭಗವತ್ಪ್ರೀತಿಕರವಾದ ವ್ಯಾಪಾರ ಮಾಡಿಸೋ ವಿಷಯದಲ್ಲಿ ಒಂದೇ ಮನಸ್ಸುಳ್ಳವ ರಾಗಿ, ಕಾದುಕೊಂಡಿಹರು–ಅವರವರ ತತ್ವಗಳಲ್ಲಿ ಅವರವರು ಕಾದುಕೊಂಡಿರುತ್ತಾರೆ. (ಇನ್ನೂ ಬಹಿಃ–ಹೊರಗಡೆ ದಾವ ವಿಧವಾದ ಬಾಧಕಗಳೂ ಬಾರದಂತೆ ಕಾದುಕೊಂಡಿರು ತ್ತಾರೆ.)

**ತಾ||** ಮುಖ್ಯವಾಗಿ ಭಗವದ್ಭಕ್ತರಿಗೆ ಸರ್ವದೇವತೆಗಳೂನೂ ಭಗವದ್ಭಕ್ತರೂನೂ ಅನುಕೂಲರಾಗಿ ಇರತಾರೆ. ನವಗ್ರಹದೇವತೆಗಳಲ್ಲಿ ಸೂರ್ಯಚಂದ್ರಾದಿಗಳು ಇದ್ದರೂನೂ ಸ್ಥಾನಭೇದದಿಂದ ಫಲಭೇದಗಳ ಕೊಡುತ್ತಾರಾದ್ದರಿಂದ, ಪುನರುಕ್ತಿ ಪ್ರಯೋಗ ಇವ ರೂನೂ ತತ್ವೇಶರಲ್ಲಿ ಸೇರಿ ಇರುತ್ತಾರಾದ್ದರಿಂದ.

**ಮೇದಿನಿಯ ಮೇಲುಳ್ಳ ಗೋಷ್ಪಾ |**
**ದೋದಕಗಳೆಲ್ಲಮಲತೀರ್ಥವು |**
**ಪಾದಪಾದ್ರಿ ಧರಾತಳವೇ ಸುಕ್ಷೇತ್ರ ಜೀವಗಣ ||**
**ಶ್ರೀದನ ಪ್ರತಿಮೆಗಳು ಅವರುಂ |**
**ಚೋದನವೆ ನೈವೇದ್ಯ ನಿತ್ಯದಿ |**
**ಹಾದಿ ನಡೆವುದೆ ನರ್ತನಗಳೆಂದರಿತವನೆ ಯೋಗಿ || ೩ ||**

ಪೂರ್ವೋಕ್ತ, ಭಗವದ್ಭಕ್ತನಾದವನು ಯೋಗಿ ಎಂತಲೂ, ಅವನು ಬ್ರಹ್ಮಜ್ಞಾನಿ ಎಂತಲೂ ಹೇಳಿ, ಅವನ ಲಕ್ಷಣ ಹೇಳತಾರೆ.

ಮೇದಿನಿಯ ಮೇಲುಳ್ಳ–ಭೂಮಿಯಮ್ಯಾಲೆ ಇರತಕ್ಕದ್ದು, ಎಂದರೆ, ೧) ಮೇದಿನಿ–ಭೂಮಿಯು, ಭೂಪ್ರಾಚುರ್ಯದಿಂದ ಪಂಚಭೂತದಿಂದ ನಿರ್ಮಿತ ಶರೀರವು. ೨) ಇಂಥಾ

ಸ್ಥೂಲಶರೀರದ ಮ್ಯಾಲೆ ಇರತಕ್ಕ ರೋಮಗಳು, ಗೋಷ್ಪಾದೋದಕಗಳು–ಗೋಪಾದದ ಅಗಲ ಪರಿಮಿತಿಯಿಂದ ಇರತಕ್ಕ ಉದಕ, ಅತ್ಯಲ್ಪ ಉದಕ ಎಂತ ತಾತ್ಪರ್ಯ. ರೋಮ ಕೂಪಗಳಲ್ಲಿ ಅತ್ಯಲ್ಪವಾಗಿ ತೀರ್ಥೋದಕಗಳು ತದಭಿಮಾನಿಗಳು ಇದ್ದಾರೆ. ಎಲ್ಲಾ ಅಮಲತೀರ್ಥವು–ಇವುಗಳು ಕೇವಲ ನಿರ್ದುಷ್ಟವಾದ ತೀರ್ಥಗಳೆಂದು ತಿಳಿಯಬೇಕು. ಈ ತೀರ್ಥಗಳಲ್ಲಿ ತೀರ್ಥಾಭಿಮಾನಿಗಳ ಸಹಿತನಾಗಿ ಪರಮಾತ್ಮ ಇದ್ದಾನಾದಕಡಿಯಿಂದ, ಈ ಪರಮಾತ್ಮನ ರೋಮಕೂಪಗಳಲ್ಲಿ ಈ ತೀರ್ಥಗಳು, ತೀರ್ಥಾಭಿಮಾನಿ ದೇವತೆಗಳಿಗೆ, ಅದೇ ಸ್ಥಾನವಾಗಿ ಅದೆ. ಇವರು ಅಲ್ಲಿಂದ ಉತ್ಪತ್ತಿಯಾದವರು. ಆದ್ದರಿಂದಲೇ ದೇಹ ದಲ್ಲಿ ಅದೇ ಸ್ಥಾನದಲ್ಲೇ ಅವರಿಗೆ ಆವಾಸವೂ. ಇದೇ ರೀತ್ಯಾ ನಾಡಿಗಳಲ್ಲಿ ಮಹಾನದಿ ಗಳು, ಪಾದಪ–ವೃಕ್ಷಗಳು, ಪರಮಾತ್ಮನ ರೋಮಗಳಿಂದ ವೃಕ್ಷಗಳು, ತದಭಿಮಾನಿಗಳು ಸೃಷ್ಟಿ ಆದ್ದರಿಂದ, ರೋಮಗಳಲ್ಲಿ ವೃಕ್ಷಾಭಿಮಾನಿ ದೇವತೆಗಳು ಇದ್ದಾರೆ. ರೋಮಗಳು ವೃಕ್ಷಸಾಮ್ಯ. ಅದ್ರಿ–ಪರ್ವತಗಳು, ಶ್ರೀಪರಮಾತ್ಮನ ಅಸ್ಥಿಗಳಿಂದ ಹಿಮಾಚಲಾದಿ ಪರ್ವತಗಳು ಸೃಷ್ಟಿ ಆದ್ದರಿಂದ, ದೇಹದಲ್ಲಿ ಅಸ್ಥಿಗಳಲ್ಲಿ ಪರ್ವತ ತತ್ವಾಭಿಮಾನಿ ದೇವತೆ ಗಳು ಇದ್ದಾರೆ. ಅಸ್ಥಿಗಳು ಪರ್ವತಕ್ಕೆ ಸಾಮ್ಯ, ಧರಾತಳವೇ–ಭೂಮಿ, ಪೃಥ್ವೀ ಪ್ರಾಚುರ್ಯದಿಂದ ನಿರ್ಮಿತವಾದ ಈ ಸ್ಥೂಲದೇಹವೇ, ಸುಕ್ಷೇತ್ರ–ಪ್ರಸಿದ್ಧವಾದ ಕ್ಷೇತ್ರ. ಈ ಪ್ರಕಾರದಿಂದ ದೇಹ ಸುಕ್ಷೇತ್ರ ಎಂತ ಕರಿಸೋದಾಯಿತು. ಜೀವಗಣ–ದೇಹಗತ ನಾದ ಜೀವ, ಇಂದ್ರಿಯಾದಿಗಳು, ನಾಡಿಗಳು, ಇವುಗಳಲ್ಲಿರುವ ದೇವತೆಗಳು ಇವರುಗಳ ಸಮೂಹವೇ, ಶ್ರೀದನ–ಜ್ಞಾನಭಕ್ತ್ಯಾದಿ ಐಶ್ವರ್ಯ ಕೊಡತಕ್ಕ ಪರಮಾತ್ಮನ, ಪ್ರತಿಮೆ ಗಳು–ಕ್ಷೇತ್ರಗತ ಅಧಿಷ್ಠಾನಭೂತವಾದ ಜಡಪ್ರತಿಮಾಕ್ಕೆ, ಸದೃಶವಾದ ಚಲಪ್ರತಿಮಾ ಗಳು, ತದಂತರ್ಗತ ಶ್ರೀಪರಮಾತ್ಮನೇ ಅಧಿಷ್ಠಾನಗತ ಭಗವನ್ಮೂರ್ತಿ. ಅವರುಂಬೋದ ನವೇ–ಇಂಥಾ ಅಧಿಕಾರಿಗಳು ಭೋಜನಮಾಡತಕ್ಕ ಷಡ್ರಸೋಪೇತವಾದ ಅನ್ನಾದಿಗಳು, ನೈವೇದ್ಯ–ಕ್ಷೇತ್ರಗತ ಭಗವನ್ಮೂರ್ತಿಗೆ ನಿವೇದನ ಎಂದರೆ, ಭೋಜನದ್ರವ್ಯಾಂತರ್ಗತ ತನ್ನ ಸ್ವಾಖ್ಯ ಭೋಜನದ್ರವ್ಯಗಳ, ದೇಹಾಂತರ್ಗತರಾದ ಜೀವಗಣದಲ್ಲಿ ಇದ್ದು ಸ್ವೀಕಾರ ಮಾಡತಾನೆ. ಈ ಅನುಸಂಧಾನದಿಂದ ಭೋಜನ ದಾವದದೆ, ಇದೇವೇ ನೈವೇದ್ಯ. ನಿತ್ಯದಿ–ಪ್ರತಿದಿನದಲ್ಲೂ, ಹಾದಿ ನಡೆವುದೇ–ಪಾದವಿನ್ಯಾಸದಿಂದ ಮಾರ್ಗ ನಡಿಯೋದು, ನರ್ತನಗಳು ಎಂತ–ಶ್ರೀಪರಮಾತ್ಮನ ಎದುರಿಗೆ ನರ್ತನಮಾಡೋದು, ಅಂದರೆ ಜ್ಞಾನ ಎಂಬೋ ಮಾರ್ಗದಲ್ಲಿ ನಾನಾವಿಧ ಅನುಸಂಧಾನಯುಕ್ತವಾದ ಮನಃಪೂರ್ತಿಗಳು. ಪರಮಾತ್ಮನ ಸರ್ವತ್ರ ನೋಡತಾ, ಇತಸ್ತತಃ ಗಮನಾಗಮನಾದಿಗಳು ಮಾಡೋಣವೇ ನರ್ತನ ಎಂತಲೂ, ಮಾತುಗಳು ಯಾವತ್ತೂ ಸ್ತೋತ್ರವೆಂತಲೂ, ದೀನನಾಗಿರುವುದೇ ನಮಸ್ಕಾರವೆಂತಲೂ, ಅರಿತವನೆ–ಗುರುಗಳ ಮುಖದಿಂದ ತಿಳಿದು, ಅದರ ಅನುಷ್ಠಾನ ಮಾಡತಕ್ಕವನು ದಾವನೋ ಅವನೇ, ಯೋಗಿ–ಬ್ರಹ್ಮಜ್ಞಾನಿ ಎಂತ ಹೇಳಿಸಿಕೊಳ್ಳಲ್ಪಡ ತಾನೆ. ಇದು ಅಂತರಂಗದ ಅನುಸಂಧಾನಕ್ರಮ. ಬಾಹ್ಯ ಅನುಸಂಧಾನಕ್ರಮ ಹ್ಯಾಂಗೆಂ ದರೆ :– ಈ ಬ್ರಹ್ಮಾಂಡ ಎಂಬುವದೇ ಒಂದು ದೊಡ್ಡದಾದ ಕ್ಷೇತ್ರವೆಂತಲೂ, ಗೋಷ್ಪಾದೋ

ದಕದಂತೆ ಇರುವ ಅನೇಕ ಸರೋವರಗಳು, ಕೆರೆಗಳು, ಭಾವಿಗಳು, ಹಾಂಗೆ ಮಹಾನದಿಗಳು, ಚಿಕ್ಕನದಿಗಳು, ತೀರ್ಥಗಳು ಎಂತಲೂ, ಈ ಕ್ಷೇತ್ರಗತ ಯಾವತ್ತೂ ಜೀವರು ಚಲ ಪ್ರತಿಮಾದಿಗಳು, ತದಂತರ್ಗತ ಶ್ರೀಪರಮಾತ್ಮನೇ ಭಗವನ್ಮೂರ್ತಿ ಎಂತಲೂ, ಯಾವತ್ತೂ ಜೀವರುಗಳು ಭೋಜನಮಾಡುವುದು, ಪೂರ್ವೋಕ್ತ ಅನುಸಂಧಾನದಿಂದ ನೈವೇದ್ಯ ಎಂತಲೂ, ದಾವ ದಿಕ್ಕಿನಲ್ಲಿ ಗಮನಾಗಮನ ಮಾಡಿದ ಕಾಲಕ್ಕೂ ಆಯಾ ದಿಕ್ಕುಗಳಲ್ಲಿ ಚರಪ್ರತಿಮಾ ಅದೇ, ತದಂತರ್ಗತ ಪರಮಾತ್ಮಗೆ ನರ್ತನ ಎಂತಲೂ, ಇನ್ನೂ ಅವುಗಳಿಗೆ ಮಾಡುವ ಉಪಚಾರ ಯಾವತ್ತೂ ಪೂಜಾ ಎಂತಲೂ, ಶುದ್ಧ ಜಡಗಳೂ ಜಡಜೀವರೂ ಇವರಲ್ಲಿ ಗೋಳಕಚಿಂತನದಿಂದ ಪರಮಾತ್ಮನ ಸನ್ನಿಧಾನವಿಶೇಷ ತಿಳಿದು ಇರುವ ಅಧಿಕಾರಿಗೆ ಮಾತ್ರ ಗೋಷ್ಪಾದೋದಕ, ವೃಕ್ಷಗಳು, ಪರ್ವತಗಳು, ಧರಾತಳ ಜೀವರು, ಇವು ಯಾವತ್ತೂ ಪ್ರತಿಮಾಗಳು ಎಂತ ಕರಿಸೋದಾಯಿತೇ ಹೊರ್ತು ತದನ್ಯರಿಗೆ ಆಗೋದಿಲ್ಲ. ಭಗವದ್ಭಕ್ತನಾದವ ಅಂತಃಬಹಿಃ ಶ್ರೀ ಪರಮಾತ್ಮನ ವ್ಯಾಪ್ತಿ ಕಾಣತಾ ಇರುತ್ತಾನಾದ ಕಡಿಯಿಂದ ಅಂಥಾ ಪುರುಷಗೆ ಸರ್ವವೂ ಸಾರ್ಥಿಕ್ಯವಾಗುತದೆ ಎಂತ ತಾತ್ಪರ್ಯ.

**ಸರ್ವ ದೇಶವು ಪುಣ್ಯದೇಶವು ।**
**ಸರ್ವ ಕಾಲವು ಪುಣ್ಯಕಾಲವು ।**
**ಸರ್ವ ಜೀವರು ದಾನಪಾತ್ರರು ಮೂರು ಲೋಕದೊಳು ॥**
**ಸರ್ವ ಮಾತುಗಳೆಲ್ಲ ಮಂತ್ರವು ।**
**ಸರ್ವ ಕೆಲಸಗಳೆಲ್ಲ ಪೂಜೆಯು ।**
**ಶರ್ವವಂದ್ಯನ ವಿಮಲಮೂರ್ತಿಧ್ಯಾನವುಳ್ಳವಗೆ ॥ ೪ ॥**

ಇನ್ನೂ ಭಗವದ್ಭಕ್ತನ ಅನುಸಂಧಾನಮಹಿಮಾ ಹೇಳತಾರೆ.

ಸರ್ವ ದೇಶವು–ಪೂರ್ವೋಕ್ತ ಪ್ರಕಾರ ಅನುಸಂಧಾನಮಾಡುವ ಅಧಿಕಾರಿಗೆ ಯಾವತ್ತೂ ಸ್ಥಳಗಳು, ಪುಣ್ಯದೇಶವು–ಪುಣ್ಯಕರಗಳಾದ ಕ್ಷೇತ್ರಗಳಾಗಿನ್ನೂ, ಸರ್ವಕಾಲವು–ಮುನ್ನೂರಾಅರವತ್ತು ದಿನಗಳೂನೂ, ಪುಣ್ಯಕಾಲವು–ಒಳ್ಳೆ ದಿವಸಗಳಾಗಿನ್ನೂ, ಮೂರು ಲೋಕದೊಳು–ಈ ಚತುರ್ದಶ ಲೋಕಗಳಲ್ಲಿರುವ, ಸರ್ವಜೀವರು–ಸಮಸ್ತರಾದ ತ್ರಿವಿಧ ಪ್ರಾಣಿಗಳು, ದಾನಪಾತ್ರರು–ಸರ್ವ ಜೀವರ ಅಧಿಷ್ಠಾನದಲ್ಲಿ ಶ್ರೀಪರಮಾತ್ಮನನ್ನ ತಿಳಿದು ಅನ್ನದಾನವೇ ಮೊದಲಾದ ಆದರೋಪಚಾರಗಳು ಮಾಡತಾನಾದಕಡಿಯಿಂದ, ಸರ್ವ ಜೀವರೂನೂ ದಾನಪಾತ್ರರಾಗಿನ್ನೂ, ಸರ್ವಮಾತುಗಳೆಲ್ಲ–ವಾಚಾ ಉಚ್ಚಾರ ಮಾಡುವ ಮಾತುಗಳು ಯಾವತ್ತೂನೂ, ಮಂತ್ರವು–ವೇದೋಕ್ತಮಂತ್ರವಾದ ಸ್ತೋತ್ರಗಳಾಗಿನ್ನೂ, ಸರ್ವ ಕೆಲಸಗಳೆಲ್ಲ–ಸಮಸ್ತ ಜೀವರು ಮಾಡುವ ವ್ಯಾಪಾರಗಳು ಎಲ್ಲಾನೂ, ತಥಾ ತಾನು ಮಾಡುವ ಯಾವತ್ತೂ ಕೆಲಸಗಳೂನೂ, ಪೂಜೆಯು–ಪೂಜಾತ್ವೇನ ಸಮರ್ಪಣ ಮಾಡತಾನಾದ ಕಡಿಯಿಂದ, ಆ ಆ ಅಧಿಷ್ಠಾನಗತ ಪರಮಾತ್ಮಗೆ ಇಂಥಾದ್ದೇ ಸೇವಾ

ಎಂತ ತಿಳಿದು ತಾನು ಮಾಡುವುದು. ಯಾವತ್ತೂನೂ ಜೀವರು ಮಾಡುವ ಯಾವತ್ತೂ ಕರ್ಮಗಳೂನೂ ಪೂಜಾ ಆಗೋದಾಗತದೆ. ದಾರಿಗೆ ಎಂದರೆ, ಶರ್ವವಂದ್ಯನ-ರುದ್ರ ದೇವರಿಂದ ವಂದಿತನಾದ, ವಿಮಲಮೂರ್ತಿ-ನಿರ್ದೋಷನಾದ ಶ್ರೀ ಭಾರತೀರಮಣ ಮುಖ್ಯಪ್ರಾಣಾಂತರ್ಗತನಾದ ರಮಾಸಮೇತ ಶ್ರೀ ಪರಮಾತ್ಮನ, ಧ್ಯಾನ-ಸರ್ವತ್ರ ಪರ ಮಾತ್ಮನ ಧ್ಯಾನ, ಏಕಪ್ರಕಾರವಾಗಿ ಉಳ್ಳವಗೆ ಸಾರ್ಥಕ್ಯವಾಗತದೆ ಹೊರ್ತು, ತದನ್ಯರಿಗೆ ಅಲ್ಲ. ಇಂಥಾ ಅಧಿಕಾರಿಯಾದವನು ಬಾಹ್ಯ ಅಧಿಷ್ಠಾನವನ್ನು ಮರೆತು, ಅಂತರ್ಲಕ್ಷಿತ ನಾಗಿ ದೇಹಗತ ತತ್ವಗಳನ್ನು ಹಾಂಗೆ, ಬಾಹ್ಯ ಅಧಿಷ್ಠಾನಾಂತರ್ಗತ ಪರಮಾತ್ಮನ ನೋಡತಾ, ಸರ್ವವೂ ಶ್ರೀಕೃಷ್ಣಾರ್ಪಣಬುದ್ಧಿಯಿಂದ ಇರೋಣದರಿಂದ, ಅವನು ಬ್ರಹ್ಮ ಜ್ಞಾನಿ ಎಂತ ತಾತ್ಪರ್ಯ.

**ದೇವಖಾತ ತಟಾಕ ವಾಪಿ ಸ ।**
**ರೋವರಗಳಭಿಮಾನಿ ಸುರರು ಕ ।**
**ಳೇವರದೊಳಿಹ ರೋಮಕೂಪಗಳೊಳಗೆ ತುಂಬಿಹರು ॥**
**ಆ ವಿಯದ್ಗಂಗಾದಿ ನದಿಗಳು ।**
**ಭಾವಿಸುವದೆಪ್ಪತ್ತೆರಡೆನಿಪ ।**
**ಸಾವಿರ ಸುನಾಡಿಗಳೊಳಗೆ ಪ್ರವಹಿಸುತಲಿಹವೆಂದು ॥ ೫ ॥**

ಈ ದೇಹ ಮಹಾಕ್ಷೇತ್ರವಾಗೋದಕ್ಕೆ ಕಾರಣವೂ, ಅಧಿಕಾರಿಯಾದವನ ತೀರ್ಥ ಕ್ಷೇತ್ರಗಳ ಸಂಚಾರಕ್ರಮವೂ ಹೇಳತಾರೆ.

ದೇವಖಾತ-ದೇವತೆಗಳಿಂದ ನಿರ್ಮಿತವಾದ ಪರ್ವತಾದಿಗಳಲ್ಲಿ ಇರುವ, ದೋಣೆ ಗಳೂ, ತಥಾ ಪುಷ್ಕರಣಿಗಳೂ, ತಟಾಕ-ದೊಡ್ಡದಾದ ಅಥವಾ ಸಣ್ಣದಾದ ಕೆರೆಗಳೂ, ವಾಪಿ-ಇಳಿಯೋ ಭಾವಿಗಳೂ, ಹಾಂಗೆ ಸೇದೋ ಭಾವಿಗಳೂ, ಸರೋವರ-ಕುಂಟೆಗಳೂ, ಗಳ-ಇತ್ಯಾದಿಗಳಲ್ಲಿ ವಿದ್ಯಮಾನಗಳಾದ ಮೂರೂವರೆ ಕೋಟಿ ತೀರ್ಥಗಳಿಗೆ, ಅಭಿಮಾನಿ-ಅಭಿಮಾನಿಗಳಾದ, ಸುರರು-ದೇವತೆಗಳು, ಕಳೇವರದೊಳಿಹ-ಈ ಸ್ಥೂಲದೇಹದಲ್ಲಿ ಇರ ತಕ್ಕ, ರೋಮಕೂಪಗಳೊಳಗೆ-ಸಣ್ಣಸಣ್ಣದಾದ ಮೂರುವರೆ ಕೋಟಿ ರೋಮಗತ ಕೂಪ ಗಳಲ್ಲಿ, ತುಂಬಿಹರು-ತುಂಬಿಕೊಂಡು ಆವಾಸರಾಗಿ ಇರೋವರಾಗಿದ್ದಾರೆ. ಆ ವಿಯ ದ್ಗಂಗಾದಿ-ಆ ಎಂದರೆ, ತ್ರಿವಿಕ್ರಮದೇವರ ನಖದಿಂದ ಬ್ರಹ್ಮಾಂಡ ಸೀಳಿ, ಅಂಡದ ಹೊರ ಗಿಂದ ಬಂದ ಆಕಾಶನದಿಯಾದ ಭಾಗಿರಥಿ ಎಂತ ನಾಮವುಳ್ಳ ಗಂಗಾನದಿಯೇನು, ಇನ್ನು ಪುರಾಣಪ್ರಸಿದ್ಧಗಳಾದ ಅನೇಕ, ನದಿಗಳು-ಪ್ರವಾಹರೂಪದಿಂದ ಇರುವ ನದಿಗಳು, ನದ್ಯಭಿಮಾನಿ ದೇವತೆಗಳು, ಎಪ್ಪತ್ತೆರಡುಸಾವಿರ-೭೨,೦೦೦, ಸುನಾಡಿಗಳೊಳಗೆ-ನಾಡಿಗಳೊಳಗೆ, ಪ್ರವಹಿಸುತಲಿ-ಇತಸ್ತತಃ ಪ್ರವಾಹರೂಪವಾಗಿ ಸಂಚಾರಮಾಡತಾ, ಇಹವು-ಅವೆ. ನದ್ಯಭಿಮಾನಿ ದೇವತೆಗಳೂನೂ ಇದ್ದಾರೆ, ಎಂದು-ಎಂತ ಭಾವಿಸು ವದು-ಅನುಸಂಧಾನದಿಂದ ತಿಳಿಯೋವನಾಗಬೇಕೆಂತ ಅರ್ಥ.

**ತಾ||** ಪ್ರತಿಪ್ರತೀ ರೋಮಕೂಪವೂ, ಪ್ರತಿಪ್ರತೀ ನಾಡಿಯೂ, ತೀರ್ಥಗಳು, ನದಿಗಳು, ಆಗಿ ಅಲ್ಲಲ್ಲಿ ತದಭಿಮಾನಿ ದೇವತೆಗಳು, ತದಂತರ್ಗತ ಭಗವದ್ರೂಪಗಳು ಇರೋಣದರಿಂದ, ದೇಹ ಮಹಾಕ್ಷೇತ್ರ ಎಂತ ಕರೆಸೋದಾಯಿತು.

**ವಿಶೇಷಾರ್ಥ :–** ಅಧಿಕಾರಿಗಳಾದವರು ತೀರ್ಥಕ್ಷೇತ್ರ ಸಂಚಾರಮಾಡುವ ಕಾಲ ದಲ್ಲಿ ತಮ್ಮ ದೇಹಸ್ಥ ತೀರ್ಥಾಭಿಮಾನಿ, ನದ್ಯಭಿಮಾನಿ ಭಗವದ್ರೂಪಗಳನ್ನು ಅಲ್ಲಲ್ಲಿ ಅನುಸಂಧಾನರೂಪದಿಂದ, ಆವಾಹನಾರೂಪದಿಂದ ಚಿಂತಿಸಿ, ಸ್ನಾನದಾನಾದಿಗಳು ಮಾಡ ಬೇಕು. ಈ ಪ್ರಕಾರ ಮಾಡುವವರಿಗೆ ತೀರ್ಥಕ್ಷೇತ್ರಸಂಚಾರ ಫಲ ಬರೋದಾಗತದೆ. ಇಲ್ಲದಿದ್ದರೆ ಜಲಸ್ಥ ನಕ್ರಾದಿ ಜಂತುಗಳು ಸದಾ ಸ್ನಾನಮಾಡಿದಂತೆ ಫಲ ಎಂತ ತಾತ್ಪರ್ಯ.

**ಮೂರು ಕೋಟಿಯ ಮ್ಯಾಲೆ ಶೋಭಿಪ ।**
**ಈರಧಿಕ ಎಪ್ಪತ್ತು ಸಾವಿರ ।**
**ಮಾರುತಾಂತರ್ಯಾಮಿ ಮಾಧವ ಪ್ರತಿದಿವಸದಲ್ಲಿ ॥**
**ತಾ ರಮಿಸುತಿಹನೆಂದು ತಿಳಿದಿಹ ।**
**ಸೂರಿಗಳೆ ದೇವತೆಗಳವರ ಶ ।**
**ರೀರಗಳೆ ಸುಕ್ಷೇತ್ರ ಅವರರ್ಚನೆಯೆ ಹರಿಪೂಜೆ ॥ ೬ ॥**

ಈ ಪ್ರಕಾರ ಅನುಸಂಧಾನ ಮಾಡತಕ್ಕವರು ಬ್ರಹ್ಮಜ್ಞಾನಿಗಳು ಅಂತ ಹೇಳತಾರೆ.

ಮೂರು ಕೋಟಿಯ ಮ್ಯಾಲೆ–ಮೂರುವರೆ ಕೋಟಿ ರೋಮಗಳ ಮೂಲಸ್ಥಾನಗತ ರೂಪಗಳು, ಈರಧಿಕ ಎಪ್ಪತ್ತುಸಾವಿರ–ಎಪ್ಪತ್ತೆರಡು ಸಾವಿರ, ನಾಡಿಗಳು, ಈ ಪ್ರಕಾರ ಇರತಕ್ಕ ರೋಮಕೂಪಗಳಲ್ಲಿ, ನಾಡಿಗಳಲ್ಲಿ, ಮಾರುತ–ಶ್ರೀಪ್ರಧಾನ ವಾಯುದೇವರು, ಒಂದೊಂದರಲ್ಲಿ ಒಂದೊಂದು ರೂಪದ ಮ್ಯಾರಿಗೆ ೭೨,೦೦೦ ನಾಡಿಗಳಲ್ಲಿ, ಮೂರುವರೆ ಕೋಟಿ ರೋಮಕೂಪಗಳಲ್ಲಿ, ಶೋಭಿಪ–ಪ್ರಕಾಶಮಾನನಾಗಿ ಇದ್ದಾರೆ. ಈ ವಾಯು ದೇವರ, ಅಂತರ್ಯಾಮಿ ಮಾಧವ–ಅಂತರ್ಗತನಾದ ಲಕ್ಷ್ಮೀಪತಿಯಾದ ಮಾಧವನಾಮಕ ಪರಮಾತ್ಮ, ಪ್ರತಿದಿವಸದಲಿ–ಪ್ರತಿದಿನದಲ್ಲೂ, ತಾ ರಮಿಸುತಿಹ–ತಾನು ರಮಾಸಮೇತ ನಾಗಿ ಪರಿವಾರರಾದ ಸರ್ವದೇವತಾಸಮೇತನಾಗಿ ಅಲ್ಲಲ್ಲಿ ಇರತಕ್ಕ ತೀರ್ಥಗಳಲ್ಲಿ, ನದಿ ಗಳಲ್ಲಿ ವಿಹಾರಮಾಡತಾ ಜಲಾಕಾರದಿಂದಲೂ ಮತ್ತು ಮತ್ಸ್ಯರೂಪದಿಂದಲೂ ಇರತಾನೆ, ಎಂದು ತಿಳಿದಿಹ–ಎಂತ ತಿಳಿದು ಅನುಷ್ಠಾನಮಾಡತಾ ಇರತಕ್ಕ ಭಗವದ್ಭಕ್ತರಾದ, ಸೂರಿ ಗಳೇ–ಜ್ಞಾನಿಗಳೇ, ದೇವತೆಗಳು–ದೇವತೆಗಳು. ಇವರು ಸಾಧನಾರ್ಥವಾಗಿ ಮಾನುಷ ತ್ವೇನ–ಅವತಾರ ಮಾಡಿದವರು, ಮನುಷ್ಯರಲ್ಲ. ಅವರ ಶರೀರಗಳೇ ಸುಕ್ಷೇತ್ರ–ಇಂಥಾ ಅನುಸಂಧಾನವುಳ್ಳವರ ಶರೀರ ಮಹಾಕ್ಷೇತ್ರ ಎಂತ ಕರಿಸುವುದು ಅಂದರೆ, ಕರಿಸತದೆ. ಅವರರ್ಚನೆಯೆ ಹರಿಪೂಜೆ – ಇಂಥಾ ಭಗವದ್ಭಕ್ತರು ಇರತಕ್ಕ ಸ್ಥಾನಗಳಿಗೆ ನಡೆದು ಹೋಗೋಣವೇ ತೀರ್ಥಕ್ಷೇತ್ರ ಯಾತ್ರೆ. ಅವರಲ್ಲೇ ಪರಮಾತ್ಮನ್ನ ತಿಳಿದು ಪೂಜಾದಿ

ಗಳನ್ನ ಮಾಡೋಣವೇ, ಕ್ಷೇತ್ರಗತ ದೇವತೆಗಳ ಭವಗನ್ಮೂರ್ತಿಗಳ ಪೂಜಾ. ಅವರಿಗೆ ಭೋಜನಾದಿಗಳು ಮಾಡಿಸೋಣವೇ, ಯಾತ್ರಾನಂತರ ಬ್ರಾಹ್ಮಣಭೋಜನ. ಅವರ ಪಾದೋದಕ ಶಿರಸಾ ಧಾರಣವೇ ಸಮಸ್ತತೀರ್ಥಸ್ನಾನ. ಸಮಸ್ತ ತೀರ್ಥಾಭಿಮಾನಿಗಳೂ ಅವರ ಪಾದಾಶ್ರಯರಾಗಿ ಇರುತ್ತಾರೆ. ಸರ್ವತೀರ್ಥಗಳು, ಕ್ಷೇತ್ರಗಳು, ಅವರ ಶರೀರದಲ್ಲೇ ಇರೋಣದರಿಂದ, ಸರ್ವತೀರ್ಥಕ್ಷೇತ್ರಯಾತ್ರೆ, ಅಲ್ಲಲ್ಲಿ ಸ್ನಾನಾದಿಗಳು ಮಾಡಿದ ಫಲ ಬರೋದಾಗತದೆ.

**ತಾ||** ಪ್ರತಿ ರೋಮಕೂಪವೂ, ಪ್ರತಿನಾಡಿಯೂ ಕ್ಷೇತ್ರಗಳಾಗಿ, ತದ್ಗತ ನದಿಗಳೂ, ತೀರ್ಥಗಳೂ, ಕ್ಷೇತ್ರಗತ ತೀರ್ಥಗಳಾಗಿ, ತದ್ಗತ ಮಾಧವನಾಮಕ ಪರಮಾತ್ಮ ಕ್ಷೇತ್ರಮೂರ್ತಿ ಆಗಿದ್ದಾನೆ. ಇತ್ಯಾದಿ ತೀರ್ಥಗಳಿಂದ ಯುಕ್ತವಾಗಿದ್ದ ದೇಹ, ಕ್ಷೇತ್ರ ಎಂತ ಕರಿಸೋದಾಯಿತು. ಅನುಸಂಧಾತೃಗಳು ಪ್ರತಿದಿನದಲ್ಲೂ, ಈ ಕ್ಷೇತ್ರಗಳಲ್ಲಿ ಮನಸ್ಸನ್ನು ಗಮನಾಗಮನಾದಿಗಳಿಂದ ಸಂಚಾರಮಾಡಿಸಿ ಆಯಾ ತೀರ್ಥನದಿಗಳಲ್ಲಿ ಸ್ನಾನಾದಿಗಳು ಮಾಡಿ, ಕ್ಷೇತ್ರಮೂರ್ತಿ ದರ್ಶನಮಾಡಿ, ಮನೋಮೂರ್ತಿಗಳ ಮನಃಸ್ಥಾನ ಸೇರಿಸಿ, ತಾನು ಭೋಜನಮಾಡಿದ್ದು ಯಾವತ್ತೂ, ಭೋಜನರಸವಿಭಾಗಸಂಧಿಯಲ್ಲಿ ಉಕ್ತಕ್ರಮಕ್ಕೆ ದೇವತೆಗಳಿಗೆ, ನಿವೇದನರೂಪದಿಂದ ಬ್ರಾಹ್ಮಣಭೋಜನ ಮಾಡಿಸಬೇಕು. ಸರ್ವವೂ ಮನಸ್ಸಿನಿಂದ ನಿರ್ಮಿತಮಾಡಿ, ಅಂತರ್ಗತ ತಿಳಿದು ಅನುಸಂಧಾನಮಾಡಿದ್ದರಿಂದ, ಸರ್ವ ಯಾತ್ರಾ ಪ್ರತಿದಿನದಲ್ಲೂ ಮಾಡಿದವನಾಗಿ, ಮಹಾಪುಣ್ಯಕ್ಕೆ ಪಾತ್ರನಾಗಿ ಭಗವದನುಗ್ರಹಕ್ಕೆ ಯೋಗ್ಯನಾಗತಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :–** ಪ್ರಮಾಣ :– "ಯದೀಚ್ಛಸಿ ಮಹಾರಾಜ ಸರ್ವತೀರ್ಥಾವಗಾಹನಂ | ವಿಪ್ರಪಾದವಿನಿರ್ಮುಕ್ತಂ ತೋಯಂ ಶಿರಸಿ ಧಾರಯ ||" ಇತಿ.

**ಶ್ರೀವರನಿಗಭಿಷೇಕವೆಂದರಿ |**
**ದೀ ವಸುಂಧರೆಯೊಳಗೆ ಬಲ್ಲವ |**
**ರಾವ ಜಲದಲಿ ಮಿಂದರೆಯು ಗಂಗಾದಿ ತೀರ್ಥಗಳು |**
**ತಾ ವೊಲಿದು ಬಂದಲ್ಲೆ ನೆಲೆಗೊಂ |**
**ಡೀವವಖಿಳಾರ್ಥಗಳನರಿಯದ |**
**ಜೀವರಮರತರಂಗಿಣಿಯನೈದಿದರು ಫಲವೇನು || ೭ ||**

ಜ್ಞಾನಪೂರ್ವಕವಾಗಿ ಅನುಸಂಧಾನದಿಂದ ಸ್ನಾನಮಾಡಬೇಕೆಂತಲೂ, ಅನ್ಯಥಾ ಆದರೆ, ಫಲ ಇಲ್ಲ ಎಂತಲೂ ಹೇಳತಾರೆ.

ಬಲ್ಲವರು–ಸ್ನಾನಾನುಸಂಧಾನ ಬಲ್ಲವರು ದಾವ ಉದಕದಲ್ಲಾದರೂ ಸರಿಯೇ, ಸ್ನಾನಮಾಡಿದರೂ, ಮಹಾಫಲವನ್ನೇ ಹೊಂದತಾರೆ. ಹ್ಯಾಂಗೆ ಅನುಸಂಧಾನ ಮಾಡ

ಬೇಕೆಂದರೆ, ಜೀವಾಂತರ್ಗತ ಬಿಂಬನ್ನ ಜೀವನಾಡಿಗಳಲ್ಲಿ ವಿದ್ಯಮಾನವಾದ ನದಿಗಳಲ್ಲಿ, ರೋಮಕೂಪಗತ ತೀರ್ಥಗಳಲ್ಲಿ ಐಕ್ಯ ಚಿಂತನಾ ಮಾಡಿ ಅನಾದಿಲಿಂಗ, ಅವ್ಯಕ್ತ, ಅನಿರುದ್ಧ ಈ ಶರೀರಗಳಿಗೆ, ವಾಸನಾನುಸಂಧಾನದಿಂದ ತಂದು, ಅಲ್ಲಲ್ಲಿ ಇರತಕ್ಕ ಭಗವದ್ರೂಪಗಳ ಐಕ್ಯ ಚಿಂತಿಸಿ ಅಲ್ಲಿಂದ ಸ್ಥೂಲದೇಹಗತ ಬಿಂಬನ್ನ ಐಕ್ಯ ಚಿಂತಿಸಿ, ಅಲ್ಲಿಂದ ಸ್ಥೂಲದೇಹಕ್ಕೆ ತಂದು ಸ್ಥೂಲಬಿಂಬನ್ನ ಐಕ್ಯ ಚಿಂತಿಸಿ, ಅಲ್ಲಿಂದ ಸ್ಥೂಲದೇಹಗತ ನಾಡೀಗತ ನದಿಗಳಲ್ಲಿ, ರೋಮಕೂಪಗತ ತೀರ್ಥಗಳಲ್ಲಿ ಐಕ್ಯ ಚಿಂತಿಸಿ ಸ್ಥೂಲದೇಹಗತ ನಾಡಿಯಲ್ಲಿ ನದ್ಯಭಿಮಾನಿಗಳ ರೋಮಕೂಪಗತ ತೀರ್ಥಾಭಿಮಾನಿಗಳ, ಹಾಂಗೇ ಭಗವದ್ರೂಪಗಳ ದಾವ ಜಲದಲ್ಲಿ ಸ್ನಾನಮಾಡಲಿಕ್ಕೆ ಉದ್ದೇಶ ಮಾಡತಾನೋ ಆ ಜಲದಲ್ಲಿ ತಾನು ಸ್ನಾನಮಾಡೋ ಪ್ರದೇಶದಲ್ಲಿ ಮಾತ್ರ ಜಲದಲ್ಲಿ ನಿಂತು, ಆವಾಹನಿ ಮಾಡಿ ಅಲ್ಲಿ ಜಲಾಧಿಷ್ಠಾನವೇ ಕ್ಷೇತ್ರ, ಜಲಗತ ಶ್ರೀಪರಮಾತ್ಮನೇ ಕ್ಷೇತ್ರಮೂರ್ತಿ, ಜಲರೂಪರಾದ ತೀರ್ಥಾಭಿಮಾನಿಗಳೇ ಕ್ಷೇತ್ರಗತ ತೀರ್ಥ ಎಂತ ಅನುಸಂಧಾನ ಮಾಡಿ, ಅಲ್ಲಿರತಕ್ಕ ಶ್ರೀಪರಮಾತ್ಮಗೆ ಷೋಡಶೋಪಚಾರ ಪೂಜಾ ನಿವೇದನಾದಿಗಳು ಮಾಡಿ ಸ್ನಾನಮಾಡಬೇಕು. ಈ ಅನುಸಂಧಾನದಿಂದ ಅನೇಕ ತೀರ್ಥಗಳು, ಅನೇಕ ಕ್ಷೇತ್ರಗಳು ಒಂದೇ ಪ್ರದೇಶದಲ್ಲಿ ಇದ್ದಂತಾಯಿತು. ಈ ಪ್ರಕಾರ ಬಲ್ಲವರು, ಶ್ರೀವರನಿಗಭಿಷೇಕವೆಂದರಿತು– ತಾವು ಮಾಡತಕ್ಕ ಸ್ನಾನ ಶ್ರೀ ಲಕ್ಷ್ಮೀಪತಿಯಾದ ದೇಹಾಂತರ್ಗತ ದೇಹಾಕಾರನಾದ ಶ್ರೀಪರಮಾತ್ಮಗೆ, ಅಭಿಷೇಕ ಎಂತ ತಿಳಿಯಬೇಕು. ಎಂದರೆ ದೇಹಾಂತರ್ಗತ ದೇಹಾಕಾರನಾದ ಪರಮಾತ್ಮ ಜಲಾಂತರ್ಗತ ಜಲರೂಪದಿಂದ ಇದ್ದು, ತನ್ನ ಸ್ವಾಖ್ಯ ಉದಕದಿಂದ ತಾನು ಸ್ನಾನಮಾಡತಾನೆ. ಬಿಂಬಕ್ರಿಯಾ ದ್ವಾರಾ, ಪ್ರತಿಬಿಂಬ ಮೂಲಕದಿಂದ ಸ್ನಾನಮಾಡಸತಾನೆ. ಜಡೋದಕ, ಜಡದೇಹಕ್ಕೆ ಸಂಬಂಧ. ಈಶ್ವರಾಖ್ಯ ಉದಕ ಈಶ್ವರಗೆ ಸಂಬಂಧ, ಎಂತ ಈ ಪ್ರಕಾರ ಶ್ರೀ ಪರಮಾತ್ಮಗೆ ಅಭಿಷೇಕವಾಗತದೆ ಎಂತ ಅನುಸಂಧಾನದಿಂದ ಸ್ನಾನಮಾಡೋದಕ್ಕೆ ತಿಳಿದವರು, ಈ ವಸುಂಧರೆಯೊಳಗೆ–ಈ ಭರತ ಖಂಡ ಭೂಮಿಯೊಳಗೆ ಇರುವ, ಆವ ಜಲದಲಿ ಮಿಂದರೆಯು–ದಾವ ಜಲದಲ್ಲಿ ಸ್ನಾನ ಮಾಡಿದರೂ ಎಂದರೆ (ಪುರಾಣಪ್ರಸಿದ್ಧ, ಅಪ್ರಸಿದ್ಧ, ಸಾಮಾನ್ಯ ಏತಾದೃಶವಾದ ದಾವ ಉದಕದಲ್ಯಾದರೂ ಸರಿಯೇ, ಪೂರ್ವೋಕ್ತ ಅನುಸಂಧಾನಪೂರ್ವಕ ಸ್ನಾನಮಾಡಿದರೂ), ಗಂಗಾದಿ–ಭಾಗೀರಥ್ಯಾದಿ ನದ್ಯಭಿಮಾನಿ ದೇವತೆಗಳೇನು, ತೀರ್ಥಗಳು–ಸ್ವಾಮಿ ಪುಷ್ಕರಣ್ಯಾದಿ ತೀರ್ಥಾಭಿಮಾನಿ ದೇವತೆಗಳೇನು, ತಾ ಒಲಿದು–ಭಕ್ತಿಪೂರ್ವಕ ಅನುಸಂಧಾನ ಮಾಡತಕ್ಕ ಅಧಿಕಾರಿಗೆ ಒಲಿದು ಭಗವದಾಜ್ಞಾದಿಂದ ತಾವುಗಳು, ಬಂದಲ್ಲೆ ನೆಲೆಗೊಂಡು– ಬಂದು ಆ ಉದಕದಲ್ಲಿ ಉದಕರೂಪದಿಂದ ಪ್ರವೇಶಮಾಡಿ ಇದ್ದು, ಈವರಖಿಳಾರ್ಥಗಳ– ಸಮಸ್ತವಾದ ಪ್ರಯೋಜನಗಳೊಳಗೆ ಮುಖ್ಯ ಪ್ರಯೋಜನಗಳಾದ ಜ್ಞಾನ, ಭಕ್ತಿ, ವೈರಾಗ್ಯವೇನು, ಇಹದಲ್ಲಿ ಮಹಾ ಅನಿಷ್ಟನಿವೃತ್ತಿಪೂರ್ವಕ ಇಷ್ಟಪ್ರಾಪ್ತಿಯಾದ ಐಶ್ವರ್ಯಾದಿಗಳೇನು, ಭಗವದಾಜ್ಞಾದಿಂದ ಕೊಡೋವರಾಗತಾರೆ. (ಉಪಸಂಹಾರ ಪೂರ್ವವತ್) ಅರಿಯದ ಜೀವರು–ಈ ಅನುಸಂಧಾನ ತಿಳಿಯದೇ ಇರುವಂಥಾ ಜನರೇನು,

ಜೀವರುಗಳೇನು, ಅಮರತರಂಗಿಣಿಯ–ದೇವನದಿಯಾದ ಭಾಗೀರಥೀ ನದಿಯನ್ನು, ಐದಿದರೆ ಫಲವೇನು–ಪ್ರಾಪ್ತರಾಗಿ ಸ್ನಾನಾದಿಗಳನ್ನು ಮಾಡಿದರೂ ಶುದ್ಧವಾಗಿ ಫಲವಿಲ್ಲ.

**ತಾ||** ಅಧಿಕಾರಿಯ ಅನುಸಂಧಾನ ಎಷ್ಟೋ ಅಷ್ಟು ಮಾತ್ರ ಫಲವಿರುತ್ತದೆ. ಕೋಟಿ ವರಹ ಬಾಳತಕ್ಕ ಜೀವರತ್ನ ಕೊಟ್ಟು ಉದರಶೂಲಿ ಪರಿಹಾರಕ್ಕೆ ಅಜವಾನದ (ಓಮು) ಲಾಭ ಹೊಂದಿದಂತೆ ಅಲ್ಪಫಲವಾದ್ದರಿಂದ ಫಲವಿಲ್ಲ ಎಂತ ಅರ್ಥ. ಗಂಗಾದಿ ತೀರ್ಥಗಳಲ್ಲಿ ಸರ್ವದಾ ಸನ್ನಿಧಾನ ಇರುತ್ತದೆ. ಇದ್ದದ್ದರನ್ನ ಅನುಸಂಧಾನದಿಂದ ತಿಳಿದು ಸ್ನಾನಮಾಡಬೇಕು. ಇದು ಎರಡೂ ಇಲ್ಲದೆ ಸ್ನಾನಮಾಡಿದರೆ ಅಧಿಕಾರಿಯ ಸ್ನಾನ ಜಲ ಚರಾದಿಗಳ ಸ್ನಾನವತ್ ಆಗಿ ದೇಹಾಯಾಸವೂ, ದ್ರವ್ಯಖರ್ಚೂ ಆಗುತ್ತದೆ. ಅವರರಾದ ದೇವತೆಗಳು ಸ್ನಾನಮಾಡೋ ಕಾಲಕ್ಕೆ, ಅವರಿಗೆ ಉತ್ತಮರಾದ ದೇವತೆಗಳು ಜಲರೂಪದಿಂದ ಇದ್ದು ಫಲಕೊಡತಾರೆ. ಸರ್ವ ಮಾನುಷರಿಗೆ, ಪುಷ್ಕರ, ಫಲ ಕೊಡೋವನಾಗ ತಾನೆ. ಈ ಅನುಸಂಧಾನದಿಂದ ಸರ್ವದೇಹಗತ ದೇವತೆಗಳಿಗೆ, ಸರ್ವಭಗವದ್ರೂಪಗಳಿಗೆ, ಸ್ನಾನಮಾಡಿಸಿ ಅವರ ಶೇಷ ಉದಕ, ತಾನು ಸ್ನಾನಮಾಡಿದವನಾಗುತಾನೆ ಎಂತ ತಾತ್ಪರ್ಯ.

**ನದನದಿಗಳಿಳೆಯೊಳಗೆ ಪರಿವವು ।**
**ಉದಧಿಪರಿಯಂತರದಿ ತರುವಾ ।**
**ಯದಲಿ ರಮಿಸುವವಲ್ಲಿ ತನ್ಮಯವಾಗಿ ತೋರದಲೆ ॥**
**ವಿಧಿನಿಷೇಧಗಳಾಚರಿಸುವರು ।**
**ಬುಧರು ಭಗವದ್ರೂಪ ಸರ್ವ ।**
**ತ್ರದಲಿ ಚಿಂತನೆ ಬರಲು ತ್ಯಜಿಸುವರಖಿಳ ಕರ್ಮಗಳ ॥ ೮ ॥**

ಜ್ಞಾನಿಗಳಾದವರು ವಿಧಿನಿಷೇಧಕರ್ಮಗಳ ತ್ಯಾಗಮಾಡತಾರೆ ಎಂತ ಹೇಳತಾರೆ.

ನದ–ಗಂಡುನದಿ, ನದಿಗಳು–ಹೆಣ್ಣುನದಿಗಳು, (ಸ್ತ್ರೀದೇವತೆಗಳು, ಪುರುಷದೇವತೆಗಳು ಅಭಿಮಾನವಿವಕ್ಷಾದಿಂದ ನದನದಿಗಳು ಎಂತ ತಾತ್ಪರ್ಯ. ಇಂಥಾ ನದಿಗಳು), ಇಳೆಯೊಳಗೆ–ಭೂಮಿ ಆಧಾರದಿಂದ ಭೂಮಿ ಒಳಗೆ ಇರತಕ್ಕ, ಉದಧಿಪರಿಯಂತರದಿ–ಸಮುದ್ರಪರಿಯಂತ, ಪರಿವವು–ಪ್ರವಹಿಸೋದಾಗತವೆ. ತರುವಾಯದಲಿ–ಅನಂತರದಲ್ಲಿ, ಅಲ್ಲಲ್ಲಿ–ಸಮುದ್ರ ಸೇರಿ ಆ ಸಮುದ್ರದಲ್ಲಿ ಆಯಾ ಒಂದು ಪ್ರದೇಶದಲ್ಲಿ, ತನ್ಮಯವಾಗಿ–ಆ ಸಮುದ್ರೋದಕವೇ ನದೀ ಉದಕದಕಿಂತಲೂ ಅತಿಶಯದಿಂದ ಪ್ರಚುರವಾಗಿ ಇರೋಣದರಿಂದ, ತೋರದಲೇ–ದೂರದಿಂದ ನೋಡತಕ್ಕವರಿಗೆ ಇದು ನದೀ ಉದಕ, ಇದು ಸಮುದ್ರೋದಕ ಎಂತ ತೋರದೇನೇ, ರಮಿಸುವವು–ಆ ಸಮುದ್ರದಲ್ಲಿ ಸಮುದ್ರದ ಸಂಗಡ ಕ್ರೀಡಿಸುತಾ, ತಾವು ಪ್ರತ್ಯೇಕವಾಗೇ ಇರೋದಾಗತವೆ. ಇದರಂತೆ, ಬುಧರು–ಬ್ರಹ್ಮಜ್ಞಾನಿಗಳಾದವರು ಸರ್ವತ್ರ ಭಗವಚ್ಚಿಂತನಾ ಜ್ಞಾನ ಪ್ರಾಪ್ತವಾಗದಕ್ಕಿಂತ ಪೂರ್ವದಲ್ಲಿ, ನಿಷೇಧಗಳು–ಶಾಸ್ತ್ರತಃ ನಿಷಿದ್ಧವಾದ ಸಕಾಮ ಕರ್ಮ ಧಾವದದೆ ಅದರನ್ನ, ವಿಧಿ–ವಿಧ್ಯುಕ್ತವಾದ

ಯೋಗ್ಯ ಕರ್ಮ ಎಂತ ಆಚರಿಸುವರು. ಆಕಾರದಲ್ಲಿ ಇವರ ಮನೋಮೂರ್ತಿಗಳು (ಮನಃಪೂರ್ತಿಗಳು), ನದೀಪ್ರವಾಹದಂತೆ ಪ್ರವಹಿಸುತ್ತಾ ಇರುತ್ತವೆ. ಇಂಥಾ ಪ್ರವಹಿಸುತ್ತಾ ಇರತಕ್ಕ ಮನಸ್ಸಿಗೆ, ಆಚರಿಸುವರು–ಈ ನದಿಗಳ ದೃಷ್ಟಾಂತದಂತೆ ಆಚರಿಸುವರು. ಭಗವದ್ರೂಪ ಸರ್ವತ್ರ ಚಿಂತನೆ, ಬರಲು–ಗುರುಗಳ ದ್ವಾರಾ ಸಮುದ್ರಸಾಮ್ಯವಾದ ಭಗವದುಪಾಸನಾ ಲಭ್ಯವಾದರೆ, ಈ ಮನಃಪ್ರವಾಹ ಭಗವದಾಖ್ಯ ಸಮುದ್ರದಲ್ಲಿ ಪ್ರವೇಶವಾಗಿ, ಸರ್ವತ್ರ ಬಿಂಬಕ್ರಿಯಾ ದ್ವಾರಾ ಪ್ರತಿಬಿಂಬಕ್ರಿಯಾನೇ ಹೊರ್ತು ಬ್ಯಾರೆ ಇಲ್ಲ ಎಂತಲೂ, ತಾನು ಅಸ್ವತಂತ್ರ ಎಂತಲೂ, ಈ ರೀತ್ಯಾ ಜ್ಞಾನಾನುಸಂಧಾನದಿಂದ ಭಗವದ್ರೂಪಗಳು ಸರ್ವತ್ರ ಚಿಂತನಿಗೆ ಬಂದರೆ, ತ್ಯಜಿಸುವರಖಿಳ ಕರ್ಮಗಳ–ಪೂರ್ವದ ಸಮಸ್ತ ಸಕಾಮ ಕರ್ಮಗಳ ತ್ಯಾಗಮಾಡಿ ನಿಷ್ಕಾಮ ಕರ್ಮಗಳಲ್ಲಿ ರತರಾಗಿ, ನದಿಗಳು ಸಮುದ್ರ ಸೇರಿದ ನಂತರ ಪ್ರವಾಹದಿಂದ ರಹಿತವಾಗಿ ಸಮುದ್ರದ ಸಂಗಡ ದಾವ ರೀತ್ಯಾ ರಮಿಸುತವೋ, ತದ್ವತ್ ಸಮುದ್ರ ಸಾಮ್ಯ ಪರಮಾತ್ಮನಲ್ಲಿ ಸಕಾಮರೂಪವಾದ ಮನಃಪ್ರವಾಹಗಳು ಸೇರಿ ನಿಷ್ಕಾಮಗಳಾಗಿ ಶ್ರೀಪರಮಾತ್ಮನ ಗುಣಗಳ ಒಳಗೆ, ತಮಗೆ ಯೋಗ್ಯವಾದ ಏಕದೇಶ ಗುಣಗಳಲ್ಲಿ ರಮಿಸುತ್ತಾ ಯೋಗ್ಯಗಳಾದ ನಿಷ್ಕಾಮ ಕರ್ಮಗಳಲ್ಲಿ ರತರಾಗಿನ್ನು, ಅಸಂಪ್ರಜ್ಞಾತಸಮಾಧಿಯಲ್ಲಿ ಅದೂನೂ ತ್ಯಾಗಮಾಡಿ ಇರೋವರಾಗತಾರೆ ಎಂತ ಅರ್ಥ.

ಪ್ರಮಾಣ :– " ಯಸ್ತ್ವಾತ್ಮರತಿರೇವಸ್ಯಾದಾತ್ಮತೃಪ್ತಶ್ಚ ಮಾನವಃ | ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ | ಯಸ್ತ್ವೈವಾತ್ಮರತೋ ಮುಕ್ತಃ ಕಾರ್ಯಂ ತಸ್ಯೈವ ನಾಸ್ತಿ ಹಿ || " ಗೀತಾತಾತ್ಪರ್ಯನಿರ್ಣಯೇ.

**ಕಲಿಯೆ ಮೊದಲಾದಖಿಳ ದಾನವ |**
**ರೊಳಗೆ ಬ್ರಹ್ಮಭವಾದಿ ದೇವ |**
**ರ್ಕಳು ನಿಯಾಮಕರಾಗಿ ಹರಿಯಾಜ್ಞೆಯಲಿ ಅವರವರ |**
**ಕಲುಷಕರ್ಮವ ಮಾಡಿ ಮಾಡಿಸಿ |**
**ಜಲರುಹೇಕ್ಷಣಗರ್ಪಿಸುತ ನಿ |**
**ಶ್ಚಲ ಸುಭಕ್ತಿ ಜ್ಞಾನಪೂರ್ಣರು ಸುಖಿಪರವರೊಳಗೆ || ೯ ||**

ದೈತ್ಯರಿಗೆ ನಿಯಾಮಕರು ದೇವತೆಗಳೆಂತಲೂ, ಅವರಲ್ಲಿ ತಾವು ಪಾಪಕರ್ಮಗಳ ಮಾಡತಾರೆ ಎಂತಲೂ ಹೇಳತಾರೆ.

ಕಲಿಯೆ ಮೊದಲಾದ–ತಮೋಯೋಗ್ಯ ಜೀವರಲ್ಲಿ ಅತ್ಯಂತ ನೀಚನಾದ ಇವಗೆ ಮ್ಯಾಲೆ, ನೀಚರು ಇಲ್ಲದಂಥಾ ಕಲಿನಾಮಕ ದೈತ್ಯ ಮೊದಲಾದ, ಅಖಿಳದಾನವರೊಳಗೆ–ಸಮಸ್ತರಾದ ದೈತ್ಯರ ಒಳಗೆ, ಬ್ರಹ್ಮಭವಾದಿ–ಬ್ರಹ್ಮವಾಯುಗಳು, ಕಲಿಯಲ್ಲಿ ನಿಯಾಮಕರು. ಈ ಕಲಿಗಿಂತಲೂ ಕಿಂಚಿದುತ್ತಮನಾದ ದೈತ್ಯನಲ್ಲಿ ಬ್ರಹ್ಮ ವಾಯು ರುದ್ರ ಮೊದಲಾದ, ದೇವರ್ಕಳು–ದೇವತೆಗಳು, ನಿಯಾಮಕರಾಗಿ–ಆಯಾ ದೈತ್ಯರ ಸ್ಥೂಲ

ದೇಹಗಳಲ್ಲಿ ತಾರತಮ್ಯಾನುಸಾರ ತತ್ವನಿಯಾಮಕರಾಗಿ, ಹರಿಯಾಜ್ಞೆಯಲಿ–ಶ್ರೀ ಪರಮಾತ್ಮನ ಆಜ್ಞಾದಿಂದ, ಅವರವರ–ಆಯಾ ದೈತ್ಯರ, ಕಲುಷಕರ್ಮವ–ಭಗವಂತನಲ್ಲಿ ದ್ವೇಷಮಾಡತಕ್ಕ ದೋಷಕರ್ಮಗಳ, ಮಾಡಿ ಮಾಡಿಸಿ–ಶ್ರೀಪರಮಾತ್ಮನ ಕ್ರಿಯಾದ್ವಾರಾ ತಾವು ಮಾಡಿ ತಮ್ಮ ಕ್ರಿಯಾ ದ್ವಾರಾ ದೈತ್ಯರಿಂದ ಮಾಡಿಸಿ, ಜಲರುಹೇಕ್ಷಣಗೆ–ಕಮಲ ದಳದೋಪಾದಿಯಲ್ಲಿ ನೇತ್ರವುಳ್ಳ ಶ್ರೀ ಬಿಂಬರೂಪಿ ಪರಮಾತ್ಮಗೆ, ಅರ್ಪಿಸುತ–ತಾವು ಮಾಡಿದಂಥಾ ಪಾಪಗಳ ಅರ್ಪಣಮಾಡುತ್ತಾ, ನಿಶ್ಚಲ ಸುಭಕ್ತಿ ಜ್ಞಾನಪೂರ್ಣರು–ಅಚಂಚಲವಾದ ಸಮೀಚೀನವಾದ ಭಕ್ತಿಜ್ಞಾನದಿಂದ ಪೂರ್ಣರಾದ ದೇವತೆಗಳು, ಅವರೊಳಗೆ–ಆಯಾ ದೈತ್ಯರಲ್ಲಿ ಇದ್ದು, ಸುಖಿಪರು–ಸುಖವಂತರಾಗಿರುತ್ತಾರೆ.

**ವಿಶೇಷಾರ್ಥ :–** ದೈತ್ಯರಲ್ಲಿ ದೇವತಾನಿಯಾಮಕತ್ವ ಹ್ಯಾಂಗೆಂದರೆ, ದೇವತೆಗಳಿಗೆ ಸಮಾನರಾದ ದೈತ್ಯರು ಇದ್ದಾರೆ. ಸಮಾನರೆಂದರೆ, ದೇವತೆಗಳಲ್ಲಿ ಸುಜ್ಞಾನಬಲ ಸುಲಕ್ಷಣಾದಿಗಳು ಎಷ್ಟು ಅವ್ರೋ, ತತ್ಸಮಾನರಾದ ದೈತ್ಯರಲ್ಲಿ ತದ್ವಿಪರೀತದಿಂದ ಸಮಾನವಾಗಿ ಅವೆ. ಇವರೇ ದೇವತೆಗಳಿಗೆ ಸಮಾನರಾದ ದೈತ್ಯರು ಎಂಬುದು. ನಿಯಾಮಕತ್ವ ಎಂಬುದು ಸಮಾನದೈತ್ಯರಲ್ಲಿ ಸಮಾನ ದೇವತೆಗಳ ನಿಯಾಮಕತ್ವ ಇರೋದಾಗಿ ಅದೆ. ಮತ್ತು ರುದ್ರದೇವರಕಿಂತಲೂ ಉತ್ತಮರಾದ ದೇವತೆಗಳ ನಿಯಾಮಕತ್ವವೂ ಅದೆ. ಸಮಾನರಲ್ಲದ, ದುರ್ಗುಣಗಳಲ್ಲಿ ಅಧಿಕರಾದ ದೈತ್ಯರಲ್ಲಿ, ಸಮಾನದೇವತೆಗಳ ನಿಯಾಮಕತ್ವ ಇಲ್ಲ. ಈ ಪ್ರಕಾರ ದೈತ್ಯಾಂತವರಿಗೂ ತಾರತಮ್ಯದಿಂದ ತಿಳಿಯಬೇಕು. ದೈತ್ಯರಲ್ಲಿ ದೈತ್ಯ ನಿಯಾಮಕತ್ವ ಅದೆ. ಅದು ಹ್ಯಾಂಗೆಂದರೆ, ಆ ದೈತ್ಯರಲ್ಲಿ ದುರ್ಗುಣಗಳ ಹಿಡಿದು ನೀಚೋಚ್ಚ ತಾರತಮ್ಯ ಅದೆ. ಆ ರೀತ್ಯಾ, ನೀಚನಲ್ಲಿ ಉತ್ತಮನಿಯಾಮಕತ್ವ ಇಲ್ಲ. ಉತ್ತಮನಲ್ಲಿ ನೀಚ ನಿಯಾಮಕತ್ವ ಉಂಟು. ಈ ಪ್ರಕಾರ ತಿಳಿಯಬೇಕು. ದೇವತೆಗಳಲ್ಲಿ ಅಸುರ ನಿಯಾಮಕತ್ವ ಇಲ್ಲ. ಅಸುರಾವೇಶ ಉಂಟು. ಅದೂನೂ ಸಮಾನ ದೇವತೆಗಳಲ್ಲಿ ಸಮಾನರಾದ ಅಸುರಾವೇಶವಿಲ್ಲ. ದುರ್ಲಕ್ಷಣದಿಂದ ಉತ್ತಮರಾದ ಅಸುರಾವೇಶ ಇರೋದಾಗಿ ಇರುತ್ತದೆ. ಈ ತಾರತಮ್ಯಾನುಸಾರ ಇದರನ್ನ ತಿಳಿಯಬೇಕು. ಮಾನುಷರಲ್ಲಿ ದೇವದೈತ್ಯರು ಉಭಯರೂ ತತ್ವನಿಯಾಮಕರಾಗಿ ಇರತಾರೆ. ಈ ತತ್ವಾಭಿಮಾನಿ ದೈತ್ಯರು ಸಮಾನದೇವತೆಗಳ ಅಧೀನರಾಗಿರುತ್ತಾರೆ. ದೇವತೆಗಳು ದೈತ್ಯರಲ್ಲಿ ಪಾಪಕರ್ಮ ಮಾಡಿ ಅರ್ಪಿಸಿದ ವಿಚಾರ, ಪಾಪ ಅರ್ಪಿಸಬೇಕು ಎಂಬುದಕ್ಕೆ ಇದೇ ಸೂಚನ. ದೇವತೆಗಳೂನೂ ತ್ರಿಗುಣಾತ್ಮಕ ಲಿಂಗಬದ್ಧರು. ತ್ರಿಗುಣಾತ್ಮಕ ಸ್ಥೂಲ ಶರೀರವೂ ಹೌದು. ತಮೋಗುಣದ ಕಾರ್ಯ, ಪಾಪಕಾರ್ಯ. ತಮೋಗುಣ ಅಂಗೀಕರಿಸಿದರೆ, ಅದರ ಕಾರ್ಯ ಅಂಗೀಕರಿಸಬೇಕು. ಸ್ಥೂಲಶರೀರದಿಂದ ಬದ್ಧರಾಗಿರುತ್ತಾರಾದಕಡಿಯಿಂದ ತಮೋಗುಣದ ಕಾರ್ಯ ಅಂಗೀಕರಿಸಬೇಕು. ದೈತ್ಯರಲ್ಲಿ ದೇವತೆಗಳು ಭಗವದಾಜ್ಞಾದಿಂದ ಅವರವರ ಸ್ವರೂಪವನುಸರಿಸಿ ತಮ್ಮ ತಮ್ಮ ತಮೋಗುಣವನ್ನು ನಿಮಿತ್ತಮಾಡಿ ಪಾಪಕಾರ್ಯಗಳ ಮಾಡಿ ಭಗವದರ್ಪಣ ಮಾಡತಾರೆ. ಈ ಪಾಪಗಳ

ಅರ್ಪಿಸೋಣ ನಿಷಿದ್ಧವಾದರೆ, ದೇವತೆಗಳು ಅರ್ಪಿಸಲಾರರು. ಆದ್ದರಿಂದ ಪಾಪಗಳು ಅರ್ಪಿಸೋಣ ವಿಧಿಯ್ಹೇ. ತದ್ವತ್, ಮನುಷ್ಯರಿಗೂ ತಮೋಗುಣವದೆ. ಅದರ ಕಾರ್ಯ ಪಾಪವೇ. ದೇವರ ಆಜ್ಞಾದಿಂದ ಇವರು ಪಾಪಕಾರ್ಯ ಮಾಡಿದ್ದರನ್ನ ಅರ್ಪಿಸೋವೇ ವಿಧಿ ಎಂತ ಆಗತದೆ. ಅರ್ಪಿಸಬಹುದು. ಇದರಲ್ಲಿ ತಾರತಮ್ಯವದೆ. ಅಹಂಮಮತಾ ಯುಕ್ತನಾಗಿ ಜ್ಞಾನ, ಭಕ್ತಿ, ವೈರಾಗ್ಯಗಳಿಂದ ಶೂನ್ಯನಾಗಿ ವಿಷಯಾಸಕ್ತನಾಗಿ ಸಕಾಮ ನಾಗಿ ಇರತಕ್ಕ ಅಪಕ್ವದಶಾದಲ್ಲಿ, ಪಾಪಗಳ ಅರ್ಪಿಸಬಹುದೆಂಬ ಸಂಗತಿ ತಿಳಕೊಂಡು ಅರ್ಪಿಸಿದರೆ, ಅದರನ್ನ ದೇವರು ಅಂಗೀಕರಿಸೋದಿಲ್ಲ. ಅಂಥಾದರನ್ನ ಸ್ವೀಕರಿಸಿ ಅದರ ಫಲ ಮತ್ತೂ ಅವರಿಗೇ ಉಣಸತಾನೆ. ದೇವತೆಗಳಿಗೆ ಹಾಂಗಲ್ಲ, ಅದರನ್ನ ಭೋಗಕ್ಕೆ ಕೊಡೋದಿಲ್ಲ. ಅಪಕ್ವಾಧಿಕಾರಿ ಮಾನುಷರು ಪಕ್ವಕಾಲದಲ್ಲಿ ಕೊಟ್ಟದ್ದರನ್ನ ಅಂಗೀಕರಿಸಿ ತತ್ಫಲ ಭೋಗಕ್ಕೆ ಕೊಡೋದಿಲ್ಲ. ಇದು ನೇಮ. ಇದರ ಸಂಗತಿ ಬಹಳವದೆ.

**ಆವ ಜೀವರೊಳಿದ್ದರೇನಿ ।**
**ನ್ನಾವ ಕರ್ಮವ ಮಾಡಲೇನಿ ।**
**ನ್ನಾವ ಗುಣರೂಪಗಳುಪಾಸನೆ ಮಾಡಲೇನವರು ॥**
**ಕಾವನಯ್ಯನ ಪರಮ ಸತ್ಕರು ।**
**ಣಾವಲೋಕನ ಬಲದಿ ಚರಿಸುವ ।**
**ದೇವತೆಗಳನು ಮುಟ್ಟಲಾಪವೆ ಪಾಪಕರ್ಮಗಳು ॥ ೧೦ ॥**

ದೇವತೆಗಳಿಗೆ ಪಾಪಕರ್ಮ ಲೇಪವಾಗೋದಿಲ್ಲ ಎಂತ ಹೇಳತಾರೆ.

ಅವರು–ಪೂರ್ವೋಕ್ತರಾದ ದೇವತೆಗಳು, ಆವ ಜೀವರೊಳಿದ್ದರೇನು–ತ್ರಿವಿಧರಾದ ಯಾವ ಜೀವರಲ್ಲಿ ವ್ಯಾಪ್ತರಾಗಿದ್ದರೇನು, ಇನ್ನಾವ ಕರ್ಮವ ಮಾಡಲೇನು–ಮತ್ತು ಆಯಾ ಜೀವರ ಅನಾದಿಕರ್ಮಪನ್ನನುಸರಿಸಿನ್ನೂ ಆಗಾಮಿ ಸಂಚಿತ ಕರ್ಮ ಅನುಸರಿಸಿನ್ನೂ ಪಾಪಪುಣ್ಯ ಉದಾಸೀನ ಈ ಕರ್ಮಗಳ ಇನ್ನೂ ದಾವ ಕರ್ಮ ಮಾಡಿದರೂನೂ ಆವ ಗುಣರೂಪಗಳುಪಾಸನ ಮಾಡಲೇನು, ಮತ್ತು ನೀಚಾಧಿಷ್ಠಾನ ದೈತ್ಯರು, ಮಧ್ಯಮಾಧಿ ಷ್ಠಾನ ನಿತ್ಯಸಂಸಾರಿಗಳು, ಉತ್ತಮಾಧಿಷ್ಠಾನ ದೇವತೆಗಳು, ಈ ಅಧಿಷ್ಠಾನದಲ್ಲಿ ಯಾವ ಅಧಿಷ್ಠಾನಗತ ಭಗವದ್ರೂಪಗಳ, ಆ ರೂಪಗತ ಗುಣಗಳ ಉಪಾಸನಾ ಮಾಡಲೇನು, ಕಾವನಯ್ಯನ–ಮನ್ಮಥನ ತಂದೆಯಾದ ಪರಮಾತ್ಮನ, ಪರಮ– ಅತಿ ಶ್ರೇಷ್ಠವಾದ, ಸತ್ಕರುಣಾ–ಸಮೀಚೀನವಾದ ಕರುಣದಿಂದ, ಅವಲೋಕನ–ನೋಡೋಣದ, ಬಲದಿ ಚರಿಸುವ–ಒಲದಿಂದ ಸಂಚಾರ ಮಾಡತಕ್ಕ, ದೇವತೆಗಳನು–ದೇಹಗತ ತತ್ವನಿಯಾಮಕ ದೇವತೆಗಳನ್ನು, ಪಾಪಕರ್ಮಗಳು–ದೋಷಕರ್ಮಗಳಾದದ್ದು, ಮುಟ್ಟಲಾಪವೆ–ಫಲರೂಪ ದಿಂದ ಭೋಗಕ್ಕೆ ಒದಗಿ ಸ್ಪರ್ಶಮಾಡಲಾಪವೇ ? ಅಂದರೆ, ಶುದ್ಧವಾಗಿ ಮುಟ್ಟಲಾರವು. ದೇವತೆಗಳ ಪಾಪಕರ್ಮಗಳು ಮುಟ್ಟದೇ ಇರೋದಕ್ಕೆ ಕಾರಣ, ಶ್ರೀಪರಮಾತ್ಮನ

ಪೂರ್ಣಾಂತಃಕರಣಕ್ಕೆ ಪಾತ್ರರಾಗಿ ಪಾಪಗಳು ಅರ್ಪಿತ ಮಾಡಿದ್ದರಿಂದ, ಅವರನ್ನ ಮುಟ್ಟ ಲಿಲ್ಲ. ಅಧಿಕಾರಿಗಳು ತಮ್ಮ ತಮ್ಮ ಯೋಗ್ಯತಾನುಸಾರ, ಪರಮಾತ್ಮನ ಪೂರ್ಣಾಂತಃ ಕರಣಕ್ಕೆ ಪಾತ್ರರಾಗಿ, ಪಾಪಗಳ ಅರ್ಪಿಸಿದರೆ ಆ ಪಾಪಗಳನ್ನ ಅವರಿಗೆ ಭೋಗಕ್ಕೆ ಕೊಡೋದಿಲ್ಲ. ತದ್ವ್ಯತಿರಿಕ್ತರಿಗೆ, ಅವಶ್ಯ ಭೋಗಕ್ಕೆ ಕೊಡತಾನೆ ಎಂತ ತಾತ್ಪರ್ಯ.

ಪ್ರಮಾಣ :– "ಪ್ರೇರಕಾ ಅಪಿ ಪಾಪಸ್ಯ ನ ದೇವಾಃ ಫಲಭಾಗಿನಃ" ಎಂತಲೂ, "ದೇಹವಾಗ್ಬುದ್ಧಿಜಂ ಧೀರಾ ಧರ್ಮಜ್ಞಾಃ ಶ್ರದ್ಧಯಾನ್ವಿತಾಃ | ಕ್ಷಪಯಾಘಂ ಮಹದಪಿ ವೇಣುಗುಲ್ಮಮಿವಾನಳಃ | ಅಘಂ ಧುನ್ವಂತಿ ಕಾರ್ತ್ಸ್ನ್ಯೇನ ನೀಹಾರಮಿವ ಭಾಸ್ಕರಃ ||" ಇತಿ ಭಾಗವತದಲ್ಲಿ ಉಕ್ತಿ.

**ಪತಿಯೊಡನೆ ಮನಬಂದ ತೆರದಲಿ |**
**ಪ್ರತಿದಿವಸದಲಿ ರಮಿಸಿ ಮೋದಿಸಿ |**
**ಸುತರ ಪಡೆದಿಳೆಯೊಳು ಜಿತೇಂದ್ರಿಯಳೆಂದು ಕರೆಸುವಳು ||**
**ಕೃತಿಪತಿ ಕಥಾಮೃತ ಸುಭೋಜನ |**
**ರತ ಮಹಾತ್ಮರಿಗಿತರ ದೋಷ |**
**ಪ್ರತತಿಗಳು ಸಂಬಂಧಿಸುವುವೇಽಚ್ಯುತನ ದಾಸರಿಗೆ || ೧೧ ||**

ಶ್ರೀಪರಮಾತ್ಮನ ದಾಸರಾದ ಮಾನುಷರಿಗೆ ದೋಷಸಂಬಂಧವಾಗೋದಿಲ್ಲ ಎಂತ ಹೇಳಿ, ಮ್ಯಾಲೆ ದೇವತೆಗಳ ವಿಚಾರ ಹೇಳಿ ಈಗ ಮಾನುಷರ ವಿಚಾರ ಹೇಳತಾರೆ.

ಪತಿಯೊಡನೆ – ಶಾಸ್ತ್ರೋಕ್ತದಿಂದ ವಿವಾಹಿತಳಾದ ಸ್ತ್ರೀಯಾದವಳು ತನ್ನ ಪತಿಯಾದವನ ಅಧೀನಳಾಗಿ, ಅವನ ಆಜ್ಞಾಧಾರಕಳಾಗಿ, ಅವನ ಸಂಗಾತಲೇ ಇದ್ದು, ಮನಬಂದ ತೆರದಿ–ಅವನ ಮನೋನುಸಾರ ನಡೆದುಕೊಂಡು, ಪ್ರತಿದಿವಸದಲಿ–ಪ್ರತಿದಿನ ದಲ್ಲೂನೂ, ರಮಿಸಿ–ಅವನ ಕೂಡ ರತಿಕ್ರೀಡಾದಿಗಳು ನಡಿಸಿ, ಮೋದಿಸಿ–ಅವನ ಸಂತೋಷ ಪಡಿಸಿ, ಅವನ ಪ್ರೀತಿ ಸಂಪಾದಿಸಿ, ಸುತರ ಪಡೆದು–ಮಕ್ಕಳನ್ನು ಪಡೆದಂಥಾವಳಾಗಿ, ಇಳೆಯೊಳು–ಭೂಮಿಯಲ್ಲಿ, ಜಿತೇಂದ್ರಿಯಳೆಂದು ಕರಿಸುವಳು–ಗುಹ್ಯೇಂದ್ರಿಯ ಜಯಿಸಿದವ ಳೆಂದು ಕರಿಸೋವಳಾಗತಾಳೆ. (ಹ್ಯಾಂಗೆಂದರೆ), ತನ್ನ ಪತಿ ವ್ಯತಿರಿಕ್ತ ಅನ್ಯರಿಗೆ ತನ್ನ ಗುಹ್ಯೇಂದ್ರಿಯ ವಶಮಾಡದೆ ಜಿತಳಾಗಿ ಇರೋದು ದಾವದದೆ, ಇವೇ ಜಿತೇಂದ್ರಿಯತ್ವವು. ತನ್ನ ಪತಿಯಲ್ಲಿ ವಿಮುಖಳಾದರೆ, ದೋಷಿ ಎಂತ ಕರೆಸಿ ರಕ್ಷಕರಿಂದ ರಹಿತಳಾಗಿ ಕಷ್ಟ ಪಡತಾಳೆ. ತದ್ವತ್, ಕೃತಿಪತಿ–ಕೃತಿಪತಿಯಾದ ಪ್ರದ್ಯುಮ್ನನಾಮಕ ಪರಮಾತ್ಮ, ಸ್ತ್ರೀಯ ರಿಗೆ ಪತಿಯೋಪಾದಿಯಲ್ಲಿ ಜೀವರಿಗೆ ಪತಿಯಾದವ. ಜೀವರಾದರೋ, ಸತಿಸಾಮ್ಯರಾಗಿ, ಪತಿಯಾದ ಪ್ರದ್ಯುಮ್ನನ ಆಜ್ಞಾಧಾರಕರು. ಸತಿಯಾದವಳು ಪತಿ ಕೂಡ ಹ್ಯಾಂಗೆ ರಮಿಸಿ, ಅವನ ಸಂತೋಷಪಡಿಸಿ ತಾನು ಸುತರ ಪಡೆವಳೋ ತದ್ವತ್, ತನ್ನ ಬುದ್ಧಿಯೆಂಬ ಸ್ತ್ರೀಯನ್ನ ಶ್ರೀಪರಮಾತ್ಮನಲ್ಲೇ ರಮಿಸುವಂತೆ ಮಾಡಿ, ಆ ಪರಮಾತ್ಮನ ದ್ವಾರಾ

ಜ್ಞಾನ, ಭಕ್ತಿ, ವೈರಾಗ್ಯಗಳೆಂಬ ಪುತ್ರರನ್ನ ಪಡೆದರೆ, ಈ ಜೀವನು ಜಿತೇಂದ್ರಿಯನೆಂದು ಕರಿಸತಾನೆ. ತನ್ನ ಬುದ್ಧಿಯನ್ನ ಅನ್ಯಪುರುಷಸಾಂಕೇತವಾದ ವಿಷಯಾದಿಗಳ ವಶ ಮಾಡಿದರೆ, ಜಿತೇಂದ್ರಿಯನೆಂದು ಕರಿಸಲಾರ. ಆದಕಡಿಯಿಂದ, ಕಥಾಮೃತ–ಸತಿ ಯಾದವಳು ತನ್ನಪತಿಗತ ಸುಗುಣಕಾರ್ಯಗಳೆಂಬೋ ಕಥಾಮೃತವನ್ನ, ಸುಭೋಜನ– ಒಳ್ಳೇ ಭೋಜನ ಮಾಡತಕ್ಕ ಪತಿಆಜ್ಞಾ ಧುರಂಧರಳಾದ, ರತ–ಪತಿಯಲ್ಲೇ ಸಮೀಚೀನ ಆಸಕ್ತಿ ಉಳ್ಳ, ಮಹಾತ್ಮರಿಗೆ–ಪತಿ ಅಂತರ್ಗತ ಶ್ರೀಪರಮಾತ್ಮನ ತಿಳಿದು, ಸರ್ವಾನು ಷ್ಠಾನವೂ ಸೇವಾದಿಗಳೂ ಮಾಡತಕ್ಕ ಮಹಾತ್ಮರಾದ ಸ್ತ್ರೀಯರಿಗೆ, ಇತರ–ಪತಿ ಆಜ್ಞಾದಿಂದ ಅನ್ಯವ್ರತಾದಿಗಳ ತ್ಯಾಗಮಾಡಿದ, ದೋಷಪ್ರತತಿಗಳು–ಪಾಪಸಮೂಹ ಗಳು, ಸಂಬಂಧಿಸುವವೇ–ಸಂಬಂಧವಾಗಲಾರವು ಎಂತ ಅರ್ಥ. ಅಚ್ಯುತನ ದಾಸರಿಗೆ– ತದ್ವತ್ ಪತಿಯಾದ ಶ್ರೀಪರಮಾತ್ಮನ ದಾಸರಿಗೆ ದೋಷಲೇಪವಿಲ್ಲ ಎಂತ ತಾತ್ಪರ್ಯ.

(ಮುಖ್ಯಾರ್ಥವೇನೆಂದರೆ), ಅಹಂಮಮತಾದಿಗಳಿಂದ ದೂರರಾಗಿ, ಪತಿಯಾದ ಶ್ರೀಪರಮಾತ್ಮನ ಸೃಷ್ಟ್ಯಾದಿ ವ್ಯಾಪಾರವೆಂಬ ಕಥಾಮೃತಭೋಜನ ಅವಿಚ್ಛಿನ್ನವಾಗಿ ಮಾಡುತಾ, ಅವನಲ್ಲೇ ರತವಾದ ಮನಸ್ಸುಳ್ಳವರಾಗಿ ಬಿಂಬಕ್ರಿಯಾದ್ವಾರಾ ಮಾಡಲ್ಪಟ್ಟ ಪಾಪಗಳೇನು, ಪುಣ್ಯಕರ್ಮಗಳ ತ್ಯಾಗವೇನು, ಇತ್ಯಾದಿಗಳು ಪತಿಆಜ್ಞಾದಿಂದ ನಾವು ಮಾಡತೇವೆಂದು ಅಹಂಮಮತಾದಿಗಳಿಂದ ದೂರರಾದ ಏತಾದೃಶ ಮಹಾತ್ಮರಾದ ಶ್ರೀ ಪರಮಾತ್ಮನ ಭಕ್ತರಿಗೆ ಇತರವಾದ ದೋಷಸಮೂಹಗಳು ಸಂಬಂಧವಾಗಲಾರವು. ಈ ಪ್ರಕಾರ, ಅನುಸಂಧಾನಯುಕ್ತರಾಗಿ ಪಾಪಗಳ ಅರ್ಪಿಸಿದರೆ, ಶ್ರೀಪರಮಾತ್ಮ ಸ್ವೀಕರಿಸಿ ಪಾಪಸಂಬಂಧ ಮಾಡೋದಿಲ್ಲ. ಸುಮ್ಮನೆ ಅರ್ಪಿತ ಎಂದ ಮಾತ್ರಕ್ಕೆ ದೇವರು ಸ್ವೀಕರಿಸದೆ, ಇವರಿಗೆ ಲೇಪಮಾಡತಾ ಇರತಾನೆ ಎಂತ ತಾತ್ಪರ್ಯ.

**ಸೂಸಿ ಬಹ ನದಿಯೊಳಗೆ ತನ್ನ ಸ ।**
**ಹಾಸ ತೋರುವೆನೆಂದು ಜಲಕೆದು ।**
**ರೀಸಿದರೆ ಕೈಸೋತು ಮುಣುಗುವ ಹರಿಯ ಬಿಟ್ಟವನು ॥**
**ಕ್ಲೇಶ ಐದುವನಾದಿಯಲಿ ಸಾ ।**
**ರ್ವೇಶ ಕ್ಲೃಪ್ತಿಯ ಮಾಡಿದುದ ಬಿ ।**
**ಟ್ಟಾಶೆಯಿಂದಲಿ ಅನ್ಯರಾರಾಧಿಸುವ ಮಾನವನು ॥ ೧೨ ॥**

ಶ್ರೀಪರಮಾತ್ಮನ ಬಿಟ್ಟು ಅನ್ಯರನ್ನ ಪೂಜಾಮಾಡಿ ಸೇವಾದಿಗಳು ಮಾಡಿದವರಿಗೆ ಗತಿಯಿಲ್ಲ ಎಂತ ಹೇಳತಾರೆ.

ಸೂಸಿ ಬಹ ನದಿಯೊಳಗೆ–ಉಭಯದಡದವರಿಗೂ ಪೂರ್ಣವಾಗಿ ಉದಕ ಗಂಭೀರ ವಾಗಿ ಪ್ರವಹಿಸುತ್ತಾ ಬರತಕ್ಕ ನದೀ ಒಳಗೆ, ತನ್ನ ಸಹಾಸ ತೋರುವೆನೆಂದು–ತನ್ನ ಸಾಮರ್ಥ್ಯ ತೋರಸತೇನೆ ಅಂತ, ಜಲಕೆದುರು–ಪ್ರವಾಹಕ್ಕೆ ಅಭಿಮುಖವಾಗಿ, ಈಸಿದರೆ–

ನೀರಿನಾಗೆ ಬಿದ್ದು ಈಜಿದರೆ, ಕೈಸೋತು ಮುಣುಗುವ–ಕೈಗಳು ಸೋತು ಬಹಳ ಶ್ರಮ ಪಟ್ಟು, ತನ್ನ ಸಾಹಸ ವ್ಯರ್ಥವಾಗಿ ಮುಣುಗಿ ಮೃತಿಯನ್ನು ಐದತಾನೆ. ತದ್ವತ್, ಸರ್ವ ಸ್ವಾಮಿಯಾದ ಶ್ರೀ ಪರಮಾತ್ಮನು, ಅನಾದಿಯಲಿ–ಅನಾದಿಕಾಲದಿಂದ, ಕ್ಲೃಪ್ತಿಯ ಮಾಡಿದುದ–ಗೊತ್ತುಮಾಡಿಕೊಡಲ್ಪಟ್ಟ ಭೋಗಾದಿಗಳ, ಬಿಟ್ಟು–ಇದು ತನಗೆ ಬ್ಯಾಡ, ತನ್ನ ಇಷ್ಟಾನುಸಾರ ಭೋಗಗಳು ಪ್ರಾಪ್ತವಾಗಬೇಕೆಂದು, ಆಶೆಯಿಂದಲಿ–ಅಧಿಕ ಆಶಾ ದಿಂದ, ಅನ್ಯರ–ಅನ್ಯರಾದ ಉಚ್ಛಿಷ್ಟ ಗಣಪತ್ಯಾದಿ ದೇವತೆಗಳ, ಆರಾಧಿಸುವ–ಪೂಜಾ ಸೇವಾದಿಗಳ ಮಾಡತಕ್ಕ, ಮಾನವನು–ಅಜ್ಞಾನಿಯಾದ ಮನುಷ್ಯನೇನು ಮತ್ತು ಹರಿಯ ಬಿಟ್ಟವನು–ಅಧಿಕ ಆಶಾದಿಂದ ರುದ್ರಾದಿ ದೇವತೆಗಳ ಅಂತರ್ಗತ ಶ್ರೀಪರಮಾತ್ಮನ ತಿಳಿ ಯದೇ ಇವರನ್ನ ಬಿಟ್ಟು ಪೃಥಕ್ತ್ವೇನ ರುದ್ರಾದಿ ದೇವತೆಗಳ ಪೂಜಾ ಮಾಡಿದವನು, ಕ್ಲೇಶ ಐದುವ–ಐಹಿಕ ಪಾರತ್ರಿಕದಲ್ಲಿ ದುಃಖ ಐದೋವನಾಗತಾನೆ.

**ತಾ||** ದೇವರ ಸಂಕಲ್ಪಾನುಸಾರವೇ ಹೋಗತಾ ದೇವರು ಕೊಟ್ಟದ್ದು ಕ್ಲೇಶರಹಿತ ನಾಗಿ ಸಂತೋಷದಿಂದ ಭೋಗಮಾಡತಾ, ದೇವರನ್ನೇ ಆರಾಧಿಸುತ್ತಾ, ಆ ಆರಾಧನೆ ಯಿಂದ ದೇವರು ಅದರನ್ನ ಪರಿಹರಿಸತಾನೋ ಇಲ್ಲವೋ, ಅದರ ಕ್ಲೇಶ ಹಚ್ಚಿಕೊಳ್ಳದೇ, ಅದಕ್ಕಾಗಿ ಅನ್ಯ ದೇವತೆಗಳನ್ನು ಆಗಲಿ, ಹರಿಯಬಿಟ್ಟು, ಸುದೇವತೆಗಳನ್ನು ಆಗಲಿ ಭಜನ ಮಾಡದೇ ನದೀ ಪ್ರವಾಹದಂತೆ ತಾನೂನೂ ಈಸತಾ (ಈಜುತ್ತಾ) ದಡದ ಸಮೀಪಕ್ಕೆ ದಾವಾಗ ಸೇರೇನು ಎಂಬಂತೆ ಶ್ರೀಶನ ಸಂಕಲ್ಪವನ್ನು ನಿರೀಕ್ಷಿಸುತ್ತಾ ದೇವರಿಂದ ಕೊಡ ಲ್ಪಟ್ಟದ್ದರನ್ನ ಭೋಗಿಸುತ್ತಾ ಸುಖದಿಂದ ಇರಬೇಕೆಂದು ತಾತ್ಪರ್ಯ.

**ವಿಶೇಷಾರ್ಥ :–** ಶ್ರೀಪರಮಾತ್ಮನ ಸಂಕಲ್ಪಾಖ್ಯ ಪ್ರವಾಹ ಎಂದರೆ ಪ್ರಾಣಿಗಳು, ಅಸೃಜ್ಯರಾಶಿಯಿಂದ ಸೃಷ್ಟಿಗೆ ತಂದಾರಭ್ಯ ಲಿಂಗಭಂಗದವರಿಗೂ ಭೋಗ ಮಾಡತಕ್ಕ ಕರ್ಮಬೀಜ, ಈಶ್ವರನಿಂದ ರಚಿತವಲ್ಲದ್ದು, ಅನಾದಿಯಿಂದ ಲಿಂಗದ ತೃತೀಯಪರಿಚ್ಛೇದ ದಲ್ಲಿ ವಿದ್ಯಮಾನವಾದದ್ದರನ್ನ ಅಂಕುರಮಾಡಿ ಅದರಿಂದ ಆಗಾಮಿ ಸಂಚಿತಗಳೆಂಬೋ ಶಾಖೋಪಶಾಖೆಗಳು ಮಾಡಿ ಪ್ರತಿ ಕ್ಷಣದಲ್ಲಿ, ಪ್ರತಿ ಜನ್ಮದಲ್ಲಿ ಭೋಗಿಸತಕ್ಕ ಕರ್ಮ ಇಂಥಾದ್ದೇ ಎಂತ ಅನೇಕ ಪ್ರಕಾರ ವಿಭಾಗಮಾಡಿ ಸಂಕಲ್ಪಮಾಡಿ ಇರೋವನಾಗಿ ಇದ್ದಾನೆ. ಇಂಥಾ ಈಶ್ವರನ ಸಂಕಲ್ಪ ಎಂದರೆ ಕಾಲನಾಮಕ ಪರಮಾತ್ಮನೇ ಉದಕ ಸದೃಶ. ಅವನ ಸಂಕಲ್ಪವೇ, ಪ್ರವಾಹಸದೃಶ, ಇಂಥಾ ಪ್ರವಾಹಕ್ಕೆ ಎದುರಿಸೋಣ ಎಂಬೋದೇ, ಈಶನ ಸಂಕಲ್ಪದಿಂದ ದಾವ ಕಾಲಕ್ಕೆ ಏನು ಪ್ರಾಪ್ತವಾಗತದೋ ಅದರನ್ನ ಬಿಟ್ಟು, ಅದಕ್ಕೆ ಅನ್ಯಥಾ ಬಯಸೋಣವೇ, ಎದುರಿಸೋಣ. ಇದರಿಂದ ವೃಥಾ ಬಯಸಿದ ದೋಷದಿಂದ ನರಕಾದಿಗಳಲ್ಲಿ ಮುಣುಗೋಣ ಎಂತ ಅರ್ಥ. ಕಾರ್ಯವೇನೂ ಆಗದೆ ವೃಥಾ ಕಷ್ಟ ಪಟ್ಟಂತಾಯಿತೇ ಹೊರ್ತು ಬ್ಯಾರೆ ಒಂದೂ ಆಗೋದಿಲ್ಲ ಎಂತ ತಾತ್ಪರ್ಯ.

**ನಾನು ನನ್ನದು ಎಂಬ ಜಡಮತಿ ।**
**ಮಾನವನು ದಿನದಿನದಿ ಮಾಡುವ ।**
**ಸ್ನಾನಜಪದೇವಾರ್ಚನೆಯು ಮೊದಲಾದ ಕರ್ಮಗಳ ॥**

**ದಾನವರು ಕೆಳದೊಯಿವರಲ್ಲದೆ ।**
**ಶ್ರೀನಿವಾಸನು ಸ್ವೀಕರಿಸ ನು ।**
**ದ್ದಾನೆ ಪಕ್ವಕಪಿತ್ಥ ಫಲ ಭಕ್ಷಿಸಿದವೋಲಹುದು ॥ ೧೩ ॥**

ಅಹಂಮಮತಾರಹಿತನಾಗಿ ಕರ್ಮಗಳ ಮಾಡಬೇಕೆಂದು ಹೇಳುತಾರೆ.

ನಾನು–ಪರಾಧೀನ ಕರ್ತೃತ್ವವುಳ್ಳ ತಾನು, ನಾನು ಎಂತ ಸ್ವಾಧೀನಕರ್ತೃತ್ವವನ್ನು ಆರೋಪಣೆ ಮಾಡಿಕೊಂಡು, ಪರಾಧೀನಕರ್ತೃತ್ವವಲ್ಲದ ಸ್ವತಂತ್ರನಾದ ಶ್ರೀಪರಮಾತ್ಮನ್ನ ಮರಿಯೋಣ (ಇದು) ಸರ್ವ ದೋಷಗಳೊಳಗೆ ಪ್ರಬಲದೋಷ. ಮುಕ್ತಿಯೋಗ್ಯರು ಮಾಡತಕ್ಕ ಬ್ರಹ್ಮಹತ್ಯಾದಿ ಪಾಪಗಳಿಗೆ ಕಿರೀಟಸ್ಥಾನಾಪನ್ನವಾದದ್ದು. ಇದು ಒಂದು, ನನ್ನದು–ಸರ್ವವೂ ಸೃಷ್ಟಿಮಾಡಿದವ ಶ್ರೀ ಪರಮಾತ್ಮನು. ಯಾವತ್ತೂ ಈಶ್ವರನದು, ಎಂದೇ ಹೊರ್ತು ಅನ್ಯರದು ಅಲ್ಲ. ಇಂಥಾದರನ್ನು ಸರ್ವವೂ ನನ್ನದು ಎಂತ ಆತ್ಮಾರೋಪಣೆ ಮಾಡಿಕೊಂಬುವುದೊಂದು ಪ್ರಬಲದೋಷ. ಅಂತು ಎರಡು ಪ್ರಕಾರ, ಎಂಬ–ಅನತಕ್ಕವರು ಸರ್ವದಾ ಶ್ರೀ ಪರಮಾತ್ಮಗೆ ಹಿತರಲ್ಲ. ಜಡಮತಿ ಮಾನವನು–ಇಂಥಾ ಶುದ್ಧಜ್ಞಾನಹೀನನಾದ ಅಲ್ಪಮನುಷ್ಯನು, ದಿನದಿನದಿ ಮಾಡುವ–ಪ್ರತಿದಿನದಲ್ಲೂ ಮಾಡತಕ್ಕಂಥಾ, ಸ್ನಾನಜಪದೇವಾರ್ಚನೆಯು–ಸ್ನಾನವೇನು, ಜಪಗಳೇನು, ದೇವರಪೂಜೆ ಏನು, ಮೊದಲಾದ ಕರ್ಮಗಳ–ಇನ್ನೂ ಅನೇಕವಾದ ಸತ್ಕರ್ಮಗಳನ್ನ, ದಾನವರು–ದೈತ್ಯರಾದವರು, ಕೆಳದೊಯಿವರಲ್ಲದೆ–ಅಪಹರಿಸಿಕೊಂಡು ಹೋಗತಾರೆ. ಅಲ್ಲದೇ ದಾನವರು ಯದ್ಯಪಿ ಅಸ್ವತಂತ್ರರಾದಾಗ್ಯೂನೂ ಅವರಂತರ್ಗತನಾದ ಪರಮಾತ್ಮ, ಅವರಿಗೆ ಅಂಥಾ ಬುದ್ಧಿಪ್ರೇರಣೆ ಮಾಡಿ, ಈ ಅಧಿಕಾರಿ ಮಾಡಿದ ಪುಣ್ಯಕರ್ಮಗಳ ದೈತ್ಯರಿಗೆ ಕೊಡತಾನೆ. ಲೋಕದಲ್ಲಿ ಪುಣ್ಯಗಳ ಮತ್ತೊಬ್ಬರಿಗೆ ಧಾರೆ ಎರಿಯೋಪಾದಿಯಲ್ಲಿ, ಶ್ರೀನಿವಾಸನು–ದಾನವರು ಅಲ್ಲದೇ ಅನ್ಯನಾದ ಪರಮಾತ್ಮನು, ಸ್ವೀಕರಿಸ–ಸ್ವೀಕಾರ ಮಾಡೋದಿಲ್ಲ. ಈ ಪ್ರಕಾರ ಸತ್ಕರ್ಮ ಮಾಡಿದ ಅಧಿಕಾರಿಗೆ ಫಲ ಎಂಥಾದಾಗತದೆ ಎಂದರೆ, ಮದ್ದಾನೆ–ಛಂದಾಗಿ ಮದ ಹಿಡಿದು ಇರುವಂಥಾ ಗಜಕ್ಕೆ, ಪಕ್ವಕಪಿತ್ಥಫಲ–ಛಂದಾಗಿ ಪಕ್ವವಾದ ಬ್ಯಾಲದ ಹಣ್ಣಿನ, ಭಕ್ಷಿಸಿದವೋಲಹುದು–ತಿನಲಿಕ್ಕೆ ಕೊಟ್ಟರೆ ಅದು ತಿನತದೆ. ಪೂರ್ವವತ್ ಫಲಧಾಂಗೆ ಮಲದಲ್ಲಿ ಆ ಬೇಲದ ಹಣ್ಣು ಹೊರಗೆ ಬರತದೆ. ಒಡದು ನೋಡಿದರೆ ಅದರಲ್ಲಿ ಒಂದೂ ಇಲ್ಲದೆ ಬರೀ ಪೋಡು ಮಾತ್ರ ಇರುತ್ತದೆ. ಇದರಂತೆ ಅಹಂಮಮತಾಯುಕ್ತನಾಗಿ ಸತ್ಕರ್ಮಗಳು ಮಾಡಿದರೆ ಆನೆಗೆ ಹಾಕಿದ ಬ್ಯಾಲದ ಹಣ್ಣಿನೋಪಾದಿಯಲ್ಲಿ ಬರೀ ಚಿಪ್ಪುರೂಪವಾದ ದುಷ್ಫಲವನ್ನು ಹೊಂದಿ ದುಃಖಪಡತಾನೆ. ದ್ರವ್ಯದಿಂದಲೂ, ದೇಹದಿಂದಲೂ ಮಾಡಿದ ಕಾರ್ಯ ನಿಷ್ಫಲವಾಗಿ ದೇಹಾಯಾಸ, ದ್ರವ್ಯಧ್ವಂಸವೇ. ಪರಂತು ಅದರಿಂದ ಫಲವೇನೂ ಕಾಣೋದಿಲ್ಲ. ಆದ ಕಡಿಯಿಂದ ಅಹಂಮಮತಾ ತ್ಯಾಗಮಾಡಬೇಕು. ಆದರೆ, ದೈತ್ಯರು ಅಪಹರಿಸಿದ ಪುಣ್ಯ, ದೇವರು ತಾನು ಅಪಹರಿಸಿ ದೇವತೆಗಳಿಗೆ ವಿಭಾಗ ಮಾಡಿಕೊಡತಾನೆ. ಅಪಹರಿಸಿ ದೈತ್ಯರನ್ನ ಶಿಕ್ಷಿಸತಾನೆ ಎಂತ ತಾತ್ಪರ್ಯ.

**ಧಾತ್ರಿಯೊಳಗುಳ್ಳಖಿಳ ತೀರ್ಥ ।**
**ಕ್ಷೇತ್ರ ಚರಿಸಿದರೇನು ಪಾತ್ರಾ ।**
**ಪಾತ್ರನರಿತನ್ನಾದಿದಾನವ ಮಾಡಿ ಫಲವೇನು ॥**
**ಗಾತ್ರನಿರ್ಮಲನಾಗಿ ಮಂತ್ರ ।**
**ಸ್ತೋತ್ರ ಪಠಿಸಿದರೇನು ಹರಿ ಸ ।**
**ರ್ವತ್ರಗತನೆಂದರಿಯದಲೆ ತಾ ಕರ್ತೃ ಎಂಬುವನು ॥ ೧೪ ॥**

ಅಹಂಮಮತಾ ಎಂಬುದು ಸರ್ವಸತ್ಸಾಧನೆಯ ನಾಶಮಾಡತದೆ ಎಂತ ಹೇಳತಾರೆ.

ಧಾತ್ರಿಯೊಳಗುಳ್ಳ—ಅಹಂಮಮತಾಯುಕ್ತನಾಗಿ, ಮದಮತ್ಸರಕಾಮಯುಕ್ತನಾಗಿ ಇರುವ ಅಧಿಕಾರಿಯು, ಅಖಿಳತೀರ್ಥಕ್ಷೇತ್ರ—ಈ ಭೂಮಿಯಲ್ಲಿ ವಿದ್ಯಮಾನವಾದ, ಪ್ರಸಿದ್ಧ ಗಳಾದ ತೀರ್ಥಗಳೇನು, ಕ್ಷೇತ್ರಗಳೇನು, ಇವುಗಳಲ್ಲಿ, ಚರಿಸಿದರೇನು—ಸಂಚಾರಮಾಡಿದ ರೇನು, ಇನ್ನೂ, ಪಾತ್ರಾಪಾತ್ರನರಿತು—ಯೋಗ್ಯಾಯೋಗ್ಯ ಅಧಿಷ್ಠಾನವನ್ನು ತಿಳಿದು ಆದರಲ್ಲಿ ಯೋಗ್ಯವಾದ ಅಧಿಷ್ಠಾನದಲ್ಲಿ, ಅನ್ನಾದಿ—ಅನ್ನೋದಕ ಮೊದಲಾದ, ಇನ್ನೂ ಅತಿಶಯವಾದ, ದಾನವ ಮಾಡಿ ಫಲವೇನು—ಸುವರ್ಣಾದಿ ದಾನವನ್ನು ಮಾಡಿ ಫಲವೇನು ಎಂದರೆ ಶುದ್ಧವಾಗಿ ಫಲವಿಲ್ಲದೇ ದೇಹಾಯಾಸ ಕೊಡತದೆ ಎಂತ ಅರ್ಥ. ಗಾತ್ರನಿರ್ಮಲ ನಾಗಿ—ದೇಹವನ್ನ ಥಂಡಾಗಿ ನೀರಿನಿಂದ ತೊಳೆದು ನಾಮಮುದ್ರೆಗಳಿಂದ ಅಲಂಕರಿಸಿ, ದಿವ್ಯ ವಸ್ತ್ರಾಭರಣಗಳ ಧರಿಸಿ ನಿರ್ಮಲತ್ವ ಹೊಂದಿದವನಾಗಿ, ಮಂತ್ರಸ್ತೋತ್ರ—ವೇದ ಗಳೇನು, ದೇವರ ಸ್ತೋತ್ರಗಳೇನು, (ಇವುಗಳ), ಪಠಿಸಿದರೇನು—ಕಂಠೋಕ್ತ್ಯಾ ಪಠನ ಮಾಡಿದರೇನು, ಎಂದರೆ, ಏನು ಮಾಡಿದರೂ ಫಲವಿಲ್ಲ. ಇಷ್ಟು ಮಾಡಿ ಫಲ ಯಾಕೆ ಇಲ್ಲ ಎಂದರೆ, ಹರಿ—ಅಹಂ ಮಮತಾ ಎಂಬ ಎರಡು ಗುಣಗಳ ತನ್ನಲ್ಲಿ ಆರೋಪಣೆ ಮಾಡಿಕೊಂಡು ಬಿಂಬರೂಪಿಯಾದ ಶ್ರೀಹರಿ, ಸರ್ವತ್ರ—ಸರ್ವಸ್ಥಳಗಳಲ್ಲಿ, ಸರ್ವರಲ್ಲಿ ಅಂತರ್ಗತನಾಗಿ ಇದ್ದಾನೆ ಎಂತಲೂ, ಸರ್ವವೂ ಈಶಾಧೀನ ಎಂತಲೂ, ಗತನೆಂದು— ಈ ಪರಿ ಅಂದರೆ ಈ ಪ್ರಕಾರ ಇದ್ದಾನೆ ಎಂತ, ತಿಳಿಯದಲೆ—ಅರಿಯದಲೆ, ಗುರುಮುಖ ದಿಂದ ತಿಳಿದು ತಾನು ಅನುಷ್ಠಾನಯುಕ್ತನಾಗದೇ, ತಾ ಕರ್ತೃ ಎಂಬುವನು—ಸರ್ವವೂ ನಾನು ಮಾಡತೇನೆ, ನನ್ನದು ಎನತಕ್ಕ ಅಧಿಕಾರಿ ಏನು ಸತ್ಕರ್ಮ ಮಾಡಿದರೂ ನಿಷ್ಫಲ ವಾಗಿ ದೇಹಾಯಾಸ ಕೊಟ್ಟು, ಕಡಿಗೆ ತಾನು ಮಾಡಿದ ಪುಣ್ಯಫಲಕ್ಕೆ ಮಹಾ ದೋಷ ಫಲ ಹೊಂದಿ, ದುಃಖಪಡತಾನೆ ಎಂತ ತಾತ್ಪರ್ಯ.

**ಕಂಡ ನೀರೊಳು ಮುಣುಗಿ ದೇಹವ ।**
**ದಂಡಿಸಿದ ಫಲವೇನು ದಂಡ ಕ ।**
**ಮಂಡಲುಗಳನೆ ಧರಿಸಿ ಯತಿಯೆಂದೆನಿಸಿ ಫಲವೇನು ॥**

**ಅಂಡಜಾಧಿಪನಂಸಗನ ಪದ ।**
**ಪುಂಡರೀಕದಿ ಮನವಹರ್ನಿಶಿ ।**
**ಬಂಡುಣಿಯವೋಲಿರಿಸಿ ಸುಖಬಡದಿಪ್ಪ ಮಾನವನು ॥ ೧೫ ॥**

ಇನ್ನೂ ಪೂರ್ವೋಕ್ತ ಅಹಂಮಮತಾ ವಿಚಾರವೇ ಹೇಳತಾರೆ.

ಕಂಡ ನೀರೊಳು ಮುಣುಗಿ – ಪ್ರಬಲವಾದ ಅಹಂಮಮತಾದೋಷಯುಕ್ತನಾದ ಮನುಷ್ಯನು ಪ್ರಾತಃಸ್ನಾನಯುಕ್ತನಾಗಿ, ಅನುಸಂಧಾನರಹಿತನಾಗಿ ಕಾಗೆ ಮುಣುಗಿದಂತೆ ದಾವ ನೀರೊಳಗೆ ಸ್ನಾನಮಾಡಿದರೂ, ದೇಹವ ದಂಡಿಸಿದ–ಅನೇಕ ಜಪತಪಾದಿಗಳು, ಚಾಂದ್ರಾಯಣ, ವಿಷ್ಣುಪಂಚಕ, ಅಲವಣ, ಅಖಂಡ, ಚಾತುರ್ಮಾಸ್ಯವ್ರತ, ಏಕಾದಶೀ ವ್ರತ, ಇನ್ನೂ ಅನೇಕವಾದ ವ್ರತಗಳಿಂದ ದೇಹವನ್ನ ಶುಷ್ಕಮಾಡಿ ಕೊಂಡು ಇನ್ನೂ ಅನೇಕ ಸತ್ಕರ್ಮಗಳು ಮಾಡಿ, ಫಲವೇನು–ಏನೂ ಫಲವಿಲ್ಲ. ದಂಡಕಮಂಡಲುಗಳ ಧರಿಸಿ–ಇನ್ನೂ ಶಿರೋಮುಂಡನ ಮಾಡಿಕೊಂಡು, ಯಜ್ಞೋಪವೀತ, ಕಟಿಸೂತ್ರ ತ್ಯಜಿಸಿ, ಕಾಷಾಯವಸ್ತ್ರ ಧರಿಸಿ, ದಂಡಕಮಂಡಲುಗಳನ್ನು ಧರಿಸಿ, ಕೃಷ್ಣಾಜಿನಾದ್ಯಾಸನೋಪವಿಷ್ಟನಾಗಿ, ಯತಿಯೆಂದೆನಿಸಿ–ಸನ್ಯಾಸಿ ಎಂತ ಕರಿಸಿದವನಾಗಿ, ಫಲವೇನು–ಸರ್ವಶ್ರೇಷ್ಠ ಎಂತ ಅನಿಸಿಕೊಂಬೋಣದರಿಂದ ಏನೂ ಸ್ವಲ್ಪವಾದರೂ ಫಲವಿಲ್ಲ. (ಹಾಂಗಾದರೆ ಸರ್ವೋತ್ತಮವಾದ ಸಾಧನಿ ದಾವದೆಂದರೆ, ಪ್ರಥಮದಲ್ಲಿ ಅಹಂ ಮಮತಾ ಎಂಬ ಎರಡು ಗುಣಗಳ ತ್ಯಾಗಮಾಡಿ), ಅಂಡಜಾಧಿಪನ–ಪಕ್ಷಿಶ್ರೇಷ್ಠನಾದ ಗರುಡದೇವರ, ಅಂಸಗನ–ಭುಜದಿ ಕೂತು ಸಂಚಾರಮಾಡತಕ್ಕ ಶ್ರೀ ನಾರಾಯಣದೇವರ, ಪದಪುಂಡರೀಕದಿ–ಪಾದಗಳೆಂಬ ಕಮಲಗಳಲ್ಲಿ, ಮನವಹರ್ನಿಶಿ–ರಾತ್ರಿ ಹಗಲು ಮನಸ್ಸನ್ನು, ಬಂಡುಣಿಯವೋಲಿರಿಸಿ–ಭ್ರಮರದೋಪಾದಿಯಲ್ಲಿ ಇಟ್ಟು, ಸುಖಬಡದಿಪ್ಪ ಮಾನವನು–ಅವನ ಅನುಗ್ರಹಕ್ಕೆ ಪಾತ್ರನಾಗಿ, ನಿಸ್ಪೃಹನಾಗಿ ಸುಖವನ್ನು ಹೊಂದದೇ, ನಾನು ನನ್ನದು ಎಂಬ ಮಾನವನು, ಶುದ್ಧ ಪಶುತುಲ್ಯನಾಗಿ ಸರ್ವ ಸಾಧನೆಯೂ ಕಳಕೊಂಡು ಇಹದಲ್ಲಿ ಕೇವಲ ಮಮತಾದಿಂದ ದುಃಖಪಟ್ಟವನಾಗಿ, ಪಾರತ್ರಿಕವಾದ ಮಹಾನರಕಗಳಲ್ಲಿ ಬಹುಕಾಲ ದುಃಖಪಡತಾ ಇರತಾನೆ.

**ತಾ॥** ಕಮಲಗತ ಮಕರಂದವನ್ನು ಭ್ರಮರ ಸದಾ ಅದರಲ್ಲೇ ಮಗ್ನವಾಗಿ ಇದ್ದು ಮಧುಪಾನ ಮಾಡಿದಂತೆ, ಮನವೆಂಬ ಭ್ರಮರವನ್ನು-ದೇವರ ಪಾದಗಳೆಂಬ ಕಮಲದಲ್ಲಿ ಇಟ್ಟು, ಪಾದಗತ ಮಹಾತ್ಮೆ ಎಂಬ ಮಕರಂದ ಪಾನಮಾಡೋಣ ದಾವದದೇ ಇದೇ ಸರ್ವೋತ್ತಮವಾದ ಪುಣ್ಯಸಾಧನೆ ಎಂತ ತಾತ್ಪರ್ಯ.

**ವೇದಶಾಸ್ತ್ರಪುರಾಣ ಕಥೆಗಳ ।**
**ಓದಿ ಪೇಳಿದರೇನು ಸಕಲ ನಿ ।**
**ಷೇಧ ಕರ್ಮವ ತೊರೆದು ಸತ್ಕರ್ಮಗಳ ಮಾಡೇನು ॥**

**ಓದನಂಗಳ ಜರಿದು ಶ್ವಾಸ ನಿ ।**
**ರೋಧಗೈಸಿದರೇನು ಕಾಮ ।**
**ಕ್ರೋಧವಳಿಯದೆ ನಾನು ನನ್ನದು ಎಂಬ ಮಾನವನು ॥ ೧೬ ॥**

ಇನ್ನೂ ಪೂರ್ವೋಕ್ತ ಅಹಂಮಮತಾದೋಷ ವಿಚಾರವನ್ನೇ ಹೇಳತಾರೆ.

ವೇದಶಾಸ್ತ್ರಪುರಾಣ—ಚತುರ್ವೇದಗಳು, ಭಾರತಭಾಗವತಾದಿ ಶಾಸ್ತ್ರಗಳು, ಇನ್ನೂ ಧರ್ಮಪ್ರವೃತ್ತಿ ಮೊದಲಾದ ಧರ್ಮಶಾಸ್ತ್ರಗಳು, ಇನ್ನೂ ಅಷ್ಟಾದಶ ಪುರಾಣಗಳು, ಉಪಪುರಾಣಗಳು, ಓದಿ—ಛಂದಾಗಿ ಘಟ್ಟಿಮಾಡಿಕೊಂಡು, ಕಥೆಗಳ—ಅನೇಕ ಜನರುಗಳಿಗೆ ಪುರಾಣರೂಪದಿಂದ ಆಗಲಿ, ಅಥವಾ ಉಪದೇಶರೂಪದಿಂದ ಆಗಲಿ, ಪೇಳಿದರೇನು—ಹೇಳೋಣದರಿಂದ ಫಲವಿಲ್ಲ. ಇನ್ನೂ, ಸಕಲನಿಷೇಧಕರ್ಮವ ತೊರೆದು—ಶಾಸ್ತ್ರತಃ ನಿಷೇಧಗಳು ಎಂತ ಹೇಳತಕ್ಕ ಸಮಸ್ತವಾದ ನಿಷಿದ್ಧ ಕರ್ಮಗಳನ್ನ ತ್ಯಾಗಮಾಡಿ, ಸತ್ಕರ್ಮಗಳ ಮಾಡೇನು—ಶಾಸ್ತ್ರೋಕ್ತಪ್ರಕಾರ ವಿಹಿತವಾದ ಸತ್ಕರ್ಮಗಳು ಮಾಡಿದರೂ ಫಲವಿಲ್ಲ. ಇನ್ನೂ, ಓದನಂಗಳ ಜರಿದು—ಅನ್ನೋದಕಾದಿಗಳನ್ನು ತ್ಯಾಗಮಾಡಿ, ಶ್ವಾಸನಿರೋಧಗೈಸಿದರೇನು—ಹಟಯೋಗವಾದ ಶ್ವಾಸನಿರೋಧ ಮಾಡಿ ಆಯುರ್ವೃದ್ಧಿ ಮಾಡಿಕೊಂಡು, ಮಹಾತ್ಮನೆಂದು ಲೋಗರಿಂದ ಕರಿಸೋಣದರಿಂದ ಫಲವಿಲ್ಲ. (ಏತರಿಂದ ಫಲವಿಲ್ಲ ಎಂದರೆ), ಕಾಮಕ್ರೋಧವಳಿಯದೆ—ಸರ್ವಕರ್ಮಗಳು ಸಕಾಮನಾಗಿ ಮಾಡಿ, ಅದರಲ್ಲಿ ಸರ್ವರಿಗೂ ಮನಸ್ತೃಪ್ತಿಯಿಲ್ಲದಂಥ ಆದರಹೀನನಾಗಿ ಅತ್ಯಾಗ್ರಹಪೂರ್ವಕವಾಗಿನ್ನೂ ಜನರುಗಳ ದಯ ಸಂಪಾದಿಸೋದಕ್ಕಾಗಿನ್ನೂ ಕೋಪವೂನೂ ಬಿಡದೆ, ನಾನು ನನ್ನದು—ಸರ್ವಸ್ವತಂತ್ರನೇ ನಾನು ಎಂತಲೂನೂ, ಸರ್ವವೂ ನಾನು ಹೊರ್ತು ಬ್ಯಾರೆ ಪುರುಷರಿಲ್ಲ ಎಂತ ಅಂದುಕೊಂಡು, ಸರ್ವವೂ ನನ್ನಾಧೀನದಲ್ಲಿ ಅದೆ, ನಾನೇ ಸರ್ವಕ್ಕೂ ಯಜಮಾನ ಎಂತ ಈ ಪ್ರಕಾರವಾಗಿ ಅಭಿಮಾನ ಹೆಚ್ಚಿಕೊಂಡು, ಎಂಬ ಮಾನವನು—ಇದ್ದು ಅನತಕ್ಕ ಮನುಷ್ಯನು ಏನು ಸತ್ಕರ್ಮ ಮಾಡಿದರೂ ಫಲವಿಲ್ಲ. ಸಮೀಚೀನವಾದ ಸತ್ಕರ್ಮಗಳೆಂಬ ಕ್ಷೀರವನ್ನ ಸಂಪಾದನೆ ಮಾಡಿ ಅದರಲ್ಲಿ, ಅಹಂಮಮತಾ ಎಂಬ ವಿಷವನ್ನು ಕಲಸಿದರೆ, ಆ ಕ್ಷೀರ ಪಾನಕ್ಕೆ ಯೋಗ್ಯವಾಗದೇ ಹ್ಯಾಂಗೆ ವ್ಯರ್ಥವಾಗಿ ಹೋಗತದೋ ತದ್ವತ್ ಅಹಂಮಮತಾ ಎಂಬ ಜ್ಞಾನಯುಕ್ತನಾದವ ಏನು ಸತ್ಕರ್ಮ ಮಾಡಿದರೂ ಫಲವಿಲ್ಲ, ವ್ಯರ್ಥವಾಗತದೆ ಎಂತ ತಾತ್ಪರ್ಯ.

**ಏನು ಕೇಳಿದರೇನು ನೋಡಿದ ।**
**ರೇನು ಓದಿದರೇನು ಪೇಳಿದ ।**
**ರೇನು ಪಾಡಿದರೇನು ಮಾಡಿದರೇನು ದಿನದಿನದಿ ॥**
**ಶ್ರೀನಿವಾಸನ ಜನ್ಮಕರ್ಮ ಸ ।**
**ದಾನುರಾಗದಿ ನೆನೆದು ತತ್ತ ।**
**ತ್ಸ್ಥಾನದಲಿ ತದ್ರೂಪ ತನ್ನಾಮಕನ ಸ್ಮರಿಸದವ ॥ ೧೭ ॥**

ಇನ್ನೂ ಪೂರ್ವೋಕ್ತ ಅಹಂಮಮತಾ ವಿಚಾರವೇ ಅವಶಿಷ್ಟ ಹೇಳತಾರೆ.

ಏನು ಕೇಳಿದರೇನು–ಮನುಷ್ಯನಾದವನು ಮದಮತ್ಸರ ಕಾಮಕ್ರೋಧ ಇನ್ನೂ ಅಹಂಮಮತಾಜ್ಞಾನ ಇವುಗಳಿಂದ ಯುಕ್ತನಾಗಿ, ಶಾಸ್ತ್ರಪುರಾಣಗ್ರಂಥ ಇವುಗಳಲ್ಲಿ ಹೇಳಿದ ಕ್ರಮುಗಳನ್ನು ಬಹುಮುಖತಃ ಕೇಳಿದರೇನು, ನೋಡಿದರೇನು–ಅನೇಕ ತೀರ್ಥ ಕ್ಷೇತ್ರಯಾತ್ರಾಮಾಡಿ ಅಲ್ಲಲ್ಲಿದ್ದ ಭಗವನ್ಮೂರ್ತಿಗಳ ತಥಾ, ಭಗವದ್ಭಕ್ತರ ನೋಡಿದರೇನು, ಓದಿದರೇನು–ಗುರುಗಳಲ್ಲಿ ದಿವ್ಯಸಚ್ಛಾಸ್ತ್ರಗಳನ್ನು ಮನಃಪೂರ್ವಕ ಓದಿದರೇನು, ಪೇಳಿದ ರೇನು–ಭಗವತ್ತತ್ವಗಳ ಅನ್ಯರಿಗೆ ಉಪದೇಶ, ತಥಾ ಪುರಾಣರೂಪದಿಂದ ಹೇಳಿದರೇನು, ಮಾಡಿದರೇನು–ಯಜ್ಞಯಾಗಾದಿಗಳು, ದಾನ, ತಪಸ್ಸು ಇವುಗಳ ಮಾಡಿದರೇನು, ಪಾಡಿದರೇನು–ದಾಸತ್ವ ವಹಿಸಿ ದಿವ್ಯಗಾನರೂಪದಿಂದ, ಕಥಾಗಳಿಂದ ಜನರಿಗೆ ಸಂತೋಷವೂ, ಪರಮಾತ್ಮನ ಪ್ರೀತಿಗಾಗಿಯೂ ಗಾನಮಾಡಿದರೇನೂ ಫಲವಿಲ್ಲ. ಏಕೆ ಫಲವಿಲ್ಲ ವಾಗತದೆ ಎಂದರೆ, ದಿನದಿನದಿ–ಪ್ರತಿದಿನದಲ್ಲೂ, ಶ್ರೀನಿವಾಸನ–ಶ್ರೀ ಲಕ್ಷ್ಮೀಪತಿಯಾದ ಪರಮಾತ್ಮನ, ಜನ್ಮ–ಅವತಾರರೂಪವಾದ, ಕರ್ಮ–ಸೃಷ್ಟ್ಯಾದಿವ್ಯಾಪಾರರೂಪವಾದ ಕರ್ಮ ಇವುಗಳನ್ನ, ಸದಾ–ಅವಿಚ್ಛಿನ್ನವಾಗಿ, ಅನುರಾಗದಿ ನೆನೆದು–ಕೇವಲ ಭಕ್ತಿ ಪೂರ್ವಕ ನೆನೆದು, ತತ್ತತ್ಸ್ಥಾನದಲಿ–ಸರ್ವ ಸ್ಥಳ, ಸರ್ವ ಕರ್ಮಗಳಲ್ಲಿ ತದಾಕಾರ ನಾಗಿರುವ ಶ್ರೀ ಪರಮಾತ್ಮಗೂ ತನ್ನ ಬಿಂಬರೂಪಕ್ಕೂ ಐಕ್ಯ ಚಿಂತಿಸುತ್ತಾ, ಇನ್ನೂ, ತದ್ರೂಪ–ಆಯಾ ಅಧಿಷ್ಠಾನದಲ್ಲಿರುವ ಶ್ರೀ ಪರಮಾತ್ಮಗೆ ಅದೇ ರೂಪ ಎಂತಲೂ, ಇನ್ನೂ, ತನ್ನಾಮಕನ–ಆ ಆ ಅಧಿಷ್ಠಾನಕ್ಕೆ ದಾವ ನಾಮವೋ ಅದೇ ನಾಮವೇ ಶ್ರೀ ಪರಮಾತ್ಮನ ನಾಮ ಎಂತಲೂ, ಈ ಪ್ರಕಾರ, ಸ್ಮರಿಸಿದವ–ಅನುಸಂಧಾನ ಮಾಡಿ ಶ್ರೀ ಪರಮಾತ್ಮನ ಸ್ಮರಣಾದಿಗಳ ಮಾಡದೇ, ಪೂರ್ವೋಕ್ತ ಗುಣಗಳ ಯುಕ್ತನಾಗಿ ಇರುವದ್ದ ರಿಂದ ಫಲವಿಲ್ಲ. ಎಂದರೆ, ಕರ್ಮಗಳ ತ್ಯಾಗಮಾಡಬೇಕೆಂತಾಗಲೀ, ಶ್ರೀಪರಮಾತ್ಮ ನಲ್ಲಿ ಭಕ್ತಿ ಇದ್ದವನೇ ಆ ಕರ್ಮಗಳು ಮಾಡಬೇಕೆಂತಾಗಲೀ ತಾತ್ಪರ್ಯವಲ್ಲ. ಕರ್ಮ ಎಂಬುವದು ಜೀವರನ್ನ ಬಿಟ್ಟದ್ದಲ್ಲ. ಕರ್ಮ ಮಾಡೇತೀರಬೇಕು. ಮೋಕ್ಷದಲ್ಲಿ ಕೂಡಾ ಕರ್ಮವದೆ. ಪುರುಷನಾದವ ಕರ್ಮವೂ ಮಾಡೋದರಲ್ಲಿ ತಾನು ಸಾರ್ಥಿಕ್ಯ ಹೊಂದಿ ಸುಖಪಡಬೇಕೆಂಬ ಕುತೂಹಲವಿದ್ದು ಕರ್ಮ ಮಾಡಬೇಕೇ ಹೊರತು, ವೃಥಾ ದೇಹ ಕಷ್ಟಪಟ್ಟು ಸಾರ್ಥಿಕ್ಯ ಹೊಂದದೇ ದುಃಖಪಡೋಣದರಿಂದ ಪ್ರಯೋಜನವಿಲ್ಲವಾದಕಡಿ ಯಿಂದ, ಪೂರ್ವೋಕ್ತ ದುಷ್ಟವಾದ ಗುಣಗಳ ತ್ಯಾಗಮಾಡಿ ಸುಗುಣಗಳನ್ನು ಆಚರಣೆ ಮಾಡತಾ ಬರಬೇಕು. ಕರ್ಮ ಎಂಬುದು ಶ್ರೀಪರಮಾತ್ಮಗೂ ಸೃಷ್ಟ್ಯಾದಿ ವ್ಯಾಪಾರವದೆ. ಆದಕಡಿಯಿಂದ ಅಹಂಮಮತಾದಿಗಳನ್ನ ಬಿಟ್ಟುಬಿಡಬೇಕೆಂತ ತಾತ್ಪರ್ಯ.

**ಬುದ್ಧಿವಿದ್ಯಾಬಲದಿ ಪೇಳಿದ ।**
**ಶುದ್ಧಕಾವ್ಯವಿದಲ್ಲ ತತ್ವ ಸು ।**
**ಪದ್ಧತಿಗಳನು ತಿಳಿದ ಮಾನವನಲ್ಲ ಬುಧರಿಂದ ।**

**ಮಧ್ವವಲ್ಲಭ ತಾನೆ ಹೃದಯದೊ ।**
**ಳಿದ್ದು ನುಡಿದಂದದಲಿ ನುಡಿದೆನ ।**
**ಪದ್ಧಗಳ ನೋಡದಲೆ ಕಿವಿಗೊಟ್ಟಾಲಿಪುದು ಬುಧರು ॥ ೧೮ ॥**

ಈ ಗ್ರಂಥಕರ್ತೃಗಳಾದ ಶ್ರೀ ಜಗನ್ನಾಥದಾಸರಾಯರು ಇದುವರಿಗೆ ಭಗವತ್ತತ್ವ ವಿಚಾರ ಹೇಳಿ ಈಗ ತಾವು ಈ ಗ್ರಂಥವನ್ನು ಮಾಡಿದ ಕ್ರಮುವನ್ನ ಹೇಳತಾರೆ.

ಬುದ್ಧಿ–ಈ ಕಾವ್ಯವೆಂಬುದರನ್ನ ಸ್ವಬುದ್ಧಿಯಿಂದ ಆಲೋಚನಿ ಮಾಡಿ ಆಗಲಿ, ವಿದ್ಯಾಬಲದಿ – ಪಾಂಡಿತ್ಯಬಲದಿಂದಾಗಲಿ, ಶುದ್ಧ– ನಿರ್ಮಲನಾದ ಶ್ರೀಪರಮಾತ್ಮನ ಮಹಾತ್ಮ್ಯ, ಪೇಳಿದ–ಹೇಳಿದಂಥಾ, ಕಾವ್ಯ–ಈ ಗ್ರಂಥ, ಇದಲ್ಲ ಎಂತ ಅರ್ಥ. ಇನ್ನೂ ನಾನು, ಬುಧರಿಂದ–ಭಗವದ್ಭಕ್ತರಾದ ಜ್ಞಾನಿಗಳಿಂದ, ತತ್ವಸುಪದ್ಧತಿಗಳನು–ಭಗವತ್ಸಂಬಂಧವಾದ ತತ್ವಗಳೇನು, ಉತ್ತಮವಾದ ಪದ್ಧತಿಗಳೇನು, ತಿಳಿದ ಮಾನವನಲ್ಲ–ತಿಳಿದುಕೊಂಡವನೂ ಅಲ್ಲ. ಅಥವಾ ತಿಳಿದುಕೊಂಡು ಆದರಂತೆ ಮಾಡಿದವನೂ ಅಲ್ಲ. ಆದರೆ ಮಾಡಿದ್ದು ಹ್ಯಾಂಗೆಂದರೆ, ಮಧ್ವವಲ್ಲಭ–ಶ್ರೀಮದಾನಂದತೀರ್ಥಗುರ್ವಂತರ್ಗತ ಶ್ರೀ ವೇದವ್ಯಾಸದೇವರು, ತಾನೇ–ತನಗೆ ತಾನಾಗಿ, ಹೃದಯದೊಳಿದ್ದು–ಹೃದಯಾಕಾಶದಲ್ಲಿ ಪ್ರತ್ಯಕ್ಷನಾಗಿದ್ದು, ನುಡಿದಂದದಲಿ–ಬಿಂಬಕ್ರಿಯಾ ದ್ವಾರಾ ನುಡಿದೋಪಾದಿಯಲ್ಲಿ, ನುಡಿದೆ–ಪ್ರತಿಬಿಂಬನಾದ ನಾನು ನುಡಿದಿದ್ದೇನೆ. ಆದಕಡಿಯಿಂದ ಇದರಲ್ಲಿ ಏನಾದರೂ, ಅಪದ್ಧಗಳ–ವಾಚಾಪ್ರಮಾದ ಸಂಗತಿಗಳು ಇದ್ದರೆ, ನೋಡದಲೆ–ಅದರನ್ನ ಶಾಸ್ತ್ರಾವರೂಢ ಮಾಡಿಕೊಂಡು, ಬುಧರು–ಜ್ಞಾನಿಗಳಾದವರು, ಕಿವಿಗೊಟ್ಟು–ಈ ಗ್ರಂಥ ಕೇಳೋದರಲ್ಲಿ ಕಿವಿಗೊಟ್ಟು, ಆಲಿಪುದು–ಕೇಳೋವರಾಗಬೇಕು, ಅಂತ ಅರ್ಥ. "ಸಂಕ್ಷಿಪ್ತವಾಕ್ಯೇ ಮಯಿ ಮಂದಬುದ್ಧೌ ಸಂತೋ ಗುಣಾಢ್ಯಾಃ ಕರುಣಾಂ ಕ್ರಿಯಾಸುಃ" ಎಂಬ ಶ್ರೀ ಪಂಡಿತಾಚಾರ್ಯರ ವಾಕ್ಯದಂತೆ ಪ್ರಾರ್ಥನಮಾಡಿದ್ದಾರೆ ಎಂತ ತಾತ್ಪರ್ಯ.

**ಕಬ್ಬಿನೊಳಗಿಹ ರಸ ವಿದಂತನಿ ।**
**ಗಬ್ಬುಬಲ್ಲುದೆ ಭಾಗ್ಯ ಯೌವನ ।**
**ಮಬ್ಬಿನಲಿ ಮೈಮರೆದವಗೆ ಹರಿಸುಚರಿತಾಮೃತವು ॥**
**ಲಭ್ಯವಾಗದು ಹರಿಪದಾಬ್ಜದಿ ।**
**ಹಬ್ಬಿದರೆ ಸದ್ಭಕ್ತಿರಸವುಂ ।**
**ಡುಬ್ಬಿ ಕೊಬ್ಬಿ ಸುಖಾಬ್ಧಿಯೊಳಗಾಡುವವಗಲ್ಲದಲೆ ॥ ೧೯ ॥**

ಈ ಗ್ರಂಥ ದಾರಿಗೆ ಶ್ಲಾಘ್ಯ, ದಾರಿಗೆ ಅಶ್ಲಾಘ್ಯವಾಗಿರತದೆ ಅಂದರೆ ಹೇಳತಾರೆ.

ಕಬ್ಬಿನೊಳಗಿಹ–ಒಳ್ಳೆ ಬಲಿತ ಕಬ್ಬಿನಲ್ಲಿ ಇರತಕ್ಕ, ರಸ–ಸ್ವಾದುಯುಕ್ತವಾದ ರಸವು, ವಿದಂತನಿಗೆ–ಹಲ್ಲುಗಳು ರಹಿತನಾದ ಮನುಷ್ಯನಿಗೆ, ಅಬ್ಬುಬಲ್ಲದೆ–ಅದರನ್ನ ಕಚ್ಚಿ

ಆದರ ರಸ ಸ್ವೀಕರಿಸಿ ಮನದಣಿಯ ಪಾನಮಾಡೋದಕ್ಕೆ ಆಗೋದೇ, ಎಂದರೆ, ಆಗ ಲಾರದು. ಭಾಗ್ಯ ಯೌವನ–ಜ್ಞಾನ ಭಕುತಿಗಳೆಂಬೋ ದಂತದಿಂದ ಶೂನ್ಯನಾಗಿ, ಭಾಗ್ಯ ವೇನು, ಯೌವನವೇನು, ಇದು ಎರಡೆಂಬ ವಸಡುಗಳುಳ್ಳ ಪುರುಷನು ಈ ಹರಿಕಥಾಮೃತ ಸಾರವೆಂಬ ಕಬ್ಬುಸದೃಶವಾದ ಈ ಗ್ರಂಥವನ್ನ ಭುಂಜಿಸಿ ತದ್ಗತ ಸಾರಭೂತವಾದ ಅನು ಸಂಧಾನವನ್ನ ಗ್ರಹಿಸಿ ಸಂತೋಷ ಪಡಿಯದೆ ಇರತಕ್ಕವನು ಅರಿಯನು. ಮತ್ತು ವಿದಂತ ನಿಗೆ ಕಬ್ಬಿನ ರಸ ಹ್ಯಾಂಗೆ ಅಬ್ಬೋದಿಲ್ಲವೋ, ತದ್ವತ್, ಐಶ್ವರ್ಯದಿಂದಲೂ, ಯೌವನ ದಿಂದಲೂ, ಕೇವಲ ವಿದ್ಯಾಮದದಿಂದಲೂ, ಮಬ್ಬಿನಲಿ–ಇರತಕ್ಕ ಮದಾಂಧತೆಯಿಂದ, ಮೈಮರೆದವಗೆ–ದೇಹದಲ್ಲಿ ಸುಜ್ಞಾನವೆಂಬ ಸ್ಮಾರಕವಿಲ್ಲದವಗೆ, ಹರಿಸುಚರಿತಾಮೃತವು– ಶ್ರೀ ಪರಮಾತ್ಮನ ದಿವ್ಯಚರಿತೆಗಳೆಂಬ ಅಮೃತದಿಂದ ಸಹಿತವಾದ ಈ ಗ್ರಂಥವು, ಲಭ್ಯ ವಾಗದು–ಅವಗೆ ಲಭಿಸೋದಿಲ್ಲ. (ಆದರೆ ದಾರಿಗೆ ಲಭ್ಯವಾಗತದೆ ಎಂದರೆ), ಹರಿಪದಾಬ್ಜದಿ– ಪರಮಾತ್ಮನ ಪಾದಕಮಲಗಳಲ್ಲಿ, ಹಬ್ಬಿದ–ಅತಿ ವ್ಯಾಪ್ತವಾದ, ಅತಿಸದ್ಭಕ್ತಿ–ಅತ್ಯಂತ ಶ್ರೇಷ್ಠತರವಾದ ಭಕ್ತಿಯೆಂಬ, ರಸವುಂಡು–ಮಕರಂದಾಖ್ಯ ರಸವನ್ನ ಪಾನಮಾಡಿ, ಉಬ್ಬಿ–ಅದರಿಂದ ಉಪಚಯವಾದ, ಕೊಬ್ಬಿ–ಆನಂದದಿಂದ ಮೈಮರೆತು ವಿಷಯಾದಿಗಳು ತ್ಯಾಗಮಾಡಿ ಜ್ಞಾನಭಕ್ತಿವೈರಾಗ್ಯಾದಿಗಳಿಂದ ಯುಕ್ತವಾದ ಕೊಬ್ಬು ಉಂಟಾಗಿ (ಅಥವಾ ಮದ ಉಂಟಾಗಿ), ಸುಖಾಬ್ಧಿಯೊಳು–ಶ್ರೀಪರಮಾತ್ಮನಲ್ಲಿ ತದೇಕನಿಷ್ಠವಾದ ಸುಖಜ್ಞಾನಸಮುದ್ರದಲ್ಲಿ, ಆಡುವಗೆ ಅಲ್ಲದಲೆ–ಸಂಚಾರಮಾಡತಕ್ಕವರಿಗೆ ಈ ಗ್ರಂಥವು ಉಪಯೋಗವೇ ಹೊರತು ತದನ್ಯರಿಗೆ ಉಪಯೋಗವಿಲ್ಲ. ಇದರಲ್ಲಿ ನಿಸ್ಪೃಹ ಅಭಿಮಾನ ತ್ಯಾಗಪೂರ್ವಕ ಭಗವದುಪಾಸನಾ ಹೇಳತದೆ. ಆದ್ದರಿಂದ ಕೇವಲ ಭಗವದ್ಭಕ್ತರಿಗೇವೇ ಉಪಯೋಗವಾಗತದೆ ಎಂತ ತಾತ್ಪರ್ಯ.

**ಖಗವರಧ್ವಜನಂಘ್ರಿ ಭಕುತಿಯ ।**
**ಬಗೆಯನರಿಯದ ಮಾನವರಿಗಿದು ।**
**ಒಗಟಿನಂದದಿ ತೋರುತಿಪ್ಪದು ಎಲ್ಲ ಕಾಲದಲಿ ॥**
**ತ್ರಿಗುಣವರ್ಜಿತನಮಲಗುಣಗಳ ।**
**ಪೊಗಳಿ ಹಿಗ್ಗುವ ಭಾಗವತರಿಗೆ ।**
**ಮಿಗೆ ಭಕುತಿ ವಿಜ್ಞಾನ ಸುಖವಿತ್ತವರ ರಕ್ಷಿಪುದು ॥ ೨೦ ॥**

ಈ ಗ್ರಂಥ ಭಗವದ್ಭಕ್ತರಿಗೆ ದಿವ್ಯಜ್ಞಾನ ಕೊಟ್ಟು ರಕ್ಷಿಸುತ್ತದೆ ಎಂತ ಹೇಳತಾರೆ.

ಖಗವರ–ಪಕ್ಷಿಶ್ರೇಷ್ಠನಾದ ಗರುಡದೇವರು, ಧ್ವಜನಂಘ್ರಿ–ಧ್ವಜಪತಾಕದಿಂದ ವಿದ್ಯಮಾನನಾದ ಶ್ರೀಕೃಷ್ಣನ ಪಾದಗಳಲ್ಲಿ, ಭಕುತಿಯ–ಭಕ್ತಿ ಇರತಕ್ಕಂಥಾ, ಬಗೆಯ ನರಿಯದ–ಕ್ರಮವನ್ನು ತಿಳಿಯದೇ ಇರತಕ್ಕಂಥಾ, ಮಾನವರಿಗೆ–ಮನುಷ್ಯರಿಗೆ, ಇದು– ಈ ಹರಿಕಥಾಮೃತಸಾರಗತ ಅರ್ಥವು, ಒಗಟಿನಂದದಿ–ಗರ್ಭೀಭೂತವಾದ ಅರ್ಥದ ಹಾಂಗೆ, ತೋರುತಿಪ್ಪದು–ಅಸಾಧ್ಯವೆಂತ ತೋರತದೆ. ಮತ್ತು ವಿಷಯಾಸಕ್ತರಾದವರಿಗೆ

ಇದರ ಆಚರಣೆ ಕೂಡಾ ಮನಸ್ಸಿಗೆ ಕಷ್ಟವೆಂತಲೇ ತೋರುತ್ತದೆ. ಎಲ್ಲ ಕಾಲದಲಿ– ಸರ್ವದಾ ಎಂತ ಅರ್ಥ. (ಆದರೆ ದಾರಿಗೆ ಸಾಧ್ಯವಾಗಿ ಆಚರಣೆಗೆ ಬರತದೆ ಎಂದರೆ), ತ್ರಿಗುಣವರ್ಜಿತನ–ಪ್ರಾಕೃತ ಸತ್ವಾದಿ ಗುಣತ್ರಯಗಳಿಂದ ದೂರನಾದ ತನಗೆ ಅಭಿನ್ನ ಗಳಾದ ಸತ್ವಾದಿ ಗುಣತ್ರಯಗಳಿಂದ ಯುಕ್ತನಾದ ಗುಣಪೂರ್ಣನಾದ ಪರಮಾತ್ಮನ (ಅನುಗ್ರಹ ಸಂಪಾದಿಸಿ ಸದ್ಗತಿ ಐದಬೇಕೆಂಬ ಇಚ್ಛಾದಿಂದ ವಿಷಯಾಶಾ ನೀಗಿ, ಜ್ಞಾನ ಭಕ್ತಿವೈರಾಗ್ಯಗಳಿಂದ ಯುಕ್ತನಾಗಿ), ಅಮಲ–ದೋಷದೂರವಾದ, ಗುಣಗಳ–ತನ್ನ ಯೋಗ್ಯತಾನುಸಾರ ಸೃಷ್ಟ್ಯಾದಿ ಕರ್ಮಗುಣಗಳ, ಪೊಗಳಿ ಹಿಗ್ಗುವ–ಉಚ್ಚಾರಮಾಡತಾ ಆನಂದದಿಂದ ಹಿಗ್ಗತಾ ಇರತಕ್ಕ, ಭಾಗವತರಿಗೆ–ಭಗವದ್ಭಕ್ತರಿಗೆ, ಮಿಗೆ ಭಕುತಿ–ಪೂರ್ವಾ ಪೇಕ್ಷಯಾ ಅಧಿಕವಾದ ಭಕುತಿಯನ್ನೇನು, ವಿಜ್ಞಾನ–ವಿಶೇಷ ಅನುಸಂಧಾನ ಮಾಡತಕ್ಕ ಜ್ಞಾನವೇನು, ಸುಖವಿತ್ತು–ಇದರಿಂದ ಹುಟ್ಟಿದ ಸುಖವೇನು, ಕೊಟ್ಟು, ಅವರ ರಕ್ಷಿ ಪುದು–ಅವರನ್ನ ಇಹದಲ್ಲಿ, ಪರದಲ್ಲಿ ಸಂರಕ್ಷಿಸುತದೆ ಎಂತ ತಾತ್ಪರ್ಯ.

**ಪರಮತತ್ವರಹಸ್ಯವಿದು ಭೂ ।**
**ಸುರರು ಕೇಳುವುದು ಸಾದರದಿ ನಿ ।**
**ಷ್ಠುರಿಗಳಿಗೆ ಮೂಢರಿಗೆ ಪಂಡಿತಮಾನಿ ಪಿಶುಣರಿಗೆ ॥**
**ಅರಸಿಕರಿಗಿದು ಪೇಳ್ವುದಲ್ಲನ ।**
**ವರತ ಭಗವತ್ಪಾದಯುಗಳಾಂ ।**
**ಬುರುಹ ಮಧುಕರನೆನಿಸುವರಿಗಿದನರುಪು ಮೋದದಲಿ ॥ ೨೧ ॥**

ಈ ಗ್ರಂಥದ ಮರ್ಮವನ್ನ ದಾರಿಗೆ ತಿಳಿಸಬಹುದು, ದಾರಿಗೆ ತಿಳಿಸಬಾರದು ಎಂದರೆ ಅಂಥಾ ಅಧಿಕಾರಿಗಳನ್ನ ಹೇಳತಾರೆ.

ಪರಮತತ್ವರಹಸ್ಯವಿದು– ಈ ಹರಿಕಥಾಮೃತಸಾರವೆಂಬುವದು, ಅತ್ಯುತ್ತಮವಾದ ಅನುಷ್ಠಾನಮಾಡಿ ಸದ್ಗತಿ ಐದತಕ್ಕ ತತ್ವಗಳ ಹೇಳುವಂಥಾದ್ದು. ಇದರನ್ನ, ಭೂಸುರರು– ಭೂದೇವತೆಗಳಾದ, ಜ್ಞಾನಿಗಳಾದ ಬ್ರಾಹ್ಮಣರು, ಸಾದರದಿ–ಕೇವಲ ಆಸಕ್ತಿ ಉಳ್ಳವ ರಾಗಿ, ಕೇಳುವುದು–ಕೇಳೋವರಾಗಬೇಕು. ವಿಷಯವಿರಕ್ತರಾಗಬೇಕೆಂಬುವರು ಕೇಳ ತಕ್ಕದ್ದು. ದಾರಾದರೆ ಭಗವತ್ತತ್ವಗಳ ತಿಳಕೋಬೇಕು ಎಂತ ಇಚ್ಛಾ ಇದ್ದರೂನೂ ಕೇಳಿದರೆ ಅವರು ಒಳ್ಳೇ ತತ್ವಮಾರ್ಗಗಳ ತಿಳಿಯುತಾರೆ. (ಇದರ ಮಹಾತ್ಮ್ಯೂನೂ ಇದರಲ್ಲಿ ಹೇಳತಕ್ಕ ವಿಚಾರ ದಾರಿಗೆ ಹೇಳಬಾರದೆಂದರೆ), ನಿಷ್ಠುರಿಗಳಿಗೆ–ಈ ಗ್ರಂಥದ ಅತಿಶಯವೇನು, ಮೂಲ ಟೀಕಾದಿ ಗ್ರಂಥಗಳು, ಪುರಾಣಗಳು, ವೇದಶ್ರುತಿಗಳು, ಅನೇಕ ಪ್ರಕಾರವದೆ ಎಂತ ಇತ್ಯಾದಿ ನಿಷ್ಠುರವಾಕ್ಯಗಳ ಮಾತನಾಡತಕ್ಕವರಿಗೇನು, ಮೂಢರಿಗೆ– ಆದರವಿಲ್ಲದ ಭಗವನ್ಮಹಿಮಾ ತಿಳಕೊಂಬೋದರಲ್ಲಿ ಆಶಾ ಇಲ್ಲದವರಿಗೆ ಢಾಂಬಿಕ ಪ್ರದರ್ಶನ ನಿಮಿತ್ತ ತಿಳಕೊಂಬೋದು ಎಂತ ಅನತಕ್ಕವರಿಗೆ, ಇನ್ನೂ ಶುದ್ಧವಾಗಿ ಪಶು ಸದೃಶರಾಗಿ ಇರತಕ್ಕವರಿಗೇನು, ಪಂಡಿತಮಾನಿ–ಶಾಸ್ತ್ರ ಓದಿ ಸರ್ವವೂ ತಿಳಕೊಂಡಿದ್ದೇವು,

ಈ ಕನ್ನಡಭಾಷಾ ಕಾವ್ಯದಿಂದ ತಿಳಕೋಬೇಕಾದ ವಿಷಯ ಏನು ಅದೆ ಎಂತ ಅನತಕ್ಕ ಪಂಡಿತರಿಗೇನು, ಪಿಶುನರಿಗೆ–ಈ ಗ್ರಂಥದಲ್ಲಿ ಇಲ್ಲದ ದೂಷಣೆಗಳನ್ನು ಹೇಳಿ ದೂಷಣ ಮಾಡತಕ್ಕವರಿಗೇನು, ಇನ್ನೂ ಛಾಡಿ ಹೇಳತಕ್ಕವರಿಗೇನು, ಅರಸಿಕರಿಗೆ–ಇದರ ಮಾಹಾತ್ಮ್ಯ ಎಂಬ ರಸವನ್ನ ಗ್ರಹಿಸೋ ಯೋಗ್ಯತಾ ಇಲ್ಲದವರಿಗೇನು, ಇಂಥಾವರಿಗೆಲ್ಲ ಇದು, ಪೇಳ್ವುದಲ್ಲ–ಈ ಗ್ರಂಥವನ್ನ ಹೇಳತಕ್ಕದ್ದಲ್ಲ. (ಆದರೆ ದಾರಿಗೆ ಹೇಳಿ ತೋರಿಸ ಬೇಕೆಂದರೆ), ಅನವರತ–ನಿರಂತರದಲ್ಲೂ ಶ್ರೀಪರಮಾತ್ಮನ ಅನುಗ್ರಹಕ್ಕೆ ಪಾತ್ರನಾಗಿ ಸದ್ಗತಿ ಐದಬೇಕೆಂಬ ಇಚ್ಛಾ ಉಂಟಾಗಿ, ಭಗವತ್ಪಾದಯುಗಳ–ಷಡ್ಗುಣೈಶ್ವರ್ಯಸಂಪನ್ನ ನಾದ ಶ್ರೀ ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನ ಪಾದದ್ವಯಗಳೆಂಬ, ಅಂಬುರುಹ– ಕಮಲಗಳಲ್ಲಿ, ಮಧುಕರರೆನಿಸುವರಿಗೆ–ಭ್ರಮರಸದೃಶವಾದ ಮನಸ್ಸನ್ನ ಇಟ್ಟು ತದ್ಗತ ಮಹಾತ್ಮೆ ಎನತಕ್ಕ ಮಧುವನ್ನು ಪಾನಮಾಡತಕ್ಕವರು ದಾರೋ, ಅಂಥಾ ಅಧಿಕಾರಿ ಗಳಿಗೆ, ಮೋದದಲಿ–ಅತ್ಯಂತ ಸಂತೋಷದಿಂದ, ಇದನರುಪು–ಈ ಗ್ರಂಥದ ತಾತ್ಪರ್ಯ ವನ್ನ ತಿಳಿಸೋವನಾಗಬೇಕು ಎಂತ ತಾತ್ಪರ್ಯ.

**ಲೋಕವಾರ್ತೆಯಿದಲ್ಲ ಪರಲೋ ।**
**ಕೈಕನಾಥನ ವಾರ್ತೆ ಕೇಳ್ವರೆ ।**
**ಕಾಕುಮನುಜರಿಗಿದು ಸಮರ್ಪಕವಾಗಿ ಸೊಗಸುವುದೇ ॥**
**ಕೋಕನದ ಪರಿಮಳವು ಷಟ್ಪದ ।**
**ಸ್ವೀಕರಿಸುವಂದದಲಿ ಜಲಚರ ।**
**ಭೇಕ ಬಲ್ಲುದೆ ಇದರ ರಸ ಹರಿಭಕುತಗಲ್ಲದಲೆ ॥ ೨೨ ॥**

ಹರಿಭಕ್ತ ಈ ಗ್ರಂಥಾವಲೋಕನ ಮಾಡಿ ಸುಖಪಡತಾನೆ ಎಂತಲೂ ಹೇಳತಾರೆ.

ಲೋಕವಾರ್ತೆಯಿದಲ್ಲ–ಲೋಕಕ್ಕೆ ಸಂಬಂಧವಾದ ಪ್ರಾಕೃತ ವಿಷಯಭೋಗಾದಿ ಗಳಲ್ಲಿ ರುಚ್ಯುತ್ಪಾದನ ಮಾಡಿಕೊಡತಕ್ಕ ಮಾತುಗಳಿಂದ ಯುಕ್ತವಾದ ಗ್ರಂಥವಲ್ಲ. (ಆದರೆ ದಾವದರಿಂದ ಯುಕ್ತವಾಗಿ ಅದೆ ಅಂದರೆ), ಪರಲೋಕೈಕನಾಥನ–ಉತ್ತಮವಾದ ವೈಕುಂಠಾದಿ ಲೋಕಗಳಿಗೆ ಸರ್ವ ಚರಾಚರಗಳಿಗೆ ಸದೃಶರಹಿತನಾದ ಸ್ವಾಮಿಯಾದ ಶ್ರೀಪರಮಾತ್ಮನಲ್ಲಿ ನಿರವಧಿಕ ಭಕ್ತಿ ಉಂಟಾಗಿ ಜ್ಞಾನಭಕ್ತಿವೈರಾಗ್ಯಗಳಿಂದ ಸದ್ಗತಿ ಐದತಕ್ಕ ರುಚ್ಯುತ್ಪಾದಕವಾದ ಸಂಗತಿಗಳು ಇದರಲ್ಲಿ ಹೇಳಲ್ಪಟ್ಟಿವೆ. ಇಂಥಾ ಸಂಗತಿ ಇರುವ ಈ ಗ್ರಂಥಗತ, ವಾರ್ತೆ–ಮಾತುಗಳು ಎನತಕ್ಕ ದಿವ್ಯ ಶ್ರೀ ಪರಮಾತ್ಮನ ಕಥಾ ವನ್ನ, ಕೇಳುವರೇ–ವಿಷಯಭೋಗನಿಷ್ಠರಾಗಿ ನಶ್ವರವಾದ ಐಶ್ವರ್ಯಾದಿಗಳು ಸುಖಕರ ಗಳೆಂದು ತಿಳಿದು, ಪರಲೋಕವನ್ನ, ಶ್ರೀಪರಮಾತ್ಮನ್ನ ಮರತು ಇರತಕ್ಕ ಮೂಢಜನರು ಕೇಳಲೇ ಕೇಳಲಾರರು. ಕಾಕುಮನುಜರಿಗಿದು–ಇಂಥಾ ಜನರು ವಿಧಿನಿಷೇಧಗಳಿಲ್ಲದೆ ನಾನಾ ಪ್ರಕಾರ ಮನಸ್ಸನ್ನು ಬಿಟ್ಟು ಸಂಚರಿಸತಕ್ಕ, ದುಷ್ಟರಾದವರಿಗೆ ಈ ಗ್ರಂಥವೇನು, ಇದರ ಮಹಿಮೆ ಏನು, ಇದರಲ್ಲಿ ಇದ್ದ ರಸವೇನು, ಸಮರ್ಪಕವಾಗಿ–ಮನಸ್ಸಿಗೆ ತೃಪ್ತಿಕರ

ವಾಗಿ, ಸೊಗಸುವುದೇ–ಶೋಭಿಸೋದಿಲ್ಲ. (ಯಾಕೆ ಅಂದರೆ, ತಮ್ಮ ಮಾರ್ಗಕ್ಕೆ ವಿರುದ್ಧ ವಾಗಿ ಇರೋಣದರಿಂದ ಶೋಭಿಸೋದಿಲ್ಲ.) ಇದಕ್ಕೆ ದೃಷ್ಟಾಂತ : ಕೋಕನದ ಪರಿ ಮಳವು–ರಕ್ತವರ್ಣವಿಶಿಷ್ಟವಾದ ಕಮಲದಲ್ಲಿ ಇರುವ ಪುಷ್ಪದಲ್ಲಿ, ಷಟ್ಪದ–ಸ್ಥಾನಾಂತರ ದಲ್ಲಿರುವ ಭ್ರಮರ ಹುಡುಕಿಕೊಂಡು ಬಂದು ತದ್ಗತ ಮಕರಂದವನ್ನ, ಸ್ವೀಕರಿಸುವಂದ ದಲಿ–ತೆಗೆದುಕೊಂಡು ಸುಖಪಡೋಪಾದಿಯಲ್ಲಿ, ಜಲಚರ–ನೀರಿನಲ್ಲಿ ಸದಾ ಸಂಚಾರ ಮಾಡಿಕೊಂಡು ಇರುವ, ಭೇಕ–ಕಪ್ಪೆ ಸರ್ವದಾ ಆ ಕಮಲದಲ್ಲೇ ಆವಾಸವಾಗಿ ಇರುತ್ತದೆ. ಇದ್ದರೂ ತದ್ಗತ ಮಕರಂದವನ್ನ ಪಾನಮಾಡೋದಕ್ಕೆ, ಬಲ್ಲುದೇ–ತಿಳಿಯೋದೇ ಅಂದರೆ ತಿಳಿಯಲಾರದು. ತದ್ವತ್ ಅನೇಕ ಪುರಾಣಶಾಸ್ತ್ರವೇದಗಳು ಓದಿ ಅದರಲ್ಲಿ ಕಪ್ಪೆವತ್ ಆವಾಸವಾದ ಮನಸ್ಸುಳ್ಳವರಾಗಿ, ಅನುಷ್ಠಾನದಿಂದ ರಹಿತರಾಗಿ, ಅಹಂಮಮತಾ ಯುಕ್ತ ರಾಗಿ ವಿಷಯಭೋಗಾದಿಗಳು ಶ್ರೇಷ್ಠ ಎಂತ ಅನುಷ್ಠಾನಯುಕ್ತರಾದವರು, ಈ ಹರಿ ಕಥಾಮೃತಸಾರದಲ್ಲಿ ವಿದ್ಯಮಾನವಾದ ರಸ ಸ್ವೀಕರಿಸಿ ಅನುಷ್ಠಾನ ಮಾಡೋದಕ್ಕೆ ಅರಿಯರು. (ಆದರೆ ದಾರಿಗೆ ಯೋಗ್ಯವಾಗಿ ತೋರತದೆ ಅಂದರೆ), ಇದರ ರಸ–ಈ ಗ್ರಂಥಗತ ದೇವರ ಮಹಾತ್ಮ್ಯೆ ಎಂಬ ರಸ, ಹರಿಭಕುತಗೆ–ಶ್ರೀ ಪರಮಾತ್ಮನಲ್ಲಿ ಭಕ್ತಿ ಮಾಡಬೇಕೆಂಬುವಗೆ, ಅಲ್ಲದಲೆ–ಆಗೋದೇ ಹೊರ್ತು ಇತರರಿಗೇನೂ ಸುಖ ಕೊಡೋ ದಿಲ್ಲ ಎಂತ ತಾತ್ಪರ್ಯ.

**ಸ್ವಪ್ರಯೋಜನರಹಿತ ಸಕಲೇ ।**
**ಷ್ಟಪ್ರದಾಯಕ ಸರ್ವಗುಣ ಪೂ ।**
**ರ್ಣಪ್ರಮೇಯ ಜರಾಮರಣವರ್ಜಿತ ವಿಗತಕ್ಲೇಶ ॥**
**ವಿಪ್ರತಮ ವಿಶ್ವಾತ್ಮ ಘೃಣಿ ಸೂ ।**
**ರ್ಯಪ್ರಕಾಶಾನಂತಮಹಿಮ ಘೃ ।**
**ತಪ್ರತೀಕಾರಾಧಿತಾಂಘ್ರಿಸರೋಜ ಸುರರಾಜ ॥ ೨೩ ॥**

ಪೂರ್ವಶ್ಲೋಕವಾದ (೧೮) ಹದಿನೆಂಟನೇ ಶ್ಲೋಕದಲ್ಲಿ ಮಧ್ವವಲ್ಲಭ ತಾನೇ ಹೃದಯದೊಳಿದ್ದು ನುಡಿದನು ಎಂತ ಹೇಳಿದರೂ ಗ್ರಂಥಕರ್ತೃಗಳಾದ ಶ್ರೀ ಜಗನ್ನಾಥ ದಾಸರಾಯರು ತಾವು ಮಾಡಿದ ಗ್ರಂಥಕ್ಕೆ ಪ್ರತಿಪಾದ್ಯನಾದ ಶ್ರೀಪರಮಾತ್ಮನ ಈ ಸಂಧಿಯ ಅಂತ್ಯದಲ್ಲಿ ಸ್ತೋತ್ರಮಾಡತಾರೆ. ಆ ಪರಮಾತ್ಮ ಎಂಥಾವನೆಂದರೆ :–

ಸ್ವಪ್ರಯೋಜನರಹಿತ – ಚರಾಚರಗಳ ಸ್ವಪ್ರಯೋಜನರಹಿತನಾಗಿ ಸೃಷ್ಟಿಮಾಡಿ ಆಯಾ ಜೀವರಿಗೆ ಅವರವರ ಯೋಗ್ಯತಾನುಸಾರ, ಅಂತ್ಯಕ್ಕೆ ನಿಜಗತಿಗಳ ಕೊಟ್ಟು ಪರ ಪ್ರಯೋಜನ ಮಾಡತಕ್ಕವ. ಸಕಲೇಷ್ಟಪ್ರದಾಯಕ–ಸಮಸ್ತರಾದ ತ್ರಿವಿಧ ಜೀವರಿಗೆ ಇಷ್ಟವಾದ ಸುಖ, ದುಃಖ, ಮಿಶ್ರಸುಖ ಲಿಂಗಭಂಗಾನಂತರ ವ್ಯಕ್ತಮಾಡಿಕೊಡತಕ್ಕವ, ಸರ್ವಗುಣಸಂಪೂರ್ಣ–ಸಮಸ್ತ ಸುಗುಣಗಳಿಂದ ಛಂದಾಗಿ ಪೂರ್ಣನಾದವ, ಅಪ್ರಮೇಯ–

ರಮಾಬ್ರಹ್ಮಾದಿಗಳಿಂದ ಸಾಕಲ್ಯೇನ ತಿಳಿಸಿಕೊಳ್ಳದವ, ಜೀವರ ಯೋಗ್ಯತಾನುಸಾರ ತಿಳಿಸಿಕೋತಕ್ಕವ, ಜರಾಮರಣವರ್ಜಿತ–ಬ್ರಹ್ಮಾದಿಗಳೋಪಾದಿಯಲ್ಲಿ ನಶ್ವರವಾದ ದೇಹ ದಿಂದ ಉತ್ಪನ್ನನಾಗಿ ತತ್ತ್ಯಾಗರೂಪವಾದ ಮರಣದಿಂದ ರಹಿತನಾದವ. ಅನಾದ್ಯನಂತ ಕಾಲಕ್ಕೂ ಶಶ್ವದೇಕಪ್ರಕಾರವಾದ ಶರೀರವುಳ್ಳವ, ವಿಗತಕ್ಲೇಶ–ಹೋಗಲ್ಪಟ್ಟ ಕ್ಲೇಶ ವುಳ್ಳವ (ಅಂದರೆ ಎಂದಿಗಾದರೂ ದುಃಖವೇನು, ತಾಪತ್ರಯವೇನು, ಆಧಿವ್ಯಾಧಿಗಳು ಇಲ್ಲದವ, ಜೀವರಿಗೆ ಬಿಂಬನಾಗಿದ್ದರೂ ಅವರಿಗೆ ತ್ರಿಗುಣಗಳಿಂದ ಸಂಭವಿಸತಕ್ಕ ಕ್ಲೇಶ ಸುಖಗಳಿಂದ ದೂರನಾದವ), ವಿಪ್ರತಮ–"ವೇದಪಾಠೇ ತು ವಿಪ್ರಾಃ" ಎಂಬ ನ್ಯಾಯ ದಿಂದ ವೇದಪಾಠದಲ್ಲಿ ಶ್ರೇಷ್ಠನಾದ ವಿಪ್ರ ಎಂತ ನಾಮ ಪಡೆದ ಬ್ರಹ್ಮದೇವರಿಗಿಂತಲೂ ಉತ್ತಮನಾದವ, ವಿಶ್ವಾತ್ಮ–ಜಗದಾಕಾರದಂತೆ ವಿರಾಟರೂಪ ಉಳ್ಳವ, ಘೃಣಿ–ಕಿರಣ ಗಳುಳ್ಳ, ಸೂರ್ಯ–ಸೂರ್ಯಪ್ರಕಾಶ ಏಕಕಾಲದಲ್ಲಿ, ಅನಂತ–ಅನಂತವಾಗಿ ಉದಯ ವಾದರೆ ಎಷ್ಟು, ಪ್ರಕಾಶ–ಪ್ರಕಾಶ ಇರುತ್ತದೆ ೋ, ಅಷ್ಟು ಪ್ರಕಾಶಯುಕ್ತನಾದ ದೇಹಕಾಂತಿ ಉಳ್ಳವ, ಮಹಿಮಾ–ಅಪರಿಮಿತವಾದ ಮಹಾಚರಿತ್ರೆ ಉಳ್ಳವ, ಘೃತಪ್ರತೀಕ–ಇಂಥಾ ಪರಮಾತ್ಮಗೆ ಮುಖ್ಯಾಧಿಷ್ಠಾನರಾದ ಪ್ರತಿಮಾಸದೃಶರಾದ ಲಕ್ಷ್ಮೀದೇವೇರ ಕರಗಳಿಂದ, ಆರಾಧಿತ–ಛಂದಾಗಿ ಪೂಜಿತವಾದ, ಅಂಘ್ರಿಸರೋಜ–ಪಾದಗಳೆಂಬ ಕಮಲಗಳು ಉಳ್ಳ (ಎಂದರೆ ಶುದ್ಧ ಶ್ರೀಭಾಗದಲ್ಲಿ ಪ್ರಳಯಕಾಲದಲ್ಲಿ ಎಂತ ತಾತ್ಪರ್ಯ. ಆಗ್ಗೆ ಬ್ರಹ್ಮಾದಿ ಗಳು ವ್ಯಾವರ್ತರು), ಸುರರಾಜ–ಬ್ರಹ್ಮಾದಿ ದೇವತೆಗಳು ತಮಗೆ ಪ್ರಭು ಎಂತ ಉಪಾ ಸನಾ ಮಾಡಿಸಿಕೋತಕ್ಕವನು. ದೈತ್ಯರಿಂದ ಈ ಪ್ರಕಾರ ಉಪಾಸನಾ ಮಾಡಿಸಿಕೋ ತಕ್ಕವನಲ್ಲ. ದ್ವೇಷಿ ಎಂತ ಕರಿಸಿದವನು ಎಂತ ಅರ್ಥ.

**ತಾ||** ಸರ್ವಗುಣಸಂಪೂರ್ಣ ಎಂದರೆ ಅಸದೃಶಗುಣಗಳು ಉಳ್ಳವನೆಂತಲೂ ಅರ್ಥ. ಬ್ರಹ್ಮಾದಿ ದೇವತೆಗಳ ಇನ್ನೂ ಯಾವತ್ತರ ಸುಗುಣಗಳು ಪರಾಧೀನ ಗುಣಗಳು. ಅಂಥಾ ಗುಣಗಳು ಇಲ್ಲದವ. ಕಲ್ಯಾದಿಗಳ ಗುಣಗಳು ದುಃಖಕಾರಣ ಗುಣಗಳು. ಆದ್ದರಿಂದ ಈ ಗುಣಗಳು ಶ್ರೀ ಪರಮಾತ್ಮನಲ್ಲಿ ಇಲ್ಲ. ಸರ್ವಗುಣಸಂಪೂರ್ಣ ಎಂದರೆ ಸರ್ವ ಪ್ರಾಣಿ ಗಳ ಗುಣಗಳಕಿಂತಲೂ ವಿಲಕ್ಷಣವಾದ ಗುಣಗಳು ಉಳ್ಳವ. ರಮಾದೇವೇರು ಅಸ್ವತಂತ್ರ ಚೇತನರಾದ್ದರಿಂದ ಜೀವರಲ್ಲಿ ಅಂತರ್ಭೂತರು. ಇವರ ಗುಣಗಳಕಿಂತಲೂ ವಿಲಕ್ಷಣ ಗುಣ ಉಳ್ಳವ. ಸರ್ವಶಬ್ದದಿಂದ ಜೀವರ ಗುಣವೂ ಈಶ್ವರನಲ್ಲಿ ಅದೆ ಎಂದರೆ, ಜೀವ ರೋಪಾದಿಯಲ್ಲಿ ಅಸ್ವತಂತ್ರ ಗುಣವಿಲ್ಲದೇ ಕೇವಲ ಸ್ವತಂತ್ರ ಗುಣಗಳು ಇರೋಣದರಿಂದ, ಸರ್ವಗುಣಸಂಪೂರ್ಣ ಎಂತ ಪ್ರಯೋಗ.

**ವಿಶೇಷಾರ್ಥ :–** ಘೃತಪ್ರತೀಕ ಎಂದರೆ "ಘೃತಪ್ರತೀಕಾಂ ತಾಂ ನಿತ್ಯಂ ಘೃತ ಪೂರ್ಣಾನ್ನದಾಯಿನೀಂ | ಯಥೇಷ್ಟವಿತ್ತದಾತ್ರೀಂ ಚ ನತೋಸ್ಮ್ಯಭಯದಾಂ ಶ್ರಿಯಮ್ ||" ಎಂತ ಶ್ರೀ ವಾದಿರಾಜ ಶ್ರೀಪಾದಂಗಳವರು ಲಕ್ಷ್ಮೀಸ್ತೋತ್ರದಲ್ಲಿ ಹೇಳಿದ ಉಕ್ತಿ ಇರುವದ್ದರಿಂದ ಲಕ್ಷ್ಮೀದೇವೇರು ಎಂತ ತಾತ್ಪರ್ಯ.

**ವನಚರಾದ್ರಿಧರಾಧರನೆ ಜಯ ।**
**ಮನುಜಮೃಗವರವೇಷ ಜಯ ವಾ ।**
**ಮನ ತ್ರಿವಿಕ್ರಮದೇವ ಜಯ ಭೃಗುರಾಮ ಭೂಮ ಜಯ ।**
**ಜನಕಜಾವಲ್ಲಭನೆ ಜಯ ರು ।**
**ಗ್ಮಿಣಿಮನೋರಥ ಸಿದ್ಧಿದಾಯಕ ।**
**ಜಿನವಿಮೋಹಕ ಕಲಿವಿದಾರಣ ಜಯಜಯಾರಮಣ ॥ ೨೪ ॥**

ಪೂರ್ವೋಕ್ತ, ಪರಮಾತ್ಮ ಈ ಗ್ರಂಥವನ್ನು ಪಠನಾದಿಗಳು ಮಾಡುವ ಅಧಿಕಾರಿಗಳಿಗೆ ಅನಿಷ್ಟನಿವೃತ್ತಿ ಮಾಡಿ, ಇಷ್ಟಪ್ರಾಪ್ತಿಯನ್ನು ಕೊಡಲಿ ಎಂತ ದುಷ್ಟಶಿಕ್ಷಣ ಶಿಷ್ಟ ಪರಿಪಾಲನ ಮಾಡಿದ ಶ್ರೀಹರಿಯ ದಶಾವತಾರವನ್ನು ವರ್ಣನ ಮಾಡುತಾರೆ.

ವನಚರ–ಉದಕದಲ್ಲಿ ಸಂಚಾರಮಾಡುವ ಮತ್ಸ್ಯದೋಪಾದಿಯಲ್ಲಿ ಮತ್ಸ್ಯಾವತಾರ ಮಾಡಿ ವೇದೋದ್ಧಾರ ಮಾಡಿದವನೇ, ಅದ್ರಿ–ಮಂದರಗಿರಿ ಪರ್ವತವನ್ನು ಬೆನ್ನಿಲಿ ಧರಿಸಿ ಅಮೃತಮಥನ ಕಾರ್ಯ ನಡಿಸಿ ದೇವತೆಗಳಿಗೆ ಅಮೃತಪಾನ ಮಾಡಿಸಿದವನೇ, ಧರಾಧರನೇ–ಹಿರಣ್ಯಾಕ್ಷನೆಂಬೋ ದೈತ್ಯ ಅಪಹರಿಸಿದ ಭೂಮಿಯನ್ನ ಕೋರೆಹಲ್ಲಿನ ಮ್ಯಾಲೆ ಧರಿಸಿ ಭೂಮಿಯನ್ನ ಉದ್ಧಾರಮಾಡಿದ ವರಾಹಾವತಾರನೇ, ಜಯ–ಭಕ್ತರಿಗೆ ಜಯರೂಪವಾದ ಮಂಗಳವನ್ನು ಕೊಡು ಅಥವಾ ಉತ್ಕೃಷ್ಟನಾಗು, ಮನುಜಮೃಗವರವೇಷ–ಮನುಷ್ಯ, ಸಿಂಹ ಈ ಎರಡು ರೂಪವನ್ನು ವಹಿಸಿ ಹಿರಣ್ಯಕಶಿಪುನ ಸಂಹಾರಮಾಡಿದವನೇ, ಜಯ–ಉತ್ಕೃಷ್ಟನಾಗು, ವಾಮನ ತ್ರಿವಿಕ್ರಮದೇವ–ಪ್ರಥಮದಲ್ಲಿ ಸಣ್ಣರೂಪನಾಗಿ, ಬ್ರಹ್ಮಚಾರಿಯಾಗಿ, ಬಲಿಚಕ್ರವರ್ತಿಯಲ್ಲಿ ಭೂದಾನ ಬೇಡಿ, ನಂತರ ದೊಡ್ಡ ರೂಪ ತ್ರಿವಿಕ್ರಮಾವತಾರದಿಂದ ಬ್ರಹ್ಮಾಂಡ ವ್ಯಾಪಿಸಿಕೊಂಡಂಥಾ ವಾಮನಾವತಾರನೇ, ಜಯ–ಉತ್ಕೃಷ್ಟನಾಗು, ಭೃಗುರಾಮ–ಭೃಗುಕುಲದಲ್ಲಿ ಜನಿಸಿ ದುಷ್ಟಕ್ಷತ್ರಿಯರ ನಾಶ ಮಾಡಿದಂಥಾ, ಭೂಮ–ಪೂರ್ಣಜ್ಞಾನಾನಂದ ಉಳ್ಳ ಶ್ರೀ ಪರಶುರಾಮದೇವರೇ, ಜಯ–ಉತ್ಕೃಷ್ಟನಾಗು, ಜನಕಜಾವಲ್ಲಭನೆ–ಜನಕರಾಯನ ಪುತ್ರಿಯಾದ ಸೀತಾದೇವೇರ ಪತಿಯಾದ ಶ್ರೀರಾಮಚಂದ್ರದೇವರೇ, ಜಯ–ಭಕ್ತರಿಗೆ ಜಯರೂಪವಾದ ಮಂಗಳವನ್ನು ಕೊಡು ಅಥವಾ ಉತ್ಕೃಷ್ಟನಾಗು, ರುಗ್ಮಿಣಿಮನೋರಥಸಿದ್ಧಿದಾಯಕ–ಶ್ರೀಲಕ್ಷ್ಮೀದೇವೇರ ಅಂಶಭೂತರಾದ ರುಗ್ಮಿಣಿದೇವೇರ ಮನಸ್ಸಿನಾಗೆ ಇದ್ದಂತೆ ತಾನು ಆಕಿಗೆ ಪತಿಯಾಗಿ ದುಷ್ಟರಾದ ಶಿಶುಪಾಲಾದಿಗಳನ್ನು ಅವಮಾನಮಾಡಿದ ಶ್ರೀಕೃಷ್ಣರೂಪಿ ಪರಮಾತ್ಮನೇ, ಜಿನವಿಮೋಹಕ–ಜೈನರು ಎಂತ ನಾಮಾಂಕಿತರಾದ ಅಸುರರಲ್ಲಿ ಅವತಾರ ಮಾಡಿ ಅವರ ಯೋಗ್ಯತಾಕ್ಕೆ ಅನುಸರಿಸಿದ ಶಾಸ್ತ್ರಕಲ್ಪನ ಮಾಡಿ ಅವರನ್ನ ಮೋಹಯುಕ್ತರನ್ನಾಗಿ ಮಾಡಿದ ಬೌದ್ಧಾವತಾರನೇ, ಕಲಿವಿದಾರಣ–ಕಲ್ಯಾದಿ ದೈತ್ಯರು ಕಲಿಯುಗ ಅಂತ್ಯದಲ್ಲಿ ಅವತರಿಸಿ ರಾಜ್ಯಭಾರ ಮಾಡಿ ಧರ್ಮಮಾರ್ಗಗಳ ನಾಶಮಾಡತಕ್ಕ ಕಲ್ಯಾದಿ ದೈತ್ಯರ ಸಂಹಾರಮಾಡುವ ಕಲ್ಕ್ಯವತಾರನೇ, ಜಯ–ಉತ್ಕೃಷ್ಟನಾಗು. ಜಯಾರಮಣ–

ಜಯನಾಮಕ ಲಕ್ಷ್ಮೀದೇವೇರಿಗೆ ಪತಿಯಾದ ಸಂಕರ್ಷಣಮೂರ್ತಿಯೇ ಮಂಗಳವನ್ನು ಕೊಡು ಎಂತ ಅರ್ಥ.

**ವಿಶೇಷಾರ್ಥ :**–ಸಂಕರ್ಷಣಮೂರ್ತಿಯನ್ನು ಸ್ತೋತ್ರಮಾಡಿದ ಕ್ರಮ ಏನೆಂದರೆ, ಭಕ್ತರಿಗೆ ಬರತಕ್ಕ ಅನಿಷ್ಟಗಳನ್ನು ಸಂಹಾರಮಾಡಿ ಇಷ್ಟಪ್ರಾಪ್ತಿರೂಪವಾದ ಮಂಗಳವನ್ನು ಕೊಡತಕ್ಕ ಭಗವದ್ರೂಪವಾದ್ದರಿಂದ ಅಂತ್ಯದಲ್ಲಿ ಜಯಾನಾಮಕ ಲಕ್ಷ್ಮೀಪತಿ ಸಂಕರ್ಷಣಮೂರ್ತಿಯನ್ನು ಸ್ತೋತ್ರಮಾಡಿದ್ದಾರೆ ಎಂತ ತಾತ್ಪರ್ಯ.

**ಸಚ್ಚಿದಾನಂದಾತ್ಮ ಬ್ರಹ್ಮ ಕ ।**
**ರಾರ್ಚಿತಾಂಘ್ರಿಸರೋಜ ಸುಮನಸ ।**
**ಪ್ರೋಕ್ಷ ಸನ್ಮಂಗಳದ ಮಧ್ವಾಂತಃಕರಣರೂಢ ॥**
**ಅಚ್ಯುತ ಜಗನ್ನಾಥ ವಿಠ್ಠಲ ।**
**ನಿಚ್ಚ ಮೆಚ್ಚಿದ ಜನರ ಬಿಡಕಾ**
**ಡ್ಗಿಚ್ಚ ನುಂಡಾರಣ್ಯದೊಳು ಗೋ ಗೋಪರನು ಕಾಯಿದಾ ॥ ೨೫ ॥**

ಶ್ರೀಪರಮಾತ್ಮಗೆ ಸ್ವಜನರಕ್ಷಕತ್ವವನ್ನು ಶಾಸ್ತ್ರಪ್ರಮಾಣಗಳಿಂದ ಹೇಳಿ ಶ್ರೀಪರಮಾತ್ಮನ ಸ್ತೋತ್ರ ಮಾಡತಾರೆ.

ಸಚ್ಚಿದಾನಂದಾತ್ಮ– ಸತ್–ನಿರ್ದುಷ್ಟಗಳಾದ, ಚಿತ್–ಜ್ಞಾನವೇನು, ಆನಂದ–ಸಂತೋಷವೇನು, ಆತ್ಮ–ಶರೀರವುಳ್ಳವನಾಗಿರುವ ಶ್ರೀ ಪರಮಾತ್ಮನು (ಜೀವನೂನೂ ಅಂಥಾವನೇವೇ ಆದರೂ, ನಿರ್ದುಷ್ಟಶಬ್ದದಿಂದ ಜೀವನ ವ್ಯಾವೃತ್ತಿ), ಬ್ರಹ್ಮಕರಾರ್ಚಿತಾಂಘ್ರಿಸರೋಜ–ಬ್ರಹ್ಮದೇವರ ಕರಗಳಿಂದ ಪೂಜಿತವಾದ ಪಾದಗಳೆಂಬೋ ಕಮಲಗಳು ಉಳ್ಳವ, ಸುಮನಸಪ್ರೋಕ್ಷ–ರುದ್ರಾದಿದೇವತೆಗಳಿಂದ ಸ್ತುತ್ಯನಾದವ, ಸನ್ಮಂಗಳದ–ಸಮೀಚೀನವಾದ ಐಶ್ವರ್ಯವೇನು, ಜ್ಞಾನ ಭಕ್ತಿ ವೈರಾಗ್ಯ ಮೊದಲಾದ ಮಂಗಳಗಳನ್ನ ಇಹದಲ್ಲಿ ಕೊಟ್ಟು ಪರದಲ್ಲಿ ಮಹಾ ಮೋಕ್ಷಾಖ್ಯ ಮಂಗಳವನ್ನೂ ಕೊಡತಕ್ಕವ, ಮಧ್ವಾಂತಃಕರಣರೂಢ–ಸಜ್ಜನರಲ್ಲಿ ಪರಮಾಂತಃಕರಣ ಮಾಡಿ ಶ್ರೀಮದಾನಂದತೀರ್ಥರಿಂದ ಸಚ್ಛಾಸ್ತ್ರವನ್ನ ರಚನಾ ಮಾಡಿಸಿ ಆ ಮೂಲಕದಿಂದ ಭಗವದ್ಭಕ್ತರನ್ನ ರಕ್ಷಣೆ ಮಾಡಿದವ (ಶ್ರೀ ಮಧ್ವಾಚಾರ್ಯರಿಗೂ ಪ್ರೀತಿಯಾದವ), ಅಚ್ಯುತ–ನಾಶರಹಿತನಾದವ, ಜಗನ್ನಾಥವಿಠ್ಠಲ–ಜಗತ್ತಿಗೆ ಸ್ವಾಮಿಯಾದವ, ಪಾಪಪರಿಹಾರ ಮಾಡತಕ್ಕವ. (ಇಂಥಾ ಪರಮಾತ್ಮ), ನಿಚ್ಚ ಮೆಚ್ಚಿದ ಜನರ– ನಿಚ್ಚ–ನಿಶ್ಚಯವಾಗಿ, ಮೆಚ್ಚಿದ–ಸರ್ವೋತ್ತಮನೇ ಎಂತ ಮೆಚ್ಚಿ, ಅವನೇ ಗತಿ ಎಂತ ನಂಬಿದಂಥ, ಜನರ–ಭಕ್ತಜನರನ್ನ, ಬಿಡ–ದಾವ ಕಾಲಕ್ಕೂ ಬಿಡತಕ್ಕವನಲ್ಲ. ಗೋ ಗೋಪರನ–ಆಕಳುಗಳನ್ನೇನು, ಗೋಪಾಲಕರನ್ನೇನು, ಅರಣ್ಯದೊಳು–ಇವರನ್ನ ಅಡವಿಯಲ್ಲಿ, ಕಾಡ್ಗಿಚ್ಚನುಂಡು–ಬಂದಂಥಾ ಕಾಡುಕಿಚ್ಚು ಎಂಬ ಅಗ್ನಿಸಮೂಹವನ್ನು ನುಂಗಿದವನಾಗಿ, ಕಾಯಿದಾ–ನಿದ್ರಾಯುಕ್ತರಾದ ಗೋವುಗಳ, ಗೋಪಾಲಕರನ್ನ ರಕ್ಷಿಸೋವನಾಗಿದ್ದಾನೆ.

**ವಿಶೇಷಾರ್ಥ :–** ಸುಮನಸಪ್ರೋಚ್ಚ ಎಂದರೆ ಬ್ರಹ್ಮದೇವರಿಗೆ ಮಹತ್ತತ್ವಾದಿ ಯಾವತ್ತೂ ತತ್ವಗತ ಶ್ರೀ ಪರಮಾತ್ಮನ ಪಾದಸೇವಾ ಉಂಟು. ರುದ್ರಾದಿಗಳಿಗೆ ಮಹತ್ತತ್ವಗತ ಶ್ರೀ ಪರಮಾತ್ಮನ ಪಾದಸೇವಾ ಇಲ್ಲ. ವಿನುತತ್ವ ಮಾತ್ರವೇ. ರಮಾದೇವೇರಿಗೆ ಅವ್ಯಾಕೃತಾಕಾಶಾಂತವರಿಗೂ ಸೇವಾದಿಗಳು ಉಂಟು. ಪರಮಾತ್ಮನ ಸ್ವರಮಣಪ್ರದೇಶದಲ್ಲಿ ವಿನುತತ್ವ ಮಾತ್ರವೇ. ಅಲ್ಲಿ ಪ್ರವೇಶ ಇಲ್ಲ ಎಂತ ತಾತ್ಪರ್ಯ.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ಸರ್ವಪ್ರತೀಕಸಂಧಿವ್ಯಾಖ್ಯಾನಂ ಸಂಪೂರ್ಣಂ**

|| ಶ್ರೀ ಕೃಷ್ಣಾರ್ಪಣಮಸ್ತು ||

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಹನ್ನೊಂದನೆಯ ಸಂಧಿ

## ಸ್ಥಾವರಜಂಗಮ ಸಂಧಿ

## ( ಧ್ಯಾನಪ್ರಕ್ರಿಯಾ ಸಂಧಿ )

ಈ ಸಂಧಿಯಲ್ಲಿ ಅಧಿಕಾರಿಯಾದವ ನಿಷ್ಕಾಮಕರ್ಮ ಮಾಡುವ ವಿಧಿಯೂ, ದೇಹದಲ್ಲಿ ನಾಡಿಗಳ ವಿಚಾರವೂ, ಇಂದ್ರಿಯಗಳ ನಿಯಾಮಕತ್ವ ಕ್ರಮವೂ, ವ್ಯತಿರೇಕ ಪೂಜಾವಿಚಾರವೂ, ಪ್ರತಿಮಾಪೂಜಾ ಗೋಳಕಗಳ ವಿಚಾರವೂ ಹೇಳತಾರೆ.

**ಹರಿಕಥಾಮೃತಸಾರ ಗುರುಗಳ ।**
**ಕರುಣದಿಂದಾಪನಿತು ಪೇಳುವೆ ।**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪ ॥**

**ಮೂಲ :**

**ಪಾದುಕೆಯ ಕಂಟಕ ಸಿಕತ ಮೊದ ।**
**ಲಾದವನುದಿನ ಬಾಧಿಸುವವೇ ।**
**ಕಾದಶೇಂದ್ರಿಯಗಳಲಿ ಬಿಡದೆ ಹೃಷೀಕಪನ ಮೂರ್ತಿ ॥**
**ಸಾದರದಿ ನೆನೆವವನು ಏನಘ ।**
**ರಾಧಗಳು ಮಾಡಿದರು ಸರಿಯೆ ನಿ ।**
**ರೋಧಗೈಸವು ಮೋಕ್ಷಮಾರ್ಗಕೆ ದುರಿತರಾಶಿಗಳು ॥ ೧ ॥**

ಅನುಸಂಧಾನಯುಕ್ತಗೆ ದುರಿತರಾಶಿಗಳು ಮೋಕ್ಷಕ್ಕೆ ಪ್ರತಿಬಂಧಕವಾಗೋದಿಲ್ಲ ಎಂತ ಹೇಳತಾರೆ

**ಟೀಕಾ :**

ಕಂಟಕ–ಮುಳ್ಳು, ಸಿಕತ–ಉಸುವು (ಮರಳು), ಮೊದಲಾದುವು–ಇವೇ ಮೊದಲಾದುವು ಮಾರ್ಗಾಂತರ ಹೋಗಲೀಸದೆ ನಿರೋಧ ಮಾಡತಕ್ಕ ಅಂದರೆ ಪಾದಕ್ಕೆ ಬಾಧಿಸತಕ್ಕ ಅನೇಕ ವಿಧ ಪ್ರತಿಬಂಧಕಗಳು, ಯಾವಾಗ ಅಂದರೆ ಬರೀಕಾಲಿನಿಂದ ಪ್ರಯಾಣ ಮಾಡತಕ್ಕವಗೆ(ಅದೇ ಪುರುಷ), ಪಾದುಕೆಯ–ಪಾದರಕ್ಷವನ್ನು, ಅನುದಿನ–ಪ್ರತಿದಿನವು ಧರಿಸಿ, ಮಾರ್ಗ ನಡೆಯತಕ್ಕ ಪುರುಷಗೆ, ಬಾಧಿಸುವವೇ–ಪೂರ್ವೋಕ್ತ ಕಂಟಕಾದಿಗಳು ಬಾಧಿಸಲಾರವು (ಇದು ಹ್ಯಾಂಗೋ ತದ್ವತ್), ಮೋಕ್ಷ–ಅಧಿಕಾರಿಗಳು ಇಹಲೋಕವನ್ನು ಬಿಟ್ಟು ಪರಲೋಕಕ್ಕೆ ಹೋಗಬೇಕಾದರೆ ಮಾರ್ಗವನ್ನು ನಡೆದು ಹೋಗಬೇಕು.

(ಮೋಕ್ಷ ಎಂದರೆ ಭಗವದಪರೋಕ್ಷದಿಂದ ಲಿಂಗಭಂಗವಾಗಿ ವೈಕುಂಠಾದಿ ಲೋಕ ಸೇರ ಬೇಕೆಂಬ ತಾತ್ಪರ್ಯ), ಮಾರ್ಗಕೆ–ಸತ್ಸಾಧನೆ ಎಂಬೋದೇ ಮಾರ್ಗ, (ಈ ಮಾರ್ಗಕ್ಕೆ ಮುಳ್ಳು, ಉಸುವು ದಾವದೆಂದರೆ), ದುರಿತರಾಶಿಗಳು–ಸಕಾಮ ಪಾಪಗಳು, ಸಕಾಮ ಪುಣ್ಯಗಳು, ಅಹಂಮಮತಾದಿಗಳು, ಇದರಿಂದ ವೈಕುಂಠಾದಿ ಪುರಗಳು ಸೇರೋದಕ್ಕೆ ಬಾಧಕಮಾಡಿ ಸೇರದಂತೆ ಮಾಡೋದಾಗತವೆ. ಇಂಥಾ ಮಾರ್ಗ ನಡಿಯಬೇಕಾದರೆ (ಪಾದಸದೃಶಗಳು ದಾವವೆಂದರೆ), ಏಕಾದಶೇಂದ್ರಿಯಗಳು–ಮನ ಆದಿ ಏಕಾದಶೇಂದ್ರಿಯ ಗಳೇ ಪಾದಗಳು. ಈ ಪಾದಗಳ ದ್ವಾರಾ ಗಮನಮಾಡಬೇಕು. ಗಮನಮಾಡೋ ಯತ್ನ ಮಾಡಿದರೆ ಪಾಪಗಳೆಂಬೋ ಕಂಟಕ-ಸಿಕತಗಳು ಪಾದಕ್ಕೆ ಬಾಧಿಸಿ ಮಾರ್ಗವನ್ನು ನಡಿಯಗೊಡೋದಿಲ್ಲ. ಆದ್ದರಿಂದ ಇಂದ್ರಿಯಾಖ್ಯ ಪಾದಗಳಿಗೆ ಪಾದರಕ್ಷ ಧರಿಸೋವನಾಗ ಬೇಕು. ಎಂಥಾ ಪಾದರಕ್ಷೆ ಧರಿಸಬೇಕೆಂದರೆ, ಏಕಾದಶೇಂದ್ರಿಯಗಳಲ್ಲಿ ವಿದ್ಯಮಾನನಾದ, ಬಿಡದೇ–ಅರಲವಕಾಲವಾವರೂ ಬಿಡದೆ, ಅಹಂಮಮತಾ ತ್ಯಾಗಪೂರ್ವಕ ನಿಷ್ಕಾಮ ಪೂರ್ವಕ, ಹೃಷೀಕಪನ– ಹೃಷೀಕ–ಇಂದ್ರಿಯಗಳಲ್ಲಿ ಇದ್ದು ಆಯಾ ಇಂದ್ರಿಯಗಳ ಪಾಲನ ಮಾಡತಕ್ಕ ಇಂದ್ರಿಯನಿಯಾಮಕನಾದ, ಮೂರ್ತಿ–ಭಗವನ್ಮೂರ್ತಿ ದಾವದದೆ, ಆ ಮೂರ್ತಿಯ ತಿಳಿದು, ವಾಸನಾನುಸಂಧಾನದಿಂದ ಆಯಾ ಇಂದ್ರಿಯಗಳಲ್ಲಿ ಚಿಂತಿಸಿ ಷೋಡಶೋಪಚಾರಗಳು ಮಾಡಿ, ಅಹಂಮಮತಾರಹಿತನಾಗಿ, ನಿಷ್ಕಾಮನಾಗಿ ಬಿಂಬ ಕ್ರಿಯಾ ದ್ವಾರಾ ಪ್ರತಿಬಿಂಬನಾದ ನಾನು ಮಾಡತೇನೆಂದು ಅನುಸಂಧಾನದಿಂದ ಯುಕ್ತ ವಾದ ಪಾದರಕ್ಷೆಗಳ ತೊಡಿಸಿ, ಸಾದರದಿ ನೆನೆವವನು–ಆದರದಿಂದ ಸ್ಮರಿಸುವವನು, ಏನಪರಾಧಗಳು ಮಾಡಿದರೂ ಸರಿಯೆ–ಅಪರಾಧರೂಪವಾದ ಪಾಪಗಳೆಂಬೋ ಸಿಕತ ಗಳು ತುಳಿಯೋವನಾದರೂ ಸರಿಯೆ, ನಿರೋಧಗೈಸವು–ಇಂದ್ರಿಯಾಖ್ಯ ಪಾಪಗೆ ಹೀಗೆ ವೇಧಿ ಕೊಟ್ಟು ಸಾಧನವೆಂಬೋ ಮಾರ್ಗವನ್ನು ನಡಿಯೋ ವಿಷಯದಲ್ಲಿ ನಿರೋಧ ಮಾಡೋದಿಲ್ಲ. ಮೋಕ್ಷಸಾಧನೀಭೂತವಾದ ಮಾರ್ಗ ನಡಿಯೋದಕ್ಕೆ ದಾವ ನಿರ್ಬಂಧವೂ ಆಗೋದಿಲ್ಲ ಎಂತ ತಾತ್ಪರ್ಯ.

**ಹಗಲ ನಂದಾದೀಪದಂದದಿ ।**
**ನಿಗಮವೇದ್ಯನ ಪೂಜಿಸುತ ಕೈ ।**
**ಮುಗಿದು ನಾಲ್ಕರೊಳೊಂದು ಪುರುಷಾರ್ಥವನು ಬೇಡದಲೆ ॥**
**ಜಗದುದರ ಕೊಟ್ಟುದನು ಭುಂಜಿಸು ।**
**ಮಗಮಡದಿ ಪ್ರಾಣೇಂದ್ರಿಯಾತ್ಮಾ ।**
**ದಿಗಳು ಭಗವದಧೀನವೆಂದಡಿಗಡಿಗೆ ನೆನವುತಿರು ॥ ೨ ॥**

ಮೋಕ್ಷಮಾರ್ಗಗತ ಕಂಟಕಬಾಧಿ ನಿವೃತ್ತಿಗೆ ಪಾದರಕ್ಷೆ ದಾವದೆಂದರೆ ಮತ್ತೂ ಅದರನ್ನ ಹೇಳತಾರೆ.

ಹಗಲ ನಂದಾದೀಪದಂದದಿ–ಹಗಲಿನಲ್ಲಿ ವಿದ್ಯಮಾನವಾದ ನಂದಾದೀಪದೋಪಾದಿಯಲ್ಲಿ ಅಂದರೆ ಹಗಲಿನಲ್ಲಿ ಕೂಡಾ ಆರಿಸದೇ ದೇವರಲ್ಲಿ ಇಡಲ್ಪಟ್ಟ ಅಖಂಡಸಾಂಕೇತವಾದ ದೀಪ ಎಂತ ತಾತ್ಪರ್ಯ. ಈ ದೀಪದ ಪ್ರಕಾಶ ಹಗಲಿನಲ್ಲಿ ದಾರಿಗೂ ಸ್ವಪ್ರಯೋಜನವಿಲ್ಲದೇನೇ ಈಶ್ವರಪ್ರೀತಿಗೋಸುಗ ಇಡಲ್ಪಟ್ಟದ್ದು ಹ್ಯಾಂಗೋ ಇದರೋಪಾದಿಯಲ್ಲಿ, ನಿಗಮವೇದ್ಯನ–ವೇದದಿಂದ ವೇದ್ಯನಾದ ಪರಮಾತ್ಮನ ವಾಸನಾದಿಂದ ಪ್ರತಿಮಾನ್ನ ಹೃದಯದಲ್ಲಿ ನಿಲ್ಲಿಸಿ ಆ ರೂಪವನ್ನು ಅಚಂಚಲದಿಂದ ಧ್ಯಾನಮಾಡುತ್ತ ಅಂತರ್ಗತದಲ್ಲಿ ವೇದವೇದ್ಯನ ತಿಳಿಯುತ್ತಾ ಇದರಂತೇ ಇಂದ್ರಿಯಗಳಲ್ಲಿ ಇಂದ್ರಿಯಜನಿತ ಕರ್ಮಗಳಲ್ಲಿ ಅನುಸಂಧಾನದಿಂದ ತಿಳಿಯುತ್ತಾ, ಪೂಜಿಸುತ–ಮಾನಸನಿರ್ಮಿತ ಪೂಜಾದ್ರವ್ಯಗಳಿಂದ ಅಂತರ್ಗತ ತಿಳಿದು ಪೂಜಿಸುತ್ತ, ಕೈಮುಗಿದು–ಕೈಸಾಂಕೇತದಿಂದ ಏಕಾದಶೇಂದ್ರಿಯಗಳೆಂತ ತಾತ್ಪರ್ಯ. ಹತ್ತು ಬೆರಳುಗಳು, ಹತ್ತು ಇಂದ್ರಿಯಗಳು, ಕೈಮುಗದದ್ದು ಮನೋ ಇಂದ್ರಿಯ, ಅಂತೂ ಹನ್ನೊಂದು ಇಂದ್ರಿಯಗಳು ಏಕತ್ರ ಮೇಳನ ಮಾಡಿ ಹರಿಪಾದಕ್ಕೆ ಅರ್ಪಿಸಿ ಅಂದರೆ ವಿಷಯಾದಿಗಳಲ್ಲಿ ಓಡದೇ ಮುಕುಲಿಭಾವವನ್ನಾಗಿ ಮಾಡಿ ಅವನ ಪಾದದಲ್ಲಿ ಇಟ್ಟು, ನಾಲ್ಕರೊಳೊಂದು–ಧರ್ಮ, ಅರ್ಥ, ಕಾಮ, ಮೋಕ್ಷ ಎಂತ ನಾಲ್ಕರೊಳಗೊಂದಾದರೂ, ಪುರುಷಾರ್ಥವನು–ಪುರುಷಗೆ ಆಗತಕ್ಕ ಪ್ರಯೋಜನವಾದ್ದರನ್ನು, ಬೇಡದಲೇ–ಬೇಡದೇನೇ, ಜಗದುದರ–ಪ್ರಳಯ ಕಾಲದಲ್ಲಿ ಜಗತ್ತು ಉದರದಲ್ಲಿ ಧರಿಸಿ ಮತ್ತು ಸೃಷ್ಟಿಪಾಲನೆ ಮಾಡತಕ್ಕ ಪರಮಾತ್ಮ, ಕೊಟ್ಟುದನು ಭುಂಜಿಸು–ಸುಖವೋ, ದುಃಖವೋ, ಪೂರ್ವದ ಕರ್ಮವನನುಸರಿಸಿ ಕೊಟ್ಟುದನು ಭುಂಜಿಸು, ಅದಕ್ಕೆ ಅಧಿಕ ಬೇಡಬ್ಯಾಡ, ಮತ್ತು ಮಗ ಮಡದಿ–ಪುತ್ರನೇನು, ಹೆಂಡತಿ ಏನು, ಪ್ರಾಣದೇಹಗತ ಜೀವನೇನು, ಇಂದ್ರಿಯ–ಏಕಾದಶೇಂದ್ರಿಯಗಳೇನು, ಆತ್ಮ–ಸ್ಥೂಲ ಶರೀರವೇನು, ಆದಿಗಳು–ಇವೇ ಮೊದಲಾದ ಧನಧಾನ್ಯಾದಿಗಳು ಯಾವತ್ತೂ, ಭಗವದಧೀನವೆಂದು–ಪರಮಾತ್ಮನದು ಎಂದೇ, ನನ್ನದಲ್ಲ, ಸರ್ವವೂ ಪರಮಾತ್ಮನ ಅಧೀನ ಎಂತ ತಿಳಿದು ಅಹಂಮಮತಾದಿಗಳನ್ನು ತ್ಯಜಿಸಿ ಅತಿ ಧಾರಢ್ಯ ಭಕುತಿಯಿಂದ, ಅಡಿಗಡಿಗೆ–ಪ್ರತಿಪ್ರತಿ ಕ್ಷಣಕ್ಕೂ, ಮರಿಯದಲೆ–ಅಹಂಮಮತಾದಿಗಳು ಸ್ಮರಣೆಗೆ ತಾರದೇ, ನೆನವುತಿರು–ಸ್ಮರಣೆ ಮಾಡುತ್ತಾ ಇರು. ಇದೇವೇ ಮೋಕ್ಷಕ್ಕೆ ಸಾಧನೀಭೂತವಾದ ಮಾರ್ಗ. ನಡಿಯೋದಕ್ಕೆ ಪಾದರಕ್ಷೆಗಳು ಉಳ್ಳವಗೆ ಪಾಪಗಳೆಂಬೋ ಕಂಟಕ, ಸಿಕತಗಳು ಬಾಧಿಸೋದಿಲ್ಲ. ತದನ್ಯರಿಗೆ ಬಾಧಿಸುತವೆ ಎಂತ ತಾತ್ಪರ್ಯ.

**ಅಸ್ವತಂತ್ರನು ಜೀವ ಹರಿ ಸ ।**
**ರ್ವಸ್ವತಂತ್ರನು ನಿತ್ಯಸುಖಮಯ ।**
**ನಿಃಸ್ವಬದ್ಧಾಲ್ಪಜ್ಞ ಶಕ್ತ ಸದುಃಖ ನಿರ್ವಿಣ್ಣ ॥**
**ಹ್ರಸ್ವದೇಹಿ ಸನಾಥಜೀವನು ।**
**ವಿಶ್ವವ್ಯಾಪಕ ಕರ್ತೃ ಬ್ರಹ್ಮ ಸ ।**
**ರಸ್ವತೀಶಾದ್ಯಮರನುತ ಹರಿಯೆಂದು ಕೊಂಡಾಡು ॥ ೩ ॥**

ನಿಷ್ಕಾಮನಾಗಿ ಈ ಪ್ರಕಾರ ಪರಮಾತ್ಮನ ಪ್ರಾರ್ಥಿಸಬೇಕೆಂದು ಹೇಳತಾರೆ.

ಅಸ್ವತಂತ್ರನು ಜೀವ–ಜೀವನಾದವ ಈಶಾಧೀನವಾದ ಸ್ವತಂತ್ರನೇ ಹೊರತು ಸ್ವಾಧೀನ ಸ್ವತಂತ್ರನಲ್ಲ, ಎಂದರೆ ಜೀವರಿಗೆ ಕರಚರಣಾದ್ಯವಯವಗಳೋಪಾದಿಯಲ್ಲಿ ಅನಾದಿ ಸ್ವರೂಪ ಭೂತ ಸ್ವಾತಂತ್ರ್ಯವಿರೋದಾಗಿ ಅದೆ. ಅದಕ್ಕೆ ಸ್ವತಂತ್ರ ಪ್ರವೃತ್ತಿ ಇಲ್ಲ. ಇಂದ್ರಿಯಗಳಿಗೆ ಸ್ವತಃ ಪ್ರವೃತ್ತಿ ಹ್ಯಾಂಗಿಲ್ಲವೋ ತದ್ವತು ಜೀವ ಅಂಥಾವ. ಹರಿ ಸರ್ವಸ್ವತಂತ್ರನು–ಬಿಂಬರೂಪಿ ಪರಮಾತ್ಮ ಪರಾಧೀನನಲ್ಲದ ಸರ್ವಸ್ವತಂತ್ರನು. ಸರ್ವ ವಿಷಯದಲ್ಲೂ ಎಂತ ತಾತ್ಪರ್ಯ. ನಿತ್ಯ ಸುಖಮಯ–ಜೀವಾಂತರ್ಗತನಾಗಿ ತನ್ನ ಅವಿಯೋಗದಿಂದ ಜೀವರಿಗೆ ನಿತ್ಯತ್ವ ಸ್ಥಾಪಿಸಿಕೊಟ್ಟವ. ತನ್ನ ನಿತ್ಯತ್ವಕ್ಕೆ ಅನ್ಯರಿಂದ ಸ್ಥಾಪಿತವಲ್ಲದ ನಿತ್ಯತ್ವ ಉಳ್ಳವ. ಜೀವ, ಮಿತವಾದ ಸುಖಪ್ರಚುರ ನಾದವ, ಪರಮಾತ್ಮ, ಅಮಿತಸುಖಪ್ರಚುರನಾದವ. ನಿಃಸ್ವಬದ್ಧ–ಅನಾದಿ ನಿತ್ಯವಾದ ಲಿಂಗ ದೇಹದಿಂದ ಕಟ್ಟಿಸಿಕೊಳ್ಳಲ್ಪಟ್ಟವ ಜೀವ. ಪರಮಾತ್ಮ ಅನಾದಿಕಾಲದಿಂದಲೂ ಇಂಥಾ ಬದ್ಧನಲ್ಲ. ಅಲ್ಪಜ್ಞಶಕ್ತ–ಜೀವ ಅಲ್ಪಜ್ಞ. ಅಲ್ಪಶಕ್ತಿ ಉಳ್ಳವ. ಪರಮಾತ್ಮ ಸರ್ವಜ್ಞ, ಸರ್ವಶಕ್ತಿ ಉಳ್ಳವ. ಸದುಃಖ ನಿರ್ವಿಣ್ಣ–ಜೀವ, ತ್ರಿಗುಣ ಸಂಬಂಧದಿಂದ ಆಗುವ ಸುಖದುಃಖಾದಿಗಳು ನನ್ನದು ಎಂದು ಅಹಂಮಮತಾದಿಗಳಿಂದ ಆರೋಪಿತ ಪ್ರಾಕೃತ ಸುಖದುಃಖಾದಿಗಳ ಭೋಗಿಸತಕ್ಕ ಸ್ವರೂಪ ಸ್ವಭಾವ ಉಳ್ಳವ. ಪರಮಾತ್ಮ, ತ್ರಿಗುಣಾಂತರ್ಗತನಾಗಿದ್ದ ಕಾಲಕ್ಕೂ ತಜ್ಜನಿತ ಸುಖದುಃಖಾದಿಗಳು ಲೇಪ ಇಲ್ಲದವ. ನಿರ್ವಿಣ್ಣ–ಜೀವ ಶ್ರಮಾದಿಗಳಿಂದ ದಣಿದು ನಿರ್ವಿಣ್ಣನಾಗತಕ್ಕವ. ಪರಮಾತ್ಮ ಜಗತ್ಸೃಷ್ಟಿ, ಸ್ಥಿತಿ, ಸಂಹಾರಾದಿಗಳ ಮಾಡಿದ ಕಾಲಕ್ಕೂ ದಣುವಿಕೆ ಯಿಂದ ನಿರ್ವಿಣ್ಣನಾಗದವ. ಹ್ರಸ್ವದೇಹಿ–ಜೀವನು ನಾಶಹೊಂದತಕ್ಕ ಪ್ರಾಕೃತ ದೇಹ ಗಳ ಧರಿಸಿ ಅನೇಕ ಜನ್ಮಗಳಿಂದ ಸಂಚಾರ ಮಾಡತಕ್ಕವನು. ಪರಮಾತ್ಮ ಇಂಥಾದ್ದ ರಿಂದ ದೂರನಾದವನು. ಸನಾಥ ಜೀವನು–ಜೀವನು ಪರಮಾತ್ಮನೆಂಬೋ ನಾಥನಿಂದ ಸಹಿತನಾದವನು. ಪರಮಾತ್ಮ ತನಗೆ ಅನ್ಯನಾಥರು ಇಲ್ಲದವನು. ವಿಶ್ವವ್ಯಾಪಕ– ಪರಮಾತ್ಮ ಸರ್ವ ಚರಾಚರ ಜೀವರುಗಳಲ್ಲಿ ಬಿಂಬನಾಗಿ ವ್ಯಾಪಕನಾದವ. ತನಗೆ ಬ್ಯಾರೆ ಬಿಂಬ ಇಲ್ಲದವ. ಕರ್ತೃ–ಸರ್ವಜೀವರಿಗೆ ಯಜಮಾನನಾದವ. ಸೃಷ್ಟ್ಯಾದಿ ಗಳಿಗೆ ಕರ್ತನಾದವ. ಜೀವರೋಪಾದಿಯಲ್ಲಿ ತನಗೆ ಬ್ಯಾರೆ ಯಜಮಾನ ಇಲ್ಲದವ. ಬ್ರಹ್ಮ–ಬ್ರಹ್ಮದೇವರೂ, ಸರಸ್ವತಿ–ಸರಸ್ವತೀ ದೇವೇರೂ, ಈಶ–ರುದ್ರದೇವರೂ, ಆದಿ– ಮೊದಲಾದ, ಅಮರನುತ–ದೇವತೆಗಳಿಂದ ಸ್ತುತ್ಯನಾದವ, ವಂದಿತನಾದವ, ತಾನು ಸ್ತುತಿ ಮಾಡೋದಕ್ಕೂ, ವಂದನ ಮಾಡೋದಕ್ಕೂ ಅನ್ಯವಸ್ತು ಇಲ್ಲದವ. ಹರಿಯೆಂದು ಕೊಂಡಾಡು–ಜೀವ ಇಂಥಾವ, ಪರಮಾತ್ಮ ಇಂಥಾವನೆಂದು ತಿಳಿದು ಪರಮಾತ್ಮನ್ನ ಸ್ತೋತ್ರದಿಂದ ಕೊಂಡಾಡು ಎಂತ ಹೇಳತಾರೆ. ರಮಾದೇವೇರು ಈಶ್ವರನೋಪಾದಿಯಲಿ ಕೆಲವು ಲಕ್ಷಣಗಳು ಉಳ್ಳವರಾದ ಕಾಲಕ್ಕೂ ಪರಾಧೀನರಾದ ಕಡಿಯಿಂದ ಪರಮಾತ್ಮಗೆ ಜೀವ ಸದೃಶರು. ಪರಮಾತ್ಮ ದಾರ ಸದೃಶನೂ ಅಲ್ಲ.

**ಮತ್ತೆ ವಿಶ್ವಾದ್ಯೆಂಟು ರೂಪೊಂ ।**
**ಭತ್ತರಿಂದಲಿ ಪೆಚ್ಚಿಸಲು ಎ ।**
**ಪ್ಪತ್ತೆರಡು ರೂಪಗಳಹವು ಒಂದೊಂದೆ ಸಾಹಸ್ರಾ ॥**
**ಪೃಥ್ ಪೃಥಕು ನಾಡಿಗಳೊಳಗೆ ಸ ।**
**ರ್ವೋತ್ತಮನ ತಿಳಿಯೆಂದು ಭೀಷ್ಮನು ।**
**ಬಿತ್ತರಿಸಿದನು ಧರ್ಮತನಯಗೆ ಭೀಷ್ಮ(ಶಾಂತಿ) ಪರ್ವದಲಿ ॥ ೪ ॥**

ಎಪ್ಪತ್ತೆರಡು ಸಾವಿರ ನಾಡಿಗತ ಭಗವದ್ರೂಪಗಳ ಹೇಳತಾರೆ.

ವಿಶ್ವಾದ್ಯೆಂಟು ರೂಪ—ವಿಶ್ವಾದಿ ಎಂಟು ರೂಪ, ಮತ್ತೆ—ವಿಶ್ವಾದಿ ಎಂಟು ರೂಪಗಳಿಗೆ ಮೂಲ ರೂಪ ಒಂದು. ಅಂತೂ ಒಂಭತ್ತು ರೂಪಗಳು. ಒಂಭತ್ತರಿಂದ ಪೆಚ್ಚಿಸಲು—ವಿಶ್ವಾದಿ ಎಂಟು ರೂಪಗಳನ್ನು ಮೇಲೆ ಉದಹರಿಸಿದ ಒಂಭತ್ತು ರೂಪಗಳಿಂದ ಹೆಚ್ಚಿಸಲು, ಎಪ್ಪತ್ತೆರಡು ರೂಪಗಳಹವು—ಎಪ್ಪತ್ತೆರಡು ರೂಪಗಳು ಆಗೋದಾಗಿವೆ. ಈ ಎಪ್ಪತ್ತೆರಡು ಸಾವಿರ ಸಾಂಕೇತಗಳ ವಿವರ :

| | | | | | |
|---|---|---|---|---|---|
| ೮ | ವಿಶ್ವನಿಂದ ಹೊರಟ | ವಿಶ್ವಾದಿ | ರೂಪಗಳು | — | ೮,೦೦೦ |
| ೮ | ತೈಜಸನಿಂದ | ,, | ,, | — | ೮,೦೦೦ |
| ೮ | ಪ್ರಾಜ್ಞನಿಂದ | ,, | ,, | — | ೮,೦೦೦ |
| ೮ | ತುರ್ಯನಿಂದ | ,, | ,, | — | ೮,೦೦೦ |
| ೮ | ಆತ್ಮನಿಂದ | ,, | ,, | — | ೮,೦೦೦ |
| ೮ | ಅಂತರಾತ್ಮನಿಂದ | ,, | ,, | — | ೮,೦೦೦ |
| ೮ | ಪರಮಾತ್ಮನಿಂದ | ,, | ,, | — | ೮,೦೦೦ |
| ೮ | ಜ್ಞಾನಾತ್ಮನಿಂದ | ,, | ,, | — | ೮,೦೦೦ |
| ೬೪ | ಒಂದೊಂದಕ್ಕೆ ಸಾವಿರ ಪ್ರಕಾರ | | | — | ೬೪,೦೦೦ |
| ೮ | ಅರವತ್ತುನಾಲ್ಕಕ್ಕೆ ಮೂಲ ರೂಪಗಳು ಎಂಟಕ್ಕೆ ಎಂಟು ಸಾವಿರ | | | — | ೮,೦೦೦ |
| ಅಂತು ೭೨ಕ್ಕೆ | | | | — | ೭೨,೦೦೦ |

ಅಂತು ವಿಶ್ವಾದಿ ರೂಪಗಳು ಮೂಲ ರೂಪ ಸಹಿತ ಒಂದೊಂದು ಒಂಭತ್ತು ರೂಪಗಳು ಆದುವು. ಈ ಒಂಭತ್ತು ರೂಪಗಳನ್ನ ಅದೇ ವಿಶ್ವಾದಿ ಎಂಟು ರೂಪಗಳಿಂದ ಹೆಚ್ಚು ಗುಣಿಸಿದರೆ ಎಪ್ಪತ್ತೆರಡು ಆಗತದೆ, ಎಂತ ಪೂರ್ವೋಕ್ತಕ್ಕೆ ಸಮನ್ವಯವು. ಒಂದೊಂದೇ ಸಾಹಸ್ರ—ಎಪ್ಪತ್ತೆರಡು ರೂಪಗಳು ಪ್ರತಿ ಒಂದೊಂದು ರೂಪ ಒಂದೊಂದು ಸಾವಿರದ ಮ್ಯಾರಿಗೆ ಅಭಿವೃದ್ಧಿಯಾಗಿ ೭೨,೦೦೦ ಆಗೋದಾಗಿ ಅದೆ. ಈ ರೂಪಗಳು ಪೃಥಕ್

ಪೃಥಕ್ ನಾಡಿಗಳೊಳಗೆ—ಸ್ಥೂಲ ದೇಹದಲ್ಲಿ ಬ್ಯಾರೆಯಾಗಿ ಇರತಕ್ಕ ೭೨,೦೦೦ ನಾಡಿಗಳೊಳಗೆ ಪ್ರತಿಯೊಂದೊಂದು ನಾಡಿಯಲ್ಲಿ ಒಂದೊಂದು ರೂಪಗಳ ವ್ಯಾರಿಗೆ, ಸರ್ವೋತ್ತಮನಾದ ಪರಮಾತ್ಮನ ೭೨,೦೦೦ ರೂಪಗಳು ಇರೋವಾಗಿ ಅವೆ. ತಿಳಿಯೆಂದು—ಈ ಪ್ರಕಾರ ಇರೋದರನ್ನ ತಿಳಿಯೋವನಾಗೆಂದು, ಭೀಷ್ಮನು—ಭೀಷ್ಮಾಚಾರ್ಯರು, ಧರ್ಮತನಯಗೆ—ಯಮಧರ್ಮರಾಯನ ಪುತ್ರನಾದ ಯಮಾಂಶನಾದ ಧರ್ಮರಾಯಗೆ, ಬಿತ್ತರಿಸಿದನು—ಹೇಳೋವರಾದರು. ಭೀಷ್ಮಪರ್ವದಲಿ—ಶ್ರೀ ಮಹಾಭಾರತ ಭೀಷ್ಮ (ಶಾಂತಿ) ಪರ್ವದಲ್ಲಿ ಈ ಸಂಗತಿ ಅದೆ ಅಂತ ತಾತ್ಪರ್ಯ.

**ಎಂಟು ಪ್ರಕೃತಿಗಳೊಳಗೆ ವಿಶ್ವಾ ।**
**ದ್ಯೆಂಟು ರೂಪದಲಿದ್ದು ಭಕುತರ ।**
**ಕಂಟಕವ ಪರಿಹರಿಸುತಲಿ ಪಾಲಿಸುವ ಪ್ರತಿದಿನದಿ ॥**
**ನೆಂಟನಂದದಿ ಎಡಬಿಡದೆ ವೈ ।**
**ಕುಂಠರಮಣನು ತನ್ನವರ ನಿ।**
**ಷ್ಕಂಟಕ ಸುಮಾರ್ಗದಲಿ ನಡೆಸುವ ದುರ್ಜನರ ಬಡಿವ ॥ ೫ ॥**

ದೇಹದಲ್ಲಿ ಎಂಟು ಸ್ಥಾನದಲ್ಲಿ ಎಂಟು ರೂಪದಿಂದ ಇದ್ದು ಸಂರಕ್ಷಿಸುತ್ತಾನೆ ಎಂತ ಹೇಳತಾರೆ.

ಎಂಟು ಪ್ರಕೃತಿಗಳೊಳಗೆ—೫ ಪೃಥಿವ್ಯಾದಿ ಪಂಚಭೂತಗಳು, ೧ ಮಹತ್ತತ್ವ, ೧ ಅಹಂಕಾರತತ್ವ, ೧ ಅವ್ಯಕ್ತತತ್ವ ಅಂತು ಎಂಟು. ಅವ್ಯಕ್ತತತ್ವಕ್ಕೆ ಪ್ರತ್ಯಾಮ್ನಾಯ ಬುದ್ಧಿತತ್ವ ಎಂತಲೂ ಉಕ್ತವಾಗಿ ಅದೆ. ಏತಾದೃಶವಾದ ಎಂಟು ಪ್ರಕೃತಿಗಳೊಳಗೆ ಪ್ರಮಾಣ :— "ಭೂಮಿರಾಪೋನಲೋ ವಾಯುಃ ಖಂ ಮನೋ ಬುದ್ಧಿರೇವ ಚ । ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥" ಇತಿ ಗೀತಾ ಸಪ್ತಮೇ ಅಧ್ಯಾಯೇ ಚತುರ್ಥಶ್ಲೋಕಃ । ವಿಶ್ವಾದ್ಯೆಂಟುರೂಪದಲ್ಲಿದ್ದು— ವಿಶ್ವ, ತೈಜಸ, ಪ್ರಾಜ್ಞ, ತುರೀಯ, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ ಎಂಬ ಎಂಟು ರೂಪಗಳು, ಒಂದೊಂದು ರೂಪ ಒಂದೊಂದು ಪ್ರಕೃತಿ ಒಳಗಿದ್ದು, ಭಕುತರ ಕಂಟಕವ—ಭಕ್ತರಿಗೆ ಪರಲೋಕಮಾರ್ಗವೆಂಬ ಸಾಧನೀರೂಪವಾದ ಮಾರ್ಗ ನಡಿಯೋದಕ್ಕೆ ಮಾರ್ಗ ಸಾಗದಂತೆ ಮಾಡತಕ್ಕ ಕಂಟಕರೂಪವಾದ ಪಾಪವ, ಪರಿಹರಿಸುತಲಿ—ಅಹಂಮಮತಾದಿಗಳ ತ್ಯಜಿಸಿ ನಿಷ್ಕಾಮರಾದ ಭಕ್ತರಿಗೆ ಪರಿಹರಿಸುತಲಿ ಎಂದರೆ ಅಹಂಮಮತಾದಿಗಳು ತ್ಯಾಗಮಾಡಿ ನಿಷ್ಕಾಮರಾದ ಭಕ್ತರಾದ ಕಾಲಕ್ಕೂ ಲಿಂಗಭಂಗವಾಗೋವರಿಗೂ ತ್ರಿಗುಣಕಾರ್ಯಗಳು ಬಿಡೋದಿಲ್ಲ. ಅವರಕಡಿಯಿಂದ ಕರ್ಮಾನುಸಾರ ಪಾಪಕಾರ್ಯಗಳು ಮಾಡಸತಾನೆ. ಅದರನ್ನ ಈ ಭಕ್ತರು, ಬಿಂಬಕ್ರಿಯಾ ದ್ವಾರಾ ತಾವು ಮಾಡತೇವೆಂದು ಅನುಸಂಧಾನಯುಕ್ತರಾಗತಾರೆ. ಇಂಥಾವರುಗಳ ಪಾಪಗಳ ಪರಿಹರಿಸುತ, ಪ್ರತಿದಿನದಿ—ಪ್ರತಿದಿನದಲ್ಲಿ ಮಾಡಿದ ಪಾಪಗಳ, ಆಯಾ ದಿನದಲ್ಲೇ, ಪರಿಹರಿಸುತ ಪಾಲಿಸುವ—ಸಂರಕ್ಷಣೆ ಮಾಡತಾನೆ. ಎಂದರೆ

ಎಲ್ಲಾ ಪರಿಹರಿಸತಾನೆ ಎಂದರೆ, ಆಗಲೇ ಮೋಕ್ಷ ಆಗಬೇಕಾದೀತು. ದಾವದು ಪರಿಹರಿಸುತಾನೆ ಎಂದರೆ, ಜ್ಞಾನಕ್ಕೆ ಪ್ರತಿಬಂಧಕ ಪಾಪಗಳ ಮಾತ್ರ ಪರಿಹರಿಸಿ, ಉಳದ್ದು ಭೋಗಕ್ಕೆ ಕೊಡತಾನೆ. ಈ ಭೋಗ ಎಂಬುದು ನಿಸ್ಪೃಹರಾಗಿ ದುಃಖಿಸದೇ ಈಶ್ವರಸಂಕಲ್ಪವೆಂದು ತಿಳಿದು ಭೋಗಿಸುವಂತೆ ಮಾಡೋವನಾಗತಾನೆ. ಈ ಪ್ರಕಾರ ಪಾಲಿಸುತಾನೆ. ಮತ್ತು ನೆಂಟನಂದದಿ–ನೆಂಟರು ಮನೆಗೆ ಬಂದರೆ ಅವರಿಗೆ ಮರ್ಯಾದಾ, ಆಚಾರ, ಉಪಚಾರ, ಲೋಗರು ನಡಿಸಿದಂತೆ ಭಕ್ತರಿಗೆ ಆಚಾರ, ಉಪಚಾರಗಳಿಂದ ಮರ್ಯಾದಾ ಮಾಡುತಾ ಇರತಾನೆ. ಎಡಬಿಡದೆ–ಎಡಬಿಡದೇ ಇರತಕ್ಕ ದೇಹದ ನೆರಳಿನೋಪಾದಿಯಲ್ಲಿ ರೂಪಾಂತರದಿಂದ ಸಂಗಾತಲೇ ಇದ್ದು, ವೈಕುಂಠರಮಣನು–ವೈಕುಂಠಲೋಕಕ್ಕೆ ಪತಿಯಾದ ಗುಣಪೂರ್ಣನಾದ ನಾರಾಯಣನು, ತನ್ನವರ–ನಿಷ್ಕಾಮರಾದ ತನ್ನ ಭಕ್ತರ, ನಿಷ್ಕಂಟಕ–ಕಂಟಕಸಾಂಕೇತ ದೋಷರಹಿತ, ಸುಮಾರ್ಗದಿ–ಸಮೀಚೀನವಾದ ಮಾರ್ಗದಲ್ಲಿ, ಎಂದರೆ ಸರ್ವದ್ವಂದ್ವಕರ್ಮಗಳಲ್ಲಿ ಬಿಂಬಕ್ರಿಯಾ ಪ್ರತಿಬಿಂಬಕ್ರಿಯಾ ಮರಿಯದೇ ಸ್ಮರಿಸುತ್ತ, ಈ ಅನುಸಂಧಾನದಿಂದ ಸರ್ವಕರ್ಮಗಳ ಅರ್ಪಿಸತಕ್ಕದ್ದೇ ನಿಷ್ಕಂಟಕವಾದ ಸುಮಾರ್ಗ ಎಂಬುದು. ಇಂಥಾ ಸುಮಾರ್ಗದಲ್ಲಿ, ನಡೆಸುವ–ಜ್ಞಾನಮಾರ್ಗದಲ್ಲಿ ಮನಸ್ಸನ್ನು ನಡಿಸುವ. ದುರ್ಜನರ ಬಡಿವ–ದೇಹಗತ ದುರ್ಬುದ್ಧಿಪ್ರೇರಕರಾದ ಅಸುರರ ದುರ್ಬುದ್ಧಿ ಪ್ರೇರಿಸದಂತೆ ಶಿಕ್ಷಾ ಮಾಡುವ. ಈ ಪ್ರಕಾರ ಎಂಟು ಪ್ರಕೃತಿಗಳ ಒಳಗೆ ಇದ್ದು ರಕ್ಷಿಸತಾನೆ.

**ಸ್ವರಮಣನು ಶಕ್ತ್ಯಾದಿರೂಪದಿ ।**
**ಕರಣಮಾನಿಗಳೊಳಗೆ ನೆಲಸಿ ।**
**ದ್ದರವಿದೂರನು ಸ್ಥೂಲ ವಿಷಯಗಳುಂಡುಣಿಪ ನಿತ್ಯ ॥**
**ಅರಿಯದಲೆ ನಾನುಂಬೆನೆಂಬವ ।**
**ನಿರಯಗಳನುಂಬುವನು ನಿಶ್ಚಯ ।**
**ಮರಳಿ ಮರಳಿ ಭವಾಟವಿಯ ಸಂಚರಿಸಿ ಬಳಲುವನು ॥ ೬ ॥**

ಶಕ್ತ್ಯಾದಿ ರೂಪಗಳ ಕಾರ್ಯ, ಭವಾಟವಿಯ ಸಂಚರಿಸತಕ್ಕವ ಇಂಥಾವ ಎಂತ ಹೇಳತಾರೆ.

ಅರವಿದೂರನು–ದೋಷದೂರನಾದ ಪರಮಾತ್ಮ, ಶಕ್ತ್ಯಾದಿ ರೂಪದಿ–ಶಕ್ತಿಪ್ರತಿಷ್ಠಾದಿ ದ್ವಾದಶರೂಪಗಳೊಳಗೆ, ಹಿಂದೆ ಸಂಧ್ಯಂತರದಲ್ಲಿ ಹೇಳಿದ ಪ್ರಕಾರ ಈ ರೂಪಗಳಿಂದ, ಕರಣಮಾನಿಗಳೊಳಗೆ–ಇಂದ್ರಿಯಾಭಿಮಾನಿಗಳಾದ ಸೂರ್ಯಚಂದ್ರಾದಿ ಏಕಾದಶ ದೇವತೆಗಳೊಳಗೆ ಹನ್ನೊಂದು ರೂಪವು ದೇಹಾಕಾರದಂತೆ, ಪುರುಷರೂಪ ಒಂದು, ಅಂತು ಹನ್ನೆರಡು ರೂಪದಿ, ನೆಲಸಿದ್ದು–ಆವಾಸವಾಗಿ ಇದ್ದು, ಸ್ಥೂಲವಿಷಯಗಳ–ಜೀವರು ಸ್ಥೂಲದೇಹದಿಂದ ಭೋಗಮಾಡತಕ್ಕ ಪ್ರಾಕೃತ ಸ್ಥೂಲವಿಷಯಗಳಲ್ಲಿ ವಿದ್ಯಮಾನಗಳಾದ, ಸ್ವರಮಣನು–ಸ್ವ–ತನ್ನ ಸ್ವಾಖ್ಯಗಳಾದ, ತನಗೆ ಅಭಿನ್ನಗಳಾದ ಸ್ಥೂಲಶಬ್ದವಾಚ್ಯಗಳಾದ ವಿಷಯಗಳಲ್ಲಿ, ರಮಣ–ಸಂಚಾರಮಾಡುತ್ತಾ, ಉಂಡು–ಏತಾದೃಶವಾದ, ತನ್ನ ಸ್ವಾಖ್ಯ

ಗಳ ದೇಹೇಂದ್ರಿಯಾದಿಗತ ರೂಪಗಳಿಂದ ಬಿಂಬಕ್ರಿಯಾ ದ್ವಾರಾ ಉಂಡು, ಉಣಿಪ–ದೇವತೆಗಳ ದ್ವಾರಾ, ದೇಹದ್ವಾರಾ ಜೀವಗೆ ಪ್ರಾಕೃತವಿಷಯಗಳ ಉಣಸತಾನೆ. ಜೀವ ಚಿದಾನಂದನಾದ್ದರಿಂದ ಅವಗೂ ಪ್ರಾಕೃತಭೋಗ ಅಂಗೀಕರಿಸಲಾಗದು. ಭೋಗ ಎಂಥಾದ್ದೆಂದರೆ, ಜೀವ ಸ್ಥೂಲದಲ್ಲಿ ಅಂದರ ಸ್ಥೂಲದೇಹದಲ್ಲಿ ಸರ್ವೇಂದ್ರಿಯ ಸಹಿತನಾಗಿ ಆಯಾ ಇಂದ್ರಿಯಗಳಲ್ಲಿ ಆಯಾ ತನ್ನ ಇಂದ್ರಿಯಗಳಿಂಡ ಪ್ರಕಾಶತೋ ವ್ಯಾಪ್ತನಾಗಿ ಸ್ಥೂಲದೇಹಕ್ಕೆ ಸಂಬಂಧಿಸಿದ ಭೋಗಗಳು ಯಾವತ್ತೂ ವ್ಯಾಪ್ತವಾದ ಇಂದ್ರಿಯಗಳಿಂದ ನೋಡುತಾ ಅಹಂಮಮತಾದಿಂದ ವಿಶಿಷ್ಟವಾದ ಅಜ್ಞಾನದಿಂದ ಅಹಂ ಸುಖೀ, ಅಹಂ ದುಃಖೀ ಎಂಬ ಆರೋಪಿತ ಜ್ಞಾನದಿಂದ ಸುಖದುಃಖಾದಿಗಳ ಸ್ಥೂಲ ವಿಷಯಗಳ ಭೋಗ ಮಾಡತಾ ಬರ್ತಾನೆ. ಈ ಅಭಿಮಾನ ಸಾಧನಾನುಸಾರ ಬಿಡುತ್ತಾ ಲಿಂಗಭಂಗಾನಂತರ ಪೂರ್ಣವಾಗಿ ಬಿಡೋದಾಗತದೆ. ಈ ಪ್ರಕಾರ ಜೀವರಿಗೆ ಉಣಸಥಾನೆ. ನಿತ್ಯ–ಪ್ರತಿದಿನದಲ್ಲೂ ಬಿಂಬ ಪ್ರತಿಬಿಂಬ ಕ್ರಿಯಾದಿಗಳು ನಡೆಯುತ್ತಲೇ ಇರುತ್ತವೆ. ಅರಿಯದಲೆ–ತಾನು ಉಣತಕ್ಕದ್ದು ಇಂಥಾದ್ದು, ಪರಮಾತ್ಮ ಉಣತಕ್ಕದ್ದು ಇಂಥಾದ್ದು ಎಂತ ಅರಿಯದಲೇ, ನಾನುಂಬೆನೆಂಬವ–ಸರ್ವವೂ ನಾನೇ ಉಣತೇನೇ ಎಂತ ಅಜ್ಞಾನದಿಂದ ಅನತಕ್ಕವ, ನಿರಯಗಳನುಂಬುವನು–ಅದರಿಂದ ಸರ್ವ ಸತ್ಕರ್ಮಗಳು, ದುಷ್ಕರ್ಮಗಳು ಪಾಪಗಳಾಗಿ ಪಾಪಫಲಗಳೇ ಉಂಬೋವನಾಗತಾನೆ. ಮತ್ತು ಪರಲೋಕದಲ್ಲಿ ನಾನಾ ವಿಧಗಳಾದ ನರಕಗಳ ಭೋಜನ ಮಾಡುವನು. ಮರಳಿ ಮರಳಿ–ನರಕಾನುಭವ ನಂತರ ಮತ್ತು, ಮತ್ತು ಜನ್ಮವ ತಾಳಿ, ಭವಾಟವಿಯ–ಸುಖದುಃಖಾತ್ಮಕ ಸಂಸಾರವೆಂಬ ಅಡವಿಯಲ್ಲಿ, ಸಂಚರಿಸಿ–ಸಂಚಾರ ಮಾಡಿ, ಬಳಲುವನು–ನಾನಾ ವಿಧವಾದ ಕ್ಲೇಶಗಳಿಂದ ಸಹಿತನಾಗಿ ಶ್ರಾಂತನಾಗುವನು. ನಿಶ್ಚಯ–ಸಂಶಯವಿಲ್ಲ ಎಂತ ತಾತ್ಪರ್ಯ.

ಶಕ್ತ್ಯಾದಿ ದ್ವಾದಶ ರೂಪಗಳ ಈ ಪ್ರಕಾರ ತಿಳೀಬೇಕು.

| ಸಂಖ್ಯಾ | ದ್ವಾದಶ ರೂಪಗಳು | ಇಂದ್ರಿಯಗಳು | ಅಭಿಮಾನಿ ದೇವತೆಗಳು |
|---|---|---|---|
| ೧ | ಶಕ್ತಿ | ಮನಸ್ಸು | ಗರುಡ ಇಂದ್ರಾದಿ ದೇವತೆಗಳು |
| ೨ | ಪ್ರತಿಷ್ಠಾ | ಶ್ರವಣ | ಚಂದ್ರ |
| ೩ | ಸಂವಿತ್ | ನೇತ್ರ | ಸೂರ್ಯ |
| ೪ | ಸ್ಫೂರ್ತಿ | ತ್ವಕ್ | ಅಹಂಕಾರಿಕ ಪ್ರಾಣ |
| ೫ | ಪ್ರಕೃತಿ | ಜಿಹ್ವೆ | ವರುಣ |
| ೬ | ಕಳಾ | ನಾಸಿಕಾ | ಅಶ್ವಿನಿಗಳು |
| ೭ | ವಿದ್ಯಾ | ವದನ | ವಹ್ನಿ |
| ೮ | ಮತಿ | ಪಾಣಿ | ದಕ್ಷ |
| ೯ | ನೀತಿ | ಪಾದ | ಜಯಂತ |
| ೧೦ | ಮಾಯಾ | ಪಾಯು | ಮಿತ್ರ |
| ೧೧ | ಕಾಲ | ಉಪಸ್ಥ | ಸ್ವಾಯಂಭುವ ಮನು |
| ೧೨ | ಪುರುಷ | ಸಾಕಾರದೇಹ | ವಾಯುದೇವರು |

**ಸುರುಚಿ ರುಚಿರ ಸುಗಂಧ ಶುಚಿಯಿಂ ।**
**ದಿರುತಿಹನು ಷಡ್ರಸಗಳೊಳು ಹ ।**
**ನ್ನೆರಡು ರೂಪದಲಿಪ್ಪ ಶ್ರೀ ಭೂ ದುರ್ಗೆಯರ ಸಹಿತ ॥**
**ಸ್ವರಮಣನು ಎಪ್ಪತ್ತೆರಡು ಸಾ ।**
**ವಿರ ಸಮೀರನ ರೂಪದೊಳಿಗಿ ।**
**ದ್ದುರು ಪರಾಕ್ರಮಕರ್ತೃ ಎನಿಸುವ ನಾಡಿಗಳೊಳಗಿದ್ದು ॥ ೬ ॥**

ಷಡ್ರಸಗತ ಭಗವದ್ರೂಪಗಳ ನಾಡೀಗತ ಭಗವದ್ರೂಪಗಳ ಹೇಳತಾರೆ. ಹಿಂದೆ ಅನಿರುದ್ಧಾದಿ ರೂಪಗಳ ಹೇಳಿದ್ದಾರೆ, ಮತ್ತು ಬ್ಯಾರೆ ರೂಪಗಳ ಹೇಳಥಾರೆ.

ಷಡ್ರಸಗಳು–ಆರು ರಸಗಳೊಳಗೆ ಅಂದರೆ ವಿವರ :– (೧) ಉಪ್ಪು, (೨) ಹುಳಿ, (೩) ಖಾರ, (೪) ಸಿಹಿ, (೫) ಕಹಿ, (೬) ಒಗರು, ಇವುಗಳೊಳಗೆ ಒಂದೊಂದರಲ್ಲಿ, ಸುರುಚಿ, ರುಚಿರ, ಸುಗಂಧ, ಶುಚಿ ಇವುಗಳು ಆಯಾ ಪದಾರ್ಥಗಳ ಅನುಸರಿಸಿ ಇರೋದಾಗಿ ಅವೆ. ಸುರುಚಿ–ಸಮೀಚೀನವಾದ ರುಚಿ, ರುಚಿರ–ರಸಪ್ರಚುರವಾಗಿ ಕಾಣೋಣ, ಸುಗಂಧ–ಚಲೋ ವಾಸನೆ ಬರುತ್ತಾ ಇರೋಣ, ಶುಚಿ–ಪವಿತ್ರವಾಗಿ ಕಣ್ಣಿಗೆ ಕಾಣೋಣ, ಎಂದಿರುತಿಹನು–ಆರು ರಸಗಳೊಳು ಆರು ರಸಗಳ ನಾಮದಿಂದಲೂ ತದ್ಗತ ಸುರುಚ್ಯಾದಿ ನಾಲ್ಕರಲ್ಲಿ ತನ್ನಾಮದಿಂದಲೂ ಇದ್ದು ತತ್ತನ್ನಾಮವಾಚ್ಯನೆಂದು ಕರಿಸಿ ಅದರದರಲ್ಲಿ ಇರೋವನಾಗಿ ಇದ್ದಾನೆ. ಹನ್ನೆರಡು ರೂಪದಲಿಪ್ಪ–ಲವಣಾದಿ ಆರು ರಸಗಳೊಳಗೆ ಒಂದೊಂದರಲ್ಲಿ ಎರಡೆರಡು ರೂಪದ ಮ್ಯಾರಿಗೆ ಶಕ್ತ್ಯಾದಿ ಹನ್ನೆರಡು ರೂಪಗಳಿಂದ ಇರೋವನಾಗಿದ್ದಾನೆ. ಶ್ರೀ–ಶ್ರೀ ದೇವೇರ ಸಹಿತ ವಿಷ್ಣುರೂಪಿ ಪರಮಾತ್ಮ, ಭೂ–ಭೂದೇವೇರ ಸಹಿತ ಬ್ರಹ್ಮರೂಪಿ ಪರಮಾತ್ಮ, ದುರ್ಗೆಯರ ಸಹಿತ–ದುರ್ಗಾದೇವೇರ ಸಹಿತ ರುದ್ರರೂಪಿ ಪರಮಾತ್ಮ, ಈ ತ್ರಿವಿಧರಾದ ದೇವೇರ ಸಹಿತನಾಗಿ ಮೂರು ರೂಪಗಳಿಂದ ಪ್ರತಿ ರಸದಲ್ಲಿ ಸಾತ್ವಿಕಾದಿ ಭೇದದಿಂದ ಇರತಕ್ಕ ರಸಗಳಲ್ಲಿ ಇರೋವನಾಗಿದ್ದಾನೆ. ಉರುಪರಾಕ್ರಮ–ಅಸದೃಶವಾದ ಪರಾಕ್ರಮಶಾಲಿಯಾದ ವಿಷ್ಣು, ಬ್ರಹ್ಮ, ಶಿವ ನಾಮಗಳಿಂದ ಯುಕ್ತನಾದ ಪರಮಾತ್ಮ, ನಾಡಿಗಳೊಳಗಿದ್ದು–ಸಾತ್ವಿಕಾದಿ ಗುಣಗಳಿಂದ ಸಹಿತವಾದ ಒಂದೊಂದು ನಾಡೀಕ್ರಮಕ್ಕೆ ಇರತಕ್ಕ ೭೨,೦೦೦ ನಾಡಿಗಳೊಳು ವಿದ್ಯಮಾನನಾಗಿ ಇದ್ದು ನಾಡಿಗಳ ಸಂರಕ್ಷಿಸತಕ್ಕ, ಎಪ್ಪತ್ತೆರಡು ಸಾವಿರ–೭೨,೦೦೦, ಸಮೀರನ ರೂಪದೊಳಗಿದ್ದು–ವಾಯು ರೂಪಗಳ ಅಂತರ್ಗತನಾಗಿದ್ದು, ಕರ್ತೃ–ದೇಹವನ್ನು ರಕ್ಷಣಾ ಮಾಡತಕ್ಕ ಕರ್ತನು ತಾನಾಗಿ, ಸ್ವರಮಣನು–ತನ್ನೊಳಗೆ ತಾನು ರಮಿಸತಕ್ಕವನಾದ್ದರಿಂದ, ಆರು ರಸಗಳು ಜೀವರು ಭೋಗಮಾಡತಕ್ಕದ್ದರಲ್ಲಿ ವಿದ್ಯಮಾನವಾದ, ಸಾತ್ವಿಕಾದಿ ಭೇದದಿಂದ ಸಹಿತವಾದ ರಸಗಳಲ್ಲಿ ಪೂರ್ವೋಕ್ತ ಪ್ರಕಾರ ವಿದ್ಯಮಾನಗಳಾದ ಸ್ವಾಖ್ಯರಸಗಳ, ದೇಹಾಂತರ್ಗತನಾಗಿದ್ದು ಸ್ವೀಕರಿಸಿ, ಎನಿಸುವ–ಜಡ ರಸ ದೇಹಕ್ಕೆ ಉಪಚಯ ಮಾಡಿ ತದ್ದ್ವಾರಾ ದೇಹಗತನಾದ, ಜೀವನ ದೇಹದ್ವಾರಾ

ಉತ್ಕೃಷ್ಟ ಪರಾಕ್ರಮಶಾಲಿ ಎಂತ ತಾರತಮ್ಯಾನುಸಾರ ಎಣಿಸೋವನಾಗತಾನೆ. ಜೀವರಿಗೆ, ಬಲಪರಾಕ್ರಮಾದಿಗಳು ನ್ಯೂನಾಧಿಕ್ಯ ಕಾಣೋಣ, ದೇಹವಿವಕ್ಷಾ ಎಂತ ತಾತ್ಪರ್ಯ.

**ತಾ||** ಆರು ರಸಗಳಲ್ಲಿ ಎರಡೆರಡು ರೂಪಗಳಿಗೆ ಕಾರಣ, ಒಂದೊಂದು ರಸದಲ್ಲಿ ಎರಡು ವಿಧ ರಸಗಳಿವೆ. ಒಂದೇ ರಸ ಪ್ರಥಮತಃ ಸುರಸವಾಗಿದ್ದು, ಅದೇ ರಸ ಕಾಲವ್ಯವಧಾನದ ಮ್ಯಾಲೆ ಕೆಟ್ಟು, ಪ್ರಕಾರಾಂತರದಿಂದ ಒಂದೊಂದಕ್ಕೆ ಎರಡು ಭಗವದ್ರೂಪಗಳೆಂತ ತಾತ್ಪರ್ಯ.

**ನಿನ್ನ ಸರ್ವತ್ರದಲಿ ನೆನೆವವ ।**
**ರನ್ಯ ಕರ್ಮವ ಮಾಡಿದರು ಸರಿ ।**
**ಪುಣ್ಯಕರ್ಮಗಳೆನಿಸುವವು ಸಂದೇಹವಿನಿತಿಲ್ಲ ॥**
**ನಿನ್ನ ಸ್ಮರಿಸದೆ ಸ್ನಾನ ಜಪ ಹೋ ।**
**ಮಾನ್ನ ವಸ್ತ್ರಗಜಾಶ್ವ ಭೂಧನ ।**
**ಧಾನ್ಯ ಮೊದಲಾದಖಿಳ ಧರ್ಮವ ಮಾಡಿ ಫಲವೇನು ॥ ೮ ॥**

ಪರಮಾತ್ಮನ ಸ್ಮೃತಿರಹಿತನಾಗಿ ಏನು ಧರ್ಮವು ಮಾಡಿದರೂ ಫಲವಿಲ್ಲ ಎಂತ ಹೇಳತಾರೆ.

ನಿನ್ನ—ದೇಹಾಂತರ್ಗತನಾದ, ಬಿಂಬರೂಪಿಯಾದ ನಿನ್ನ, ಸರ್ವತ್ರದಲಿ—ದೇಹೇಂದ್ರಿಯಾದಿಗಳಲ್ಲಿ, ತಜ್ಜನಿತ ಕರ್ಮಗಳಲ್ಲಿ, ತದ್ವತ್ ಅನ್ಯಪ್ರಾಣಿಗಳಲ್ಲಿ, ಸರ್ವ ಚರಾಚರಗಳಲ್ಲಿ, ಈ ಸರ್ವ ಅಧಿಷ್ಠಾನಗಳಲ್ಲಿ ಅಂತರ್ಗತತ್ವೇನ ತಿಳಿದು, ಸರ್ವ ಲಕ್ಷ್ಯವೂ ಅಧಿಷ್ಠಾನಗಳಲ್ಲಿ ಇಡದೇ ಪರಮಾತ್ಮನಾದ ನಿನ್ನಲ್ಲಿ ಇಟ್ಟು, ನೆನೆವವರು— ಸರ್ವವೂ ನಿನ್ನ ರೂಪಗಳೇ ಎಂತಲೂ, ಸರ್ವ ನಾಮಗಳೂ ನಿನ್ನ ನಾಮಗಳೇ ಎಂತಲೂ, ಈ ಪ್ರಕಾರ ಸ್ಮರಣೆ ಮಾಡತಕ್ಕವರು, ಅನ್ಯಕರ್ಮವ ಮಾಡಿದರೂ—ಪುಣ್ಯಕರ್ಮಕ್ಕೆ ಅನ್ಯವಾದ ಪಾಪಕರ್ಮ ಮಾಡಿದಕಾಲಕ್ಕೂ ಸರಿಯೇ, ಅಂದರೆ ಜೀವರು ಅಸ್ವತಂತ್ರರಾದ ಮೇಲೆ ಪಾಪಕರ್ಮಗಳು, ಇವರು ಮಾಡೋಣ ಎಂಬೋದು ಕೂಡೋದಿಲ್ಲ. ತ್ರಿಗುಣಬದ್ಧರಾಗಿ ಸ್ಥಿತಿ ಅವಸ್ಥಾದಲ್ಲಿ ಸರ್ವಪ್ರಾಣಿಗಳು ಇರೋಣದರಿಂದ ಪರಮಾತ್ಮ ತನ್ನ ಕ್ರಿಯಾ ದ್ವಾರಾ ದೇವಾದಿ ತೃಣಾಂತ ಜೀವರ ಕಡಿಯಿಂದ ದೇಹದ್ವಾರಾ, ಅನ್ಯ ಕರ್ಮವೇನು, ಪುಣ್ಯಕರ್ಮವೇನು ಮಾಡಸತಾನೆ, ಜೀವರು ಮಾಡತಾರೆ. ಈ ಪ್ರಕಾರ ಮಾಡಿದರೂ ಸರಿ, ಪುಣ್ಯಪಾಪಗಳು ಎರಡೂ ಸೇರಿಸಿ ಪುಣ್ಯಕರ್ಮಗಳಾಗೇ ಸರಿಮಾಡತಾನಾದ್ದರಿಂದ, ಪುಣ್ಯಕರ್ಮಗಳೆನಿಸುವವು—ಅನ್ಯಕರ್ಮಗಳೂ ಕೂಡಾ ಭಗವದನುಗ್ರಹದಿಂದ ಪುಣ್ಯಕರ್ಮಗಳೆಂತಲೇ ಕರಿಸೋದಾಗತವೆ. ಪರಮಾತ್ಮನ ಸ್ಮೃತಿ ಎಂಬ ದೀಪವನ್ನ ಮುಡಿಸಿ (ಹಚ್ಚಿಸಿ), ಕೈಯಲ್ಲಿ ಧರಿಸಿ ಪಾಪಸಂಕೇತವಾದ ಕತ್ತಲೆಯಲ್ಲಿ ಗಮನಮಾಡಿದರೆ, ಆ ಕತ್ತಲು ಹೋಗಿ ಬೆಳಕಾದಂತೆ ಪಾಪಕರ್ಮಗಳು, ಪುಣ್ಯಕರ್ಮಗಳು ಆಗೋದಾಗತವೆ. ಸಂದೇಹವಿನಿತಿಲ್ಲ— ಈ ವಿಷಯದಲ್ಲಿ ಸಂದೇಹ ಎಂಬೋದು ದಾವಮಾತ್ರವೂ ಇಲ್ಲ. "ದಾವಾಗ್ನಿದಗ್ಧ

ಕರ್ಮಾಣಿ ” ಎಂಬ ವಚನವೂ, ಅಧಿಕಾರಿಗಳು ಸ್ಥಿತಿಕಾಲದಲ್ಲಿ ಸರ್ವರೂ ಪಾಪ ಮಾಡೇ ಮಾಡತಾರೆ. ಆ ಪಾಪಗಳಿಗೆ ಮೋಚನೆ ಇಲ್ಲದಿದ್ದರೆ ಸ್ವರೂಪಗತಿ ಆಗೋಣವೇ ಇಲ್ಲ. ಆದ್ದರಿಂದ ಅದಕ್ಕೆ ಮೋಚನ ಈ ರೀತ್ಯಾ ಎಂತ ತಾತ್ಪರ್ಯ. ನಿನ್ನ ಸ್ಮರಿಸದೆ–ಬಿಂಬ ನಾದ ನಿನ್ನ ಪೂರ್ವೋಕ್ತ ಪ್ರಕಾರ ಸ್ಮರಿಸದೇ ಇರತಕ್ಕವರಿಗೆ ಅಹಂಮಮತಾ ಎಂಬ ಸ್ಮರಣೆ ಇರುತ್ತದೆ. ಇಂಥಾ ಸ್ಮರಣೆಯಿಂದ ದಾವ ಅಧಿಕಾರಿ ಆದರೂ ಸರಿಯೆ, ಸ್ನಾನ–ಗಂಗಾದಿ ತೀರ್ಥಸ್ನಾನ, ಜಪ–ಅಷ್ಟಮಹಾಮಂತ್ರಜಪ, ಹೋಮ–ಹೋಮಸಾಂಕೇತ ಯಜ್ಞ ಯಾಗಾದಿಗಳು, ಅನ್ನ–ಅನ್ನದಾನ, ವಸ್ತ್ರ–ವಸ್ತ್ರದಾನ, ಗಜಾಶ್ವಭೂಧನಧಾನ್ಯ–ಗಜ, ಅಶ್ವ, ಭೂಮಿ, ದ್ರವ್ಯ, ನವಧಾನ್ಯ, ಮೊದಲಾದಖಿಳ–ಇವೇ ಮೊದಲಾದ ಸಮಸ್ತವಾದ, ಧರ್ಮ–ಧರ್ಮವೇನು, ಸತ್ಕರ್ಮವೇನು, ಮಾಡಿ ಫಲವೇನು–ಮಾಡೋಣದರಿಂದ ಫಲ ವಿಲ್ಲ ಎಂತ ತಾತ್ಪರ್ಯ.

**ತಾ||** ಕಣ್ಣುಗಳು ಎರಡು ಮುಚ್ಚಿಕೊಂಡವಗೆ ಸೂರ್ಯೋದಯವಾದರೂ, ಅಸ್ತ ಮಯವಾದರೂ ಎರಡೂ ಕಾಲ ಕತ್ತಲೆಯೇವೇ. ಮತ್ತು ಕಣ್ಣುಗಳು ಎರಡು ಮುಚ್ಚಿ ಕೊಂಡು ಬೆಳಕು ಆಗಬೇಕು ಎಂತ ದೀಪ ಕಯ್ಯಾಗೆ ಧರಿಸಿ ಮಾರ್ಗ ನಡೆದರೆ, ಆ ಬೆಳಕು ಇವಗೆ ಪ್ರಕಾಶ ಕೊಟ್ಟು ಅಂಧಕಾರ ಪರಿಹಾರವಾದೀತೇ ? ಅಂದರೆ ಮಾಡೀತೇ ? ಹ್ಯಾಂಗೆ ಪರಿಹಾರ ಮಾಡೋದಿಲ್ಲವೋ ತದ್ವತ್ ಜ್ಞಾನವೆಂಬೋ ನೇತ್ರ ಗಟ್ಯಾಗಿ ಮುಚ್ಚಿ ಕೊಂಡವಗೆ ಪುಣ್ಯಕರ್ಮಗಳೆಂಬೋ ಸೂರ್ಯನ ಪ್ರಕಾಶವು ಇವನ ಅಂಧಕಾರ ಪರಿಹಾರ ಮಾಡಿ ಪುಣ್ಯಫಲಗಳು ಕೊಟ್ಟೇತೇ ? ಕೊಡಲಾರವು. ಅದರಂತೆ ಪರಮಾತ್ಮನ ಸ್ಮೃತಿ ಎಂಬ ನೇತ್ರಗಳು ಉಳ್ಳವಗೆ ಪುಣ್ಯಗಳು, ಪುಣ್ಯಫಲಗಳು ಕೊಡತವೆ. ಪಾಪಗಳೂನೂ ಪೂರ್ವೋಕ್ತ ಪ್ರಕಾರ ಪುಣ್ಯಫಲಗಳೇ ಕೊಡತವೆ ಎಂದರೆ ಅಂಧಕಾರಗತ ದೀಪ ಅಂಧಕಾರ ವನ್ನ ದೂರಮಾಡಿದಂತೆ ಪರಮಾತ್ಮನ ಸ್ಮೃತ್ಯಾಖ್ಯ ದೀಪ ಅಂಧಕಾರ ದೂರಮಾಡಿ ಸ್ಮೃತಿ ಎಂಬ ಪುಣ್ಯಕ್ಕೆ ಸಫಲವಾಗತದೆ ಎಂತ ತಾತ್ಪರ್ಯ.

**ಇಷ್ಟ ಭೋಗ್ಯ ಪದಾರ್ಥದೊಳು ಶಿಪಿ |**
**ವಿಷ್ಟನಾಮದಿ ಸರ್ವಜೀವರ |**
**ತುಷ್ಟಿ ಬಡಿಸುವ ದಿನದಿನದಿ ಸಂತುಷ್ಟ ತಾನಾಗಿ ||**
**ಕೋಷ್ಟದೊಳು ನೆಲಸಿದ್ದು ರಸಮಯ |**
**ಪುಷ್ಟಿಯೈದಿಸುತಿಂದ್ರಿಯಗಳೊಳು |**
**ಪ್ರೇಷ್ಟನಾಗಿದ್ದೆಲ್ಲ ವಿಷಯಗಳುಂಬ ತಿಳಿಸದಲೆ || ೯ ||**

ಪೂರ್ವೋಕ್ತ ಆರು ರಸಗಳ ಭೋಜನದಿಂದ ತುಷ್ಟಿಪಡಿಸತಕ್ಕ ಭಗವದ್ರೂಪ ಹೇಳತಾರೆ.

ಇಷ್ಟ–ಅನಿಷ್ಟಪ್ರದಗಳಲ್ಲದ ಇಷ್ಟಪ್ರದಗಳಾದ, ಭೋಗ್ಯ–ಭೋಗಯೋಗ್ಯಗಳಾದ, ಅನಿಷಿದ್ಧಗಳಾದ, ಪದಾರ್ಥದೊಳು–ಪದಾರ್ಥಗಳಲ್ಲಿ, ಶಿಪಿವಿಷ್ಟನಾಮದಿ–ಶಿಪಿ–ಗರುಡನ

ವ್ಯಾಲೆ, ವಿಷ್ಟ–ಆವಿಷ್ಟನಾದ ಕೃಷ್ಣರೂಪಿ ಪರಮಾತ್ಮ ಇದ್ದವನಾಗಿ, "ಪುತ್ರಕಾಮೇಷ್ಟಿ ದೇವತಾ ಹರೇಃ ರೂಪಂ" ಭಾಗವತ ಚತುರ್ಥಸ್ಕಂಧ. ಜೀವರ–ಭೋಜನಾನಂತರ ಜೀವರನ, ತುಷ್ಟಿಬಡಿಸುವ–ತತ್ವಾಭಿಮಾನಿಗಳಾದ ದೇವತೆಗಳ ದ್ವಾರಾ ಸ್ಥೂಲದೇಹ ದ್ವಾರಾ ತುಷ್ಟಿಬಡಿಸುವ. ಜೀವಗೆ ಭೋಜನಮಾಡಿಸಿ ತೃಪ್ತಿಬಡಿಸುವನಾಗತಾನೆ ಎಂತ ತಾತ್ಪರ್ಯ. ಜೀವ, ಭೋಜನ ಮಾಡತಕ್ಕ ಪ್ರಾಕೃತಪದಾರ್ಥವಲ್ಲಿ ಜೀವನ ದೇಹಕ್ಕೆ ಉಪಚಯವಾಗತಕ್ಕ ರಸವೇ ಇಲ್ಲ. ಆದ್ದರಿಂದ ಜೀವನ ದ್ವಾರಾ ದೇಹಕ್ಕೆ ಭೋಜನ ಮಾಡಿಸಿ ದೇಹಾಭಿಮಾನ ಜೀವಗೆ ಇರೋಣದರಿಂದ ದೇಹಕ್ಕೆ ಆದ ಉಪಚಯ ತನ್ನದೆಂದು ವ್ಯಾಪ್ತವಾದ ಜೀವೇಂದ್ರಿಯಗಳಿಗೆ ತಿಳಿಸಿ ತೃಪ್ತಿಬಡಿಸುವ, ದಿನದಿನದಿ–ಪ್ರತಿದಿನದಲ್ಲೂ, ರಸಮಯ–ಜೀವಭುಕ್ತ, ಪ್ರಾಕೃತರಸಗಳ–ಒಳಗೆ ಪರಮಾತ್ಮ ರಸಮಯನಾಗಿನ್ನು, ಕೋಷ್ಟದೊಳು–ಜೀವರ ಸ್ಥೂಲದೇಹದ ಉದರದಲ್ಲಿ, ನೆಲೆಸಿದ್ದು–ಬಿಂಬನಾಗಿ ಆವಾಸನಾಗಿದ್ದು ದೇಹಾಕಾರನಾಗೀನು ಇದ್ದು, ಸಂತುಷ್ಟ ತಾನಾಗಿ–ಜೀವಭುಕ್ತದ್ವಾರಾ ತನ್ನ ಸ್ವಾಖ್ಯರಸಗಳು ತಾನುಂಡು ತನ್ನಿಂದ ತಾನೇ ಸಂತುಷ್ಟಿತನಾಗಿ, ಇಂದ್ರಿಯಗಳೊಳು–ಪ್ರಾಣಿಗಳ ಸ್ಥೂಲದೇಹದ ಮನ ಆದಿ ಏಕಾದಶೇಂದ್ರಿಯಗಳೊಳು ಹಾಂಗೆ ಸರ್ವಾವಯವಗಳೊಳು ವ್ಯಾಪ್ತನಾಗಿ, ಪ್ರೇಷ್ಟನಾಗಿದ್ದು–ದೇಹಗತ ಜೀವಗೆ ಆಪ್ತನಾಗಿದ್ದು, ಪುಷ್ಟಿಯೈದಿಸುತ–ಭೋಜನ ಮಾಡಿದ ಪ್ರಾಕೃತ ರಸಗಳಿಂದ, ಪ್ರಾಕೃತ ಸ್ಥೂಲದೇಹವನ್ನು ಪುಷ್ಟಿಗೈಸುತ, ತಿಳಿಸದಲೆ–ತನ್ನ ಸ್ವಾಖ್ಯರಸಗಳ ತಾನು ಊಟ ಮಾಡೋದರನ್ನ ತನ್ನ ಕೂಡಾ ದೇಹದಲ್ಲಿ ವಿದ್ಯಮಾನನಾದ, ಜೀವಗೆ–ಜೀವರಿಗೆ, ತಿಳಿಸದಲೆ ಅಂದರೆ ತಿಳಿಸದೇನೇ, ಎಲ್ಲ ವಿಷಯಗಳುಂಬ–ಜೀವನಾದವ ದಾವ ದಾವ ವಿಷಯಗಳ ಉಣತಾನೋ ಆ ಅಲ್ಪ ವಿಷಯಗಳಲ್ಲಿ ಇರತಕ್ಕ ತನ್ನ ಸ್ವಾಖ್ಯವಾದ ಎಲ್ಲಾ ವಿಷಯಗಳೂ ಉಣತಾನೆ ಎಂತ ತಾತ್ಪರ್ಯ.

**ಕಾರಕಾಹ್ವಯ ಜ್ಞಾನ ಕರ್ಮ ।**
**ಪ್ರೇರಕನು ತಾನಾಗಿ ಕ್ರಿಯೆಗಳ ।**
**ತೋರುವನು ಕರ್ಮೇಂದ್ರಿಯಾಧಿಪರೊಳಗೆ ನೆಲೆಸಿದ್ದು ॥**
**ಮೂರುಗುಣಮಯ ದ್ರವ್ಯಗತದಾ ।**
**ಕಾರ ತನ್ನಾಮದಲಿ ಕರೆಸುವ ।**
**ತೋರಿಕೊಳ್ಳದೆ ಜನರ ಮೋಹಿಪ ಮೋಹಕಲ್ಪಕನು ॥ ೧೦ ॥**

ದೇಹೇಂದ್ರಿಯಾದಿಗತ ರೂಪಗಳ ಕ್ರಿಯೆಗಳ ನಡಿಸೋ ರೂಪಗಳ ಹೇಳತಾರೆ.

ಕಾರಕಾಹ್ವಯ–ಕಾರಕಶಬ್ದವಾಚ್ಯನಾಗಿ, ಜ್ಞಾನ–ಜ್ಞಾನೇಂದ್ರಿಯಗಳು ಐದರಲ್ಲಿ ವಿದ್ಯಮಾನರಾದ ಅಭಿಮಾನಿ ದೇವತೆಗಳಲ್ಲಿ, ಕರ್ಮೇಂದ್ರಿಯಾಧಿಪರೊಳಗೆ–ಕರ್ಮೇಂದ್ರಿಯಗಳು ಐದು. ಇವಕ್ಕೆ ಅಧಿಪರಾದ ದೇವತೆಗಳೊಳಗೆ, ನೆಲೆಸಿದ್ದು–ಆವಾಸನಾಗಿದ್ದು, ದ್ರವ್ಯಗ–ದ್ರವ್ಯನಾಮದಿಂದ ವಾಚ್ಯನಾಗಿ ಇರೋವನಾಗಿ ಇದ್ದಾನೆ. ಮೂರುಗುಣಮಯ–ತ್ರಿಗುಣದಿಂದ ನಿರ್ಮಿತವಾದ ಉಂಗುಷ್ಟಾರಭ್ಯ ಶಿರಪರಿಯಂತ ದೇಹದಲ್ಲಿ, ತದಾಕಾರ

ತನ್ನಾಮದಲಿ_ತದಾಕಾರದಿಂದ, ಆಯಾ ದೇಹನಾಮಗಳಿಂದ, ಕರೆಸುವ_ಕರೆಸುತಾ ಇರೋವನಾಗಿದ್ದಾನೆ. ಕರ್ಮಪ್ರೇರಕನು ತಾನಾಗಿ_ಪೂರ್ವೋಕ್ತ ಪ್ರಕಾರ ಜ್ಞಾನೇಂದ್ರಿಯ ಕರ್ಮೇಂದ್ರಿಯಾಧಿಪತಿಗಳು, ಇವರೊಳು ಇದ್ದು ಇವರ ದ್ವಾರಾ ಜೀವಗೆ, ಜೀವನ ದ್ವಾರಾ ದೇಹಕ್ಕೆ ಪ್ರೇರಕನು ಆದಿಯಲ್ಲಿ ತಾನೇ ಆಗಿ, ಕ್ರಿಯೆಗಳ ತೋರುವನು_ಆಯಾ ಇಂದ್ರಿಯಗಳ ದ್ವಾರಾ ಕ್ರಿಯಾದಿ ವ್ಯಾಪಾರಗಳ ನಡಿಸಿ, ಜೀವ ತಾನೇ ಮಾಡಿದೆ ಎಂಬದಾಗಿ ಜೀವಗೆ ತೋರಿಸೋವನಾಗತಾನೆ. ತೋರಿಕೊಳ್ಳದೆ – ಈ ಪ್ರಕಾರ ತನ್ನಿಂದ ಆಗತಕ್ಕ ಕ್ರಿಯೆಗಳು ತಾನು ಜೀವರಿಗೆ ತೋರಿಕೊಳ್ಳದೆ ನಡೆಸತಾನೆ. ಈ ಪ್ರಕಾರ ಮಾಡಿಸುತ್ತಾ, ಜನರ ಮೋಹಿಪ_ಪರಮಾತ್ಮ ಮಾಡಸತಾನೆ ಎಂಬ ಜ್ಞಾನವಿಲ್ಲದೇ ತಾವೇ ಮಾಡತೇವೆ ಎಂಬ ಜ್ಞಾನದಿಂದ ಜನರನ್ನ ಮೋಹಯುಕ್ತರನ್ನಾಗಿ ಮಾಡತಾನೆ. ಈ ಪರಮಾತ್ಮ ಎಂಥಾವನೆಂದರೆ, ಮೋಹಕಲ್ಪಕನು_ಸಾಧನಾತ್ಪೂರ್ವದಲ್ಲಿ ಪ್ರಾಣಿಗಳಿಗೆ ಅಜ್ಞಾನರೂಪವಾದ ಮೋಹವನ್ನು ಉಂಟುಮಾಡಿಕೊಡತಕ್ಕವನು. ಎಂದರೆ ಮುಕ್ತಿ ಯೋಗ್ಯರಿಗೆ ಸ್ವರೂಪದಲ್ಲಿ ಅಜ್ಞಾನವಿಲ್ಲ. ಸ್ಥೂಲದೇಹ ದ್ವಾರಾ ಅಜ್ಞಾನ ಕಲ್ಪಿಸಿ ಮೋಹಯುಕ್ತರನ್ನಾಗಿ ಮಾಡತಾನೆ ಎಂತ ತಾತ್ಪರ್ಯ. ಮೇಲೆ ಹೇಳಿದ ಇಂದ್ರಿಯಗಳ ದ್ವಾರಾ ಕ್ರಿಯಾಕ್ರಮ ಹ್ಯಾಂಗೆಂದರೆ ಹೇಳತಾರೆ :–

೧. ಅಹಂಕಾರ ವೃತ್ತಿ—ಪ್ರಾಣವಾಯು ಗಂಧ ಸಹಿತ ಘ್ರಾಣೇಂದ್ರಿಯಕ್ಕೆ ಬಂದು ಸುಗಂಧ, ದುರ್ಗಂಧ ವಿಷಯೀಕರಿಸಿ, ಗುದೇಂದ್ರಿಯ ದ್ವಾರಾ ಗಂಧಗುಣ ಪೃಥ್ವಿಯಲ್ಲಿ ಕೂಡತದೆ_ಅನಿರುದ್ಧರೂಪಿ ಪರಮಾತ್ಮ_ಗಂಧಜ್ಞಾನ.
೨. ಚಿತ್ತ—ಅಪಾನವಾಯು ಪ್ರದ್ಯುಮ್ನ ಸಹಿತ ಜಿಹ್ವೇಂದ್ರಿಯಕ್ಕೆ ಬಂದು ರಸ ಸ್ವೀಕರಿಸಿ ಗುಹ್ಯೇಂದ್ರಿಯ ದ್ವಾರಾ ರಸಗುಣ ಅಪ್ಪಿನಲಿ ಕೂಡತದೆ—ರಸಜ್ಞಾನ.
೩. ಬುದ್ಧಿ—ಉದಾನವಾಯು ಸಂಕರ್ಷಣ ಸಹಿತ ಚಕ್ಷುರಿಂದ್ರಿಯಕ್ಕೆ ಬಂದು ರೂಪ ಸ್ವೀಕರಿಸಿ ಪಾದೇಂದ್ರಿಯ ದ್ವಾರಾ ರೂಪಗುಣ ತೇಜದಲ್ಲಿ ಕೂಡತದೆ_ರೂಪ ಜ್ಞಾನ.
೪. ಮನಸ್ಸು—ಸಮಾನವಾಯು ವಾಸುದೇವ ಸ್ಪರ್ಶ ಸಹಿತ ತ್ವಗಿಂದ್ರಿಯಕ್ಕೆ ಬಂದು ಸ್ಪರ್ಶ ಸ್ವೀಕರಿಸಿ ಪಾಣೇಂದ್ರಿಯದ್ವಾರಾ ಸ್ಪರ್ಶಗುಣ ವಾಯುವಿನಲ್ಲಿ ಕೂಡತದೆ_ಸ್ಪರ್ಶಜ್ಞಾನ.
೫. ಅಂತಃಕರಣ—ವ್ಯಾನವಾಯು ನಾರಾಯಣ ಶಬ್ದಸಹಿತ ಶ್ರೋತ್ರೇಂದ್ರಿಯಕ್ಕೆ ಬಂದು ಶಬ್ದ ಸ್ವೀಕರಿಸಿ ವಾಗಿಂದ್ರಿಯ ದ್ವಾರಾ ಶಬ್ದಗುಣ ಆಕಾಶದಲ್ಲಿ ಕೂಡತದೆ—ಶ್ರೋತ್ರಜ್ಞಾನ.

ಈ ಪ್ರಕಾರ ಆಯಾ ಅಭಿಮಾನಿ ದೇವತೆಗಳ ಸಹಿತ ತನ್ಮಾತ್ರಗಳು ಪೃಥಿವ್ಯಾದಿಗಳಲ್ಲಿ ತದಭಿಮಾನಿಗಳು ಪೃಥಿವ್ಯಾದಿ ಅಭಿಮಾನಿಗಳಲ್ಲಿ ಲಯವಾದರೆ ಆಗ್ಗೆ ಪಂಚಜ್ಞಾನೇಂದ್ರಿಯಗಳಿಗೆ ತನ್ಮಾತ್ರಗಳು ಅದದು ಅದದಕ್ಕೆ ವ್ಯಕ್ತವಾಗತವೆ. ಈ ಪ್ರಕಾರ ಕ್ರಿಯೆಗಳ ತೋರಿಸೋವನಾಗತಾನೆ.

**ದ್ರವ್ಯನೆನಿಸುವ ಭೂತ ಮಾತ್ರದೊ ।**
**ಳವ್ಯಯನು ಕರ್ಮೇಂದ್ರಿಯಗಳೊಳು ।**
**ಭವ್ಯ ಸತ್ಕ್ರಿಯನೆನಿಪ ಜ್ಞಾನೇಂದ್ರಿಯಗಳೊಳಗಿದ್ದು ॥**
**ಸ್ತವ್ಯ ಕಾರಕನೆನಿಸಿ ಸುಖಮಯ ।**
**ಸೇವ್ಯ ಸೇವಕನೆನಿಸಿ ಜಗದೊಳು ।**
**ಹವ್ಯವಾಹನನರಣಿಯೊಳಗಿಪ್ಪಂತೆ ಇರುತಿಪ್ಪ ॥ ೧೧ ॥**

ಇನ್ನೂ ಪೂರ್ವೋಕ್ತ ಸಂಗತಿಯೇ ಹೇಳತಾರೆ.

ಭೂತ–ಪೃಥಿವ್ಯಾದಿ ಪಂಚಭೂತಗಳೊಳಗೆ, ದ್ರವ್ಯನೆನಿಸುವ–ದ್ರವ್ಯ ಎಂತ ಕರಿಸೋವನಾಗಿದ್ದಾನೆ. ಮಾತ್ರದೊಳು–ಗಂಧ, ರಸ, ರೂಪಾದಿ ತನ್ಮಾತ್ರದೊಳು, ಅವ್ಯಯನು–ಅವ್ಯಯನಾಮಕ ಪರಮಾತ್ಮನು, ಕರ್ಮೇಂದ್ರಿಯಗಳೊಳು – ಕರ್ಮೇಂದ್ರಿಯಗಳಲ್ಲಿ, ಭವ್ಯ–ಭವ್ಯನಾಮಕ ಪರಮಾತ್ಮನು, ಜ್ಞಾನೇಂದ್ರಿಯಗಳೊಳು–ಜ್ಞಾನೇಂದ್ರಿಯಗಳಲ್ಲಿ, ಸತ್ಕ್ರಿಯನೆನಿಪ–ಸತ್ಕ್ರಿಯನೆನಿಪನು ಅಂದರೆ ಸತ್ಕ್ರಿಯ ಎನಿಸಿ ಇರೋವನಾಗಿದ್ದಾನೆ. ಸ್ತವ್ಯ–ಸ್ತವ್ಯ ನಾಮದಿಂದ ಮನೋ ಇಂದ್ರಿಯದಲ್ಲಿ ಇದ್ದಾನೆ. ಕಾರಕನೆನಿಸಿ–ಕಾರಕ ಎಂತ ಎನಿಸಿದವನಾಗಿ, ಅವ್ಯಕ್ತತತ್ವ, ಮಹತ್ತತ್ವ, ಅಹಂಕಾರತತ್ವ ಈ ಮೂರರಲ್ಲಿ ಇರೋವನಾಗಿದ್ದಾನೆ. ಇದ್ದು–ಪೂರ್ವೋಕ್ತ ಪ್ರಕಾರ ಇದ್ದು, ಇದೇ ರೀತ್ಯಾ ಸರ್ವ ಪ್ರಾಣಿಗಳೊಳಗೆ ಇದ್ದು, ಸುಖಮಯ–ಸುಖಮಯಗಳಾದ ತನಗೆ ಅಭಿನ್ನಗಳಾದ ರೂಪಗಳಿಂದ, ಜಗದೊಳು–ಸರ್ವ ಪ್ರಾಣಿಗಳೊಳಗೆ ಒಬ್ಬ ಸೇವಕ ಎಂತಲೂ, ಒಬ್ಬ ಸ್ವಾಮಿ ಎಂತಲೂ ಎರಡು ಪ್ರಕಾರ ಇರೋದಾಗಿ ಅದೆ. ಈ ರೀತ್ಯಾ ಇರತಕ್ಕ, ಸೇವಕ–ಸೇವಕ ವೃತ್ತಿ ಮಾಡತಕ್ಕವನಲ್ಲಿ ಸೇವಕನೆಂತಲೂ, ಸೇವ್ಯ–ಸೇವೆ ಮಾಡಿಸಿಕೊಳ್ಳತಕ್ಕವನಲ್ಲಿ ಸೇವ್ಯ ಎಂತಲೂ, ಎನಿಸಿ–ಈ ಪ್ರಕಾರ ನಾಮದಿಂದ ಸೇವೆ ಮಾಡಿಸಿಕೋತಾನೂ, ಮತ್ತೊಂದು ಪ್ರಕಾರದಿಂದ ಸೇವೆ ಮಾಡತಾನೂ ಇರೋವನಾಗಿದ್ದಾನೆ. ಅಧಿಕಾರಿ ಅನ್ಯರಿಂದ ಸೇವಾ ತೊಕ್ಕೊಂಡರೂ, ಅನ್ಯರಿಗೆ ಸೇವಾ ಮಾಡಿದರೂ, ಈ ರೀತ್ಯಾ ಅನುಸಂಧಾನದಿಂದ ಭಗವದರ್ಪಿತ ಮಾಡಬೇಕು. ಈ ಪರಮಾತ್ಮ ಪೂರ್ವೋಕ್ತ ಅಧಿಷ್ಠಾನಗಳಲ್ಲಿ, ಹವ್ಯವಾಹನನು–ಅಗ್ನಿ, ಅರಣಿಯೊಳಿಪ್ಪಂತೆ–ಕಾಷ್ಠದಲ್ಲಿ ಇರೋ ಹಾಂಗೆ, ಇರುತಿಪ್ಪ–ಕಣ್ಣಿಗೆ ಕಾಣದಲೆ ಇದ್ದಾನೆ. ಇದ್ದು, ಪೂರ್ವೋಕ್ತ ಪ್ರಕಾರ ಸೇವ್ಯ ಸೇವಕನಾಗಿದ್ದಾನೆ.

**ತಾ॥** ಅರಣಿ ಮಥನ ಮಾಡದ ಹೊರ್ತು ಅಗ್ನಿ ಹ್ಯಾಂಗೆ ಕಾಣೋದಿಲ್ಲವೋ ತದ್ವತ್ ಜ್ಞಾನಭಕ್ತಿವೈರಾಗ್ಯಗಳಿಂದ ಮಥನ ಮಾಡಿದರೆ ಅಂತರ್ಗತನಾದ ಪರಮಾತ್ಮನ ಕಾಣತಾರೆ. ಹತ್ತನೇ ಶ್ಲೋಕದಲ್ಲಿ ಇಂದ್ರಿಯಾಭಿಮಾನಿ ದೇವತಾಂತರ್ಗತ ರೂಪಗಳು ಹೇಳತಾರೆ. ಈ ಶ್ಲೋಕದಲ್ಲಿ ಇಂದ್ರಿಯಾಂತರ್ಗತ ರೂಪಗಳ ಹೇಳತಾರೆ. ಇಂದ್ರಿಯ

ಗಳಲ್ಲಿ ಅನೇಕ ಪ್ರಕಾರ ರೂಪಗಳ ಹೇಳತಾರೆ. ಅದಕ್ಕೆ ಕ್ರಿಯೆಗಳು ಅನೇಕ ಪ್ರಕಾರ ಉಂಟು. ಸ್ಥೂಲ ದೇಹದಲ್ಲಿ ಇಂದ್ರಿಯಗೋಳಕಗಳು ಒಂದು, ತದ್ಗತ ಅನಿರುದ್ಧ ಶರೀರಗತ ಇಂದ್ರಿಯಗಳು. ಇದರಲ್ಲಿ ಮಹತ್ತತ್ವಗತ ಇಂದ್ರಿಯಗಳು. ಇದರಲ್ಲಿ ಜೀವನ ಸ್ವರೂಪೇಂದ್ರಿಯ ಇಂದ್ರಿಯಗಳು. ಈ ಪ್ರಕಾರ ಸ್ಥೂಲ ದೇಹಗತ ಇಂದ್ರಿಯ ಗೋಳಕ ಗಳಲ್ಲಿ ವ್ಯಾಪ್ತವಾಗಿ ಅದೆ. ಈ ವಿವಕ್ಷಾದಿಂದ ಇಂದ್ರಿಯಗಳಲ್ಲಿ ಅನೇಕ ಪ್ರಕಾರ ರೂಪ ಗಳ ಹೇಳೋದಕ್ಕೆ ಕಾರಣ. ಮತ್ತು ಒಂದೊಂದು ಇಂದ್ರಿಯಗಳಲ್ಲಿ ಕಾರ್ಯಭೇದಗಳ ಅನುಸರಿಸಿ ಅನೇಕ ರೂಪಗಳ ಹೇಳಲಿಕ್ಕೆ ಕಾರಣವೆಂದು ತಿಳಿಯಬೇಕು.

**ಮನವೆ ಮೊದಲಾದಿಂದ್ರಿಯಗಳೊಳ ।**
**ಗನಿಲದೇವನು ಶುಚಿಯೆನಿಸಿಕೊಂ ।**
**ಡನವರತ ನೆಲೆಸಿಪ್ಪ ಶುಚಿಷದ್ಧೋತನೆಂದೆನಿಸಿ ॥**
**ತನುವಿನೊಳಗಿಪ್ಪನು ಸದಾ ವಾ ।**
**ಮನ ಹೃಷೀಕೇಶಾಖ್ಯರೂಪದ ।**
**ಲನುಭವಕೆ ತಂದೀವ ವಿಷಯಜಸುಖವ ಜೀವರಿಗೆ ॥ ೧೨ ॥**

ವಿಷಯಜನ್ಯ ಸುಖ ಭೋಗಕ್ಕೆ ತಂದುಕೊಡುವ ಭಗವದ್ರೂಪಗಳನ್ನು ಹೇಳ ತಾರೆ.

ಮನವೆ ಮೊದಲಾದ–ಮನಸ್ಸೇ ಮೊದಲಾದ, ಹನ್ನೊಂದು ಸಾಂಕೇತಗಳಾದ, ಇಂದ್ರಿಯಗಳೊಳು–ಇಂದ್ರಿಯಗಳಲ್ಲಿ, ಅನಿಲದೇವನು–ವಾಯುದೇವರು, ಶುಚಿಯೆನಿಸಿ ಕೊಂಡು–ಶುಚಿನಾಮದಿಂದ, ಅನವರತ–ನಿರಂತರ, ನೆಲೆಸಿಪ್ಪ–ಆವಾಸನಾಗಿ ಇದ್ದಾನೆ. ಶುಚಿಷತ್–ಈ ಶುಚಿನಾಮಕ ವಾಯ್ವಂತರ್ಗತ "ಹಂಸಃ ಶುಚಿಷದ್ವಸುರಂತ" ಎಂಬ ಈ ಋಕ್ ಪ್ರತಿಪಾದ್ಯ ಹದಿನೆಂಟು ಭಗವದ್ರೂಪಗಳೊಳಗೆ, ಶುಚಿಷತ್ ಎಂಬ ಭಗವ ದ್ರೂಪವನ್ನು ಚಿಂತಿಸಬೇಕು. ಹೋತನೆಂದೆನಿಸಿ–ವಾಯುದೇವರು ಹೋತ ಎಂತ ಎನಿಸಿ ದವನಾಗಿ, ತನುವಿನೊಳಗಿಪ್ಪನು–ದೇಹದೊಳು ದೇಹಾಕಾರದಂತೆ ಇರೋವನಾಗಿದ್ದಾನೆ. ತದಂತರ್ಗತ ಹೋತೃನಾಮಕ ಪರಮಾತ್ಮನ ಚಿಂತಿಸಬೇಕು. ವಾಮನ ಹೃಷೀಕೇಶಾಖ್ಯ ರೂಪದಲಿ–ಹೋತೃನಾಮಕನೇ ವಾಮನ ಎಂತ ದೇಹಾಕಾರದಿಂದಲೂ, ಶುಚಿನಾಮಕ ಪರಮಾತ್ಮನೇ ಹೃಷೀಕೇಶ ಎಂತಲೂ ಏಕಾದಶೇಂದ್ರಿಯಗಳೊಳು, ಆಖ್ಯ–ನಾಮಗಳಿಂದ, ರೂಪದಲಿ–ಈ ರೂಪಗಳಿಂದ, ಸದಾ–ನಿರಂತರದಲ್ಲೂ, ವಿಷಯಜಸುಖವ–ವಿಷಯಭೋಗ ಗಳಿಂದ ಜನಿತ ಸುಖಗಳ, ಜೀವರಿಗೆ–ಸರ್ವಪ್ರಾಣಿಗಳಿಗೆ, ಅನುಭವಕೆ ತಂದೀವ–ಅನು ಭವಕ್ಕೆ ತಂದುಕೊಡುವ. ಅಂದರೆ ಶುಚಿ, ಹೋತಾ ಎರಡೂ ರೂಪಗಳಿಂದ, ವಿಷಯ ಗಳಿಂದ ಸುಖ ಉತ್ಪತ್ತಿ ಮಾಡುವ. ವಾಮನ ಹೃಷೀಕೇಶ ರೂಪಗಳಿಂದ ಆ ಸುಖ ಅನುಭವಕ್ಕೆ ತಂದುಕೊಡುತ್ತಾನೆಂತ ತಾತ್ಪರ್ಯ.

**ಪ್ರೇರಕ ಪ್ರೇರ್ಯರೊಳು ಪ್ರೇರ್ಯ ।**
**ಪ್ರೇರಕನು ತಾನಾಗಿ ಹರಿ ನಿ ।**
**ರ್ವೈರದಿಂದ ಪ್ರವರ್ತಿಸುವ ತನ್ನಾಮರೂಪದಲಿ ॥**
**ತೋರಿಕೊಳ್ಳದೆ ಸರ್ವರೊಳು ಭಾ ।**
**ಗೀರಥೀಜನಕನು ಸಕಲ ವ್ಯಾ ।**
**ಪಾರಗಳ ತಾ ಮಾಡಿ ಮಾಡಿಸಿ ನೋಡಿ ನಗುತಿಪ್ಪ ॥ ೧೩ ॥**

ಪ್ರೇರ್ಯ ಪ್ರೇರಣೆ ವಿಚಾರ ಹೇಳುತಾರೆ.

ಹರಿ–ಜೀವನ ಅಣುಸ್ವರೂಪದಲ್ಲಿ ವಿದ್ಯಮಾನನಾದ ಬಿಂಬರೂಪಿ ಪರಮಾತ್ಮ, ಪ್ರೇರಕ–ಜೀವೇಂದ್ರಿಯಾದಿಗಳಿಗೆ ಪ್ರೇರಕನು. ದಾವ ನಾಮ ದಾವ ರೂಪದಿಂದಲಿ ಜೀವನ ದೇಹಗತ ಚತುರ್ವಿಂಶತಿ ತತ್ವಗಳಿಗೆ ಪ್ರೇರಕ ಎಂದರೆ, ತನ್ನಾಮರೂಪದಲಿ– ಸ್ಥೂಲಶರೀರಗತ ಚತುರ್ವಿಂಶತಿ ತತ್ವಗಳಿಗೆ ನಿಯಾಮಕರಾದ, ಬ್ರಹ್ಮಾದಿ ದೇವತೆಗಳಾದ ಅವರವರ ನಾಮ ಅವರವರ ರೂಪದೋಪಾದಿಯಲ್ಲಿ ರೂಪದಿಂದ ಯುಕ್ತನಾಗಿ ಆಯಾ ಜೀವರ ಚತುರ್ವಿಂಶತಿ ತತ್ವಗಳಲ್ಲಿದ್ದು ಪ್ರೇರಕನು. ಪ್ರೇರ್ಯರೊಳು ಪ್ರೇರ್ಯ–ಸ್ಥೂಲ ದೇಹಗತ ತತ್ವಗಳಿಗೆ ಪ್ರೇರ್ಯರಾದ ತತ್ವದೇವತೆಗಳ ಅನುರೂಪದಲ್ಲೀನೂ ಇದೇ ಪ್ರಕಾರ ಪ್ರೇರಕನಾಗಿ ಇದ್ದು, ಸ್ಥೂಲದೇಹಗತ ತತ್ವಕಾರ್ಯ ಈ ಪ್ರಕಾರ ಮಾಡಿಸಿ, ಅವರಿಗೆ ಪ್ರೇರಣೆ ಮಾಡಿ, ಆಯಾ ತತ್ವಗಳಲ್ಲಿ ಪೃಥಕ್ ರೂಪಗಳಿಂದ ಇದ್ದು ಬಿಂಬಕ್ರಿಯಾ ದ್ವಾರಾ ದೇವತೆಗಳಿಂದ ತತ್ವಕಾರ್ಯಗಳ ನಡೆಸುತಾನೆ. ಜೀವನಲ್ಲಿ ವಾಯುದೇವರ ಪ್ರವೇಶ ಇಲ್ಲ ಎಂಬ ವಿಷಯ ೯ನೇ ಸಂಧಿ ೭ನೇ ಶ್ಲೋಕದಾರಭ್ಯ ೧೨ನೇ ಶ್ಲೋಕ ಪರಿಯಂತ, ೭ನೇ ಸಂಧಿ ೨೪–೨೫ನೇ ಶ್ಲೋಕಗಳಲ್ಲಿ ವಿದಿತವಾಗಿ ಅದೆ. ಆದ್ದರಿಂದ ಜೀವನಲ್ಲಿ ಪ್ರೇರಕ, ಈಶ್ವರನ ವ್ಯತಿರಿಕ್ತ ಅನ್ಯರು ದಾರೂ ಇಲ್ಲ. ರಮಾ ನಿತ್ಯಾವಿಯೋಗಿನೀ. ಆದ್ದರಿಂದ ರಮಾ ಸಹಿತನಾದ ಪರಮಾತ್ಮ ಎಂಬುದು ಅರ್ಥಾತ್ ಸಿದ್ಧವು. ಪ್ರೇರಕನು ತಾನಾಗಿ–ಈ ಪ್ರಕಾರ ದೇವಮಾನುಷರ ಸ್ವರೂಪದಲ್ಲಿ ಅನ್ಯಾಪೇಕ್ಷಾ ಇಲ್ಲದೆ ತನಗೆ ತಾನೇ ಆಗಿ ತತ್ವೇಶರ ರೂಪಗಳಿಂದ ಪ್ರೇರಕನು ತನಗೆ ತಾನೇ ಆಗಿ, ಸರ್ವರೊಳು–ಈ ಪ್ರಕಾರ ತೃಣಾಂತ ತ್ರಿವಿಧ ಜೀವರೊಳು ಇದ್ದು, ತೋರಿಕೊಳ್ಳದೆ–ಸಾಧನಿ ಪೂರ್ತಿ ಆಗಿ ಲಿಂಗಭಂಗವಾಗೋ ವರಿಗೂ ಜೀವಾಂತರ್ಗತನಾದ ತಾನು ಮುಕ್ತಿಯೋಗ್ಯರಿಗೆ ತೋರಿಕೊಳ್ಳದೆ, ತಮೋ ಯೋಗ್ಯರಿಗೆ ದಾವಾಗಲೂ ತೋರಿಕೊಳ್ಳದೆ, ನಿರ್ವೈರದಿಂದ–ತಮೋಯೋಗ್ಯರಿಗೆ ಲಿಂಗ ಭಂಗಾನಂತರ ದುಃಖ, ನಿತ್ಯಸಂಸಾರಿಗಳಿಗೆ ಲಿಂಗಭಂಗಾನಂತರ ಮಿಶ್ರ, ಮುಕ್ತಿಯೋಗ್ಯ ರಿಗೆ ಲಿಂಗಭಂಗಾನಂತರ ಸುಖ, ವೈರ, ಸ್ನೇಹಗಳಿಲ್ಲದೆ ಕೊಡತಾನೆ ಅಂದರೆ, ವೈರವರ್ಜಿತ ನಾಗಿ ಅವರವರ ಅನಾದಿಸ್ವರೂಪ ಸ್ವಭಾವದಂತೆ, ಪ್ರವರ್ತಿಸುವ–ಪ್ರೇರ್ಯಪ್ರೇರಣಾದಿ ಗಳಿಂದ ಪ್ರವರ್ತಿಸೋವನಾಗತಾನೆ. ಪ್ರವರ್ತಿಸಿ, ಸಾಧನಿ ಪೂರ್ತಿ ಮಾಡಿಸಿ, ತ್ರಿವಿಧಗತಿ ಕೊಡತಾನೆ. ದಾರು ಎಂದರೆ, ಭಾಗೀರಥೀ ಜನಕನು–ಗಂಗಾಜನಕನಾದ ತ್ರಿವಿಕ್ರಮ

ದೇವರು (ಇವನೇ ಪೂರ್ವೋಕ್ತ ದೇಹಾಕಾರನಾದ ವಾಮನನು), ಸಕಲ ವ್ಯಾಪಾರಗಳ– ಸ್ಥೂಲದೇಹದಲ್ಲಿ ದೇಹಾಕಾರನಾಗಿದ್ದು, ಸಾಧನೀರೂಪವಾದ ವ್ಯಾಪಾರವೇ ಮೊದಲಾದ ಯಾವತ್ತೂ ಕರ್ಮಗಳ ಸ್ಥೂಲದೇಹದಿಂದ, ತಾ ಮಾಡಿ ಮಾಡಿಸಿ–ಬಿಂಬಕ್ರಿಯಾ ದ್ವಾರಾ ತಾನು ಮಾಡಿ, ತತ್ವೇಶರು ಜೀವ ಇವರ ದ್ವಾರಾ ದೇಹದಿಂದ ಮಾಡಿಸಿ, ಗತಿಗಳ ಕೊಡ ತಾನೆ, ನೋಡಿ ನಗುತಿಪ್ಪ*–ಈ ಅನುಸಂಧಾನ, ಗುರುಮುಖದಿಂದ ತಿಳಿದು ಅನುಷ್ಠಾನ ಮಾಡತಕ್ಕ ಅಧಿಕಾರಿ, ದೇಹದಲ್ಲಿ ಆಗತಕ್ಕ ವ್ಯಾಪಾರಗಳ ಅನುಸಂಧಾನದಿಂದ ನೋಡಿ, ಅಹಂಮಮತಾದಿಗಳ ತ್ಯಜಿಸಿ, ನಗುತ್ತಾ ಸಂತೋಷದಲ್ಲಿ ಇರೋವನಾಗತಾನೆ. ವಿಷಯ ಸಂಬಂಧ ಕ್ಲೇಶಕ್ಕೆ ಒಳಗಾಗೋದಿಲ್ಲ ಎಂತ ತಾತ್ಪರ್ಯ.

**ಹರಿಯೆ ಮುಖ್ಯನಿಯಾಮಕನು ಎಂ ।**
**ದರಿದು ಪುಣ್ಯಾಪುಣ್ಯ ಹರುಷಾ ।**
**ಮರುಷ ಲಾಭಾಲಾಭ ಸುಖದುಃಖಾದಿ ದ್ವಂದ್ವಗಳ ॥**
**ನಿರುತ ಅವನಂಘ್ರಿಗೆ ಸಮರ್ಪಿಸಿ ।**
**ನರಕಭೂಸ್ವರ್ಗಾಪವರ್ಗದಿ ।**
**ಕರಣನಿಯಾಮಕನ ಸರ್ವತ್ರದಲಿ ನೆನವುತಿರು ॥ ೧೪ ॥**

ದ್ವಂದ್ವಕರ್ಮ ಅರ್ಪಿಸು. ಸರ್ವಪ್ರಾಣಿಗಳಲ್ಲಿ ಇಂದ್ರಿಯನಿಯಾಮಕ, ಪರಮಾತ್ಮ ನೆಂದು ತಿಳಿ ಎಂತ ಹೇಳತಾರೆ.

ಹರಿಯೆ–ಜೀವಾಂತರ್ಗತ ಬಿಂಬರೂಪಿಯಾದ ಹರಿಯೇ ಮುಖ್ಯ ನಿಯಾಮಕನು. (ಮುಖ್ಯ ಶಬ್ದದಿಂದ ಬ್ರಹ್ಮವಾಯ್ವಾದಿ ತತ್ವೇಶರ ವ್ಯಾವರ್ತನ), ಎಂದರಿತು–ಎಂತ ಅರಿತವನಾಗಿ, ಪುಣ್ಯಾಪುಣ್ಯ–ಸ್ಥೂಲದೇಹೇಂದ್ರಿಯಾದಿಗಳಿಂದ ಮಾಡತಕ್ಕ ಪುಣ್ಯಕರ್ಮ ವೇನು, ಪಾಪಕರ್ಮಗಳೇನು, ಹರುಷ–ಪುಣ್ಯಕರ್ಮದಿಂದ ಪ್ರಾಪ್ತವಾಗತಕ್ಕ ಈಶ್ವರ ನಿಂದ ದತ್ತವಾದ ಸಂತೋಷಫಲವೇನು, ಅಮರುಷ–ಹಾಗೇ ಪಾಪಕರ್ಮದಿಂದ ಈಶ್ವರ ನಿಂದ ದತ್ತವಾದ ದುಃಖಫಲವೇನು, ಲಾಭಾಲಾಭ–ಆದಾಯವೇನು, ನಷ್ಟವೇನು, ಸುಖದುಃಖ–ದೇಹಕ್ಕೆ ಆಗತಕ್ಕ ಸುಖವೇನು, ದುಃಖವೇನು, ಆದಿ–ಇದೇ ಮೊದಲಾದ, ದ್ವಂದ್ವಗಳ–ಏತಾದೃಶವಾದ ಉಭಯಗಳ, ನಿರುತ–ನಿರಂತರದಲ್ಲೂ, ಅವನಂಘ್ರಿಗೆ– ಬಿಂಬರೂಪಿ ಪರಮಾತ್ಮನ ಮರಿಯದೆ, ಬಿಂಬಕ್ರಿಯಾ, ಪ್ರತಿಬಿಂಬಕ್ರಿಯಾ ಅನುಸಂಧಾನ ದಿಂದ ಆ ಬಿಂಬರೂಪಿ ಪರಮಾತ್ಮನ ಪಾದಗಳಿಗೆ, ಅರ್ಪಿಸು–ಪರಸ್ಪರ ಭಗವದ್ರೂಪಗಳ ಐಕ್ಯಚಿಂತನರೂಪದಿಂದ ಅರ್ಪಿಸು. ನರಕ–ನರಕಲೋಕಗಳಲ್ಲಿ (ಉಪಲಕ್ಷಣಯಾ ಅತ ಳಾದಿ ಅಧೋಲೋಕಗಳು ಏಳು ಗ್ರಾಹ್ಯ), ಭೂ–ಮಧ್ಯಲೋಕವಾದ ಭೂಲೋಕ, ಸ್ವರ್ಗ–ಸ್ವರ್ಗಲೋಕ (ಉಪಲಕ್ಷಣಯಾ ಊರ್ಧ್ವ, ಸತ್ಯಾಂತ ಏಳು ಲೋಕಗಳು ಗ್ರಾಹ್ಯ), ಅಪವರ್ಗದಿ–ವೈಕುಂಠಾದಿಲೋಕ ಇತ್ಯಾದಿ ಪ್ರತಿಲೋಕಗಳಲ್ಲಿ, ಸರ್ವತ್ರದಿ – ಈ

* ಇತರ ವ್ಯಾಖ್ಯಾನಕಾರರು ಇದನ್ನು ಭಗವಂತನ ಪರವಾಗಿ ವ್ಯಾಖ್ಯಾನ ಮಾಡಿದ್ದಾರೆ.

ಯಾವತ್ತೂ ಸ್ಥಳಗಳಲ್ಲಿ ವಿದ್ಯಮಾನರಾದ ಪ್ರಾಣಿಗಳ, ಕರಣನಿಯಾಮಕನ–ಕರಣ ನಿಯಾಮಕನಾದ ಪರಮಾತ್ಮನ, ನೆನವುತಿರು–ಸ್ಮರಣೆ ಮಾಡುತ್ತಿರು. ಇದರಿಂದ ಸರ್ವರ ಇಂದ್ರಿಯಗಳು ಬಿಂಬಕ್ರಿಯಾದ್ವಾರಾನೇ ಚಲನಶಕ್ತಿಯೇ ಹೊರತು, ಅನ್ಯಥಾ ಚಲನಶಕ್ತಿ ಇಲ್ಲವೆಂದು ಸರ್ವದಾ ಅನುಸಂಧಾನ ಮಾಡಬೇಕು.

**ವಿಶೇಷಾರ್ಥ :–** ಅರ್ಪಿಸೋ ಕ್ರಮ ಹ್ಯಾಂಗೆಂದರೆ ಹೇಳತಾರೆ. ಸರ್ವದಾ ಬಾಯಿಂದ 'ಕೃಷ್ಣಾರ್ಪಣ' ಎಂತ ಅನ್ನಬಹುದು. ಅರ್ಪಣೆ ಎಂಬುದು ಅಂಥಾದ್ದಲ್ಲ. ಒಂದು ಪದಾರ್ಥ ನಮ್ಮದಾಗಿ ಇರೋವರಿಗೂ ಅದಕ್ಕೆ ಛೇದಭೇದಾದಿಗಳು ಕಂಡರೆ ದುಃಖ ವಾಗತದೆ. ಅದರನ್ನ ಅನ್ಯರಿಗೆ ಕೊಟ್ಟ ಅನಂತರ ಅದಕ್ಕೆ ಛೇದಭೇದಾದಿಗಳು ಕಂಡರೆ ಅದರ ದುಃಖ ಇವರಿಗೆ ಸೇರೋದಿಲ್ಲ. ಸುಖದುಃಖಾದಿಗಳ, ಪಾಪಪುಣ್ಯಗಳ ಅರ್ಪಿಸಿದ ಅನಂತರ ಅದರ ಸುಖದುಃಖಾದಿ ಫಲಗಳ ಮನಸ್ಸಿಗೆ ಹಚ್ಚಿಕೊಂಡು ಕ್ಲೇಶಸಂತೋಷಾದಿ ಗಳಿಂದ ಯುಕ್ತನಾಗಬಾರದು. ಇಂಥಾ ಭಾವ ಇರಬೇಕು. ಅಂದರೆ, ಇಂಥಾವನೇ ದ್ವಂದ್ವಕರ್ಮಗಳ ಅರ್ಪಿಸೋದಕ್ಕೆ ಅಧಿಕಾರಿ. ಅವಗೆ ದೋಷಾದೋಷಗಳು ಲೇಪ ವಾಗೋದಿಲ್ಲ. ತದನ್ಯರಿಗೆ 'ಅರ್ಪಿತ' ಎಂತ ಬಾಯಿಂದ ಅಂದಮಾತ್ರಕ್ಕೆ ದೋಷಗಳು ಬಿಡಲಾರವು. ಈ ಪ್ರಕಾರ ಅರ್ಪಿಸಬೇಕು.

**ಮಾಣವಕ ತತ್ಫಲಗಳನುಸಂ ।**
**ಧಾನವಿಲ್ಲದೆ ಕರ್ಮಗಳ ಸ್ವೇ ।**
**ಚ್ಛಾನುಸಾರದಿ ಮಾಡಿ ಮೋದಿಸುವಂತೆ ಪ್ರತಿದಿನದಿ ॥**
**ಜ್ಞಾನಪೂರ್ವಕ ವಿಧಿನಿಷೇಧಗ ।**
**ಳೇನು ನೋಡದೆ ಮಾಡು ಕರ್ಮಪ್ರ ।**
**ಧಾನ ಪುರುಷೇಶನಲಿ ಭಕುತಿಯ ಬೇಡು ಕೊಂಡಾಡು ॥ ೧೫ ॥**

ದಾವ ಕರ್ಮ ಮಾಡಿದರೂ ಪರಮಾತ್ಮನಲ್ಲಿ ಭಕ್ತಿಯ ಬೇಡು. ತದನ್ಯಗಳ ಬೇಡ ಬ್ಯಾಡ ಎಂತ ಹೇಳತಾರೆ.

ಮಾಣವಕ–ಬ್ರಹ್ಮಚಾರಿ (ಬ್ರಹ್ಮಜ್ಞಾನಿ ಎಂತ ತಾತ್ಪರ್ಯ), ಬ್ರಹ್ಮನಿಷ್ಠಿತ ಜ್ಞಾನ ಯುಕ್ತನಾಗಿ, ಕರ್ಮಗಳ–ದೇಹೇಂದ್ರಿಯಾದಿಗಳಿಂದ ಕರ್ಮಗಳ, ಸ್ವೇಚ್ಛಾನುಸಾರದಿ ಮಾಡಿ– ಸ್ವ–ಬಿಂಬನಾದ ದೇಹಾಂತರ್ಗತ ಪರಮಾತ್ಮನ, ಇಚ್ಛಾನುಸಾರದಿ–ಇಚ್ಛಾನು ಸಾರವಾಗಿ ಬಿಂಬಕ್ರಿಯಾದ್ವಾರಾ ಪಾಪವೇನು, ಪುಣ್ಯವೇನು ಮಾಡತೇನು, ತದ್ವ್ಯತಿರಿಕ್ತ ದಾವ ಕರ್ಮ ಮಾಡೋದಕ್ಕೂ ನಾನೇನು, ಬ್ರಹ್ಮಾದಿ ದೇವತೆಗಳೂನು ಸಮರ್ಥರಲ್ಲ ಎಂತ ತಿಳಿದು, ಕರ್ಮಗಳ ಮಾಡಿ, ತತ್ಫಲಗಳ–ಆಯಾ ಕರ್ಮಜನಿತ ಫಲಗಳ, ಅನು ಸಂಧಾನವಿಲ್ಲದೆ–ಅಪೇಕ್ಷಾ ಇಲ್ಲದೆ, ಮೋದಿಸುವಂತೆ–ಈ ಪ್ರಕಾರ ಜ್ಞಾನಿಗಳು ಕರ್ಮಗಳ ಮಾಡಿ ಮೋದಿಸುವಂತೆ, ಪ್ರತಿದಿನದಿ–ಪ್ರತಿದಿನದಲ್ಲೂ, ವಿಧಿನಿಷೇಧಗಳೇನು ನೋಡದಲೆ– ವಿಧಿಕರ್ಮ ಎಂತಲೂ, ನಿಷೇಧಕರ್ಮ ಎಂತಲೂ ನೋಡದೇನೆ, ಮಾಡುವ ಕರ್ಮ–

ಮಾಡತಕ್ಕ ಕರ್ಮ ಪೂರ್ವೋಕ್ತ ಪ್ರಕಾರ ಹರಿಗೆ ಅರ್ಪಿಸು ಎಂದರೆ, ಜ್ಞಾನಪೂರ್ವಕ-ಛಂದಾಗಿ ಜ್ಞಾನದಿಂದ ತಿಳಿದು ಅರ್ಪಿಸು ಎಂತ ತಾತ್ಪರ್ಯ. ಇವನ ಯತ್ನ ಇಲ್ಲದೇನೆ ದೇಹಾಂತರ್ಗತನಾದ ಬಿಂಬರೂಪಿ ಪರಮಾತ್ಮ ಅನಾದಿ ಕರ್ಮಾನುಗುಣವಾಗಿ ತ್ರಿಗುಣಗಳ ಅನುಸರಿಸಿ ದ್ವಂದ್ವಕರ್ಮಗಳ ಮಾಡಿಸತಾನೆ. ಆದ್ದರಿಂದ ಆ ಎರಡು ಕರ್ಮಗಳ, ಜ್ಞಾನಪೂರ್ವಕ ಅನುಸಂಧಾನದಿಂದ ಅರ್ಪಿಸಿ, ಪ್ರಧಾನ-ಸರ್ವೋತ್ತಮನಾದ, ಪುರುಷೇಶನಲಿ-ಕ್ಷರಾಕ್ಷರ ಪುರುಷರಿಗೆ ಈಶನಾದ ಪರಮಾತ್ಮನಲ್ಲಿ ಮನವಿಟ್ಟು, ಭಕುತಿಯ ಬೇಡು-ಭಕ್ತಿಯನ್ನು ಮಾತ್ರ ಬೇಡು, ತದನ್ಯಗಳ ದಾವದೂ ಬೇಡಬ್ಯಾಡ. ಕೊಂಡಾಡು-ಸರ್ವಾಧಿಷ್ಠಾನಗತ ಪರಮಾತ್ಮನನ್ನೇ ಕೊಂಡಾಡು.

**ವಿಶೇಷಾರ್ಥ :-** ಸರ್ವ ಜೀವರಿಗೆ ಅಸೃಜ್ಯರಾಶೀ ಒಳಗೆ ಇರೋ ಕಾಲದಲ್ಲಿ ಪ್ರತಿದಿನದ ನಿದ್ರಾಕಾಲದಲ್ಲಿ, ಪರಮಾತ್ಮನ ಉದರಪ್ರವೇಶ ಕಾಲದಲ್ಲಿ ನಿದ್ರಾ ಇರತದೆ, ಎಚ್ಚರಿಕೆ ಇರೋದಿಲ್ಲ. ತದ್ವ್ಯತಿರಿಕ್ತ ಕಾಲದಲ್ಲಿ ಜಾಗ್ರದವಸ್ಥಾ ಇರತದೆ. ಈ ಜಾಗ್ರತ್ಕಾಲದಲ್ಲಿ ದೇಹಗತ ಬಿಂಬ ಕ್ಷಣಲವಕಾಲವಾದರೂ ಸುಮ್ಮನಿರದೇ ಏಕಾದಶೇಂದ್ರಿಯಗಳಿಂದ ಅನಾದಿಕರ್ಮವನನುಸರಿಸಿ ಕರ್ಮಗಳ ನಡೆಸತಾಇರತಾನೆ. ವಿಧಿ ಇದು ಎಂತಲೂ, ನಿಷೇಧ ಇದು ಎಂತಲೂ, ದೋಷಾದೋಷಗಳು ಇವು ಎಂತಲೂ ಜೀವರಿಗೆ ತಿಳಿಸತಾ ಇರತಾನೆ. ಅನಾದಿಕರ್ಮ ಅನುಸರಿಸಿ ಕೆಲವು ಪುಣ್ಯಕಾರ್ಯಗಳು ಕೆಲವು ಪಾಪಕಾರ್ಯಗಳ ಮಾಡಸತಾ ಇರತಾನೆ, ವಿರಾಮ ಇರೋದಿಲ್ಲ. ಸ್ಥಿತಿಕಾಲವಾದ್ದರಿಂದ ಮಿಶ್ರ ಕರ್ಮಗಳು ಆಗತಾಲೇ ಇರತವೆ. ಪುಣ್ಯ ಮಾಡತೇನೆ ಪಾಪ ಮಾಡೋದಿಲ್ಲ, ಪಾಪ ಮಾಡತೇನೆ ಪುಣ್ಯ ಮಾಡೋದಿಲ್ಲ, ಎಂಬ ಸಮರ್ಥರು ಇಲ್ಲ. ಈ ದ್ವಂದ್ವಕರ್ಮವು ಭಗವದರ್ಪಿತ ಹೊರತು ಗತಿ ಆಗೋದಿಲ್ಲ. ಜೀವರು ಮಾಡತಕ್ಕ ಸರ್ವಸಾಧನೆಯೂ ಕಾಲಾನುಸಾರ ಜೀವರಿಗೆ ತಿಳಿಸಿ ಜೀವನ ಯತ್ನದ್ವಾರಾ ನಡಿಸಿ ಜೀವ ಹ್ಯಾಂಗ್ಹ್ಯಾಂಗೆ ನುಡಿಯಬೇಕೋ ಆ ಪ್ರಕಾರ ಜೀವಗೆ ತಿಳಿಸಿ ಅವನಿಂದ ನುಡಿಸಿ ಉದ್ಧಾರ ಮಾಡತಾನೆ. ಮತ್ತು ಗುರುಗಳ ದ್ವಾರಾ, ಪಾಪ ಮಾಡಬ್ಯಾಡ, ಪುಣ್ಯ ಮಾಡು ಎಂತ ಉಪದೇಶ ಮಾಡತಾನೆ. ಮಾಡಿ, ಜೀವಗೆ ತಿಳಿಸತಾನೆ. ಆ ಕಾರಣದಿಂದ ಜೀವರಿಗೆ ಅಂತರ್ಗತನಾಗಿ ಸರಿ, ಸರಿ ಎಂತಲೂ ಬುದ್ಧಿಗೆ ಬೋಧವಾಗುವಂತೆ ಮಾಡತಾನೆ. ಅಸ್ವತಂತ್ರನಾದ ಜೀವನ ವಿವಕ್ಷಾ ಮಾಡಿ, ಇದು ಮಾಡು, ಇದು ಬಿಡು ಎಂತ ಶಾಸ್ತ್ರಾದಿಗಳಲ್ಲಿ ಉಕ್ತವಾದ ವಾಕ್ಯಗಳಿಗೆ ಇದು ತಾತ್ಪರ್ಯ.

**ಹಾನಿವೃದ್ಧಿ ಜಯಾಪಜಯಗಳು ।**
**ಏನು ಕೊಟ್ಟುದ ಭುಂಜಿಸುತ ಲ ।**
**ಕ್ಷ್ಮೀನಿವಾಸನ ಕರುಣವನೆ ಸಂಪಾದಿಸನುದಿನದಿ ॥**
**ಜ್ಞಾನಸುಖಮಯ ತನ್ನವರ ಪರ ।**
**ಮಾನುರಾಗದಿ ಸಂತೈಪ ದೇ ।**
**ಹಾನುಬಂಧಿಗಳಂತೆ ಒಳಹೊರಗಿದ್ದು ಕರುಣಾಳು ॥ ೧೬ ॥**

ಪರಮಾತ್ಮನ ಕರುಣಾ ಸಂಪಾದಿಸಬೇಕೆಂತ ಹೇಳತಾರೆ.

ಹಾನಿ–ಪ್ರಾಕೃತ ವನಿತಾದಿ ದ್ರವ್ಯ ಧಾನ್ಯಾದಿ ಇವ್ರುಗಳಿಂದ ಭೋಗಿಸತಕ್ಕ ಭೋಗಗಳು ಹಾನಿಮಾಡಿದ ಕಾಲಕ್ಕೂ, ವೃದ್ಧಿ–ಪೂರ್ವೋಕ್ತಗಳು ಅತಿಶಯವಾಗಿ ವೃದ್ಧಿ ಮಾಡಿದ ಕಾಲಕ್ಕೂ, ಜಯ–ಮನೋನುಸಾರವಾಗಿ ಹಿಡಿದ ಕಾರ್ಯ ಜಯ ಮಾಡಿದ ಕಾಲಕ್ಕೂ, ಅಪಜಯಗಳು–ಹಿಡಿದ ಕಾರ್ಯ ಅಪಜಯ ಮಾಡಿದ ಕಾಲಕ್ಕೂ, ಏನು ಕೊಟ್ಟುದ–ಪೂರ್ವೋಕ್ತಗಳೊಳಗೆ ಏನು ಕೊಟ್ಟ ಕಾಲಕ್ಕೂ, ಭುಂಜಿಸುತ–ಭೋಜನ ಮಾಡತಾ, ಎಂದರೆ ಸುಖ ಭೋಗಿಸೋ ಕಾಲ ದೇವರು ಪ್ರಾಪ್ತಮಾಡಿದ ಕಾಲದಲ್ಲಿ ಅದನ್ನ ಬ್ಯಾಡಾ ಅಂದರೆ ಬಿಡೋದಿಲ್ಲ, ಉಣಿಸಿಬಿಡತಾನೆ. ತದ್ವತ್ ದುಃಖವೂ. ಆದ್ದರಿಂದ ಸುಖದುಃಖಾದಿಗಳು ಪ್ರಾಪ್ತವಾದದ್ದು, ಬ್ಯಾಡ, ಬೇಕು ಎಂಬ ಇಚ್ಛಾಯುಕ್ತನಾಗದೇ ಈಶಸಂಕಲ್ಪವೆಂದು ಭೋಜನ ಮಾಡತಾ, ಅನುದಿನದಿ–ಪ್ರತಿದಿನದಲ್ಲೂ, ಲಕ್ಷ್ಮೀ ನಿವಾಸನ–ಲಕ್ಷ್ಮೀದೇವೇರನ್ನ ಹೃದಯದಲ್ಲಿ ನಿವಾಸರಾಗಿ ಮಾಡಿ ಇರುವ ಪರಮಾತ್ಮನ, ಕರುಣವನೆ ಸಂಪಾದಿಸು–ಪೂರ್ವೋಕ್ತ ಪ್ರಕಾರ ಅನುಸಂಧಾನ ಇದ್ದವಗೆ ಪರಮಾತ್ಮನ ಅಂತಃಕರಣವಿರುತ್ತದೆ. ಆದ್ದರಿಂದ ಅಂಥಾ ಸಮುಚಿತ್ತನಾಗಿ ಪರಮಾತ್ಮನ ಕರುಣ ಸಂಪಾದಿಸು. ತನ್ನವರ–ಇಂಥಾ ತನ್ನವರ, ಜ್ಞಾನ–ವಿಶೇಷಜ್ಞಾನದಿಂದ ಪ್ರಚುರವಾದವರ, ಸುಖಮಯ–ಸುಖಸ್ವರೂಪನಾದ, ಕರುಣಾಳು–ದಯಾಳು ಆದ ಪರಮಾತ್ಮ, ಪರಮಾನುರಾಗದಿ–ಅತ್ಯಂತವಾಗಿ ಅನುರಾಗದಿಂದ, ದೇಹಾನುಬಂಧಿಗಳಂತೆ–ದೇಹಕ್ಕೆ ಅನುಬಂಧ ಸಾಂಕೇತವಾದ ಕರ, ನೇತ್ರ, ಶ್ರವಣ, ಪಾದ ಇವ್ರುಗಳು ದೇಹಕ್ಕೆ ಅಪಾಯಗಳು ಬಾರದಂತೆ ರಕ್ಷಿಸುತ್ತಾ ಇರುತ್ತವೆ. ಇವ್ರುಗಳಂತೆ, ಒಳಹೊರಗಿದ್ದು–ದೇಹದ ಒಳಗೆ ಹೊರಗೆ ಇದ್ದು ಮತ್ತು ಜೀವನ ಒಳಗೆ ಮತ್ತು ಹೊರಗೆ ಇರುವ ಸ್ಥೂಲದೇಹದ ಒಳಗೆ ಇದ್ದು, ಸಂತೈಪ–ದೋಷದೂರನ್ನಾಗಿ ಮಾಡಿ ಜ್ಞಾನ, ಭಕ್ತಿ, ವೈರಾಗ್ಯಗಳ ಅತಿಶಯವಾಗಿ ಕೊಟ್ಟು ಸಂರಕ್ಷಣೆ ಮಾಡತಾನೆ.

**ಆ ಪರಮ ಸಕಲೇಂದ್ರಿಯಗಳೊಳು ।**
**ವ್ಯಾಪಕನು ತಾನಾಗಿ ವಿಷಯವ ।**
**ತಾ ಪರಿಗ್ರಹಿಸುವನು ತಿಳಿಸದೆ ಸರ್ವಜೀವರೊಳು ॥**
**ಪಾಪರಹಿತ ಪುರಾಣಪುರುಷ ಸ ।**
**ರೂಪದಲಿ ನೆಲೆಸಿದ್ದು ನಾನಾ ।**
**ರೂಪಧಾರಕ ತೋರಿಕೊಳ್ಳದೆ ಕರ್ಮಗಳ ಮಾಳ್ಪ ॥ ೧೭ ॥**

ವಿಷಯಗಳ ಸ್ವೀಕರಿಸತಕ್ಕವ, ಕರ್ಮಗಳ ಮಾಡತಕ್ಕವ ಪರಮಾತ್ಮನೆಂದು ಹೇಳತಾರೆ.

ಆ ಪರಮ–ಪೂರ್ವೋಕ್ತ ೯ನೇ ಶ್ಲೋಕಗತ ಶಿಪಿವಿಷ್ಟಸಾಂಕೇತನಾದ, ಗರುಡ ವಾಹನನಾದ ಸರ್ವೋತ್ತಮನಾದ ಕೃಷ್ಣ, ಸಕಲೇಂದ್ರಿಯಗಳೊಳು–ಸಮಸ್ತರಾದ ಪ್ರಾಣಿ

ಗಳ ಇಂದ್ರಿಯಗಳಲ್ಲಿ ಎಂದರೆ ಸ್ಥೂಲದೇಹದಲ್ಲಿ ವ್ಯಾಪ್ತವಾದ ಸ್ವರೂಪೇಂದ್ರಿಯಗಳಲ್ಲಿ, ವ್ಯಾಪಕನು–ವ್ಯಾಪಕನಾದ ಪರಮಾತ್ಮನು, ತಾನಾಗಿ–ತನಗೆ ತಾನಾಗೇ, ತಿಳಿಸದೆ–ದೇಹಗತನಾದ ಜೀವಗೆ ತಿಳಿಸದೇ, ವಿಷಯವ–ಜೀವಭುಕ್ತ ವಿಷಯಗತ ತನ್ನ ಸ್ವಾಖ್ಯ ವಿಷಯವ, ತಾ ಪರಿಗ್ರಹಿಸುವನು–ತನ್ನ ಸ್ವಾಖ್ಯ ಇಂದ್ರಿಯಗಳಿಂದ ತಾನೇ ಪರಿಗ್ರಹಿಸೋವ ನಾಗತಾನೆ. ಸರ್ವ ಜೀವರೊಳು–ಸಮಸ್ತರಾದ ಅಣುಸ್ವರೂಪರಾದ ಜೀವರಲ್ಲಿ, ಪಾಪ ರಹಿತ–ಜೀವಸಂಬಂಧವಾದ, ಅಸ್ವಾತಂತ್ರ್ಯಾದಿ ದೋಷದೂರನಾದ, ಪುರಾಣಪುರುಷ–ಪುರುಷಶಬ್ದ ಜೀವರಿಗೆ ಇರೋದಾಗಿ ಅದೆ. ಪುರುಷಸಾಂಕೇತನಾದ ಜೀವನಲ್ಲಿ ಅನಾದಿ ಯಿಂದ ಜೀವಾಕಾರನಾಗಿ ತಾನೂನೂ ಪುರುಷ ಎಂತ ಕರಿಸಿ ಜೀವಗೆ ಬಿಂಬನಾಗಿ ಸಮೀಪ ದಲ್ಲಿ, ನೆಲೆಸಿದ್ದು–ಸಮೀಪಶಬ್ದದಿಂದ ಅನಾದ್ಯನಂತ ಕಾಲಕ್ಕೂ ಜೀವನ ಸಮೀಪದಲ್ಲಿಯೇ ಅವಿಯೋಗನಾಗಿ ಆವಾಸನಾಗಿದ್ದು, ನಾನಾರೂಪಧಾರಕ–ಜೀವನ ಸ್ವರೂಪೇಂದ್ರಿಯಗಳಲ್ಲಿ ನಾನಾವಿಧ ತತ್ವದೇವತಾರೂಪಗಳ ಧಾರಕನಾಗಿ, ತೋರಿಕೊಳ್ಳದೆ–ಜೀವಾಂತರ್ಗತನಾಗಿ ಜೀವಗೆ ತೋರಿಕೊಳ್ಳದೆ, ಕರ್ಮಗಳ–ಸ್ಥೂಲದೇಹದಿಂದ ಜೀವನ ದ್ವಾರಾ ದಾವ ಕರ್ಮ ಗಳ ಮಾಡಸಬೇಕೋ ಅಂಥಾ ಕರ್ಮಗಳ ಮಾಡಿಸೋ ಉದ್ದಿಶ್ಯ, ಮಾಳ್ಪ–ಅಣುಸ್ವರೂಪ ನಾದ ಜೀವೇಂದ್ರಿಯಗಳಿಗೆ ಪ್ರಥಮತಃ ಪ್ರೇರಣ ಮಾಡತಾನೆ. ಆ ಪ್ರೇರಣೆ ಲಿಂಗ, ಅವ್ಯಕ್ತ, ಅನಿರುದ್ಧ, ಸ್ಥೂಲಶರೀರಗಳಲ್ಲಿ ಕ್ರಮಾತ್ ಪ್ರವೇಶವಾಗಿ ಸ್ಥೂಲದೇಹದಲ್ಲಿ ಕ್ರಿಯಾರೂಪವಾದ ಕರ್ಮಗಳ ಮಾಡಿ ಮಾಡಿಸತಾನೆಂತ ತಾತ್ಪರ್ಯ.

**ಖೇಚರರು ಭೂಚರರು ವಾರಿನಿ ।**
**ಶಾಚರರೊಳಿದ್ದವರ ಕರ್ಮಗ ।**
**ಳಾಚರಿಸುವನು ಘನಮಹಿಮ ಪರಮಾಲ್ಪನೋಪಾದಿ ॥**
**ಗೋಚರಿಸನು ಬಹುಪ್ರಕಾರಾ ।**
**ಲೋಚನೆಯ ಮಾಡಿದರು ಮನಸಿಗೆ ।**
**ಕೀಚಕಾರಿಪ್ರಿಯ ಕವಿಜನಗೇಯ ಮಹರಾಯ ॥ ೧೮ ॥**

ಚತುರ್ವಿಧ ದೇಹಧಾರಿಗಳಾದ ಯಾವತ್ತೂ ಜೀವಕರ್ಮಗಳ ತಾನು ಆಚರಿಸಿ, ಅವರ ದ್ವಾರಾ ಆಚರಿಸುವಂತೆ ಮಾಡತಾನೆಂತ ಹೇಳತಾರೆ.

ಖೇಚರರು–ಆಕಾಶದಲ್ಲಿ ಸಂಚರಿಸುವ ಜೀವರು, ಭೂಚರರು–ಭೂಮಿಯಲ್ಲಿ ಸಂಚ ರಿಸತಕ್ಕ ಜೀವರು, ವಾರಿ–ಉದಕದಲ್ಲಿ ಸಂಚರಿಸತಕ್ಕ ಜೀವರು, ನಿಶಾಚರರು–ರಾತ್ರಿ ಕಾಲದಲ್ಲಿ ಸಂಚರಿಸತಕ್ಕ ಜೀವರು (ಅಸುರರು–ಪಿಶಾಚಾದಿ ಜೀವರು), ತ್ರಿವಿಧರೂ ಇದರಲ್ಲೇ ಅಂತರ್ಭೂತರು, ಒಳಗಿದ್ದು–ಇವರೊಳಗೆ ಇದ್ದು ಎಂದರೆ ಅವರವರ ಅಣುಸ್ವರೂಪದೊಳಿದ್ದು ಆದಿಯಲ್ಲಿ ಸ್ವರೂಪೇಂದ್ರಿಯಗಳಿಗೆ, ಸ್ಥೂಲದೇಹದಿಂದ ದಾವ ಕರ್ಮವ ಮಾಡಿಸಬೇಕೋ ಅಂಥಾ ಇಚ್ಛಾ ಹುಟ್ಟಿಸಿ ನಂತರ, ಅವರ–ಆಯಾ ಪ್ರಾಣಿಗಳ ಸ್ಥೂಲದೇಹ ದ್ವಾರಾ,

ಕರ್ಮಗಳ–ಕ್ರಿಯಾರೂಪವಾದ ಕರ್ಮಗಳ, ಆಚರಿಸುವನು–ತನ್ನ ಸ್ವಾಖ್ಯ ಕರ್ಮಗಳ ಪ್ರಥಮತಃ ಆಚರಿಸುವನು. ತದ್ದ್ವಾರಾ ಜೀವನಿಂದ ಆಚರಣೆ ಮಾಡಿಸುವನು. ಘನ ಮಹಿಮ–ಗಂಭೀರವಾದ, ಅಸದೃಶವಾದ ಮಹಿಮೋಪೇತನಾದ ಪರಮಾತ್ಮನು, ಪರ ಮಾಲ್ಪನೋಪಾದಿ–ಜೀವರು ಅತ್ಯಂತ ಅಲ್ಪರು, ಅವರ ಅಂತರ್ಗತನಾದ ಬಿಂಬರೂಪಿ ಪರಮಾತ್ಮ ಅಲ್ಪರಾದ ಜೀವರೋಪಾದಿಯಲ್ಲಿ ತನ್ನ ಘನಮಹಿಮೆ ವ್ಯಕ್ತಮಾಡದೆ ಇದ್ದು, ಗೋಚರಿಸುವನು–ಮನಸ್ಸಿಗೆ ಗೋಚರನಾಗತಾನೆ. ಎಂದರೆ ಅಧಿಷ್ಠಾನಯೋಗ್ಯತಾನು ಸಾರ ಅಲ್ಪಶಕ್ತಿಯೇ ಪ್ರದರ್ಶನ ಮಾಡತಾ ಇರತಾನೆ. ಎಂಥಾ ಪರಮಾತ್ಮನೆಂದರೆ, ಕೀಚಕಾರಿ–ಕೀಚಕಗೆ ಶತ್ರುವಾದ ವಾಯುದೇವರಿಗೆ, ತಥಾ ಭೀಮಸೇನದೇವರಿಗೆ, ಪ್ರಿಯ–ಪ್ರೀತಿವಿಷಯನಾದವ, ಮತ್ತು ಸರ್ವಜ್ಞರಿಂದ ಸರ್ವಸಜ್ಜನರಿಗೆ ಪ್ರೀತಿವಿಷಯನಾದವ, ಕವಿಜನಗೇಯ–ಜ್ಞಾನಿಗಳಿಂದ ಸ್ತುತ್ಯನಾದವ, ಮಹರಾಯ–ಸರ್ವಪ್ರಾಣಿಗಳನ್ನೂ ಆಳತಕ್ಕ ಸರ್ವೋತ್ತಮನಾದ ರಾಜನಾದವನು. ಇಂಥಾ ಪರಮಾತ್ಮ, ಬಹುಪ್ರಕಾರಾಲೋಚನೆಯ ಮಾಡಿದರೂ–ನಾನಾ ಪ್ರಕಾರ ಧ್ಯಾನಾದಿಗಳಿಂದ ರೂಪವೂ, ಆಲೋಚನಿಯಿಂದ ಗುಣ ಗಳು, ಈ ಪ್ರಕಾರ ಮಾಡಿದರೂ, ಮನಸಿಗೆ–ಮನೋ ಇಂದ್ರಿಯಕ್ಕೆ ಗೋಚರನಾಗೋ ದಿಲ್ಲ. ಮತ್ತು ಅವತಾರಗಳ ಮಾಡಿ ಅಲ್ಪರಾದ ಮನುಷ್ಯರೋಪಾದಿಯಲ್ಲಿ ಗೋಚರಿ ಸುತ್ತಾ ಇರುತ್ತಾನೆ ಎಂತ ತಾತ್ಪರ್ಯ.

**ಒಂದೆ ಗೋತ್ರ ಪ್ರವರ ಸಂಧ್ಯಾ ।**
**ವಂದನೆಗಳನು ಮಾಡಿ ಪ್ರಾಂತಕೆ ।**
**ತಂದೆ ತನಯುರು ಬೇರೆ ತಮ್ಮಯ ಪೆಸರುಗೊಂಬಂತೆ ॥**
**ಒಂದೆ ದೇಹದೊಳಿದ್ದು ನಿಂದ್ಯಾ ।**
**ನಿಂದ್ಯ ಕರ್ಮವ ಮಾಡಿ ಮಾಡಿಸಿ ।**
**ಇಂದಿರೇಶನು ಸರ್ವಜೀವರೊಳೀಶನೆನಿಸುವನು ॥ ೧೯ ॥**

ಕರ್ಮಗಳು, ಜೀವ, ಪರಮಾತ್ಮರು ಸೇರಿ ಮಾಡಿದರೂ ಜೀವಭುಕ್ತ ಬ್ಯಾರೆ, ಈಶ ಭುಕ್ತ ಬ್ಯಾರೆ ಎಂತ ಹೇಳತಾರೆ.

ತಂದೆತನಯುರು–ತಂದೆಮಕ್ಕಳು, ಒಂದೆ–ಭೇದವಿಲ್ಲದೆ ಏಕಪ್ರಕಾರವಾಗಿ ಇರತಕ್ಕ, ಗೋತ್ರ–ಗೋತ್ರವೇನು, ಪ್ರವರ–ಪ್ರವರವೇನು, ಇವುಗಳಿಂದ ಯುಕ್ತವಾದ ಒಂದೇ ಪ್ರಕಾರವಾದ, ಸಂಧ್ಯಾವಂದನೆಗಳನು–ಗಾಯತ್ರಿ, ಅರ್ಘ್ಯ, ಮೊದಲಾದ ಸಂಧ್ಯಾವಂದನ ಗಳೇನು, ಮತ್ತು ತ್ರಿಕಾಲಸಂಧ್ಯಾವಂದನಗಳನ್ನು, ಮಾಡಿ–ತ್ರಿಕಾಲದಲ್ಲೂ ಮಾಡಿ, ಪ್ರಾಂತಕೆ–ಸಂಧ್ಯಾವಂದನ ಮುಗಿಯೋ ಸಮಯಕ್ಕೆ, ತಮ್ಮ ಪೆಸರು–ತಂದೆಮಕ್ಕಳು ತಮ್ಮ ಜನ್ಮನಾಮಗಳು, ಬೇರೆ–ಬ್ಯಾರೇ ಬ್ಯಾರೇ, ಗೊಂಬಂತೆ–ಉಚ್ಚಾರಣೆಗೆ ಸ್ವೀಕರಿಸು ವಂತೆ, ಒಂದೇ ದೇಹ, ಒಂದೇ ಸಂಧ್ಯಾವಂದನೆವತ್, ಒಂದೆ ದೇಹದೊಳು–ಈ ದೇಹ ದೊಳು (ತಂದೆಸದೃಶ ಪರಮಾತ್ಮ–ತಂದೆ ಅಧೀನನಾದ ಪುತ್ರಸದೃಶನಾದ ಈಶಾಧೀನನಾದ

ಜೀವ), ಉಭಯರು, ಇದ್ದು—ಆವಾಸರಾಗಿದ್ದು, ನಿಂದ್ಯಾನಿಂದ್ಯಕರ್ಮವ—ಪಾಪಪುಣ್ಯ ಕರ್ಮವ, ಮಾಡಿ ಮಾಡಿಸಿ—ಸಂಧ್ಯಾವಂದನ ತಂದೆಯಾದವ ಪುತ್ರಗೆ ಹೇಳಿಕೊಡಬೇಕಾದರೆ ಉಚ್ಚಾರರೂಪದಿಂದ ತಾನು ಪ್ರಥಮತಃ ಮಾಡಿ, ತದ್ದ್ವಾರಾ ಪುತ್ರನಕಡಿಯಿಂದ ಮಾಡಿಸಿದಂತೆ ನಿಂದ್ಯಾನಿಂದ್ಯ ಕರ್ಮಗಳ ಪರಮಾತ್ಮ ಆದಿಯಲ್ಲಿ ತಾನು ಮಾಡಿ ನಂತರ, ಜೀವನಕಡಿಯಿಂದ ಮಾಡಿಸತಾನೆ. ಒಂದೇ ಕರ್ಮ ಜೀವ, ಪರಮಾತ್ಮರು ಇಬ್ಬರೂ ಮಾಡಿದ ಕಾಲಕ್ಕೂ ಪರಿಯವಸಾನಕ್ಕೆ ಅವರವರ ಹೆಸರು ಬ್ಯಾರೆ ಬ್ಯಾರೆ ಆದ್ದರಿಂದ ಅವರ ಹೆಸರು ಅವರವರು ಸ್ವೀಕರಿಸೋವರಾದರು. ಹಾಂಗೆ ನಿಂದ್ಯಾನಿಂದ್ಯ ಕರ್ಮಗತ ತನ್ನ ಸ್ವಾಖ್ಯ, ಪರಮಾತ್ಮನೂ, ಜೀವಭುಕ್ತ ಜಡ ವಿಷಯಗಳ ಜೀವನೂ ಸ್ವೀಕರಿಸತಾರೆ. ಇಂದಿರೇಶನು—ಇಂದಿರಾಪತಿಯಾದ ಪರಮಾತ್ಮ, ಸರ್ವಜೀವರೊಳು—ಸರ್ವಪ್ರಾಣಿಗಳ ಸ್ವರೂಪದಲ್ಲಿ, ಸ್ಥೂಲಶರೀರದಲ್ಲಿ ಇದ್ದು, ಈಶನೆನಿಸುವನು—ನಿಯಾಮಕ ಸ್ವಾಮಿ ಎಂತಲೂ, ಜೀವ ಅವನಿಂದ ಪ್ರೇರಿತನಾದ ಭೃತ್ಯ ಎಂತಲೂ ಎನಿಸೋವನಾಗತಾನೆ.

**ವಿಶೇಷಾರ್ಥ :—** ಶ್ರುತಿಸ್ಮೃತಿಗಳ ಅನುಸರಿಸಿ ಕರ್ಮಮಾಡತೇನು, ವಿಧಿ ಕರ್ಮವೇ ಮಾಡತೇನೆ ಹೊರತು ನಿಷೇಧಕರ್ಮ ಮಾಡೋದಿಲ್ಲ ಎಂದರೆ ನಡಿಯತಕ್ಕದ್ದಲ್ಲ. ದ್ವಂದ್ವಕರ್ಮಗಳು ಆಚರಿಸಬೇಕೆಂದು ಹೇಳತಾರೆ. ಒಂದೇ ಗೋತ್ರ, ಪ್ರವರ, ಸಂಧ್ಯಾವಂದನೆ ಒಂದೇ. ಇವು ಮೂರೂ ತಂದೆಮಕ್ಕಳಿಗೆ ಒಂದೇ. ಲೇಶವಾದರೂ ವ್ಯತ್ಯಾಸವಿಲ್ಲದೇ ತಂದೆಮಕ್ಕಳು ಉಚ್ಚಾರಮಾಡತಾರೆ. ಉಪಸಂಹಾರಕ್ಕೆ ತಂದೆ ಮಗ ಇಬ್ಬರೂ ಪ್ರತ್ಯೇಕವಾಗಿ ತಂದೆ ಹೆಸರು ತಂದೇನೂ, ಮಗನ ಹೆಸರು ಮಗನೂ, ಬ್ಯಾರೆ ಬ್ಯಾರೆ ಹೆಸರು ಉಚ್ಚಾರಮಾಡೋವರಾಗತಾರೆ. ಅದರೋಪಾದಿಯಲ್ಲಿ ಜೀವಾಂತರ್ಗತನಾದ ಪರಮಾತ್ಮ ನಿಷಿದ್ಧಕರ್ಮ, ಅನಿಷಿದ್ಧಕರ್ಮ, ಎರಡೂ ಪ್ರೇರಿಸಿ ಮಾಡಸತಾನೆ. ಆದ್ದರಿಂದ ನಿಷಿದ್ಧ ತ್ಯಾಗ ಮಾಡೋದಕ್ಕೂ, ವಿಧಿ ಆಚರಣೆ ಮಾಡೋದಕ್ಕೂ, ಎರಡಕ್ಕೂ ಜೀವ ಸಮರ್ಥನಾಗೋದಿಲ್ಲ. ಪರಮಾತ್ಮನಿಂದೇ ಪ್ರೇರಿತವಾದ ದ್ವಂದ್ವ ಕರ್ಮಗಳು ಆಚರಣೆ ಮಾಡಬೇಕೇ ಹೊರತು ಅನ್ಯಥಾ ಕೂಡೋದಿಲ್ಲ, ಪರಮಾತ್ಮ ಯಾಕೆ ಹಾಂಗೆ ಮಾಡಸತಾನೆ ಎಂದರೆ, ಅನಾದಿಕರ್ಮದ ಸ್ವಭಾವ ಅಂಥಾದ್ದು. ಈ ಅನಾದಿಕರ್ಮ ಈಶ್ವರನಿಂದ ರಚಿತವಲ್ಲ. ಜಡಕರ್ಮವು. ಅದರನ್ನ ಪರಮಾತ್ಮ ವ್ಯಕ್ತ ಮಾಡತಾನೆ. ಆದರೆ ವಿಧಿ ತಪ್ಪಿದವನಾಗತಾನಲ್ಲ ಎಂದರೆ ಆಗಲಿಲ್ಲ. ಆದನೂ ಹೌದು. ಹ್ಯಾಂಗೆಂದರೆ, ದ್ವಂದ್ವಕರ್ಮಗಳಲ್ಲಿ ಅನುಸಂಧಾನ ವಿಧಿ ಎಂಬುದು, ವಿಧಿ ಹೇಳತಕ್ಕ ಶಾಸ್ತ್ರದಲ್ಲಿ ದಾವ ಪ್ರಕಾರ ಅನುಸಂಧಾನ ಮಾಡಬೇಕೆಂದು ಹೇಳತದೋ ಆ ವಿಧಿಯನ್ನು ಆಚರಿಸಿದ್ದರಿಂದ ದ್ವಂದ್ವಕರ್ಮವೂ ನಿಷಿದ್ಧಕರ್ಮವೇ ಆಯಿತು. ವಿಧಿಯನ್ನು ಅನುಸರಿಸಿ ದಾವ ಕರ್ಮವೂ ಮಾಡಿದವನಾಗೋದಿಲ್ಲ. ಆದ್ದರಿಂದ ವಿಧಿಯನ್ನು ಅನುಸಂಧಾನ ಮಾಡಿ ಪರಮಾತ್ಮನಿಂದ ಮಾಡಿಸಲ್ಪಟ್ಟ ದ್ವಂದ್ವಕರ್ಮಗಳ ಮಾಡೋವ ದಾವನೋ ಅವ, ವಿಧಿ ತಪ್ಪಿದವನಲ್ಲ. ತದ್ವ್ಯತಿರಿಕ್ತ ಸತ್ಕರ್ಮಗಳ ಮಾಡಿದವರೆಲ್ಲಾ ವಿಧಿ ತಪ್ಪಿದವ

ರೇವೇ ಎಂತ ಭಾವ. ತಂದೆ ಹೆಸರು ಮಗ, ಮಗನ ಹೆಸರು ತಂದೆ ಉಚ್ಚರಿಸೋಣ ಪರಸ್ಪರ ನಿಷೇಧ ಹ್ಯಾಂಗೋ ಮತ್ತು ಆವರವರ ಹೆಸರು ಅವರವರೇ ಉಚ್ಚಾರ ಮಾಡೋಣ ನಿಷಿದ್ಧ ಹ್ಯಾಂಗಲ್ಲವೋ, ತದ್ವತ್ ಸಂಧ್ಯಾವಂದನಕ್ಕೆ ಸದೃಶವಾದ ದೇಹ ಒಂದು. ತದ್ಗತ ಪರಮಾತ್ಮ ಒಬ್ಬನೇ ಆಗಿದ್ದು, ತಂದೆಮಕ್ಕಳು ತಮ್ಮ ಹೆಸರು ಬ್ಯಾರೆ ಬ್ಯಾರೆ ಉಚ್ಚಾರ ಮಾಡಿದಂತೆ ಪರಮಾತ್ಮ ದ್ವಂದ್ವ ಕರ್ಮಗಳ ಪ್ರೇರಿಸತಾನೆ. ಅದರಂತೆ ಮಾಡಸತಾನೆ. ಜೀವ ಮಾಡತಾನೆ. ಆದರೆ ಜೀವ ದೋಷಿ ಆಗತಾನಾ ಅಥವಾ ಆಗಲಾರನಾ ಹ್ಯಾಂಗೆ? ದ್ವಂದ್ವಕರ್ಮ ಮಾಡದೇ ಹೋದರೇನೇ ಜೀವ ದೋಷಿ ಆಗತಾನೆ. ತಂದೆ, ತನಯರು ತಮ್ಮ ತಮ್ಮ ಹೆಸರು ಬ್ಯಾರೆ ಬ್ಯಾರೆ ಉಚ್ಚಾರಮಾಡದೇ ಹೋದರೆ ದೋಷಿಗಳಾಗತಾರೆ. ಪ್ರತ್ಯೇಕ ಉಚ್ಚಾರಣೆ ಮಾಡೋಣದರಿಂದ ದೋಷಿಗಳಾಗೋದಿಲ್ಲ. ದ್ವಂದ್ವಕರ್ಮಗಳು ಯಾಕೆ ದೋಷಗಳಾಗಲಿಲ್ಲ ಎಂದರೆ, ಮಹಾರಾಜನ ಆಜ್ಞಾ ಉಲ್ಲಂಘನ ಮಾಡಿ ಛಲೋ ಕಾರ್ಯ ಮಾಡಿದಕಾಲಕ್ಕೂ ರಾಜ ತನ್ನ ಆಜ್ಞಾ ಉಲ್ಲಂಘನ ಮಾಡಿದ ದೋಷಕ್ಕಾಗಿ ಶಿಕ್ಷಾ ಮಾಡತಾನೆ. ರಾಜಾಜ್ಞಾದಿಂದ ನಿಷಿದ್ಧಕರ್ಮ ಮಾಡಿದಾಗ್ಯೂ ರಾಜ ತನ್ನ ಆಜ್ಞಾದಂತೆ ನಡದವನೆಂದು ಆ ಪುಣ್ಯದಿಂದ ಮಹದೈಶ್ವರ್ಯವನ್ನು ಅವನಿಗೆ ಕೊಟ್ಟು ಐಶ್ವರ್ಯವಂತನ ಮಾಡತಾನೆ. ಆದ್ದರಿಂದ ಮಹಾರಾಜನಾದ ಬಿಂಬನ ಆಜ್ಞಾ ಉಲ್ಲಂಘನಿ ರೂಪವಾದ ಕರ್ಮ, ಪುಣ್ಯಕರ್ಮವಾಗಲಾರದು. ಪಾಪವೇ ಆಗತದೆ. ತದ್ವತ್, ಪಾಪಕರ್ಮ, ಪುಣ್ಯಕರ್ಮ ಆಗತದೆ. ಪರಮಾತ್ಮ ಸರ್ವಜೀವಾಂತರ್ಯಾಮಿ ಯಾಗಿದ್ದು ಬಿಂಬಕ್ರಿಯಾ ದ್ವಾರಾ ಪ್ರತಿಬಿಂಬಕ್ರಿಯಾ ನಡೆಸುತ್ತಾ ತನ್ನ ಸ್ವಾಖ್ಯ ತಾನು ಭುಂಜಿಸಿ ಈಶ ಎಂತ ಕರಸತಾನೆ. ಆದ್ದರಿಂದ, ಬಿಂಬಕ್ರಿಯಾ ದ್ವಾರಾ ಪ್ರತಿಬಿಂಬನಾದ ನಾನು ದ್ವಂದ್ವಕರ್ಮ ಮಾಡತೇನೆಂದರೆ ಏನಾಗತದೆ ಎಂದರೆ, ಮಹಾರಾಜನ ಆಜ್ಞಾದಿಂದ ಮೇಲೆ ಹೇಳಿದ ಪ್ರಕಾರ ಮಾಡಿದ ಪಾಪಕರ್ಮ ಪಾಪವಾಗಲಾರದು. ಪುಣ್ಯವೇ ಆಗತದೆ. ದಾರಿಗೆ ಎಂದರೆ, ಅರಿಷಡ್ವರ್ಗಗಳ ನಿಗ್ರಹಮಾಡಿ ಅಹಂಮಮತಾದಿಗಳ ತ್ಯಾಗಮಾಡಿ ವಿಧ್ಯುಕ್ತಾನುಸಾರ ಅನುಸಂಧಾನ ಉಳ್ಳವಗೆ ಎಂತ ತಾತ್ಪರ್ಯ.

**ಕಿಟ್ಟಗಟ್ಟಿದ ಲೋಹ ಪಾವಕ ।**
**ಸುಟ್ಟು ವಿಂಗಡ ಮಾಡುವಂತೆ ಘು ।**
**ರಟ್ಟ ವ್ರೀಹಿಗಳೊಳಿಪ್ಪ ತಂಡುಲ ಕಡೆಗೆ ತೆಗೆವಂತೆ ॥**
**ವಿಠಲಾ ಎಂದೊಮ್ಮೆ ಮೈಮರ ।**
**ದಟ್ಟಹಾಸದಿ ಕರೆಯೆ ದುರಿತಗ ।**
**ಳಟ್ಟುಳಿಯ ಬಿಡಿಸೆವನ ತನ್ನೊಳಗಿಟ್ಟು ಸಲಹುವನು ॥ ೨೦ ॥**

ಪೂರ್ವೋಕ್ತ ಪ್ರಕಾರ ಅನುಸಂಧಾನಯುಕ್ತಗೆ ದೇವರು ಸಂರಕ್ಷಣೆ ಮಾಡುವ ವಿಧಿಯನ್ನು ಹೇಳತಾರೆ.

ವೈಮುರದು–ಅಹಂಮಮತಾದಿಗಳಿಂದ ರಹಿತನಾಗಿ ಹಿಂದೆ ಹೇಳಿದ ಪ್ರಕಾರ ಅನುಸಂಧಾನಯುಕ್ತನಾಗಿ ಸರ್ವ ಲಕ್ಷ್ಯವೂ ಪರಮಾತ್ಮನಲ್ಲೇ ಇಟ್ಟು ಬಾಹ್ಯವಿಷಯಗಳಲ್ಲಿ ಮನವಿರದೇ ವೈಮುರದು, ವಿಠಲಾ–ಪಾಪಪರಿಹಾರಕನಾದ ವಿಠ್ಠಲ, ಎಂದೊಮ್ಮೆ–ಎಂತ ಒಂದಾವರ್ತಿ, ಅಟ್ಟಹಾಸದಿ–ಅಟ್ಟಹಾಸ ವಿಸ್ತಾರ ಪರಮಾತ್ಮನಲ್ಲಿ ಮಾಹಾತ್ಮ್ಯ ಜ್ಞಾನಪೂರ್ವಕ ಸುದೃಢಸ್ನೇಹ ವಿಸ್ತಾರಮಾಡಿಕೊಂಡು, ಕರೆಯೆ–ಉದ್ಧಾರಮಾಡಬೇಕು ಎಂತ ಪರಮಾತ್ಮನ ಕರದರೆ, ಆ ವಿಠ್ಠಲ ಎಂಬ ನಾಮದಲ್ಲಿ ಪರಮಾತ್ಮ ಸನ್ನಿಹಿತನಾಗಿ, ಅವನ–ಈ ಪ್ರಕಾರ ನಾಮೋಚ್ಚಾರಣೆ ಮಾಡಿದ ಅಧಿಕಾರಿಯನ್ನ, ಕಿಟ್ಟಗಟ್ಟಿದ ಲೋಹ–ಕಿಟ್ಟ ಎಂದರೆ ತುಕ್ಕು ಹಿಡಿದಂಥಾ ಕಬ್ಬಿಣವನ್ನ, ಪಾವಕ ಸುಟ್ಟು–ಅಗ್ನಿ ಸುಟ್ಟವನಾಗಿ ಆ ತುಕ್ಕನ್ನ ಯಾವತ್ತೂ ಪರಿಹಾರ ಮಾಡಿ, ವಿಂಗಡ ಮಾಡುವಂತೆ–ಆ ಲೋಹವನ್ನು ಕೆಂಡದಂತೆ ಮಾಡತಾನೆ. ಎಂದರೆ ಅದರಲ್ಲಿ ತಾನು ಪ್ರವೇಶ ಮಾಡಿ ಆ ಲೋಹಕ್ಕೆ ದಾವ ಲೋಪ ಇಲ್ಲದಂತೆ ಆ ಲೋಹಕ್ಕೆ ಏನು ಸಂಬಂಧವಾದರೂ ಸುಡತಾ ಇರತಾನೆ. ಇದರಂತೆ ಲೋಹಕ್ಕೆ ಸದೃಶನಾದ ಅಧಿಕಾರಿ, ಕಿಟ್ಟಕ್ಕೆ ಸದೃಶವಾದ ಪಾಪಗಳಿಂದ ಯುಕ್ತನಾಗಿರತಾನೆ. ವಿಠ್ಠಲ ಎಂತ ಉಚ್ಚಾರಣೆ ಮಾಡಿದ ಮಾತ್ರಕ್ಕೆ, ವಿಠಲಾಖ್ಯ ಅಗ್ನಿ, ಪಾಪಗಳ ಸುಟ್ಟು ಪುನಶ್ಚ ಪಾಪ ಲೇಪವಾಗದಂತೆ ದೇಹೇಂದ್ರಿಯಾದಿಗಳಲ್ಲಿ ಅಗ್ನಿಸದೃಶನಾಗಿದ್ದು ಬಂದ ಪಾಪಗಳ ಲೇಪವಾಗದಂತೆ ಸುಡತಾ ಇರತಾನೆ. ಈ ಪ್ರಕಾರ ದುರಿತಗಳಟ್ಟುಳಿಯ ಬಿಡಿಸಿ–ಪಾಪಗಳಷ್ಟು ಉಳಿಯದಂತೆ ಅಧಿಕಾರಿಗೆ ಬಿಡಿಸಿ ಅನಂತರ, ಘರಟ್ಟ–ಮರದ ಬೀಸೋಕಲ್ಲುಗಳು, ವ್ರೀಹಿಗಳೊಳಿಪ್ಪ–ನೆಲ್ಲಿನಾಗೆ (ಭತ್ತದಲ್ಲಿ) ಇರತಕ್ಕ, ತಂಡುಲ ಕಡೆಗೆ ತೆಗೆವಂತೆ–ಅಕ್ಕಿಯನ್ನು ಆಚ್ಛಾದಿತವಾದ ಹೊಟ್ಟಿನಿಂದ ದೂರಮಾಡಿ ಬ್ಯಾರೆ ಮಾಡುವಂತೆ, ಅಂದರೆ ನೆಲ್ಲು ಹಾಕಿ ಬೀಸಿದರೆ ಹೊಟ್ಟು ಬ್ಯಾರೆ, ಅಕ್ಕಿ ಬ್ಯಾರೆ ಆಗತದೆ. ತದ್ವತ್ ಪರಮಾತ್ಮ ವಿಠಲಾಖ್ಯ ಬೀಸೋಕಲ್ಲಿನಾಗೆ ಲಿಂಗದೇಹಸಹಿತನಾದ ಜೀವನ್ನ ಸೇರಿಸಿ ಬೀಸೋ ಪುರುಷಗೆ–ಸದೃಶ–ಬ್ರಹ್ಮನ ಸಹ ಲಿಂಗಭಂಗ ಐದಿಸಿ, ಜೀವನ ಪ್ರತ್ಯೇಕ ಮಾಡಿ, ತನ್ನೊಳಗಿಟ್ಟು–ತನ್ನ ಉದರದೊಳಿಟ್ಟು, ಸಲಹುವನು–ಪ್ರಳಯಾವಸಾನದ ವರಿಗೂ ಸಲಹಿ, ನಂತರ ಯೋಗ್ಯವಾದ ಮುಕ್ತಸ್ಥಾನದಲ್ಲಿ ಇಟ್ಟು ಸಂರಕ್ಷಣೆ ಮಾಡತಾನೆ ಎಂತ ತಾತ್ಪರ್ಯ.

ವಿಠಲರೂಪಿ ಪರಮಾತ್ಮ ಪಾಪಪರಿಹಾರಕ ಎಂಬುದಕ್ಕೆ ಪ್ರಮಾಣ :– "ವಿದಾ ಜ್ಞಾನೇನ ತಾನ್ ಶೂನ್ಯಾನ್ ಲಾತಿ ಗೃಹ್ಣಾತಿ ಯತ್ತತಃ ವಿಠಲಾಖ್ಯೋ ಹರಿಃ ಪಾಪಹರಣಾದೇವಂ ಕೀರ್ತಿತಃ || "

**ಜಲಧಿಯೊಳು ಸ್ವೇಚ್ಛಾನುಸಾರದಿ ।**
**ಜಲಚರಪ್ರಾಣಿಗಳು ತತ್ತತ್ ।**
**ಸ್ಥಳಗಳಲಿ ಸಂತೋಷಬಡುತಲಿ ಸಂಚರಿಸುವಂತೆ ॥**

**ನಳಿನನಾಭನೊಳಬ್ಜ ಭವ ಮು ।**
**ಪ್ಪೊಳಲುರಿಗ ಮೈಗಣ್ಣ ಮೊದಲಾ ।**
**ದ್ಧಲವು ಜೀವರಗಣವು ವರ್ತಿಸುತಿಹದು ನಿತ್ಯದಲಿ ॥ ೨೧ ॥**

ಪರಮಾತ್ಮನಲ್ಲಿ ಜೀವರು ಇರುವ ಕ್ರಮ ಹೇಳುತಾರೆ.

ಜಲಧಿಯೊಳು–ಸಮುದ್ರದೊಳು ವಿದ್ಯಮಾನವಾದ, ಜಲಚರಪ್ರಾಣಿಗಳು–ಜಲಾಧಾರದಿಂದ ಸಂಚಾರ ಮಾಡತಕ್ಕ ಮತ್ಸ್ಯಾದಿ ಪ್ರಾಣಿಗಳು, ತತ್ತತ್ ಸ್ಥಳಗಳಲಿ–ಅದದಕ್ಕೆ ಯೋಗ್ಯವಾದ ಆಯಾ ಸ್ಥಾನಗಳಲ್ಲಿ, ಸ್ವೇಚ್ಛಾನುಸಾರದಿ – ಸ್ವಸ್ವಭಾವ ಯೋಗ್ಯತಾ ಇಚ್ಛಾನುಸಾರ, ಸಂತೋಷಬಡುತಲಿ–ಸಂತೋಷವನ್ನು ಹೊಂದುತ್ತಾ, ಸಂಚರಿಸುವಂತೆ–ಸಂಚಾರಮಾಡುವ್ರೋಪಾದಿಯಲ್ಲಿ, ನಳಿನನಾಭನೊಳು–ಪದ್ಮನಾಭನೊಳು ಎಂದರೆ ಅಣುರೇಣುತೃಣಕಾಷ್ಠದಲ್ಲಿ, ಪರಮಾಣುಜೀವನಲ್ಲಿ ವ್ಯಾಪ್ತನಾದ ಪರಮಾತ್ಮನ ಅನಂತಾನಂತ ರೂಪಗಳಲ್ಲಿ, ಅಬ್ಜ ಭವ–ಬ್ರಹ್ಮದೇವರು, ಮುಪ್ಪೊಳಲುರಿಗ–ಮೂರನೇದಾದ ಅಗ್ನಿಜ್ವಾಲೆಯೋಪಾದಿಯಲ್ಲಿ ಉರಿಯುತ್ತಾ ಇರತಕ್ಕ ನೇತ್ರವುಳ್ಳ ರುದ್ರದೇವರು, ಮೈಗಣ್ಣ–ಮೈ ಎಲ್ಲಾ ಕಣ್ಣುಗಳಾಗಿ ಉಳ್ಳ ಇಂದ್ರದೇವರು, ಮೊದಲಾದ–ಇವರೇ ಮೊದಲಾದ ಹಲವು, ಜೀವರ ಗಣವು–ನಾನಾ ವಿಧವಾದ ತ್ರಿವಿಧ ಜೀವರ ಸಮೂಹವು, ನಿತ್ಯದಲಿ–ಪ್ರತಿನಿತ್ಯದಲ್ಲೂ, ವರ್ತಿಸುತಿಹುದು–ಸಂಚಾರಮಾಡುತ್ತಾ ಇರೋದಾಗಿ ಅದೆ ಎಂತ ಪರಮಾತ್ಮನ ಅನಂತರೂಪಗಳ ಈ ರೀತ್ಯಾ ತಿಳಿಯೋವನಾಗಬೇಕು ಎಂತ ತಾತ್ಪರ್ಯ.

**ವಾಸುದೇವನು ಒಳಹೊರಗೆ ಅವ ।**
**ಕಾಶದನು (ಆಭಾಸಕನು) ತಾನಾಗಿ ಬಿಂಬಪ್ರ ।**
**ಕಾಶಿಸುವ ತದ್ರೂಪ ತನ್ನಾಮದಲಿ ಸರ್ವತ್ರ ॥**
**ಈ ಸಮನ್ವಯವೆಂದೆನಿಪ ಸದು ।**
**ಪಾಸನವ ಗೈವವನು ಮೋಕ್ಷಾ ।**
**ಪೇಕ್ಷಿಗಳೊಳುತ್ತಮನು ಜೀವನ್ಮುಕ್ತನವನಿಯೊಳು ॥ ೨೨ ॥**

ಪೂರ್ವೋಕ್ತ ಪ್ರಕಾರ ಉಪಾಸನಾ ಮಾಡತಕ್ಕವ ಎಂಥಾವನೆಂದರೆ ಹೇಳುತಾರೆ.

ವಾಸುದೇವನು–ಮೋಕ್ಷಪ್ರದನಾದ ವಾಸುದೇವನು, ಒಳಹೊರಗೆ–ಜೀವನ ಒಳ ಹೊರಗಿರುವ ಸ್ಥೂಲದೇಹದ ಒಳಗಿದ್ದು, ಅವಕಾಶದನು–ಜೀವನ್ಮುಕ್ತರಾಗೋದಕ್ಕೆ ಮಾಡ ತಕ್ಕ ಸಾಧನಿಗೆ ಅವಕಾಶ ಕೊಡತಕ್ಕವನು, ತಾನಾಗಿ–ಇಂಥಾ ಸಾಧನಿಗೆ ಅಭಿಮಾನಿ ತಾನೇ ಆಗಿ ಬಿಂಬ ಇರೋವನಾಗಿದ್ದಾನೆ. ಮತ್ತು ಬಿಂಬ–ಜೀವನಿಗೆ ಬಿಂಬನಾದ ಹರಿ, ಜೀವಗತ ತತ್ವಗಳಲ್ಲಿ, ತದ್ರೂಪ–ದೇವತಾರೂಪ, ತನ್ನಾಮದಲಿ–ದೇವತಾನಾಮದಲ್ಲಿ, ಪ್ರಕಾಶಿಸುವ–ಪ್ರಕಾಶಮಾನನಾಗಿರುವ. ಸರ್ವತ್ರ–ಈ ಪ್ರಕಾರ ಸರ್ವತ್ರ ವಿದ್ಯಮಾನ

ರಾದ ಜೀವರಲ್ಲಿ ಇರೋವನಾಗಿ ಇದ್ದಾನೆ. ಈ ಸಮನ್ವಯ–ಈ ಪೂರ್ವೋಕ್ತಪ್ರಕಾರ ಭಗವದ್ರೂಪಗಳ ಸಮನ್ವಯ ಮಾಡಿ ಉಪಾಸನಾ ಮಾಡತಕ್ಕ ಅಧಿಕಾರಿಗಳಿಗೆ, ಎಂದೆನಿಪ–ಕಾಣಿಸಿಕೊಳ್ಳತಕ್ಕವನು ಎಂದು ಎನಿಸತಕ್ಕ ಬಿಂಬನ್ನ, ಸದುಪಾಸನ–ಸಮೀಚೀನ ನಾಗಿ ಉಪಾಸನ, ಗೈವವನು–ಮಾಡತಕ್ಕವನು, ಮೋಕ್ಷಾನ್ವೇಷಿಗಳೊಳ್–ಮೋಕ್ಷಾಪೇಕ್ಷಿ ಗಳೊಳಗೆ, ಉತ್ತಮನು–ಉತ್ತಮಸಾಧನ ಉಳ್ಳವನು. ಅವನಿಯೊಳಗೆ–ಈ ಭೂಮಿ ಯೊಳಗೆ, ಜೀವನ್ಮುಕ್ತನು–ಜನನಮರಣಾದಿಗಳು ಇಲ್ಲದೆ ಲಿಂಗಭಂಗವೂ ಇಲ್ಲದೇ ಮಹರಾದಿ ಲೋಕಗಳಲ್ಲಿ ಜೀವನ್ಮುಕ್ತನಾಗೋದಕ್ಕೆ ಯೋಗ್ಯವಾದ ಸಾಧನಿ ಉಳ್ಳವನು ಇವನೇ ಎಂತ ತಾತ್ಪರ್ಯ. (ಆಭಾಸಕನು–ಒಳಗೂ ಹೊರಗೂ ಒಂದೇ ರೂಪ ಧರಿಸಿ ದವನು ಎಂತ ಅರ್ಥ).

**ವಿಶೇಷಾರ್ಥ :–** ಜೀವನ್ಮುಕ್ತ ಎಂದರೆ ಜನನಮರಣದಿಂದ ಮುಕ್ತ ಎಂತ ತಾತ್ಪರ್ಯ. ಇಂಥಾ ಜೀವನ್ಮುಕ್ತನಾಗಿ, ತದನಂತರ ಲಿಂಗಭಂಗಾಖ್ಯ ಮುಕ್ತಿ ಐದುವ ನಾಗುವಂಥಾವನಾಗತಾನೆ. ಲಿಂಗಭಂಗಾನಂತರದಲ್ಲಿ ಸ್ಪಷ್ಟವಾಗಿ ಜೀವಾಂತರ್ಗತ ಜೀವ ರೂಪನಾದ ಬಿಂಬನ ಸಂದರ್ಶನವು. ಆದ್ದರಿಂದ ಮುಕ್ತಿ ಎನತಕ್ಕದ್ದು ಜೀವನ್ಮುಕ್ತಿ, ಮುಕ್ತಿ ಎಂತ ಎರಡು ಪ್ರಕಾರ. ಪೂರ್ವಬ್ರಹ್ಮಕಲ್ಪದ ನಿರಂಶಜೀವರು, ಆ ಬ್ರಹ್ಮಕಲ್ಪದ ನಿರಂಶಜೀವರು ಆ ಬ್ರಹ್ಮಕಲ್ಪದ ಅಂತ್ಯಕ್ಕೆ ಜೀವನ್ಮುಕ್ತರಾಗಿ ಪ್ರಳಯ ಐದಿ ಅವರೇ ಈ ಕಲ್ಪದಲ್ಲಿ ಸುಖಪ್ರಾರಬ್ಧ ಭೋಗಮಾಡತಾ ಜನನರಹಿತರಾಗಿ ಮಹರಾದಿ ಲೋಕ ಗಳಲ್ಲಿ ಇರೋವರಾಗಿದ್ದಾರೆ. ಅವರಿಗೆ ಈ ಬ್ರಹ್ಮನ ಕೂಡಾ ಲಿಂಗಭಂಗವು ದಾವಾಗ ಎಂದರೆ "ಅಂಡನಾಶಾತ್ಪುರಾವೇತೇ ಲಿಂಗಭಂಗಃ ಪ್ರಶಸ್ಯತೇ" ಎಂತ ಪ್ರಕಾಶಸಂಹಿತಾ ಉಕ್ತಿ. ಇದರಂತೆ ಈ ಕಲ್ಪದ ನಿರಂಶರಿಗೆ ಮುಂದೆ ವಾಯುದೇವರು ಬ್ರಹ್ಮತ್ವ ಐದಿ, ನಂತರ ಅವರ ಸಹಮುಕ್ತಿ ಎಂತ ತಿಳಿಯತಕ್ಕದ್ದು. ಜೀವನ್ಮುಕ್ತರಿಗೆ ಲಿಂಗಭಂಗಕ್ರಮ ಈ ರೀತ್ಯಾ ತಿಳಿಯಬೇಕು. ಜೀವನ್ಮುಕ್ತದಶಾಕ್ಕೆ ಪೂರ್ವದ ಸಾಧನಿ ಮಾಡತಕ್ಕ ಕಾಲ ದಲ್ಲಿ ಸರ್ವೇಂದ್ರಿಯಗಳು ಪರಮಾತ್ಮನ ಪೂಜಾರತವಾಗಿರಬೇಕು, ವಿಷಯಗಳಲ್ಲಿ ರತ ವಾಗಿರಕೂಡದು. ಇಂಥಾ ಇಂದ್ರಿಯಗಳು ಉಳ್ಳವ ಜೀವನ್ಮುಕ್ತನಾಗುತ್ತಾನೆ ಎಂತ ತಾತ್ಪರ್ಯ. ಆದರೆ ಗುದ ಉಪಸ್ಥೇಂದ್ರಿಯಗಳು ಪರಮಾತ್ಮನ ಪೂಜಾದಲ್ಲಿ ರತಗಳು ಹ್ಯಾಂಗಾಗತವೆ ಎಂದರೆ ಸಮಾಧಾನ :– ಮಲಮೂತ್ರವೆಂಬ ಕಶ್ಮಲವನ್ನು ದೇಹದಲ್ಲಿಟ್ಟು ಕೊಂಡು ಭಗವದ್ಧ್ಯಾನರತರಾದರೆ ತದ್ಬಾಧಾದಿಂದ ಧ್ಯಾನ ಸಿದ್ಧಿಸೋದಿಲ್ಲ. ಆದ್ದರಿಂದ ಅದರನ್ನ ವಿಸರ್ಜನ ಮಾಡಿ ಧ್ಯಾನಕ್ಕೆ ಕೂತರೆ ವಿಕಲ್ಪ ಇಲ್ಲದೇ ಧ್ಯಾನ ಕೂಡೋದಾಗ ತದೆ. ಆದ್ದರಿಂದ ಮಲಮೂತ್ರವಿಸರ್ಜನಿ ಎಂಬುದು ಧ್ಯಾನಕ್ಕೆ ಸಹಕಾರಿಯಾಗೋಣದ ರಿಂದ ಗುದ ಉಪಸ್ಥಗಳೆರಡೂ ಪರಮಾತ್ಮನ ಪೂಜಾದಲ್ಲೇ ರತವಾದದ್ದು ಆದವು ಎಂತ ತಿಳಿಯತಕ್ಕದ್ದು. ಮೋಕ್ಷದಲ್ಲಾದರೂ ಅಚಿತ್ತುರೂಪವಾದ ಶುದ್ಧಸತ್ವಾತ್ಮಕ ಸ್ಥೂಲದೇಹ ಗಳ ತೆಗೆದುಕೊಂಡಾಗೇ ಕ್ಷುತ್ತು ಇಲ್ಲದೇ ಭೋಜನ ಪಿಪಾಸವಿಲ್ಲದೇ ಉದಕಪಾನ ಮಾಡ ತಾರೆ. ಇದು ಮುಕ್ತರ ಲೀಲ. ಆ ಭೋಜನಪಾನಪದಾರ್ಥಗಳು ದಾವವೆಂದರೆ

ಶುದ್ಧ ಸತ್ವಾತ್ಮಕವು, ಅವನ್ನ ಭೋಜನಪಾನಗಳ ಮಾಡಿ, ಗುದ ಉಪಸ್ಥಗಳಿಂದ ವಿಕಾರ ರಹಿತವಾಗಿ ಬಿಡೋವರಾಗತಾರೆ. ಅದದು ತಮ್ಮ ತಮ್ಮ ಶುದ್ಧ ಸತ್ವಗಳಲ್ಲಿ ಸೇರೋದಾಗ ತವೆ. ಅಚಿತ್ತಿನಿಂದ ಭೋಗಕಾಲದಲ್ಲಿ ಗುದ ಉಪಸ್ಥಗಳ ಕಾರ್ಯಗಳೇನೆಂದರೆ ತತ್ಕಾರ್ಯ ವೇನೂ ಇಲ್ಲ. ಯಾಕೆಂದರೆ, ಅಚಿತ್ತಿನಿಂದ ಭೋಜನಪಾನಾದಿಗಳು ಇಲ್ಲವಾದ್ದರಿಂದ ಗುದ ಉಪಸ್ಥ ಕಾರ್ಯಗಳು ಏನೂ ಇಲ್ಲ. ಅನಶನ ಪುರುಷಗೆ ಗುದ ಉಪಸ್ಥ ವ್ಯಾಪಾರ ಇಲ್ಲದೋಪಾದಿಯಲ್ಲಿ ಎಂತ ತಿಳಿಯಬೇಕು. ಮೋಕ್ಷದಲ್ಲಿ ಸರ್ವೇಂದ್ರಿಯಗಳು ಪರ ಮಾತ್ಮನ ಸೇವಾದಲ್ಲಿ ರತಗಳು ಹ್ಯಾಂಗೆಂದರೆ, ಪರಮಾತ್ಮನ ಧ್ಯಾನಕ್ಕೆ ಪ್ರತಿಬಂಧಕರೂಪ ವಾದ ಮಲಮೂತ್ರ ವಿಸರ್ಜನಿ ವ್ಯಾಪಾರವಿಲ್ಲದೇ ಗುದ ಉಪಸ್ಥೇಂದ್ರಿಯಗಳ ವ್ಯಾಪಾರ ವಿಲ್ಲದೇ ಇರೋಣವೇ. ಗುದ ಉಪಸ್ಥ ಎರಡು ಇಂದ್ರಿಯಗಳು ಪೂಜಾದಲ್ಲಿ ರತಗಳು ಎಂತ ತಾತ್ಪರ್ಯ. ಸ್ವರೂಪದೇಹದಲ್ಲಿ ವಾಸುದೇವ ಸತ್ನಾಧನಿಗೆ ತಾನೊಬ್ಬನೇ ನಿಯಾ ಮಕನಾಗಿ ಸ್ಥೂಲದೇಹದಲ್ಲಿ ಅದೇ ವಾಸುದೇವನೇ ವಾಯ್ವಾದಿ ತತ್ವೇಶರ ದ್ವಾರಾ ನಿಯಾಮಕ ಎಂತ ತಿಳಿಯಬೇಕು. ಜೀವೇಂದ್ರಿಯಗಳಿಗೆ ವಾಯುದೇವರ ನಿಯಾಮಕತ್ವ ಉಂಟು ಎಂತ ಕೆಲವು ಪ್ರಮಾಣಗಳಿಂದ ತೋರತದಲ್ಲಾ ಅಂದರೆ, ಆ ಪ್ರಮಾಣ ಸತ್ಯವೇ. ಅದರ ತಾತ್ಪರ್ಯ ಬೇರೆ. ಜೀವನಿಯಾಮಕತ್ವ ವಾಯುದೇವರಿಗೆ ಉಂಟು. ಭಗವ ದಾಜ್ಞಾದಿಂದ ಅಂಥ ನಿಯಾಮಕತ್ವ ಎಂಬುದು ರುದ್ರಾದಿಗಳಿಗೆ ಇಲ್ಲ, ವಾಯುದೇವರಿಗೆ ಒಬ್ಬರಿಗೇವೇ. ಆದರೂ ಜೀವಾಂತರ್ಗತ ಪ್ರವೇಶದಿಂದ ನಿಯಾಮಕತ್ವ ಇಲ್ಲ. ಹ್ಯಾಂಗೆಂ ದರೆ, ಅಣುಲಿಂಗಗತ ಅಮುಖ್ಯಾಭಿಮಾನದಿಂದ ಇರತಕ್ಕ ವಾಯುದೇವರಿಗೆ ಜೀವನೇನು, ಜೀವಾಂತರ್ಗತ ಭಗವತ್ಸಂದರ್ಶನವೇ ಉಂಟು. ಅಣುಲಿಂಗದಲ್ಲಿ ಇದ್ದವರಾಗಿ ಭಗವ ದಾಜ್ಞಾದಿಂದ ಭಗವತ್ಸಂಕಲ್ಪ ತಿಳಿದು, ರಾಜ, ಭೃತ್ಯಗೆ ಆಜ್ಞಾ ಮಾಡಿದಂತೆ ಜೀವಗೆ ಬಹಿಃ ಇದ್ದು ನಿಯಾಮಕ ಮಾಡತಾರೆ. ವಾಯುದೇವರು ಆಜ್ಞಾ ಮಾಡಿದ್ದು ಪರ ಮಾತ್ಮನ ಆಜ್ಞಾಕ್ಕೆ ಅನುಸರಿಸೇ ಮಾಡತಾರೆ. ಜೀವೇಂದ್ರಿಯಗಳಿಗೆ ಪರಮಾತ್ಮ ತಾನೊಬ್ಬನೇ ಅಂತರ್ನಿಯಾಮಕನಾಗತಾನೆ. ಈ ಪ್ರಕಾರ ಜೀವೇಂದ್ರಿಯಗಳಿಗೆ ವಾಯು ದೇವ ನಿಯಾಮಕತ್ವವು ಅಷ್ಟೇ ಹೊರತು ಅಂತಃಪ್ರವೇಶವಿಲ್ಲ. ಯದ್ಯಪಿ ಜೀವ ಅವರವೇ (ತಾರತಮ್ಯ ರೀತ್ಯಾ ಅವರರು ಕಡಿಮೆ). ತದ್ವತ್, ಜಗದುಪಾದಾನ ಮೂಲ ಜಡ ಪ್ರಕೃತಿಯು ಲಕ್ಷ್ಮೀ ಅಭಿಮನ್ಯಮಾನವಾದದ್ದು ಜಡವಾದ್ದರಿಂದ ಅವರವೇನೇ. ಆದರೂ ಲಕ್ಷ್ಮೀ ಅಭಿಮನ್ಯಮಾನವಾದ್ದರಿಂದ ಪ್ರವೇಶ ಇಲ್ಲ. ತದ್ವತ್, ಜೀವನ ಸ್ವರೂಪ ಎಂತ ತಿಳಿಯಬೇಕು. ಗುದೇಂದ್ರಿಯ ಉಪಸ್ಥೇಂದ್ರಿಯದ ವಿಷಯಕ್ಕೆ ಪ್ರಮಾಣ ವಿಷ್ಣುರಹಸ್ಯದಲ್ಲಿ ಅದೆ. ಸರ್ವ ಜೀವಾಂತರ್ಗತರೂಪ ರುದ್ರಾದಿಗಳಿಗೆ ದರ್ಶನ ಇಲ್ಲ ಎಂಬುದು ಶ್ರೀ ವೇದ ವ್ಯಾಸ ದೇವರಕೃತ ತತ್ವಸಾರದಲ್ಲಿ ಅದೆ. ಈ ರೀತ್ಯಾ ತಿಳಿಯತಕ್ಕದ್ದು. ಸ್ಥೂಲದೇಹಗತ ರುದ್ರಾದಿ ದೇವತೆಗಳಿಗೆ ಸ್ಥೂಲದೇಹಸ್ಥನಾದ ಜೀವನ ಸಂದರ್ಶನ ಯಾಕೆ ಇಲ್ಲ ಎಂದರೆ, ಅಹಂಕಾರತತ್ವಕ್ಕೆ ಮ್ಯಾಲೆ ಮಹತ್ತತ್ವ, ಅದರ ಮ್ಯಾಲೆ ರಮಾಭಿಮನ್ಯವಾದ ಅವ್ಯಕ್ತತತ್ವ ವೆಂಬ ಲಿಂಗದೇಹ. ತದಂತರ್ಗತ ಜೀವನು. ರುದ್ರಾದಿಗಳಿಗಾದರೋ ಅಹಂಕಾರತತ್ವದ

ಪರಿಯಂತ ವ್ಯಾಪ್ತಿ. ಮಹತ್ತತ್ವ, ತದ್ಗತಗಳು ದರ್ಶನ. ಅದರಮ್ಯಾಲಿ ಇವರಿಗೆ ದರ್ಶನ ರೂಪವಾದ ಪ್ರವೇಶವಿಲ್ಲವಾದ್ದರಿಂದ ಜೀವನ್ನ ರುದ್ರಾದಿಗಳು ನೋಡೋದಿಲ್ಲ. ವಾಯು ದೇವರು ಮಹತ್ತತ್ವದಲ್ಲಿ ವ್ಯಾಪ್ತರಾಗಿದ್ದು ಅವ್ಯಕ್ತತತ್ವ, ತದ್ಗತ ಜೀವನ ಜೀವಾಂತರ್ಗತ ಪರಮಾತ್ಮನ್ನ ನೋಡತಾರೆ. ಇದು ನೇಮ. ಈ ಪ್ರಕಾರ ಅನುಸಂಧಾನಮಾಡಬೇಕೆಂದು ತಾತ್ಪರ್ಯ. ಆವರಣಭೂತವಾದ ಖರ್ಪರಕ್ಕೆ ಸುತ್ತಲೂ ಇರುವ ಮಹತ್ತತ್ವ ರುದ್ರ ದೇವರೂನೂ, ಅವ್ಯಕ್ತತತ್ವ ವಾಯುದೇವರೂನೂ ಸಾಂತವಾಗಿ ಕಾಣಲಾರರು. ದೇಹ ಗತಗಳ ಸಾಂತವಾಗಿ ಕಾಣುತ್ತಾರೆಂದು ತಿಳಿಯಬೇಕು. ಶ್ರೀ ವಿಜಯದಾಸರಾಯ ಪ್ರಭೃತಿಗಳು ಜೀವನ ಸ್ವರೂಪ ಇಂಥಾದ್ದು ಎಂತ ಹೇಳಿದ್ದಾರಲ್ಲ, ಅದು ಹ್ಯಾಂಗೆ ಹೇಳಿ ದರು ಅಂದರೆ, ಜೀವನ ಸ್ವರೂಪವನ್ನ ನೋಡಿ ಹೇಳಿದ್ದಲ್ಲ, ಸ್ಥೂಲದೇಹಗತ ಸ್ಥೂಲಾಂ ಗುಷ್ಠ ಪರಿಮಿತನಾದ, ಸ್ಥೂಲಬಿಂಬ ಜೀವಾಕಾರದಂತೆ ಇರತಕ್ಕವನಾದ್ದರಿಂದ ಸ್ಥೂಲದೇಹ ಗತ ಜೀವಾಕಾರಬಿಂಬ ಜ್ಞಾನಿಗಳಿಗೆ ಸಂದರ್ಶನ ಉಂಟು. ಆ ಗುರ್ತಿನಿಂದ ಜೀವ ಇಂಥಾವನೆಂದು ಜ್ಞಾನಿಗಳು ಹೇಳೋವರಾಗತಾರೆ. ಅಷ್ಟೇ ಹೊರತು ಲಿಂಗದೇಹಸ್ಥನಾದ ಜೀವನ್ನ ನೋಡಿ ಹೇಳತಾರೆಂತ ತಾತ್ಪರ್ಯವಲ್ಲ. ಈ ಪ್ರಕಾರ ತಿಳಿದು ಅನುಸಂಧಾನ ಮಾಡಬೇಕು ಎಂತ ತಾತ್ಪರ್ಯ.

**ಭೋಗ್ಯವಸ್ತುಗಳೊಳಗೆ ಯೋಗ್ಯಾ ।**
**ಯೋಗ್ಯರಸಗಳನರಿತು ಯೋಗ್ಯಾ ।**
**ಯೋಗ್ಯರಲಿ ನೆಲಸಿಪ್ಪ ಹರಿಗೆ ಸಮರ್ಪಿಸನುದಿನದಿ ॥**
**ಭಾಗ್ಯ ಬಡತನ ಬರಲು ಹಿಗ್ಗದೆ ।**
**ಕುಗ್ಗಿ ಸೊರಗದೆ ಸದ್ಭಕುತಿ ವೈ ।**
**ರಾಗ್ಯಗಳನೇ ಮಾಡು ನೀ ನಿರ್ಭಾಗ್ಯನೆನಿಸದಲೆ ॥ ೨೩ ॥**

ಜೀವನ್ಮುಕ್ತ ಮಾಡಬೇಕಾದ ಅನುಸಂಧಾನ ಹೇಳತಾರೆ.

ಭೋಗ್ಯವಸ್ತುಗಳೊಳಗೆ–ಭೋಗಮಾಡೋದಕ್ಕೆ ಯೋಗ್ಯವಾದ ತ್ರಿವಿಧ ಜೀವರು ಅನುಭವಮಾಡತಕ್ಕ ಭೋಜನದ್ರವ್ಯಗಳೊಳಗೆ, ಯೋಗ್ಯಾಯೋಗ್ಯ–ನಿಷಿದ್ಧಾನಿಷಿದ್ಧ ಪದಾರ್ಥಗಳು, ಇದರಂತರ್ಗತ ರಸಗಳು, ಈ ರಸಗಳೊಳಗೆ ಪರಮಾತ್ಮ ಸ್ವೀಕಾರ ಮಾಡೋದಕ್ಕೆ ಯೋಗ್ಯವಾದ ರಸ ದಾವದು, ಅಯೋಗ್ಯ ರಸ ದಾವದು, ರಸಗಳ ನರಿತು–ಈ ರಸಭೇದಗಳ ತಿಳಿಯೋವನಾಗಬೇಕು. ಪರಮಾತ್ಮ ಸ್ವೀಕಾರ ಮಾಡತಕ್ಕ ರಸ ದಾವದದೆ ಅದು ನಿಷಿದ್ಧಾನಿಷಿದ್ಧ ಸರ್ವ ಪದಾರ್ಥಾಂತರ್ಗತ ರಸಾಂತರ್ಗತವಾಗಿ ಇರೋದಾಗಿ ಅದೆ. ಈತಗೆ ಅಭಿನ್ನಗಳಾದ ರಸರೂಪಗಳು ದಾವದವೆ, ಇವೇ ಪರಮಾತ್ಮಗೆ ಭೋಗಯೋಗ್ಯರಸಗಳು. ತದನ್ಯವಾದ ಜಡರಸಗಳು ಯಾವತ್ತೂ ಅಯೋಗ್ಯರಸಗಳು. ಪರಮಾತ್ಮಗೆ ಭೋಗಯೋಗ್ಯವಲ್ಲದ್ದು. ಈ ಪ್ರಕಾರ ಯೋಗ್ಯಾಯೋಗ್ಯ ರಸಗಳ ತಿಳಿದವ ನಾಗಿ, ಯೋಗ್ಯಾಯೋಗ್ಯರಲಿ–ಯೋಗ್ಯರಾದ ಮುಕ್ತಿಯೋಗ್ಯರು, ಅಯೋಗ್ಯರಾದ

ತಮೋಯೋಗ್ಯರು, ಮಧ್ಯಮರಾದ ನಿತ್ಯಸಂಸಾರಿಗಳು, ಏತಾದೃಶರಾದ ತ್ರಿವಿಧ ಜೀವರಲ್ಲಿ, ನೆಲಸಿಪ್ಪ ಹರಿಗೆ—ದೇಹಾಧಾರನಾಗಿ ಖಂಡರೂಪದಿಂದಲೂ, ಅಖಂಡರೂಪದಿಂದಲೂ, ಬಿಂಬನಾಗಿಯೂ, ಈ ಪ್ರಕಾರ ಅವರವರ ದೇಹಾಂತರ್ಗತನಾಗಿ ಆವಾಸವಾಗಿರತಕ್ಕ ಪರಮಾತ್ಮಗೆ, ಅನುದಿನದಿ—ಪ್ರತಿದಿನದಲ್ಲೂ, ಸಮರ್ಪಿಸು—ಪರಮಾತ್ಮನ ಸ್ವಾಖ್ಯರಸಗಳ, ಪರಮಾತ್ಮಗೆ ಅರ್ಪಿಸೋವನಾಗು. ಇದರಂತೆ ನಿನ್ನ ದೇಹಾಂತರ್ಗತಗೂ ಅರ್ಪಿಸಿ ಭೋಜನಾದಿಗಳ ಮಾಡೋವನಾಗಬೇಕು. ಇದರಂತೆ ಶುಭಾಶುಭ ಕರ್ಮಗಳು ಶುಭಾಶುಭ ಭೋಗಗಳು, ಸುಖದುಃಖಾದಿಗಳು ಯಾವತ್ತೂ ಎಂತ ತಾತ್ಪರ್ಯ. ಈ ಪ್ರಕಾರ ಅರ್ಪಿಸಿ ಸರ್ವ ವಿಷಯದಲ್ಲೂ ವ್ಯಾವರ್ತನಾಗಿ, ಭಾಗ್ಯ ಬಡತನ ಬರಲು—ಪೂರ್ವಜನ್ಮವನನುಸರಿಸಿ ಪರಮಾತ್ಮನ ದ್ವಾರಾ ಭಾಗ್ಯವೇನು, ಬಡತನವೇನು, ಬಂದರೂ, ಹಿಗ್ಗದೆ—ಭಾಗ್ಯ ಬಂದಕಾಲಕ್ಕೆ ಸಂತೋಷಪಡದೆ, ಕುಗ್ಗಿ ಸೊರಗದೆ—ಭಾಗ್ಯ ಹೋಗಿ ಬಡತನ ಬಂದರೆ ವ್ಯಸನ ದುಃಖಾದಿಗಳಿಂದ ಉತ್ಸಾಹಶೂನ್ಯನಾಗಿ ನಿರ್ವಿಣ್ಣನಾಗಿ ಸಂಕಟಪಡದೆ, ಪೂರ್ವೋಕ್ತ ಪ್ರಕಾರ ಅರ್ಪಿಸುತ, ಸದ್ಭಕ್ತಿ—ಪರಮಾತ್ಮನಲ್ಲಿ ಅವಿಚ್ಛಿನ್ನ ಸ್ನೇಹರೂಪ ಭಕ್ತಿ ಹಾಂಗೆ, ವೈರಾಗ್ಯಗಳನೇ ಮಾಡು—ಸಮೀಚೀನವಾದ ಭಾವವೈರಾಗ್ಯಗಳನ್ನು ಮಾಡು. ನಿರ್ಭಾಗ್ಯನೆನಿಸದಲೆ—ನೀನು ನಿರ್ಭಾಗ್ಯ ಎಂತ ಅನಿಸಬೇಡ. ಅಹಂಮಮತಾಯುಕ್ತನಾಗಿ ಪರಮಾತ್ಮನ ಅನುಗ್ರಹ ಸಂಪಾದಿಸದೆ, ಪರಮಾತ್ಮನ ಅನುಗ್ರಹಕ್ಕೆ ಭಾಗ್ಯದಿಂದ ಹೀನ ಎಂತ ಅನಿಸಿಕೊಳ್ಳದೆ ಅನುಗ್ರಹಾಖ್ಯ ಭಾಗ್ಯ ಸಂಪಾದಿಸು ಎಂತ ತಾತ್ಪರ್ಯ.

**ಸ್ಥಲಜಲಾದ್ರಿಗಳಲ್ಲಿ ಜನಿಸುವ ।**
**ಫಲಸುಪುಷ್ಪಜಗಂಧರಸ ಶ್ರೀ ।**
**ತುಲಸಿ ಮೊದಲಾದಖಿಳ ಪೂಜಾಸಾಧನ ಪದಾರ್ಥ ॥**
**ಹಲವು ಬಗೆಯಿಂದರ್ಪಿಸುತ ಬಾಂ ।**
**ಬೊಳೆಯಜನಕಗೆ ನಿತ್ಯನಿತ್ಯದಿ**
**ತಿಳಿವುದಿದು ವ್ಯತಿರೇಕ ಪೂಜೆಗಳೆಂದು ಕೋವಿದರು ॥ ೨೪ ॥**

ವ್ಯತಿರೇಕ ಪೂಜಾಕ್ರಮ ಹೇಳತಾರೆ.

ಸ್ಥಳ—ಭೂಮಿ, ಜಲ—ಉದಕ, ಅದ್ರಿಗಳಲ್ಲಿ—ಪರ್ವತ ಇವುಗಳಲ್ಲಿ, ಜನಿಸುವ—ಉತ್ಪನ್ನವಾಗುವ, ಫಲ—ಭೂಮಿಯಲ್ಲಿ ಉತ್ಪನ್ನಗಳಾಗೋ ಸುರಸೋಪೇತ ಅನಿಷಿದ್ಧಗಳಾದ ಫಲಗಳೇನು, ಸುಗಂಧೋಪೇತ ಪುಷ್ಪವೇನು, ಸುಪುಷ್ಪಜ—ಜಲದಲ್ಲಿ ಉತ್ಪನ್ನಗಳಾದ ಕಮಲಾದಿ ಪುಷ್ಪಗಳು, ಅದ್ರಿಜಗಳಾದ ಜೇನುತುಪ್ಪ ಮೊದಲಾದದ್ದು, ಇವುಗಳಿಂದ ಜನಿತಗಳಾದ, ಗಂಧ—ಪುಷ್ಪಗತ ಸುಗಂಧ, ರಸ—ಫಲಗತ ಸುರಸ, ಶ್ರೀತುಲಸಿ—ಪರ್ವತಗತ ಶ್ರೀತುಲಸಿ, ಮೊದಲಾದ—ಇವೇ ಮೊದಲಾದ, ಅಖಿಳ—ಸಮಸ್ತವಾದ, ಪೂಜಾಸಾಧನ—ಭಗವಂತಗೆ ಪೂಜಾ ಮಾಡೋದಕ್ಕೆ ಸಾಧನೀಭೂತಗಳಾದ, ಪದಾರ್ಥ—ನಾನಾವಿಧ ಪದಾರ್ಥವು, ಹಲವು ಬಗೆಯಿಂದ—ನಾನಾ ಪ್ರಕಾರದಿಂದ ನಿರ್ಮಾಣ

ಮಾಡೋವನಾಗಿದ್ದಾನೆ. ಅರ್ಚಿಸುತ–ಪೂರ್ವೋಕ್ತ ಪ್ರಕಾರ ಅನುಸಂಧಾನದಿಂದ ಪೂರ್ವೋಕ್ತದ್ರವ್ಯಗಳು ಎಲ್ಲಿಲ್ಲಿ ದಾವ ದಾವ ಸ್ಥಳಗಳಲ್ಲಿ ಕಣ್ಣಿಂದ ನೋಡತಾನೋ, ಅಲ್ಲಲ್ಲೇ ಆಯಾ ಪದಾರ್ಥಗಳಲ್ಲಿ ತದಾಕಾರ ತನ್ನಾಮಕನಾಗಿ ಇರತಕ್ಕ ಭಗವಂತನ ಚಿಂತಿಸಿ ಆ ರೂಪವನ್ನ ನಿನ್ನ ದೇಹಾಂತರ್ಗತ ಬಿಂಬರೂಪಿ ಪರಮಾತ್ಮನಲ್ಲಿ ಐಕ್ಯಚಿಂತನಾ ರೂಪದಿಂದ, ಭಗವದ್ರೂಪಗಳಿಂದ, ಭಗವದ್ರೂಪಗಳಿಗೆ ಪೂಜಾತ್ವೇನ ಅರ್ಚಿಸುತ್ತಾ ಮತ್ತು ಪ್ರತಿಪದಾರ್ಥದಲ್ಲೂ ಖಂಡಾಖಂಡ ರೂಪಗಳು ಇರೋದಾಗಿ ಅವೆ. ಆ ಖಂಡ ರೂಪವನ್ನ ಖಂಡರೂಪದಲ್ಲಿ ಐಕ್ಯ ಚಿಂತಿಸುತ್ತ ಅಲ್ಲಿದಲ್ಲಿಗೆ ಈ ಪ್ರಕಾರ ಅರ್ಚಿಸುತ್ತ, ಬಾಂಬೋಳಿಯ ಜನಕಗೆ–ಭಾಗೀರಥೀದೇವಿಗೆ ತಂದೆಯಾದ ತ್ರಿವಿಕ್ರಮಸಾಂಕೇತನಾದ ದೇಹಾಕಾರನಾದ ವಾಮನಾಖ್ಯ ಶ್ರೀ ಬಿಂಬಮೂರ್ತಿಗೆ, ನಿತ್ಯನಿತ್ಯದಿ–ಪ್ರತಿಪ್ರತಿದಿನ ದಲ್ಲೂ, ಈ ಪ್ರಕಾರ ಮಾಡತಕ್ಕ ಪೂಜಾ ದಾವದದೆ, ಇದು–ಈ ಪೂಜಾ ಎಂಬುವದು, ವ್ಯತಿರೇಕ ಪೂಜೆಗಳೆಂದು–ಅನ್ಯಗಳಾದ ವಿಲಕ್ಷಣಗಳಾದ ಪೂಜಾದಿಗಳೆಂದು, ಕೋವಿದರು ತಿಳಿವುದು–ಜ್ಞಾನಿಗಳಾದವರು ತಿಳಿಯೋವರಾಗಬೇಕು.

**ವಿಶೇಷಾರ್ಥ :–** ತುಲಸಿ ತಾರತಮ್ಯದಲ್ಲಿ ದಾರೆಂದರೆ ಪ್ರಮಾಣ. "ತುಲಸೀ ಜಾಂಬವತೀತ್ಯುಕ್ತಾ ಲಕ್ಷ್ಮ್ಯಾವೇಶೇನ ಸಂಯುತಾ । ತಯಾ ಸಂಪೂಜಯೇದ್ವಿಷ್ಣುಂ ವಿಷ್ಣುಲೋಕಮವಾಪ್ನುಯಾತ್ ॥" ಇತಿ ಪಾದ್ಮೇ ಉತ್ತರಖಂಡೇ.

**ಶ್ರೀಕರನ ಸರ್ವತ್ರದಲಿ ಅವ ।**
**ಲೋಕಿಸುತ ಗುಣರೂಪಕ್ರಿಯ ವ್ಯತಿ ।**
**ರೇಕ ತಿಳಿಯದಲನ್ವಯಿಸು ಬಿಂಬನಲಿ ಮರಿಯದಲೆ ॥**
**ಸ್ವೀಕರಿಸುವನು ಕರುಣದಿಂದ ನಿ ।**
**ರಾಕರಿಸದೆ ಕೃಪಾಳು ಭಕ್ತರ ।**
**ಶೋಕಗಳ ಪರಿಹರಿಸಿ ಸುಖವಿತ್ತನವರತ ಪೊರೆವ ॥ ೨೫ ॥**

ಸರ್ವವ್ಯಾಪಾರಗಳು ದೇಹಗತ ಬಿಂಬನಲ್ಲಿ ಅನ್ವಯಮಾಡಬೇಕೆಂದು ಹೇಳತಾರೆ.

ಸರ್ವತ್ರದಲಿ–ಸರ್ವ ಚರಾಚರ ಅಧಿಷ್ಠಾನಗಳಲ್ಲಿ ವಿದ್ಯಮಾನನಾದ ಪರಮಾತ್ಮನ, ಅವಲೋಕಿಸುತ–ಅಧಿಷ್ಠಾನಗಳ ಬಿಟ್ಟು ಅಂತರ್ಗತ ಭಗವಂತನನ್ನೇ ಮನೋನೇತ್ರಗಳ ದ್ವಾರಾ ನೋಡುತ್ತಾ ಎಂದರೆ ಅಪರೋಕ್ಷ ಹೊರತು ಕಾಣದ ಪರಮಾತ್ಮನ, ಅನಪರೋಕ್ಷ ಕಾಲದಲ್ಲಿ ನೋಡುವ ಕ್ರಮ ಹ್ಯಾಂಗೆಂದರೆ :– ತನಗೆ ಇಷ್ಟವಾದ, ಸುಲಕ್ಷಣವಾದ, ಗುರುಗಳಿಂದ ಲಭ್ಯವಾದ, ಪ್ರತಿಮಾಪೂಜಾ, ಬಾಹ್ಯದಲ್ಲಿ ಮಾಡುತ್ತಾ ಅದರಲ್ಲಿ ದೇಹಾಂತ ರ್ಗತ ಬಿಂಬನ್ನ ಆವಾಹನಮಾಡಬೇಕು. ಬಿಂಬ ಜೀವಾಕಾರನಾದ್ದರಿಂದ ಬಿಂಬ ಇಂಥಾವ ನೆಂದು ಅಪರೋಕ್ಷಾತ್ಪೂರ್ವದಲ್ಲಿ ತಿಳಿದು ಈ ಬಿಂಬಗೆ ಅಗ್ರೇಶಸಾಂಕೇತವೂ ಆದ್ದರಿಂದ, ಬಿಂಬಾವಾಹನ ಮಾಡಬೇಕೆಂಬೋ ವಾಕ್ಯ ವಿರುದ್ಧವಾಗಿ ಅದೆ. ಆವಾಹನಕ್ರಮ

ಹ್ಯಾಂಗೆಂದರೆ, ಬಿಂಬ ಮಾನುಷನೋ ಮೃಗನೋ, ದಾವದೇ ಆಗಲಿ, ಹ್ಯಾಂಗೇ ಇರಲಿ, ಆ ರೂಪದಲ್ಲಿ ನವನಾರೀಕುಂಜರವತ್ ವಿಲಕ್ಷಣಗಳಾದ ಅನಂತರೂಪಗಳು ಇರೋದಾಗಿ ಅವೆ. ಆ ಅನಂತಾನಂತ ರೂಪಗಳಲ್ಲಿ ಇವಗೆ ಗುರುಮುಖದಿಂದ ಲಭ್ಯವಾದ ಪ್ರತಿಮಾ ಸದೃಶ ರೂಪವು ಬಿಂಬರೂಪದಲ್ಲಿ ಇರೋದಾಗಿ ಅದೆ. ಪ್ರತಿಮಾದಲ್ಲಿ ಪ್ರತಿಮಾಸದೃಶ ವಾದ ಇಂಥಾ ರೂಪವನ್ನು ಅನುಸಂಧಾನದಿಂದ ಆವಾಹನ ಮಾಡಿ ಪೂಜಾದಿಗಳ ಮಾಡ ಬೇಕು. ಇದೇ ಪ್ರತಿಮಾರೂಪವನ್ನು ಹೃದಯಾಕಾಶ ಅಷ್ಟದಳ ಕಮಲಗಳಲ್ಲಿ ಮಾಡಿ ಕೊಂಡು, ಮಾನಸಪೂಜಾ ಮಾಡಬೇಕು. ಮಾಡತಾ ಮನೋನೇತ್ರಗಳಿಂದ ನೋಡತಾ ಇರಬೇಕು. ಹೃದಯದಲ್ಲಿ ದಾವ ಪ್ರಕಾರ ಅವಲೋಕನ ಮಾಡತಾನೋ ಅದರಂತೆ, ಇದೇ ಪ್ರಕಾರ ಇದೇ ಪ್ರತಿಮಾವನ್ನ ಸರ್ವತ್ರ ಅವಲೋಕಿಸುತ್ತ, ಗುಣರೂಪಕ್ರಿಯ–ಪರ ಮಾತ್ಮನ ರೂಪಗಳಿಗೂ, ಪರಮಾತ್ಮನ ಗುಣಗಳಿಗೂ, ಪರಮಾತ್ಮನ ಕ್ರಿಯೆಗಳಿಗೂ, ವ್ಯತಿರೇಕ ತಿಳಿಯದೆ–ಪರಸ್ಪರ ಭೇದ ತಿಳಿಯದೆ, ಇದೇ ಪ್ರಕಾರ ಸರ್ವಾಧಿಷ್ಠಾನಗತ ಭಗವದ್ರೂಪಗಳಿಗೆ ಪರಸ್ಪರ ಅತ್ಯಂತ ಅಭೇದಗಳ ಚಿಂತಿಸುತ್ತ, ಮರೆಯದಲೆ–ಇದನ್ನ ಮರಿಯದೇನೆ, ಶ್ರೀಕರನ–ತನ್ನ ಅಪರೋಕ್ಷದಿಂದ ಮೋಕ್ಷಾಖ್ಯ ಐಶ್ವರ್ಯವನ್ನು ಅನಿಷ್ಟ ನಿವೃತ್ತಿ ದ್ವಾರಾ ಕೊಡತಕ್ಕ, ಬಿಂಬನಲಿ–ಪೂರ್ವೋಕ್ತ ಪ್ರತಿಮಾಸದೃಶನಾದ ಬಿಂಬನಲ್ಲಿ ಅನ್ವಯಿಸೋವನಾಗು ಮತ್ತು ಪ್ರಕಾರಾಂತರ ಮಾನುಷದೇಹ ಧರಿಸಿದಾಗ ಜೀವಾಂತ ರ್ಗತ ಜೀವಾಕಾರ ಅಗ್ರೇಶನಾಮಕ ಬಿಂಬನೇನು, ಅನ್ಯವಾದ ಸ್ಥೂಲದೇಹಗತ ಜೀವಾ ಕಾರ ಬಿಂಬ ಕಮಲಕರ್ಣಿಕಾದಲ್ಲಿ ಜೀವಾಕಾರದಂತೆ ಅಗ್ರೇಶನಾಮದಿಂದ ಇದ್ದು, ದೇಹಾ ಕಾರನಾಗಿ ವ್ಯಾಪಿಸಿ ಇದ್ದಾನೆ, ಇಂಥಾ ದೇಹಾಕಾರನಾದ ಬಿಂಬನ್ನ ಆವಾಹನ ಮಾಡೋಣ ಇದು ಕ್ರಮ. ಈ ಪ್ರಕಾರವಾದರೂ ಆವಾಹನ ಮಾಡಬಹುದು. ಈ ಪ್ರಕಾರ ಆವಾಹನ ಮಾಡಿ ಇದೇ ಬಿಂಬನ್ನ ಸರ್ವತ್ರ ಐಕ್ಯಚಿಂತನ ಸರ್ವಗತ ಭಗವದ್ರೂಪ ಗತ ಬಿಂಬನಲ್ಲಿ ಐಕ್ಯಚಿಂತನ ಮಾಡಿ ಭಗವದ್ರೂಪಗಳಿಂದ ಭಗವದ್ರೂಪಗಳಿಗೆ ಪೂಜಾ ತ್ವೇನ ಅರ್ಪಿಸಿದರೆ ಇದೇನೇ ಪೂಜಾ. ಅನ್ವಯಿಸು–ಈ ಪ್ರಕಾರ ಪೂಜಾವನ್ನು ಅನ್ವಯ ಮಾಡಬೇಕು, ನಿರಾಕರಿಸದೆ–ನಿರಾಕರಣ ಮಾಡದೆ, ಕರುಣದಿಂದ–ಅಂತಃಕರಣದಿಂದ, ಸ್ವೀಕರಿಸುವನು–ಸ್ವೀಕಾರಮಾಡೋವನಾಗತಾನೆ. ಇದರಿಂದ, ಕೃಪಾಳು–ದಯಾಳು ವಾದ ಪರಮಾತ್ಮ, ಭಕ್ತರ ಶೋಕಗಳ ಪರಿಹರಿಸಿ–ಭಕ್ತರಿಗೆ ಪ್ರಾಪ್ತವಾಗತಕ್ಕ ಅಹಂ ಮಮತಾದಿಗಳಿಂದ ಜನಿತವಾದ ದುಃಖಗಳ ಪರಿಹಾರ ಮಾಡುತ್ತಾ, ಸುಖವಿತ್ತು–ತನ್ನ ಜ್ಞಾನಾನಂದಾದಿಗಳಿಂದ ಆಗತಕ್ಕ ಸುಖವನ್ನು ಕೊಟ್ಟು, ಅನವರತ ಪೊರೆವ–ಅನವರತ ಭೋಗಿಸಬೇಕಾದ ಸ್ವರೂಪಸುಖ, ಲಿಂಗಭಂಗಾನಂತರ ವ್ಯಕ್ತಮಾಡಿಕೊಟ್ಟು ರಕ್ಷಿಸು ತ್ತಾನೆ.

ಜೀವಾಕಾರ ಬಿಂಬನಲ್ಲಿ ಪೂರ್ವೋಕ್ತ ಪ್ರಕಾರ ಸ್ವರೂಪಗಳು ಇರೋದಾಗಿ ಅವೆ. ಅದರಲ್ಲಿ ವರ್ತಮಾನದಲ್ಲಿ ದಾವ ರೂಪವನ್ನ ಉಪಾಸ್ಯಮೂರ್ತಿಯನ್ನಾಗಿ ಮಾಡಿಕೋ ತಾನೋ, ಆ ಆಕಾರದಿಂದ ಸಹಿತವಾದ ಮೂರ್ತಿ ಕೂಡಾ ಬಿಂಬನಲ್ಲಿ ಇರೋಣದರಿಂದ

ವರ್ತಮಾನ ಮೂರ್ತಿ ಕೂಡ ಬಿಂಬಮೂರ್ತಿ ಎಂತಲೇ ಕರಿಸೋದಾಗತದೆ. ಇಂಥಾ ಮೂರ್ತಿಯನ್ನೇ, ಬಿಂಬಮೂರ್ತಿಯನ್ನಾಗಿ ಭಾವನ ಮಾಡಿ ಹೃದಯಾಕಾಶದಲ್ಲಿ ತಿಳಿದು ಪೂಜಿಸುತ ಬಾಹ್ಯ ಉಪಾಸ್ಯ ಪ್ರತೀಕದಲ್ಲಿ ಆವಾಹನ ಮಾಡೋವನಾಗಬೇಕು.

**ಇನಿತು ವ್ಯತಿರೇಕಾನ್ವಯುಗಳೆಂ ।**
**ದೆನಿಪ ಪೂಜಾವಿಧಿಗಳನೆ ತಿಳಿ ।**
**ದನಿಮಿಷೇಶನ ತೃಪ್ತಿಬಡಿಸುತಲಿರು ನಿರಂತರದಿ ॥**
**ಘನಮಹಿಮ ಕೈಕೊಂಡು ಸ್ಥಿತಿಮೃತಿ ।**
**ಜನುಮುಗಳ ಪರಿಹರಿಸಿ ಸೇವಕ ।**
**ಜನರೊಳಿಟ್ಟಾನಂದಬಡಿಸುವ ಭಕ್ತವತ್ಸಲನು ॥ ೨೬ ॥**

ವ್ಯತಿರೇಕ ಪೂಜಾದ ಮಹಾತ್ಮ್ಯ ಹೇಳತಾರೆ.

ಇನಿತು–ಈ ಪೂರ್ವೋಕ್ತ ಪ್ರಕಾರದಲ್ಲಿ, ವ್ಯತಿರೇಕಾನ್ವಯುಗಳು–ಬಾಹ್ಯ ಪೂಜಾಕ್ಕೆ ವ್ಯತಿರೇಕವಾಗಿ ಅನ್ವಯಿಸತಕ್ಕ ಪೂಜಾಕ್ರಮುಗಳು, ಎಂದೆನಿಪ–ಎಂತ ಎನಿಸತಕ್ಕ, ಪೂಜಾ ವಿಧಿಗಳನೆ–ನ್ಯಾಯವಾದ ಪೂಜಾವಿಧಿಗಳನ್ನು, ತಿಳಿದು–ಗುರುಮುಖದಿಂದ ಸಂಪ್ರದಾಯ ಗಳ ತಿಳಿದು, ಅನಿಮಿಷೇಶನ–ದೇವತೆಗಳಾದ ರಮಾಬ್ರಹ್ಮಾದಿಗಳಿಗೆ ಈಶನಾದ ಸರ್ವತ್ರ ವ್ಯಾಪ್ತನಾದ ದೇಹಗತ ಬಿಂಬನಾದ ಪರಮಾತ್ಮನ, ಪರಸ್ಪರ ಅವನ ರೂಪಗಳಿಂದ ಅವನ ರೂಪಗಳಿಗೆ ಪೂಜಾತ್ವೇನ ಅರ್ಪಿಸಿ, ತೃಪ್ತಿಬಡಿಸುತಲಿರು–ಅವನ ರೂಪಗಳಿಂದ ಅವನಿಗೆ ತೃಪ್ತಿಬಡಿಸುತ ಇರೋವನಾಗು. ನಿರಂತರದಿ–ಇಂಥಾ ಪೂಜಾವನ್ನ ಸರ್ವಕಾಲವಲ್ಲೂ, ಘನಮಹಿಮ ಕೈಕೊಂಡು–ಅಸದೃಶ ಮಹಿಮನಾದ ಬಿಂಬರೂಪಿ ಪರಮಾತ್ಮ ಸ್ವೀಕಾರ ಮಾಡಿ ಕೈಕೊಂಡು ಅಂದರೆ ತೆಗೆದುಕೊಂಡು, ಸ್ಥಿತಿ–ಲಿಂಗದೇಹದಿಂದ ಇರೋಣ, ಮೃತಿ–ಸ್ಥೂಲದೇಹತ್ಯಾಗ, ಜನುಮುಗಳ–ಮತ್ತು ಸ್ಥೂಲದೇಹದಿಂದ ಜನನ, ಇವುಗಳ, ಪರಿಹರಿಸಿ–ಪರಿಹಾರ ಮಾಡಿ, ಭಕ್ತವತ್ಸಲನು–ಭಕ್ತರಲ್ಲಿ ಕೇವಲ ಪ್ರೀತಿ ವಿಷಯನಾದ ಪರಮಾತ್ಮನು, ಸೇವಕಜನರೊಳಿಟ್ಟು–ಲಿಂಗಭಂಗರಾದ, ಮುಕ್ತರಾದ ತನ್ನ ಸೇವಾ ಮಾಡತಕ್ಕ ಜನರೊಳಗೆ, ಲಿಂಗಭಂಗ ಐದಿಸಿ ಇಟ್ಟಂಥಾವನಾಗಿ, ಆನಂದಬಡಿಸುವ–ಸ್ವರೂಪಾನಂದದಿಂದ ಸುಖಬಡಿಸೋವನಾಗತಾನೆ ಎಂತ ತಾತ್ಪರ್ಯ.

**ತಾ॥** ಜಡಪದಾರ್ಥಗಳಿಂದ ಜಡಪ್ರತಿಮಾವನ್ನ ಪೂಜಾ ಮಾಡೋ ಕಾಲಕ್ಕೆ, ನಿವೇದನ ಕಾಲಕ್ಕೆ ಆ ಪ್ರತಿಮಾನೇ ದೇವರು ಎಂತಲೂ ಜಡಪದಾರ್ಥಗಳು ಪೂಜಾ ನಿವೇದನ ಸಾಧನಗಳೆಂತಲೂ ತಿಳಿಯದೇ, ಅಂತರ್ಗತವಿವಕ್ಷಯಾ ವ್ಯತಿರೇಕ ಅನುಸಂಧಾನದಿಂದ ಪೂಜಾ ಮಾಡೋ ಭಕ್ತರಿಗೆ, ತನ್ನ ಪಾದಾರವಿಂದಗತಿ ಕೊಡತಾನೆ. ಅನ್ಯರಿಗೆ, ಇಲ್ಲ ಎಂತ ತಾತ್ಪರ್ಯ. ಬರೀ ಅನುಸಂಧಾನ ಮಾಡಿದ್ದರಿಂದಲೇ ದೋಷ ದೂರ ನಾಗಲಾರ. ಈಷಣತ್ರಯಗಳ, ಅರಿಷಡ್ವರ್ಗಗಳ, ಅಹಂಮಮತಾದಿಗಳ ವಿಸರ್ಜನೆ

ಮಾಡಿ ವೈರಾಗ್ಯ ಬುದ್ಧಿಯುಕ್ತರಾಗಿ "ತ್ವಮೇವ ಶರಣಂ ಮಮ" ಎಂಬ ಅನುಭವ ಜ್ಞಾನದಿಂದ ಯುಕ್ತನಾಗಿ ಇಂಥಾ ಅನುಸಂಧಾನ ಮಾಡಿ, ದ್ವಂದ್ವಕರ್ಮಗಳ ಅರ್ಪಿಸಿದರೆ ಪೂರ್ವೋಕ್ತ ಅನುಗ್ರಹವಾಗತದೆ ಎಂತ ತಾತ್ಪರ್ಯ.

**ಜಲಜನಾಭನಿಗೆರಡು ಪ್ರತಿಮೆಗ ।**
**ಳಿಳೆಯೊಳಗೆ ಜಡಚೇತನಾತ್ಮಕ ।**
**ಚಲದೊಳಿರ್ಬಗೆ ಸ್ತ್ರೀಪುರುಷ ಭೇದದಲಿ ಜಡದೊಳಗೆ ॥**
**ತಿಳಿವುದಾಹಿತಪ್ರತಿಮೆ ಸಹಜಾ ।**
**ಚಲಗಳೆಂದಿರ್ಬಗೆ ಪ್ರತೀಕದಿ ।**
**ಲಲಿತ ಪಂಚತ್ರಯ ಸುಗೋಳಕವರಿತು ಭಜಿಸುತಿರು ॥ ೨೭ ॥**

ಚರಾಚರಗಳು ಪರಮಾತ್ಮನ ಪ್ರತಿಮಾ ಎಂತ ಹೇಳತಾರೆ.

ಜಲಜನಾಭನಿಗೆ–ಪದ್ಮನಾಭನಾಮಕ ಪರಮಾತ್ಮಗೆ, ಇಳೆಯೊಳಗೆ–ಈ ಭೂಮಿ ಒಳಗೆ, ಪ್ರತಿಮೆಗಳು–ತದಾಕಾರದಿಂದ ಆವಾಸನಾಗಿ ಇರೋದಕ್ಕೆ ಅಧಿಷ್ಠಾನಗಳು, ಎರಡು–ಎರಡು ವಿಧಗಳಾದದ್ದು, ಜಡ–ಶುದ್ಧ ಜಡಗಳು ಒಂದು, ಚೇತನ–ಜಡಜೀವರು, ತಥಾ, ಗಮನಾಗಮನ ಮಾಡುವ ಜೀವರು ಒಂದು. ಆತ್ಮಕ–ಈ ಪ್ರಕಾರ ಪ್ರಚುರವಾದ ಅಧಿಷ್ಠಾನಗಳು ಎರಡು. ಚಲದೊಳು–ಚಲಪ್ರತಿಮೆಗಳಾದ ಜೀವರೊಳಗೆ, ಸ್ತ್ರೀಪುರುಷ ಭೇದದಲಿ–ಹೆಂಗಸರು ತಥಾ ಸ್ತ್ರೀ, ಪುರುಷರು ಅಂದರೆ, ಗಂಡಸರು–ಪುರುಷ ಎಂತ. ಈ ಭೇದದಿಂದ, ಇರ್ಬಗೆ–ಎರಡು ಪ್ರಕಾರ ಇರೋದಾಗಿ ಅದೆ. ಸ್ವರೂಪಾಪೇಕ್ಷಯಾ ಬಾಹ್ಯ ಸ್ಥೂಲದೇಹ ವಿವಕ್ಷಯಾ ಎರಡೂ ಅನ್ವಯವೇ. ಬಿಂಬನು ಸ್ತ್ರೀಯರಲ್ಲಿ ಸ್ತ್ರೀ ರೂಪದಿಂದಲೂ, ಪುರುಷರಲ್ಲಿ ಪುರುಷ ರೂಪದಿಂದಲೂ ಇರೋವನಾಗಿದ್ದಾನೆ. ಜಡ ದೊಳಗೆ–ಶುದ್ಧವಾದ ಜಡಗಳಲ್ಲಿ, ಆಹಿತಪ್ರತಿಮೆ–ಶಿಲಾ, ಲೋಹ, ದಾರು ಇವುಗಳಿಂದ ಕರಚರಣಾದ್ಯವಯವವಿಶಿಷ್ಟವಾದ ದಶವಿಧ ಪ್ರತಿಮೆಗಳು (ಆಹಿತ ಪ್ರತಿಮೆಗಳು ಇವೆ). ಸಹಜಾಚಲಗಳು–ಹ್ಯಾಂಗೆ ಉತ್ಪತ್ತಿ ಆಗಿ ಅವೊ, ಅದೇ ಪ್ರಕಾರವಾಗಿ ಇರತಕ್ಕ ಕರ ಚರಣಾದಿಗಳಿಂದ ರಹಿತವಾದ ತದನ್ಯ ಶುದ್ಧ ಜಡಗಳು, ಎಂದು–ಈ ಪ್ರಕಾರ ಇರೋ ದಾಗಿ ಅವೆ ಎಂದು, ಇರ್ಬಗೆ–ಅಚಲದಲ್ಲಿ ಎರಡು ಪ್ರಕಾರ, ತಿಳಿವುದು–ತಿಳಿಯೋವನಾಗ ಬೇಕು. ಪ್ರತೀಕದಿ–ಪೂರ್ವೋಕ್ತ ಚಲದಲ್ಲಿ ಎರಡು, ಅಚಲದಲ್ಲಿ ಎರಡು, ಅಂತು ನಾಲ್ಕು ವಿಧ ಪ್ರತೀಕದಿ, ಪಂಚ–ದೇಹಗೋಳಕ (ಒಂದು), ಜೀವಗೋಳಕ (ಎರಡು), ಗುರುಗೋಳಕ (ಮೂರು), ಪುಷ್ಕರಗೋಳಕ (ನಾಲ್ಕು), ಭಾರತೀರಮಣ ಮುಖ್ಯ ಪ್ರಾಣಗೋಳಕ (ಐದು), ಅಂತು ಒಂದೊಂದಾಗಿ ಸೇರಿ ಒಟ್ಟು ಐದು ಗೋಳಕಗಳು ಅಂದರೆ ಪಂಚ ಗೋಳಕಗಳು ತದಂತರ್ಗತ ಪರಮಾತ್ಮನ ತಿಳಿಯಬೇಕು. ಇದು ಚೇತನ ದಲ್ಲಿ ತಿಳಿಯೋ ಕ್ರಮ. ತ್ರಯ–ಅಧಿಭೂತ ಪ್ರತಿಮೆ (ಒಂದು) ಗುರುಗೋಳಕ (ಎರಡು) ಮುಖ್ಯಪ್ರಾಣಗೋಳಕ (ಮೂರು) ಜಡಗಳಲ್ಲಿ ತಿಳಿಯಬೇಕಾದ ಕ್ರಮ. ಇವು ಸರ್ವತ್ರದಲ್ಲಿ

ಚತುರ್ವಿಂಶತಿ ತತ್ವಾಭಿಮಾನಿಗಳ ಚತುರ್ವಿಂಶತಿ ಗೋಳಕತ್ವೇನ ಚಿಂತಿಸಿ, ಅಂತರ್ಗತ ಪರಮಾತ್ಮನ್ನ ಚಿಂತಿಸೋ ಕ್ರಮ ಒಂದು. ಈ ಪ್ರಕಾರ, ಸುಗೋಳಕವರಿತು–ಯೋಗ್ಯವಾದ ಚಲಾಚಲ ಅಧಿಷ್ಠಾನಗಳಲ್ಲಿ ಪೂರ್ವೋಕ್ತ ಪ್ರಕಾರ ಅರಿತು, ಭಜಿಸುತಿರು–ತದನ್ಯಗಳಾದ ನೀಚಾಧಿಷ್ಠಾನಗಳಲ್ಲಿ ತಿಳಿಯೋ ಮಾತ್ರವೇ ಹೊರತು ಭಜನಾದಿಗಳು ಇಲ್ಲ. ಲಲಿತ–ಇಂಥಾ ಪೂಜಾ ಮಾಡತಕ್ಕ ಅಧಿಕಾರಿಗಳಿಗೆ ಅತ್ಯಂತವಾಗಿ ವಶನಾಗಿ ಪ್ರತ್ಯಕ್ಷನಾಗತಾನೆ ಎಂತ ತಾತ್ಪರ್ಯ.

**ವಾರಿಜಾಸನ ವಾಯು ವೀಂದ್ರ ಉ ।**
**ಮಾರಮಣ ನಾಕೇಶ ಸ್ಮರಹಂ ।**
**ಕಾರಿಕಪ್ರಾಣಾದಿಗಳು ಪುರುಷರ ಕಳೇವರದಿ ॥**
**ತೋರಿಕೊಳದನಿರುದ್ಧ ದೋಷವಿ ।**
**ದೂರ ನಾರಾಯಣನ ರೂಪ ಶ ।**
**ರೀರಮಾನಿಗಳಾಗಿ ಭಜಿಸುತ ಸುಖವ ಕೊಡುತಿಹರು ॥ ೨೮ ॥**

ಪುರುಷರ ದೇಹಾಭಿಮಾನಿ ದೇವತೆಗಳ ಹೇಳತಾರೆ.

ವಾರಿಜಾಸನ–ಕಮಲವೇ ಆಸನವಾದ ಬ್ರಹ್ಮದೇವರು, ವಾಯು–ವಾಯುದೇವರು, ವೀಂದ್ರ–ಪಕ್ಷಿಶ್ರೇಷ್ಠರಾದ ಗರುಡದೇವರು, ಉಮಾರಮಣ–ಪಾರ್ವತೀಪತಿಯಾದ ರುದ್ರದೇವರು, ನಾಕೇಶ–ಸ್ವರ್ಗಾಧಿಪತಿಯಾದ ಇಂದ್ರದೇವರು, ಸ್ಮರ–ಮನ್ಮಥ, ಅಹಂಕಾರಿಕ ಪ್ರಾಣ–ತ್ವಗಭಿಮಾನಿಯಾದ ಅಹಂಕಾರಿಕ ಪ್ರಾಣದೇವರು, ಆದಿಗಳು–ಇವರೇ ಮೊದಲಾದ ಪುರುಷದೇವತೆಗಳು, ದೋಷವಿದೂರ–ಪಾಪಗಳಿಂದ ಕೇವಲ ದೂರನಾದ, ಅನಿರುದ್ಧ–ಅನಿರುದ್ಧನಾಮಕ ಪರಮಾತ್ಮನ ರೂಪ ಒಂದು, ನಾರಾಯಣನ–ನಾರಾಯಣ ರೂಪ ಒಂದು, ರೂಪ–ಅಂತು ಎರಡು ರೂಪಗಳು, ಪುರುಷರ ಕಳೇವರದಿ–ಪುರುಷ ಸ್ಥೂಲದೇಹದಲ್ಲಿ, ತೋರಿಕೊಳದೆ–ದೇಹಾಂತರ್ಗತ ಜೀವಗೆ ಪೂರ್ವೋಕ್ತ ದೇವತೆಗಳು, ಪರಮಾತ್ಮ ಇವರು ತೋರಿಕೊಳ್ಳದೆ, ಶರೀರಮಾನಿಗಳಾಗಿ–ಸ್ಥೂಲದೇಹಾಭಿಮಾನಿಗಳಾಗಿ, ಭಜಿಸುತ–ಅನಿರುದ್ಧ ನಾರಾಯಣ ರೂಪಗಳ, ಈ ಪೂರ್ವೋಕ್ತ ಬ್ರಹ್ಮಾದಿಗಳು ಭಜಿಸುತ್ತಾ ಇದ್ದಾರೆ. ಈ ಪ್ರಕಾರ ಇದ್ದು, ಸುಖವ ಕೊಡುತಿಹರು–ಈ ಪ್ರಕಾರ ಅನುಸಂಧಾನದಿಂದ ತಿಳಿದು, ಅಧಿಕಾರಿಗೆ ವಿಷಯಾಸಕ್ತಿ ಬಿಡಿಸಿ, ಪರಮಾತ್ಮನಲ್ಲಿ ಆಸಕ್ತಿ ಕೊಟ್ಟು ಸುಖವನ್ನು ಕೊಡುತ್ತಾ ಇರುತ್ತಾರೆ. ಜೀವನ ಸ್ವರೂಪದಲ್ಲಿ ತನ್ನಾಮದಿಂದ ಪರಮಾತ್ಮನೇ ಇರೋವನಾಗಿದ್ದಾನೆ. ಈ ದೇವತೆಗಳು ಪುರುಷಾಕಾರದಿಂದ ಇದ್ದಾರೆ.

**ಸಿರಿ ಸರಸ್ವತಿ ಭಾರತೀ ಸೌ ।**
**ಪರಣಿ ವಾರುಣಿ ಪಾರ್ವತೀಮುಖ ।**
**ರಿರುತಿಹರು ಸ್ತ್ರೀಯರೊಳಗಭಿಮಾನಿಗಳು ತಾವೆನಿಸಿ ॥**

**ಅರುಣವರ್ಣನಿಭಾಂಗ ಶ್ರೀ ಸಂ ।**
**ಕರುಷಣ ಪ್ರದ್ಯುಮ್ನ ರೂಪಗ**
**ಳಿರುಳು ಹಗಲು ಉಪಾಸನವ ಗೈವುತಲೆ ಮೋದಿಪರು ॥ ೨೯ ॥**

ಸ್ತ್ರೀಯರ ದೇಹಾಭಿಮಾನಿಗಳ ಹೇಳತಾರೆ.

ಸಿರಿ–ಪರಮಾತ್ಮನ ಪತ್ನಿಯಾದ ಶ್ರೀ ಲಕ್ಷ್ಮೀದೇವೇರು, ಸರಸ್ವತಿ–ಬ್ರಹ್ಮಪತ್ನಿ ಸರಸ್ವತೀದೇವೇರು, ಭಾರತೀ–ವಾಯುಪತ್ನಿ ಭಾರತೀದೇವೇರು, ಸೌಪರಣಿ–ಗರುಡಪತ್ನಿ ಸೌಪರಣೀದೇವೇರು, ವಾರುಣಿ–ಶೇಷಪತ್ನಿಯಾದ ವಾರುಣೀದೇವೇರು, ಪಾರ್ವತೀ–ರುದ್ರಪತ್ನಿಯಾದ ಪಾರ್ವತೀದೇವೇರು, ಮುಖರು–ಇವರೇ ಮೊದಲಾದ ಸ್ತ್ರೀದೇವತೆಗಳು, ಅರುಣವರ್ಣ–ಅರುಣ(ಸೂರ್ಯ)ವರ್ಣ ಪ್ರದ್ಯುಮ್ನ, ನಿಭಾಂಗ–ಕಾಂತಿಯುಕ್ತವಾದ ಶರೀರವುಳ್ಳ, ಸಂಕರುಷಣ–ಪೀತವರ್ಣ ಸಂಕರ್ಷಣರೂಪಿ ಪರಮಾತ್ಮ, ಪ್ರದ್ಯುಮ್ನ–ಕೆಂಪು ಛಾಯೆ ಸ್ವರ್ಣವರ್ಣ ಪ್ರದ್ಯುಮ್ನನಾಮಕ ಪರಮಾತ್ಮ, ಈ ಉಭಯರೂ, ಶ್ರೀ–ಶ್ರೀ ರೂಪಗಳ ಧರಿಸಿ, ಸ್ತ್ರೀಯರೊಳಗೆ–ಸ್ತ್ರೀಯರಲ್ಲಿ, ತಾವು–ಈ ದೇವತೆಗಳು, ಅಭಿಮಾನಿಗಳು–ಅಭಿಮಾನಿಗಳು ಎಂತ, ಎನಿಸಿ–ಅನಿಸಿಕೊಂಡವರಾಗಿ, ಇರುತಿಹರು–ಇರೋವರಾಗಿದ್ದಾರೆ. ಈ ಪ್ರಕಾರ ಇದ್ದು, ರೂಪಗಳ–ಸಂಕರ್ಷಣ, ಪ್ರದ್ಯುಮ್ನ ಸ್ತ್ರೀರೂಪಗಳನ್ನ ಅಂದರೆ ಈ ಸ್ತ್ರೀರೂಪಗಳನ್ನ, ಇರುಳು ಹಗಲು–ರಾತ್ರಿ, ಹಗಲು, ಉಪಾಸನವ ಗೈವುತಲೆ–ಉಪಾಸನೆ ಮಾಡುತ್ತಾ, ಮೋದಿಪರು–ಸಂತೋಷಪಡುತ್ತಾ ಇರೋವರಾಗಿದ್ದಾರೆ. ಈ ಪ್ರಕಾರ ಅನುಸಂಧಾನ ಉಳ್ಳವರಿಗೆ ಸಂತೋಷವೂ ಕೊಡುತಾ ಇರುತ್ತಾರೆ. ಪುರುಷ ದೇವತೆಗಳು ಸ್ತ್ರೀ ಆಕಾರದಿಂದ ಇದ್ದಾರೆ. ಪುರುಷ ಜೀವರಿಗೆ, ಪುರುಷರೂಪ ಬಿಂಬ. ಸ್ತ್ರೀ ಜೀವರಿಗೆ, ಸ್ತ್ರೀ ರೂಪ ಬಿಂಬನಾಗಿ ಪರಮಾತ್ಮ ಇದ್ದಾನೆಂತ ತಾತ್ಪರ್ಯ.

**ಕೃತಪ್ರತೀಕದಿ ಟಂಕಿ ಭಾರ್ಗವ ।**
**ಹುತವಹಾನಿಲ ಮುಖ್ಯ ದಿವಿಜರು ।**
**ತುತಿಸಿಕೊಳುತಭಿಮಾನಿಗಳು ತಾವಾಗಿ ನೆಲೆಸಿದ್ದು ॥**
**ಪ್ರತಿದಿವಸ ಶ್ರೀ ತುಲಸಿ ಗಂಧಾ ।**
**ಕ್ಷತೆ ಕುಸುಮ ಫಲ ದೀಪ ಪಂಚಾ ।**
**ಮೃತದಿ ಪೂಜಿಪ ಭಕುತರಿಗೆ ಕೊಡುತಿಹನು ಪುರುಷಾರ್ಥ ॥ ೩೦ ॥**

ಪ್ರತಿಮಾಪೂಜಾ ಕ್ರಮ ಹೇಳತಾರೆ.

ಕೃತ–ನಿರ್ಮಿತಗಳು (ಎರಡು ಪ್ರಕಾರ) ದಾವದೆಂದರೆ, ಪ್ರತೀಕದಿ–ಕರಚರಣಾದಿಗಳಿಂದ ಶಿಲ್ಪಿಯಿಂದ ನಿರ್ಮಿತವಾದ ವಿಷ್ಣುಪ್ರತೀಕ ಒಂದು, ಹುತವಹ–ದಾರುಮಥನದಿಂದ ನಿರ್ಮಿತವಾದ ಯಜ್ಞಸಂಬಂಧವಾದ ಅಗ್ನಿ ಒಂದು, ಅಂತು ಪ್ರತೀಕಗಳು ಎರಡು, ಜಡಾಧಿಷ್ಠಾನಗಳು. ಈ ಅಗ್ನಿಸಾಂಕೇತ ಜಡಾಗ್ನಿಯಲ್ಲಿ ಅಗ್ನಿಸಾಂಕೇತ ದೇವತೆ ಅಭಿಮಾನಿ, ಅನಿಲ–ಕರಚರಣಾದಿಗಳಿಂದ ಯುಕ್ತವಾದ ಲೋಹಾದಿ ವಿಷ್ಣುಪ್ರತೀಕದಲ್ಲಿ

ವಾಯುದೇವರು, ಅಭಿಮಾನಿಗಳು ತಾವಾಗಿ–ಈ ಪ್ರಕಾರ ಅಭಿಮಾನಿಗಳು ತಾವೇ ಆಗಿ ಇದ್ದಾರೆ. ಮುಖ್ಯದಿವಿಜರು–ಈ ವಿಧ ಉಭಯಪ್ರತೀಕದಲ್ಲಿ ಮುಖ್ಯರಾದ ತತ್ವಾಭಿಮಾನಿ ದೇವತೆಗಳು ಇಪ್ಪತ್ತುನಾಲ್ಕು ಮಂದಿ, ಇಪ್ಪತ್ತುನಾಲ್ಕು ಗೋಳಕದಿಂದ ತಾರತಮ್ಯಾನುಸಾರ ಇದ್ದಾರೆ. ಆದಿಗೋಳಕ ಪ್ರತಿಮಾ, ಅದರಲ್ಲಿ ಪುಷ್ಕರನಾಮಕ ಕರ್ಮಾಭಿಮಾನಿ ಪ್ರಥಮಗೋಳಕ. ಅಂತ್ಯಗೋಳಕ ಭಾರತೀರಮಣ ಮುಖ್ಯಪ್ರಾಣಗೋಳಕ. ಈ ಮುಖ್ಯಪ್ರಾಣ ಗೋಳಕಾಂತರ್ಗತನಾಗಿ, ಟಂಕಿ–ಟಂಕಿ ನಾಮಕ ಪರಮಾತ್ಮ ಕರಚರಣಗಳಿಂದ ಯುಕ್ತವಾದ ಪ್ರತಿಮಾದಲ್ಲೂನೂ, ಭಾರ್ಗವ–ಪರಶುರಾಮದೇವರು ಅಗ್ನ್ಯಂತರ್ಗತನಾಗಿ, ನೆಲೆಸಿದ್ದು–ಈ ಪ್ರಕಾರ ಭಾರತೀರಮಣ ಮುಖ್ಯಪ್ರಾಣಗೋಳಕದಲ್ಲಿ ನೆಲೆಸಿದ್ದು, ತುತಿಸಿಕೊಳುತ–ತದ್ಗತ ದೇವತೆಗಳಿಂದ ಸ್ತೋತ್ರಮಾಡಿಸಿಕೊಳ್ಳುತ್ತ ಇರೋವನಾಗಿದ್ದಾನೆ. ಅಗ್ನ್ಯಂತರ್ಗತ ಉಪಾಸಕರು ಕೇವಲ ಅಧಿಕಾರಿಗಳು, ಪ್ರತಿಮಾಂತರ್ಗತ ಉಪಾಸಕರು ಕೆಲವರು. ಕರಚರಣಾದಿ ಪ್ರತೀಕೋಪಾಸನ, ಅಪರೋಕ್ಷಕ್ಕೆ ಪ್ರಥಮ ಸೋಪಾನ. ಈ ಉಪಾಸನ ಹೊರತು ಅಪರೋಕ್ಷವಿಲ್ಲ. ೨೫ನೇ ಶ್ಲೋಕದಲ್ಲಿ ಹೇಳಿದ ಮ್ಯಾರಿಗೆ ಬಿಂಬಾವಾಹನ ಮಾಡಿ ಬಾಹ್ಯದಲ್ಲಿ ಆ ಜಡಪ್ರತೀಕವನ್ನ ತನ್ನ ಎದುರಿಗೆ ಇಟ್ಟುಕೊಂಡು, ಅತಿ ಆಸಕ್ತಿಯಿಂದ ಉಂಗುಷ್ಟದಾರಭ್ಯ ಶಿರಃಪರಿಯಂತ ಪ್ರತಿ ಅವಯವ ರೇಖೋಪರೇಖೆಗಳ ನೋಡುತ್ತಾ, ಪ್ರತಿದಿವಸ–ಪ್ರತಿದಿನದಲ್ಲೂ ಈ ಪ್ರಕಾರ ಮಾಡುತ್ತಾ, ಶ್ರೀತುಲಸಿ–ಪೂಜೋಪಯೋಗ್ಯವಾದ ಜಡಸಂಬಂಧ ತುಲಸಿ, ಗಂಧ–ಸುಗಂಧ, ಅಕ್ಷತೆ–ತಂಡುಲನಿರ್ಮಿತ ಅಕ್ಷತೆ, ಹರಿದ್ರಾನಿರ್ಮಿತ ಅಕ್ಷತೆ, ಕುಸುಮ–ಪೂಜೋಪಯೋಗ್ಯ ಪರಿಮಳಯುಕ್ತವಾದ ಪುಷ್ಪ, ಫಲ–ಅನಿಷಿದ್ಧಗಳಾದ ಸುರಸೋಪೇತವಾದ ಫಲಗಳು, ದೀಪ–ಘೃತ, ತೈಲ, ಕರ್ಪೂರ ಇವುಗಳಿಂದ ನಿರ್ಮಿತ ದೀಪಗಳು, ಪಂಚಾಮೃತದಿ–ಗೋಸಂಬಂಧವಾದ ಕ್ಷೀರ, ದಧಿ, ಘೃತ, ತದನ್ಯಗಳಾದ ಶರ್ಕರ, ಕದಳೀಫಲ, ಅಂತು ಅಮೃತಸಾಂಕೇತಗಳಾದ ಐದರಿಂದಲೂ, ಪೂರ್ವೋಕ್ತ ತುಲಸ್ಯಾದಿಗಳಿಂದಲೂ, ಶುದ್ಧೋದಕದಿಂದಲೂ, ಪೂಜಿಪ–ಪ್ರತಿಮಾಂತರ್ಗತ ತದಾಕಾರ ಭಗವಂತನ ಚಿಂತಿಸಿ, ಅದೇ ಪ್ರಕಾರ ಪೂಜಾಸಾಧನಗಳ ಅಂತರ್ಗತ ಭಗವಂತನ ಚಿಂತಿಸಿ, ಜಡಪದಾರ್ಥಗಳಿಂದ ಜಡ ಪ್ರತಿಮಾನ ಪೂಜಾ ಮಾಡತಾ, ಹಾಂಗೇ ಪ್ರತಿಮಾ ಅಂತರ್ಗತ ರೂಪಕ್ಕೆ ಪೂಜಾ ಸಾಧನಾಂತರ್ಗತ ಭಗವದ್ರೂಪಗಳಿಂದ ಭಗವದ್ರೂಪಗಳಿಗೆ ಪೂಜಾ ಮಾಡತಾ, ಇದೇ ಪ್ರತಿಮಾನ ವಾಸನಾದಿಂದ ಹೃದಯಾಕಾಶದಲ್ಲಿ ಮಾಡಿಕೊಂಡು ವಾಸನಾದ್ರವ್ಯಗಳ ನಿರ್ಮಿತಮಾಡಿ ಪೂರ್ವೋಕ್ತ ಪೂಜಾ ಮಾಡತಕ್ಕ, ಭಕುತರಿಗೆ–ಭಕ್ತರಾದವರಿಗೆ, ಪುರುಷ–ಪುರುಷಶ್ರೇಷ್ಠನಾದ ಪರಮಾತ್ಮ, ಅರ್ಥ–ಪ್ರಯೋಜನವು, ಎಂಥಾ ಪ್ರಯೋಜನವೆಂದರೆ, ಪ್ರಥಮತಃ ವಾಸನಾಪರೋಕ್ಷ, ನಂತರ, ಪ್ರತಿಮಾಂತರ್ಗತ ತದಾಕಾರ ಚಿದಾನಂದ ಅಪರೋಕ್ಷಾ, ನಂತರ, ಸ್ಥೂಲದೇಹಗತ ಜೀವಾಕಾರ ಅಗ್ರೇಶನಾಮಕ ಭಗವಂತನ ಅಪರೋಕ್ಷ, ಕ್ರಮಾತ್ ಜೀವಾಂತರ್ಗತ ಪರಮಾತ್ಮನ ಅಪರೋಕ್ಷ. ಇಂಥಾ ಪ್ರಯೋಜನವನ್ನು, ಕೊಡುತಿಹನು–ಕೊಡತಾ ಇರುತ್ತಾನೆಂತ ತಾತ್ಪರ್ಯ.

**ನಗಗಳಭಿಮಾನಿಗಳೆನಿಪ ಸುರ ।**
**ರುಗಳು ಸಹಜಾಚಲಗಳಿಗೆ ಮಾ ।**
**ನಿಗಳೆನಿಸಿ ಶ್ರೀವಾಸುದೇವನ ಪೂಜಿಸುತಲಿಹರು ॥**
**ಸ್ವಗತಭೇದವಿವರ್ಜಿತನ ನಾಲ್ ।**
**ಬಗೆ ಪ್ರತೀಕದಿ ತಿಳಿದು ಪೂಜಿಸೆ ।**
**ವಿಗತ ಸಂಸಾರಾಬ್ಧಿ ದಾಟಿಸಿ ಮುಕ್ತರನು ಮಾಳ್ಪ ॥ ೩೧ ॥**

ನಾಲ್ಕು ವಿಧ ಪ್ರತಿಮಾಂತರ್ಗತನಾದ ಭಗವದುಪಾಸನಾ ಮಾಡಬೇಕೆಂದು ಹೇಳತಾರೆ.

ನಗಗಳಭಿಮಾನಿಗಳೆನಿಪ–ಮೇರು ಮಂದರಾದಿ ಹಿಮಾಚಲಾದಿ ಪರ್ವತಗಳಿಗೆ ಅಭಿಮಾನಿಗಳು ಎನತಕ್ಕ ತನ್ನಾಮಕ, ಆಯಾ ಪರ್ವತಾಭಿಮಾನಿಗಳಾದ, ಸುರರುಗಳು–ದೇವತೆಗಳು, ಸಹಜಾಚಲಗಳಿಗೆ–ಕರಚರಣಾದಿವಿಶಿಷ್ಟವಾದ ಪ್ರತಿಮಾಗಳ ವ್ಯತಿರಿಕ್ತ ಕರಚರಣಾದಿ ಶೂನ್ಯಗಳಾದ, ಜಗತ್ತಿನಲ್ಲಿ ವಿದ್ಯಮಾನಗಳಾದ ಪೂರ್ವೋಕ್ತ ಪರ್ವತಾದಿಗಳಿಗೆ ಅನ್ಯವಾದ ಶುದ್ಧ ಜಡಗಳು ದಾವದವೆ, ಇವೇ ಸಹಜಾಚಲಗಳು. ಎಂದರೆ ಹ್ಯಾಂಗೆ ಹುಟ್ಟಿತೋ ಹಾಂಗೆ ಇರತಕ್ಕದ್ದೆಂತ ತಾತ್ಪರ್ಯ. ಇಂಥಾ ಸಹಜಾಚಲಗಳಿಗೆ, ಮಾನಿಗಳೆನಿಸಿ–ಅಭಿಮಾನಿಗಳು ಎಂತ ಎನಿಸಿ, ಶ್ರೀವಾಸುದೇವನ–ತದಂತರ್ಗತನಾದ ಕಾಂತಿಯುಕ್ತನಾದ ವಾಸುದೇವನ, ಪೂಜಿಸುತಲಿಹರು–ಪೂಜಿಸುತ್ತಾ ಇರೋವರಾಗಿ ಇದ್ದಾರೆ. ನಾಲ್‌ಬಗೆ ಪ್ರತೀಕದಿ–ನಾಲ್ಕು ವಿಧವಾದ ಪ್ರತೀಕದಲ್ಲಿ, ನಾಲ್ಕು ದಾವದೆಂದರೆ :– ಪೂರ್ವೋಕ್ತ ಜಡಪ್ರತಿಮಾ, ಚೇತನ ಪ್ರತಿಮಾ, ಎರಡರ ಒಳಗೆ ಕರಚರಣಾದಿಗಳಿಂದ ಸಹಿತ ಪ್ರತಿಮಾ ೧, ತದನ್ಯ ಸಹಜಾಚಲ ಪ್ರತಿಮಾಗಳ ಸಹ ನಿಜವಾಗಿ ಸನ್ನಿಧಾನ ಇರುವ ತೀರ್ಥಕ್ಷೇತ್ರಾದಿಗಳು ೧, ಅಂತು ೨ ಜಡಪ್ರತಿಮಾ, ಚೇತನರಲ್ಲಿ ಎರಡು ವಿಧ ಪ್ರತಿಮಾ ೧ ಪುರುಷರು, ೨ ಸ್ತ್ರೀಯರು ಅಂತು ಎರಡು. ಅಂತು ನಾಲ್ಕು ವಿಧ ಪ್ರತೀಕದಲ್ಲಿ, ಸ್ವಗತಭೇದವಿವರ್ಜಿತನ–ಪರಸ್ಪರ ಅಧಿಷ್ಠಾನಗತ ರೂಪಗಳಿಗೆ ಪರಸ್ಪರ ಭೇದವೇನು, ಅಧಿಷ್ಠಾನಗತ ರೂಪಗಳಿಗೂ, ಮೂಲ ರೂಪಗಳಿಗೂ ಪರಸ್ಪರ ಭೇದವೇನು, ಇಂಥಾ ಭೇದದಿಂದ ರಹಿತನಾದ ಪರಮಾತ್ಮನ, ತಿಳಿದು–ಅಂತರ್ಗತ ತಿಳಿದು, ಪೂಜಿಸೆ–ಸಾರಿಸೋಣ, ಬಳಿಯೋಣ, ಒಗಿಯೋಣ ಮೊದಲಾದ ಯಾವತ್ತೂ ಕೆಲಸಗಳು ಆಯಾ ಅಂತರ್ಗತ ಪರಮಾತ್ಮನ ಸೇವಾ ಎಂದು ಪೂಜಾ ಮಾಡಿದರೆ, ಇಂಥಾ ಅಧಿಕಾರಿಯ, ವಿಗತ–ಹೋಗಲ್ಪಟ್ಟ ಅಹಂಮಮತಾದಿಗಳಿಂದ ಯುಕ್ತನಾಗಿ ಮಾಡಿ, ಸಂಸಾರಾಬ್ಧಿ ದಾಟಿಸಿ–ಸಂಸಾರಕ್ಕೆ ಕಾರಣವಾದ ಲಿಂಗದೇಹಾಖ್ಯ ಸಮುದ್ರವನ್ನ ವಿರಜಾ ಸ್ನಾನ ದ್ವಾರಾ ದಾಟಿಸಿ, ಮುಕ್ತರನು ಮಾಳ್ಪ–ಮೋಕ್ಷಯುಕ್ತರನ್ನಾಗಿ ಮಾಡತಾನೆ. ಈ ಪ್ರಕಾರ ನಾಲ್ಕು ವಿಧ ಪ್ರತಿಮಾಂತರ್ಗತ ಭಗವತ್ಪೂಜಾ ಎಂತ ತಾತ್ಪರ್ಯ.

**ಆವ ಕ್ಷೇತ್ರಕೆ ಪೋದರೇನಿ ।**
**ಸ್ನಾವ ತೀರ್ಥದಿ ಮುಣಗಲೇನಿ ।**
**ಸ್ನಾವ ಜಪ ತಪ ಹೋಮ ದಾನವ ಮಾಡಿ ಫಲವೇನು ॥**
**ಶ್ರೀವರ ಜಗನ್ನಾಥವಿಠಲನ ।**
**ಈ ವಿಧದಿ ಜಂಗಮ ಸ್ಥಾವರ ।**
**ಜೀವರೊಳು ಪರಿಪೂರ್ಣನೆಂದರಿಯದಿಹ ಮಾನವರು ॥ ೩೨ ॥**

"ಅಂತು ಸಂಧಿ ೧೧ಕ್ಕೆ ಮಂಗಳ ಮಹಾ" ಜ್ಞಾನಶೂನ್ಯನಾದವಗೆ ದಾವ ಸತ್ಕರ್ಮವೂ ಫಲವಾಗೋದಿಲ್ಲ, ಎಂತ ಹೇಳತಾರೆ.

ಆವಕ್ಷೇತ್ರಕ್ಕೆ ಪೋದರೇನು—ಬದರ್ಯಾದಿ (ಬದರಿ ಆದಿ) ದಾವ ಕ್ಷೇತ್ರಕ್ಕೆ ಹೋದರೇನು, ಇನ್ನಾವ ತೀರ್ಥದಿ ಮುಣಗಲೇನು—ಇನ್ನೂ ಗಂಗಾದಿ ದಾವ ತೀರ್ಥದಲ್ಲಿ ಮುಣಗಿದರೇನು, ಇನ್ನಾವ ಜಪತಪ—ಮತ್ತು ತಂತ್ರಸಾರೋಕ್ತ ದಾವ ಜಪ ಮಾಡಿದರೇನು, ತಪೋ ರೂಪವಾದ ಭಗವದ್ಧ್ಯಾನ ಮಾಡಿದರೇನು, ಹೋಮ—ಯಜ್ಞಯಾಗಾದಿ ಹೋಮ ಮಾಡಿದರೇನು, ದಾನವ—ನಾನಾ ವಿಧಗಳಾದ ದಾನಗಳನ್ನು, ಮಾಡಿ ಫಲವೇನು—ಇಂಥಾದ್ದು ಅನೇಕಗಳ ಮಾಡಿ ಫಲವಿಲ್ಲ. ಯಾತರಿಂದ ಅಂದರೆ, ಶ್ರೀವರ—ಲಕ್ಷ್ಮೀಪತಿಯಾದ, ಜಗನ್ನಾಥ ವಿಠಲನ—ಜಗತ್ತಿಗೇ ನಾಥನಾದ ವಿಠಲ ಸಾಂಕೇತನಾದ ಪರಮಾತ್ಮನ, ಈ ವಿಧದಿ—ಈ ಪೂರ್ವೋಕ್ತ ಪ್ರಕಾರ, ಜಂಗಮ—ಜಂಗಮ ಜೀವರೊಳು, ಸ್ಥಾವರ ಜೀವರೊಳು—ವೃಕ್ಷಾದಿ ಜಡಜೀವರೊಳು, ಶುದ್ಧ ಜಡಜೀವರೊಳು, ಪರಿಪೂರ್ಣನೆಂದು—ಸಂಪೂರ್ಣನಾಗಿ ವ್ಯಾಪಕನಾಗಿದ್ದಾನೆ ಎಂತ, ಅರಿಯದಿಹ—ನಾನು ಅಸ್ವತಂತ್ರ ಎಂತಲೂ ತಿಳಿಯದೇ ಇರತಕ್ಕ, ಮಾನವರು—ಮನುಷ್ಯರು ಏನು ಸತ್ಕರ್ಮ ಮಾಡಿದರೂ ಫಲವಿಲ್ಲ ಎಂತ ತಾತ್ಪರ್ಯ.

ಪ್ರಮಾಣ "ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ। ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್" ಎಂಬ ಗೀತಾರ್ಥ.

ದಶವಿಧ ಪ್ರತಿಮಾ ಲಕ್ಷಣ ದಾವದೆಂದರೆ—: ಭಾಗವತ ಏಕಾದಶಸ್ಕಂಧ ೨೭ನೇ ಅಧ್ಯಾಯ ೧೨ನೇ ಶ್ಲೋಕ :—

"ಶೈಲೀ ದಾರುಮಯೀ ಲೌಹೀ ಲೇಪ್ಯಾ ಲೇಖ್ಯಾ ಚ ಸೈಕತೀ ॥
ಮನೋಮಯೀ ಮಣಿಮಯೀ ಪ್ರತಿಮಾಷ್ಟವಿಧಾ ಸ್ಮೃತಾ ॥ ೧೨ ॥

ಚಲಾಚಲೇತಿ ದ್ವಿವಿಧಾ ಪ್ರತಿಷ್ಠಾ ಜೀವಮಂದಿರಂ ।
ಉದ್ವಾಸಾವಾಹನೇನ ಸ್ತಃ ಸ್ಥಿರಾಯಾಮುದ್ಧವಾರ್ಚನೇ ॥ ೧೩ ॥

ಇದಕ್ಕೆ ಅರ್ಥ :– ಆರ್ಯಾಯಾಮಿತ್ಯುಕ್ತ ಪ್ರತಿಮಾಭೇದಮಾಹ|| ಶೈಲೀತಿ.

೧. ಶೈಲೀ–ಶಿಲಾಮಯಿೀ. ಶಿಲಾದಿಂದ ಕೃತವಾದ ಪ್ರತಿಮೆಗಳು

೨. ದಾರುಮಯೀ–ವೃಕ್ಷ ಸಂಬಂಧವಾದ ಪ್ರತಿಮಾ.

೩. ಲೌಹೀ–ಕಾಂಸ್ಯ, ತಾಮ್ರಾದಿಗಳಿಂದ ನಿರ್ಮಿತವಾದ ಪ್ರತಿಮಾ.

೪. ಲೇಪ್ಯಾ–ಔಷಧರಸಸಂಲಿಪ್ತವಾದ ಪದಾರ್ಥದಿಂದ ಆಕಾರದಿಂದಿರುವ ಪ್ರತಿಮಾ.

೫. ಲೇಖ್ಯಾ–ಪಟಾದಿ ಲಿಖಿತ ಚಿತ್ರ ಪ್ರತಿಮಾ.

೬. ಸೈಕತೀ–ತತ್ತತ್ಕಾಲೋಚಿತವಾಗಿ ಉಸುವಿನಿಂದಾಗಲೀ ಅಥವಾ ಮೃಣ್ಮಯ ಪ್ರತಿಮಾ.

೭. ಮನೋಮಯೀ–“ಧ್ಯಾನಕಾಲೋಚಿತಪ್ರತಿಬಿಂಬಾಕೃತಿ” ಎಂದರೆ ವಾಸನಾ ಮಯ ಪ್ರತೀಕಾ ಅಂದರೆ ಪ್ರತಿಮಾ.

೮. ಮಣಿಮಯೀ–ಸೂರ್ಯಕಾಂತಾದಿ ವಿರಚಿತ ಕುಂಭಾದಿಗಳಲ್ಲಿ ಆವಾಹನ ಮಾಡಿರುವ ಪ್ರತಿಮಾ. ಇದುವರೆಗೆ ಶ್ಲೋಕದ ರೀತಿಯಾಗಿ ಎಂಟು ವಿಧ ಪ್ರತಿಮಾ ಆಯಿತು.

೯. ಜೀವಾಧಿಷ್ಠಾನವಾದದ್ದು ಎಂದರೆ ಇದರಲ್ಲಿ ಪುರುಷಾಧಿಷ್ಠಾನ, ಸ್ತ್ರೀ ಅಧಿಷ್ಠಾನ ಎಂತ. ಪುರುಷಾಧಿಷ್ಠಾನ ಎಂದರೆ ಅಧಿಕಾರಿಯ ಸ್ವೋತ್ತಮಾಧಿಷ್ಠಾನದಲ್ಲಿ ರುವ ಸ್ಥೂಲದೇಹಾಂತರ್ಗತ ಪ್ರತಿಮಾ.

೧೦. ಸ್ತ್ರೀ ಅಧಿಷ್ಠಾನ ಎಂದರೆ ಅಧಿಕಾರಿಯಾದ ತನಗೆ ಉತ್ತಮಾಧಿಷ್ಠಾನದಲ್ಲಿ ಸ್ತ್ರೀಯಲ್ಲಿರುವ ಸ್ಥೂಲರೂಪ ಪ್ರತಿಮಾ. ಅಂತೂ ಹತ್ತು ವಿಧ ಪ್ರತಿಮಾ ಚಲ ಪ್ರತಿಮಾ ಎಂತಲೂ, ಅಚಲ ಪ್ರತಿಮಾ ಎಂತಲೂ ಎರಡು ಪ್ರಕಾರ. ಅಚಲ ಪ್ರತಿಮಾ ಎರಡು ವಿಧ ಎಂತ ತಿಳಿಯಬೇಕು.

## ೧೧ನೇ ಸಂಧಿಯಲ್ಲಿ ಮುಖ್ಯವಾದ ವಿಚಾರಗಳು

೪ನೇ ಶ್ಲೋಕದಲ್ಲಿ ೭೨,೦೦೦ ಭಗವದ್ರೂಪಗಳ ಹೆಸರು.

೧೦ನೇ ಶ್ಲೋಕದಲ್ಲಿ ಜ್ಞಾನೇಂದ್ರಿಯಗಳಿಗೆ ತನ್ಮಾತ್ರಗಳ ಗೋಚರಾನುಸಂಧಾನ.

೧೧ನೇ ಶ್ಲೋಕದಲ್ಲಿ ವಿಷಯಗಳು ಇಂದ್ರಿಯಗಳಿಗೆ ಗೋಚರ ವಿಚಾರ.

೧೩ನೇ ಶ್ಲೋಕದಲ್ಲಿ ಪ್ರೇರ್ಯ ಪ್ರೇರಣೆ ವಿಚಾರ.

೧೪ರಲ್ಲಿ ಜೀವಾಂತರ್ಯಾಮಿ ವಾಯುದೇವರ ವಿಚಾರ.

೧೫ರಲ್ಲಿ ದ್ವಂದ್ವಕರ್ಮ. ಸ್ವೇಚ್ಛಾ ವಿಚಾರ ಮಾಡು. ಫಲಾಪೇಕ್ಷೆ ಬೇಡ. ಕರ್ಮಗಳೇ ಪೂಜಾದ್ರವ್ಯ. ಕರ್ಮವೇ ಪ್ರತಿಮಾ.

೨೨ರಲ್ಲಿ ನಿರಂಶರಿಗೆ ಎರಡನೇ ಕಲ್ಪದಲ್ಲಿ ಮುಕ್ತಿ. ಜೀವಾಂತರ್ಯಾಮಿ ವಾಯು ನಿಯಾಮಕ. ಮುಕ್ತಿಯಲ್ಲಿ ಗುದ ಉಪಸ್ಥಗಳ ಕಾರ್ಯ.

೨೩ರಲ್ಲಿ ದ್ವಂದ್ವರಸ—ದ್ವಂದ್ವಕರ್ಮ ಅರ್ಪಣೆ.

೨೪ರಲ್ಲಿ ತುಲಸೀ ವಿಚಾರ—ವ್ಯತಿರೇಕ ಪೂಜಾ

೩೧ರಲ್ಲಿ ನಾಲ್ಕು ವಿಧ ಪ್ರತಿಮಾ ವಿಚಾರ. ಅದರಿಂದ ಹತ್ತು ವಿಧ ಕೂಡ ಹೇಳಲ್ಪಟ್ಟಿದು.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ಸ್ಥಾವರಜಂಗಮಸಂಧಿವ್ಯಾಖ್ಯಾನಂ ಸಂಪೂರ್ಣಂ**

|| ಶ್ರೀ ಕೃಷ್ಣಾರ್ಪಣಮಸ್ತು ||

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಹನ್ನೆರಡನೆಯ ಸಂಧಿ

## ನಾಡೀಪ್ರಕರಣ ಸಂಧಿ

**ಹರಿಕಥಾಮೃತಸಾರ ಗುರುಗಳ ।**
**ಕರುಣದಿಂದಾಪನಿತು ಪೇಳುವೆ ।**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು || ಪ ||**

**ಮೂಲ :**

**ವಾಸುದೇವನು ಪ್ರಾಣಮುಖ ತ ।**
**ತ್ವೇಶರಿಂದಲಿ ಸೇವೆ ಕೈಕೊಳು ।**
**ತೀ ಶರೀರದೊಳಿಪ್ಪ ಮೂವತ್ತಾರು ಸಾಹಸ್ರ ||**
**ಈ ಸುನಾಡಿಗಳೊಳಗೆ ಶ್ರೀ ಭೂ ।**
**ಮಿ ಸಮೇತ ವಿಹಾರಗೈವ ಪ ।**
**ರೇಶನಮಲ ಸುಮೂರ್ತಿಗಳ ಚಿಂತಿಸುತ ಹಿಗ್ಗುತಿರು || ೧ ||**

**ಟೀಕಾ :**

ಸ್ಥೂಲದೇಹಗತ ನಾಡೀ ಅಂತರ್ಗತ ಭಗವದ್ರೂಪಗಳ ಉಪಾಸನಾ ಮಾಡೆಂದು ಹೇಳತಾರೆ. (ಪ್ರಥಮಸಂಪುಟ ಭೋಜನರಸವಿಭಾಗ ಸಂಧಿಯಲ್ಲಿ ೩, ೪ನೇ ಶ್ಲೋಕಗಳು, ಪುಟ 116-118 ನೋಡಿರಿ).

ವಾಸುದೇವನು_ತುರ್ಯನಾಮಕ ವಾಸುದೇವನು, ಶ್ರೀ ಭೂಮೀ ಸಮೇತ_ಶ್ರೀ ದೇವಿಯರು, ಭೂದೇವಿಯರು, ಈ ಉಭಯರಿಂದ ಸಮೇತನಾಗಿ, ಪ್ರಾಣಮುಖ_ಪ್ರಾಣ ದೇವರೇ ಮೊದಲಾದ, ತತ್ವೇಶರಿಂದಲಿ_ತತ್ವೇಶರಿಂದ ಸಹಿತನಾಗಿ (ಇವರುಗಳಿಂದಲಿ), ಸೇವೆ ಕೈಕೊಳುತ_ಸೇವೆ ಸ್ವೀಕಾರ ಮಾಡುತ್ತಾ, ಈ ಶರೀರದೊಳಿಪ್ಪ_ಈ ಸ್ಥೂಲಶರೀರದಲ್ಲಿ ಇರತಕ್ಕ, ಮೂವತ್ತಾರು ಸಾಹಸ್ರ_ಎಡಬಲ ಸಾಂಕೇತದಿಂದ ದೇಹಕ್ಕೆ ಭಾಗಗಳು ಎರಡು. ಅದರಲ್ಲಿ ಒಂದೊಂದು ಭಾಗಕ್ಕೆ ಮೂವತ್ತಾರು ಸಹಸ್ರ ಸಂಖ್ಯಾದ ಪ್ಯಾರಿಗೆ ಇರತಕ್ಕ, ಈ ಸುನಾಡಿಗಳೊಳಗೆ_ಈ ವಿದ್ಯಮಾನ ನಾಡಿಗಳೊಳಗೆ ಮತ್ತು ಇಷ್ಟು ನಾಡಿಗಳೊಳಗೂ, ಶ್ರೀ ಭೂಮೀ ಸಮೇತ_ಶ್ರೀದೇವೇರ ಹಾಂಗೂ ಭೂಮಿದೇವೇರ ಸಹಿತ, ವಿಹಾರಗೈವ_ಸಂಚಾರಮಾಡುವ, ಪರೇಶನ_ಅಸ್ವತಂತ್ರ ಚೇತನರೊಳಗೆ ಉತ್ತಮರಾದ

ರಮಾದೇವಿಯರಿಗೆ ಈಶನಾದ, ಅಮಲ–ನಿರ್ದೋಷಗಳಾದ, ಶುಭ್ರಗಳಾದ, ಸುಮೂರ್ತಿ ಗಳ–ಪ್ರತೀ ನಾಡೀ ಒಳಗೆ ವಾಸುದೇವನ ದಿವ್ಯಮೂರ್ತಿಗಳ, ಚಿಂತಿಸುತ–ಅನುಸಂಧಾನ ದಿಂದ ಸ್ಮರಿಸುತ್ತ, ಹಿಗ್ಗುತಿರು–ಸಂತೋಷಿಸುತ್ತಾ ಇರುವನಾಗು.

**ಚರಣಗಳೊಳಿಹ ನಾಡಿಗಳು ಹ ।**
**ನ್ನೆರಡುಸಾವಿರ ಮಧ್ಯದೇಹದೊ ।**
**ಳಿರುತಿಹವು ಹದಿನಾಲ್ಕು ಬಾಹುಗಳೊಳಗೆ ಈರೆರಡು ॥**
**ಶಿರದೊಳಾರುಸಾಹಸ್ರ ಚಿಂತಿಸಿ ।**
**ಇರುಳುಹಗಲಭಿಮಾನಿ ದಿವಿಜರ**
**ನರಿತುಪಾಸನೆಗೈವರಿಳೆಯೊಳು ಸ್ವರ್ಗವಾಸಿಗಳು ॥ ೨ ॥**

ಒಂದು ಭಾಗದಲ್ಲಿ ದಾವ ಪ್ರದೇಶದಲ್ಲಿ ಎಷ್ಟೆಷ್ಟು ನಾಡಿಗಳು ಇರೋದೂನೂ, ನಾಡ್ಯಂತರ್ಗತ ಉಪಾಸಕರು ದೇವತೆಗಳೆಂತಲೂನೂ ಹೇಳತಾರೆ.

ಚರಣಗಳೊಳಿಹ–ಕಟಿ ಆರಂಭಮಾಡಿ ಪಾದಾಂತವರಿಗೂ ಇದರ ಒಳಗೆ ಇರತಕ್ಕ, ನಾಡಿಗಳು–ಪಾದಾಧಾರ ನಾಡಿಗಳು, ಹನ್ನೆರಡುಸಾವಿರ–೧೨,೦೦೦ ನಾಡಿಗಳು, ಮಧ್ಯ ದೇಹದೊಳು–ಕಂಠ ಆರಂಭಮಾಡಿ ಕಟ್ಯಂತ ಮಧ್ಯದೇಹದೊಳು, ಹದಿನಾಲ್ಕು–೧೪,೦೦೦ ನಾಡಿಗಳು, ಇರುತಿಹವು–ಇರೋದಾಗಿ ಅವೆ. ಬಾಹುಗಳೊಳಗೆ–ಭುಜ ಆರಂಭ ಮಾಡಿ ಹಸ್ತಪರಿಯಂತ ಕೈಯಲ್ಲಿ, ಈರೆರಡು–ಎರಡು ಎರಡು ಸಾವಿರಗಳು, ೪,೦೦೦ ನಾಡಿಗಳು, ಶಿರದೊಳು–ಶಿರಸ್ಸಿನ ಒಳಗೆ, ಆರು ಸಾಹಸ್ರ–೬,೦೦೦ ನಾಡಿಗಳ, ಚಿಂತಿಸಿ–೧೨,೦೦೦ ಚರಣಗಳಲ್ಲಿ, ೧೪,೦೦೦ ಮಧ್ಯದೇಹದಲ್ಲಿ, ೪,೦೦೦ ಬಾಹುಗಳಲ್ಲಿ, ೬,೦೦೦ ಶಿರಸ್ಸಿನಲ್ಲಿ, ಅಂತು ೩೬,೦೦೦, ದೇಹದೊಳಗೆ ಒಂದು ಭಾಗದಲ್ಲಿ ಇರೋ ನಾಡಿಗಳು, ಎರಡನೇ ಭಾಗದಲ್ಲಿ ಇರತಕ್ಕ ನಾಡಿಗಳು ೩೬,೦೦೦. ಅಂತು ಒಟ್ಟು ೭೨,೦೦೦ ನಾಡಿಗಳು, ಎಡ ಬಲದೊಳಗೆ ಚಿಂತಿಸಿ, ಇರುಳು–ಎಡಭಾಗಗತ ನಾಡಿಗಳೊಳಗೆ ರಾತ್ರಿ ಅಭಿಮಾನಿ ದೇವತೆ ಗಳು, ಹಗಲು–ಬಲಭಾಗಗತ ನಾಡಿಗಳೊಳಗೆ ಹಗಲು ಅಭಿಮಾನಿ ದೇವತೆಗಳು, ಅಭಿ ಮಾನಿ ದಿವಿಜರನು–ಈ ಪ್ರಕಾರ ಅಭಿಮಾನಿಗಳಾದ ದೇವತೆಗಳ, ಅರಿತು–ತಿಳಿದವನಾಗಿ, ಉಪಾಸನೆಗೈವರು–ಆಯಾ ದೇವತಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಈ ವಾಸುದೇವನ ಉಪಾಸನಾ ಮಾಡತಕ್ಕವರು ದಾರೋ ಅವರು, ಇಳೆಯೊಳು– ಭೂಮಿಯೊಳು, ಸ್ವರ್ಗವಾಸಿಗಳು–ಸ್ವರ್ಗವಾಸಿಗಳಾದ ದೇವತೆಗಳು.

**ವಿಶೇಷಾರ್ಥ :–** ಹಗಲಭಿಮಾನಿಗಳು ಆಜಾನಜ ಪುರುಷದೇವತೆಗಳು. ರಾತ್ರಿ ಅಭಿಮಾನಿಗಳು ಅವರ ಪತ್ನಿಯರು ಎಂತ ತಿಳಿಯಬೇಕು. ಇಳೆಯೊಳಗೆ ಅಂದರೆ ಈ ಭರತ ಖಂಡ ಭೂಮಿಯಲ್ಲಿ ಸಾಧನಭೂಮಿ ಎಷ್ಟೆಂದರೆ ವಿವರ :–೧೦೦೦ ಯೋಜನ ಸಾಧನ

ಭೂಮಿ. ಅವಶಿಷ್ಟ ಭೋಗಭೂಮಿ, ೧೦೦ ಯೋಜನ ಭೂಮಿ. ಸಗರರಾಯನ ಮಕ್ಕಳು ಖನನಮಾಡಿ ಸಮುದ್ರದೊಳಗೆ ಸೇರಿಹೋದದ್ದು, ೪೫೦ ರಾಮೇಶ್ವರಗತ. ನವಪಾಷಾಣ ಆರಂಭಮಾಡಿ ಚಿಕ್ಕ ಬದರಿ ಪರಿಯಂತ ೧೦೦. ನವಪಾಷಾಣ ಆರಂಭಮಾಡಿ ಕೃಷ್ಣಾ ಪರಿಯಂತ ಮಧ್ಯಮ ೨೫೦. ಕೃಷ್ಣಾನದಿ ಆರಂಭಮಾಡಿ ಗಂಗಾ ಪರಿಯಂತ ಅಧಮ ೨೦೦. ಗಂಗಾದಾರಭ್ಯ ಚಿಕ್ಕಬದರಿ ಪರಿಯಂತ ಉತ್ತಮ, ಅಂತು ೪೫೦ ಯೋಜನ ಮಾನುಷ ಸಾಧನಭೂಮಿ. ಇದರಲ್ಲಿ ದೇವತೆಗಳು ಮಾನುಷತ್ವೇನ ಅವತಾರ ಮಾಡಿ ಸಾಧನ ಮಾಡತಾರೆ. ಉಳಿದ ೪೫೦ ಯೋಜನ ಚಿಕ್ಕಬದರಿಗೆ ಆಚೆ ಇರುವ ಹಿಮಾಚಲ ಪ್ರದೇಶ. ಇಲ್ಲಿ ದೇವತೆಗಳು ದೇವತಾಶರೀರದಿಂದ ಸಾಧನಮಾಡೋ ಪ್ರದೇಶ. ಅಂತು ೧೦೦೦ ಯೋಜನ ವಿಸ್ತಾರ ಭರತಖಂಡ ಭೂಮಿ.

**ಬೃಹತಿನಾಮಕ ವಾಸುದೇವನು ।**
**ವಹಿಸಿ ಸ್ತ್ರೀಪುರುಷಗಳ ದೋಷವಿ ।**
**ರಹಿತ ಎಪ್ಪತ್ತೆರಡುಸಾವಿರ ನಾಡಿಗಳೊಳಗಿದ್ದು ॥**
**ದ್ರುಹಿಣ ಮೊದಲಾದಮರಗಣ ಸ ।**
**ನ್ಮಹಿತ ಸರ್ವಪ್ರಾಣಿಗಳ ಮಹ ।**
**ಮಹಿಮ ಸಂತೈಸುವನು ಸಂತತ ಪರಮ ಕರುಣಾಳು ॥ ೩ ॥**

ನಾಡಿಗತ ವಾಸುದೇವನು ಇರತಕ್ಕ ವಿಚಾರ ಹೇಳತಾರೆ.

ದೋಷವಿರಹಿತ–ದೋಷದೂರನಾದ, ಬೃಹತಿನಾಮಕ–ಬ್ರಹತೀಸಹಸ್ರ ಋಗ್ವಾಚ್ಯ ನಾದ "ಬೃಹ ವೃದ್ಧಾವಿತಿ ಧಾತುಪರ್ಯಾಲೋಚನಯಾ ಪೂರ್ಣಮಿತಿ ಜ್ಞೇಯಂ" ಬೃಹತೀ ಎಂತ ನಾಮಸಾಂಕೇತನಾದ, ವಾಸುದೇವನು–ವಾಸುದೇವ ನಾಮಕ ಪರ ಮಾತ್ಮ, ಸ್ತ್ರೀ–ಸ್ತ್ರೀ ರೂಪಗಳು ಧರಿಸಿ, ಎಡಭಾಗಗತ ೩೬,೦೦೦ ನಾಡಿಗಳೊಳಗೆ, ಪುರುಷಗಳ–ಪುರುಷ ರೂಪಗಳ ಧರಿಸಿ, ಬಲಭಾಗಗತ ೩೬,೦೦೦ ನಾಡಿಗಳೊಳಗೆ, ಈ ಪ್ರಕಾರ ಸ್ತ್ರೀಪುರುಷ ರೂಪಗಳು, ವಹಿಸಿ–ಧರಿಸಿದವನಾಗಿ, ಎಪ್ಪತ್ತೆರಡುಸಾವಿರ ನಾಡಿ ಗಳೊಳಗೆ, ಇದ್ದು–ಪೂರ್ವೋಕ್ತ ೭೨,೦೦೦ ನಾಡಿಗಳೊಳಗೆ ಇದ್ದು, ದ್ರುಹಿಣ–ಬ್ರಹ್ಮ ದೇವರೇ, ಮೊದಲಾದಮರಗಣ–ಮೊದಲಾದ ತತ್ವಾಭಿಮಾನಿಗಳು ತದನ್ಯರಾದ ದೇವತಾ ಗಣ ವಾಸುದೇವರೋಪಾದೇಲ್ಲಿ, ಸ್ತ್ರೀ ಪುರುಷ ರೂಪಗಳ ಧರಿಸಿ ಇರೋವರಾಗಿದ್ದಾರೆ. ಈ ಪ್ರಕಾರ ನಾಡಿಗಳ ಒಳಗೆ ಇರತಕ್ಕ ದೇವತೆಗಳಿಂದ, ಸನ್ಮಹಿತ–ಪ್ರತಿಪ್ರತಿ ನಾಡಿಗಳೊ ಳಗೆ ಬ್ರಹ್ಮ ಮೊದಲಾದ ದೇವತೆಗಳು ಇದ್ದಾರೆ. ಒಂದೊಂದು ನಾಡೀ ಒಳಗೆ ಒಂದೊಂದು ಭಗವದ್ರೂಪ ಇರೋದಾಗಿ ಅದೆ. ಇದ್ದು ಬ್ರಹ್ಮಾದಿ ದೇವತೆಗಳಿಂದ ಛಂದಾಗಿ ಪೂಜ್ಯ ನಾಗಿ ನಾಡೀ ಅಂತರ್ಗತನಾಗಿದ್ದು, ಪರಮ ಕರುಣಾಳು–ಅತ್ಯಂತ ದಯಾಳುವಾದ, ಮಹಮಹಿಮ–ಅಸದೃಶ ಮಹಿಮೋಪೇತನಾದ ವಾಸುದೇವರೂಪಿ ಪರಮಾತ್ಮ, ಸಂತತ–

ನಿರಂತರದಲ್ಲೂ, ಸರ್ವಪ್ರಾಣಿಗಳ–ಸಮಸ್ತ ತ್ರಿವಿಧ ಜೀವರಲ್ಲಿ, ಸಂತೈಸುವನು–ನಾಡೀ ಅಂತರ್ಗತನಾಗಿದ್ದು ಸಂರಕ್ಷಣೆ ಮಾಡುವನು.

**ವಿಶೇಷಾರ್ಥ:**– ದೇವತೆಗಳು ಕಾಮರೂಪಿಗಳಾದ್ದರಿಂದ, ಸ್ತ್ರೀರೂಪಗಳ ಪುರುಷ ರೂಪಗಳ ಧರಿಸಬಲ್ಲರು. ಆಯಾ ಅಧಿಷ್ಠಾನ ಎಂತ ತಾತ್ಪರ್ಯ. ಮತ್ತು ಸುಕುಮಾರ ವನದೊಳಗೆ ಹೋದ ಪುರುಷರು, ರುದ್ರದೇವರ ಶಾಪದಿಂದ ಸ್ತ್ರೀತ್ವ ಹೊಂದಿದರು (ಭಾಗವತ ನವಮಸ್ಕಂದ) ಹ್ಯಾಂಗೋ ತದ್ವತ್, ಭಗವದಾಜ್ಞಾದಿಂದ ದೇವತೆಗಳು ಸ್ತ್ರೀ ಪುರುಷ ರೂಪಗಳ ಧರಿಸೋವರಾಗತಾರೆ. ಇದು ಬಾಹ್ಯ ಸ್ಥೂಲದೇಹದ ವಿಚಾರವೇ ಹೊರತು, ಸ್ವರೂಪ, ಲಿಂಗ, ಅನಿರುದ್ಧ ಈ ದೇಹಗಳ ವಿಚಾರವಲ್ಲ. ಇವುಗಳು ದಾವಾಗ್ಯೂ ಏಕ ಪ್ರಕಾರ ಇರುತ್ತವೆ. ಈ ಪ್ರಕಾರ ಎಲ್ಲಾ ದೇವತೆಗಳು ಎಡಭಾಗ, ಬಲಭಾಗದಲ್ಲಿ, ಹಾಂಗೆ ಸ್ತ್ರೀ ಪುರುಷ ದೇಹದಲ್ಲಿ ಇರೋವರಾಗಿದ್ದಾರೆ ಎಂದು ತಿಳಿಯಬೇಕು.

**ನೂರು ವರುಷಕೆ ದಿವಸ ಮೂವ ।**
**ತ್ತಾರುಸಾವಿರವಹವು ನಾಡಿ ಶ ।**
**ರೀರದೊಳಗಿನಿತಿಹವು ಎಂದರಿತೊಂದು ದಿವಸದಲಿ ॥**
**ಸೂರಿಗಳ ಸತ್ಕರಿಸಿದವ ಪ್ರತಿ ।**
**ವಾರದಲಿ ದಂಪತಿಗಳರ್ಚನೆ ।**
**ತಾ ರಚಿಸಿದವ ಸತ್ಯ ಸಂಶಯುವಿಲ್ಲವೆಂದೆಂದು ॥ ೪ ॥**

ದೇಹಗತ ದೇವತೆಗಳ ಬ್ರಾಹ್ಮಣರನ್ನಾಗಿ ಮಾಡಿ ಭೋಜನ ಮಾಡಿಸೋ ಕ್ರಮ ಹೇಳತಾರೆ.

ನೂರು ವರುಷಕೆ–ಮನುಷ್ಯರಿಗೆ ಆಯುರ್ಮಾನ ವರುಷಗಳು ನೂರು. ಈ ನೂರು ವರುಷಕ್ಕೆ, ದಿವಸ–ಆಗತಕ್ಕ ದಿನಗಳು ಎಷ್ಟೆಂದರೆ, ಮೂವತ್ತಾರುಸಾವಿರವಹವು–೩೬,೦೦೦ ದಿನಗಳು ಆಗೋದಾಗತವೆ. ನಾಡಿ ಶರೀರದೊಳಗೆ–ಸ್ತ್ರೀಪುರುಷರಾದ ಮನುಷ್ಯಶರೀರದೊಳಗೆ ನಾಡಿಗಳು, ಇನಿತಿಹವು–ಈ ಪೂರ್ವೋಕ್ತ ಪ್ರಕಾರ ಮೂವತ್ತಾರು ಸಾವಿರ ದಂಪತಿಸಾಂಕೇತದಿಂದ ನಾಡಿಗಳು ಅವೆ. ನೂರು ವರುಷಕ್ಕೆ ೩೬,೦೦೦ ಹಗಲು, ೩೬,೦೦೦ ರಾತ್ರಿಗಳು. ಅಂತು ೭೨,೦೦೦ ನಾಡಿಗಳು. ಇದೇ ಪ್ರಕಾರ ೩೬,೦೦೦ ಹಗಲಭಿಮಾನಿ ಪುರುಷ ದೇವತೆಗಳು, ೩೬,೦೦೦ ರಾತ್ರಿ ಅಭಿಮಾನಿ ಸ್ತ್ರೀ ದೇವತೆಗಳು. ಅಂತು ೭೨,೦೦೦ ನಾಡಿಗಳು. ಇವು ದಂಪತಿ ಸಾಂಕೇತದಿಂದ ೩೬,೦೦೦ ದಿನಗಳಾಗಿ ನೂರು ವರ್ಷಕ್ಕೆ ೩೬,೦೦೦ ದಿನಗಳು ಸರಿ ಆಗತವೆ. ಮನುಷ್ಯರ ವ್ಯತಿರಿಕ್ತ ಅನ್ಯ ಜೀವರಲ್ಲಿ ಇಷ್ಟು ನಾಡಿಗಳು ಇಲ್ಲ. ತಾರತಮ್ಯಾನುಸಾರ ಇರುತ್ತವೆ ಎಂತ. ಎಂದರಿತು–ಅಂತ ಛಂದಾಗಿ ಅರಿತವನಾಗಿ, ಒಂದು ದಿವಸದಲಿ–ಒಂದಾನೊಂದು ದಿವಸದಲ್ಲಿ, ಸೂರಿಗಳ–ಭಗವದ್ಭಕ್ತರಾದ ಜ್ಞಾನಿಗಳ, ಸತ್ಕರಿಸಿದವ–ಭೋಜನಾದಿಗಳಿಂದ ಉಪಚಾರ

ಮಾಡಿಸಿದವ (ಸೂರಿ ಶಬ್ದದಿಂದ ಭಗವದ್ದ್ವೇಷಿಗಳಿಗೆ ಅನ್ನದಾನಾದಿ ಉಪಚಾರ ಮಾಡಕೂಡದೆಂದು ತಾತ್ಪರ್ಯ). ಈ ಪ್ರಕಾರ ಅನುಸಂಧಾನದಿಂದ, ಸತ್ಕರಿಸಿದವ–ಉಪಚಾರಪೂಜಾದಿಗಳ ಮಾಡಿದವ, ೩೬,೦೦೦ ದಂಪತಿಗಳ ಭೋಜನಮಾಡಿಸಿದವನಾಗಿ, ಪ್ರತಿವಾರದಲಿ–೩೬,೦೦೦ ಆಯುರ್ಮಾನ ದಿನದಿನಗಳೊಳಗೆ, ಪ್ರತಿದಿನದಲ್ಲೂ, ದಂಪತಿಗಳರ್ಚನೆ–ಒಂದೊಂದು ದಂಪತಿಗಳನ್ನು ಒಂದೊಂದು ದಿನದಲ್ಲಿ ಭೋಜನದಿಂದ ಅರ್ಚನೆಯು, ತಾ ರಚಿಸಿದವ–ಅಧಿಕಾರಿಯಾದವ ತಾನು ಮಾಡಿದವನಾಗುತ್ತಾನೆ ಎಂತ ತಾತ್ಪರ್ಯ.

ಅಲ್ಪಾಯುಷ್ಯನಾಗಿ ಮೃತನಾದಕಾಲಕ್ಕೂ ನೂರು ವರುಷ ಬದುಕಿ ಭಗವತ್ಸೇವಾ ಮಾಡಿದ ಫಲವನ್ನ ಹೊಂದತಾನೆ. ಅನುಸಂಧಾನದಿಂದ ಪ್ರತಿದಿವಸವೂ ಒಬ್ಬ ಸೂರಿಯನ್ನಾಗಲಿ, ಅನೇಕ ಮಂದಿ ಸೂರಿಗಳನ್ನಾಗಲಿ ಉಪಚರಿಸಿದವ ಅಪಾರ ಬ್ರಾಹ್ಮಣರ ಸತ್ಕರಿಸಿದವನಾಗಿ, ಅಂಥ ಫಲವನ್ನು ಹೊಂದತಾನೆ. ಈ ಪ್ರಕಾರ ಅನುಸಂಧಾನದಿಂದ ತಾನು ಭೋಜನ ಮಾಡೋಣ, ತನ್ನ ದಾರಾಪುತ್ರಾದಿಗಳಿಗೆ ಭೋಜನ ಮಾಡಿಸೋಣ ದಾವದದೆ, ಇದು ಯಾವತ್ತೂ ಭಗವತ್ಪೂಜಾನೇ ಆಗತದೆ. ನಾಡೀ ಅಂತರ್ಗತ ಸ್ತ್ರೀ ಪುರುಷ ದೇವತೆಗಳು ಭೋಜನ ಮಾಡೋಣ ಎಂಬುದು, ತಾನು ಭೋಜನ ಮಾಡೋ ದ್ರವ್ಯ, ದೇಹಕ್ಕೆ ಉಪಚಯ. ತದ್ಗತ ದೇವತೆಗಳು ಭೋಜನ ಮಾಡತಕ್ಕದ್ದು, ತದಾಕಾರದಿಂದ ಪದಾರ್ಥದಲ್ಲಿ ಇರೋದಾಗಿ ಅದೆ. ಅದದು ಅವರವರು ಭೋಜನ ಮಾಡತಾರೆಂದು ಅನುಸಂಧಾನ ಮಾಡಬೇಕು. ಸತ್ಯ–ಈ ಆಡಿದ ಮಾತು ಅನೃತವಲ್ಲ ಎಂತಲೂ, ನಿಜವಾದದ್ದು ಎಂದು, ಎಂದೆಂದು–ಎಂದೆಂದಿಗೂ, ಸಂಶಯವಿಲ್ಲ–ಇಂಥಾ ಫಲ ಅಧಿಕಾರಿ ಹೊಂದತಾನೆಂಬೋದರಲ್ಲಿ ಸಂಶಯವಿಲ್ಲ ಎಂತ ಹೇಳತಾರೆ. ಇದರ ವಿವರ ಐತರೇಯ ಭಾಷ್ಯದಲ್ಲಿ ಅದೆ.

**ಚತುರವಿಂಶತಿತತ್ವಗಳು ತ |**
**ತ್ಪತಿಗಳೆನಿಸುವ ಬ್ರಹ್ಮಮುಖದೇ |**
**ವತೆಗಳನುದಿನ ಪ್ರತಿಪ್ರತಿ ನಾಡಿಗಳೊಳಿರುತಿದ್ದು ||**
**ಚತುರದಶ ಲೋಕದೊಳು ಜೀವ |**
**ಪ್ರತತಿಗಳ ಸಂರಕ್ಷಿಸುವ ಶಾ |**
**ಶ್ವತನ ತತ್ತತ್ ಸ್ಥಾನದಲಿ ನೋಡುತಲೆ ಮೋದಿಪರು || ೫ ||**

ಈ ಪ್ರಕಾರ ಅನುಸಂಧಾನ ಯುಕ್ತನ ದೇಹಾಂತರ್ಗತ ದೇವತೆಗಳು, ಪರಮಾತ್ಮ ಸುಜ್ಞಾನ ಕೊಟ್ಟು ರಕ್ಷಿಸುತ್ತಾರೆಂತ ಹೇಳತಾರೆ.

ಅನುದಿನ–ಪ್ರತಿದಿನದಲ್ಲೂ, ಪ್ರತಿಪ್ರತಿ ನಾಡಿಗಳೊಳು-೭೨,೦೦೦ ನಾಡಿಗಳೊಳಗೆ, ಚತುರವಿಂಶತಿ ತತ್ವಗಳು–೨೪ ತತ್ವಗಳು ಇರೋದಾಗಿ ಅವೆ. ಇದರಲ್ಲಿ, ತತ್ಪತಿಗಳೆನಿ

ಸುವ–ಆಯಾ ಒಂದೊಂದು ತತ್ವಗಳಿಗೆ ಅಭಿಮಾನಿಗಳು ಎಂತ ಅನಿಸತಕ್ಕ, ಬ್ರಹ್ಮ ಮುಖ–ಬ್ರಹ್ಮ ವಾಯುಗಳೇ ಮೊದಲಾದ, ದೇವತೆಗಳು–ತತ್ವಾಭಿಮಾನಿ ದೇವತೆಗಳು, ಇರುತಿದ್ದು–ಇರೋವರಾಗಿದ್ದು, ಚತುರದಶ ಲೋಕದೊಳು–ಪಾತಾಳಾದಿ ಸತ್ಯಾಂತ ಹದಿನಾಲ್ಕು ಲೋಕದೊಳುಳ್ಳ ದೇವಮಾನುಷಾದಿ, ಜೀವಪ್ರತತಿಗಳು–ದೇವಮಾನುಷಾದಿ ಜೀವ ಸಮೂಹಗಳು ಎಂದರೆ ಸ್ಥಾವರರಲ್ಲ, ಸ್ವೋತ್ತಮರು, ೨೪ ತತ್ವಗಳಿಗೆ ನಿಯಾಮಕರಾಗಿ ಇರುತ್ತಾರೆ. ಈ ಪ್ರಕಾರ ತೃಣಾದಿ ಬ್ರಹ್ಮಾಂತ ಶರೀರದಲ್ಲಿ ಚತುರ್ವಿಂಶತಿ ತತ್ವಗಳು, ತತ್ವನಿಯಾಮಕ ದೇವತೆಗಳು ಇರೋವರಾಗಿದ್ದಾರೆ. ಮಾನುಷ ವ್ಯತಿರಿಕ್ತ ಅನ್ಯ ಜೀವರಲ್ಲಿ ನಾಡಿಗಳು ನ್ಯೂನಾಧಿಕಗಳೇ ಹೊರತು, ಚತುರ್ವಿಂಶತಿ ತತ್ವಗಳು ನ್ಯೂನಾಧಿಕವಲ್ಲ. ಸಮಾನಗಳೇ. ನ್ಯೂನಾಧಿಕಗಳಾಗಿ ಇರತಕ್ಕ ಪ್ರತಿ ನಾಡಿಗಳ ಒಳಗೆ, ದೇಹದ ಒಳಗೆ, ಚತುರ್ವಿಂಶತಿ ತತ್ವಗಳು, ತತ್ವದೇವತೆಗಳು ಇರೋವರಾಗಿದ್ದಾರೆ. ಇದರಲ್ಲಿ ವಾಸುದೇವ ಇದ್ದು ಜೀವ ಸಮೂಹಗಳ, ಸಂರಕ್ಷಿಸುವ–ಅವರವರ ದೇಹಗಳಲ್ಲಿ ಜ್ಞಾನ ಭಕ್ಷ್ಯಾದಿಗಳ ಆಯಾ ದೇವತೆಗಳ ದ್ವಾರಾ ಕೊಟ್ಟು ಕಾಪಾಡತಾನೆ. ಶಾಶ್ವತನ–ಅನಾದಿ ನಿತ್ಯನಾದ ಈ ಪರಮಾತ್ಮನ, ತತ್ತತ್ಸ್ಥಾನದಲಿ – ಅಧಿಕಾರಿ ಆಯಾ ಪೂರ್ವೋಕ್ತಗಳಿಂದ ದೇಹನಾಡೀ ಸ್ಥಾನದಲ್ಲಿ, ನೋಡುತಲೆ – ಅನುಸಂಧಾನದಿಂದ ಚಿಂತನಾರೂಪದಿಂದ, ಸ್ಮರಣ ರೂಪದಿಂದ ನೋಡುತಾಲೇ, ಮೋದಿಪರು–ಪರಮಾತ್ಮನ ವ್ಯಾಪಾರವನ್ನು ಅಧಿಕಾರಿಗಳು ಸ್ಮರಿಸುತ ಸಂತೋಷ ಐದೋವರಾಗತಾರೆ.

**ವಿಶೇಷಾರ್ಥ :**– ಭಗವದ್ದ್ವೇಷಿಗಳಿಗೆ ಅನ್ನೋದಕಾದಿಗಳು ಏಕೆ ಕೊಡಕೂಡದೆಂದರೆ—ಆಕಳಿಗೆ ಹುಲ್ಲು ಹಾಕೋಣದರಿಂದ ಹಾಲು ಕೊಡತದೆ. ಆ ಹಾಲು ಸರ್ಪಕ್ಕೆ ಎರದರೆ ವಿಷ ಕೊಡತದೆ. ಹ್ಯಾಂಗೋ, ಹಾಂಗೆ ಸರ್ಪಸದೃಶರಾದ ಭಗವದ್ದ್ವೇಷಿಗಳಿಗೆ ಅನ್ನೋದಕಾದಿಗಳ ಕೊಟ್ಟರೆ, ಪಾಪವೇ ಆಗತದೆ. ಈ ಪ್ರಕಾರ ಅನ್ನೋದಕಾದಿಗಳ ಕೊಡಬೇಕಾದರೆ, ಯೋಗ್ಯತಾತಾರತಮ್ಯಾನುಸಾರ ಕೊಡೋವನಾಗಬೇಕೆಂದು ತಾತ್ಪರ್ಯ.

**ಸತ್ಯಸಂಕಲ್ಪನು ಸದಾ ಎ ।**
**ಪ್ಪತ್ತೆರಡು ಸಾಹಸ್ರದೊಳು ಮೂ ।**
**ವತ್ತು ನಾಲಕುಲಕ್ಷದೈವತ್ತಾರು ಸಾಹಸ್ರ ॥**
**ಚಿತ್ರಕೃತಿ ಒಡಗೂಡಿ ಪರಮುಸು ।**
**ನಿತ್ಯಮಂಗಳಮೂರ್ತಿ ಭಕ್ತರ ।**
**ತೆತ್ತಿಗನು ತಾನಾಗಿ ಸರ್ವತ್ರದಲಿ ಸಂತೈಪ ॥ ೬ ॥**

ಇನ್ನೂ ೭೨,೦೦೦ ನಾಡೀಗತ ಭಗವದ್ರೂಪಗಳನ್ನು ಹೇಳತಾರೆ.

ಸತ್ಯಸಂಕಲ್ಪನು–ಬ್ರಹ್ಮಾದಿ ತೃಣಾಂತ ತ್ರಿವಿಧರು ಲಿಂಗಭಂಗವಾಗೋವರಿಗೂ, ಪ್ರತಿಜನ್ಮದಲ್ಲಿ ಕ್ಷಣಲವಾದಿ ಕಾಲಗಳಲ್ಲಿ ಭೋಗಮಾಡತಕ್ಕ ಸುಖದುಃಖಾದಿಗಳು ಇಂಥಾ

ದ್ದೆಂದು ಅನಾದಿಕರ್ಮಾನುಸಾರ ಸತ್ಯವಾದ ನೇಮವುಳ್ಳ ಪರಮಾತ್ಮನು, ಎಪ್ಪತ್ತೆರಡು ಸಾಹಸ್ರದೊಳು—೭೨,೦೦೦ ನಾಡಿಗಳಲ್ಲಿ, ಪ್ರತಿನಾಡೀ ಒಳಗೆ ಇರತಕ್ಕ ಚತುರ್ವಿಂಶತಿ ತತ್ವಗಳು, ಈ ತತ್ವಗಳಲ್ಲಿ ಇರತಕ್ಕ ೨೪ ತತ್ವದೇವತೆಗಳಾದ ಪುರುಷದೇವತೆಗಳು, ಇವರ ಪತ್ನೇರಾದ ೨೪ ಸ್ತ್ರೀ ದೇವತೆಗಳು, ಅಂತು ೪೮ ದೇವತೆಗಳು. ಇವರ ಅಂತರ್ಗತನಾದ ವಾಸುದೇವನು, ಚಿತ್ರಕೃತಿ ಒಡಗೂಡಿ—ಚಿತ್ರಕೃತಿ ಸಾಂಕೇತರಾದ ಮಾಯಾದೇವಿಯರಿಂದ ಸಂಗಾತ ಕೂಡಿಕೊಂಡು ಒಂದೊಂದು ನಾಡೀ ಒಳಗೆ ೪೮ ರೂಪಗಳಿಂದ ಇರೋವನಾಗಿದ್ದಾನೆ. ಈ ಒಂದು ನಾಡೀ ಕ್ರಮಕ್ಕೆ ಎಪ್ಪತ್ತೆರಡುಸಾವಿರದ ಒಳಗೂ ಇದ್ದಾನೆ. ಈ ರೀತ್ಯಾ ಲೆಖ್ಖ ಮಾಡಿದರೆ, ಮೂವತ್ತುನಾಲ್ಕು ಲಕ್ಷದ ಐವತ್ತಾರು ಸಾಹಸ್ರ—೩೪,೫೬,೦೦೦. ಈ ಪ್ರಕಾರ ಸ್ಥೂಲದೇಹದೊಳು, ಪರಮ—ಅತ್ಯಂತವಾಗಿ, ಸುನಿತ್ಯ—ಸಮೀಚೀನವಾದ ನಿತ್ಯತ್ವ ಉಳ್ಳ ಜೀವನ ಸ್ವರೂಪದಲ್ಲಿ ನಿತ್ಯಬಿಂಬನಾದ ಪರಮಾತ್ಮ ಜೀವನ ದೇಹಗತ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ, ಸದಾ—ಅನಾದ್ಯನಂತ ಕಾಲಕ್ಕೂ ಸರ್ವ ದೇವತಾ ಸ್ವರೂಪನು ತಾನಾಗಿ ಪೂರ್ವೋಕ್ತ ೩೪,೫೬,೦೦೦ ರೂಪಗಳಿಂದ ಇರೋವನಾಗಿದ್ದಾನೆ. ಈ ಪ್ರಕಾರ, ಮಂಗಳಮೂರ್ತಿ—ಅವರವರಿಗೆ ಬಿಂಬನಾಗಿದ್ದು, ಆಯಾ ಜೀವರ ಸ್ವರೂಪ ಯೋಗ್ಯತಾನುಸಾರ ಭಗವದ್ಭಕ್ತರ ಸ್ವರೂಪ ಮಂಗಳಸ್ವರೂಪವಾದ್ದರಿಂದ, ಅವರವರ ಬಿಂಬಸುಖರೂಪವಾದ ಮಂಗಳ, ಲಿಂಗಭಂಗಾನಂತರ ಕೊಡತಾನಾದ್ದರಿಂದ ಅವರ ಗತ ಬಿಂಬ, ಮಂಗಳಮೂರ್ತಿ ಎಂತ ಕರಿಸತಾನೆ. ನಿತ್ಯಸಂಸಾರಿ ತಮೋಯೋಗ್ಯರು ಭಗವದ್ದ್ವೇಷಿಗಳಾದ್ದರಿಂದ, ಅವರವರ ಅಮಂಗಳ ಸ್ವರೂಪಾನುಸಾರ ಲಿಂಗಭಂಗಾನಂತರ ಅಮಂಗಳವಾದ ದುಃಖ ಕೊಡತಾನಾದ್ದರಿಂದ ಅಮಂಗಳಮೂರ್ತಿ ಎಂತ ಕರಿಸುತ್ತಾನೆ. ಈ ಪ್ರಕಾರ ತ್ರಿವಿಧ ಜೀವರ ಸ್ವರೂಪದಲ್ಲಿ ಬಾಹ್ಯ ಸ್ಥೂಲದೇಹದಲ್ಲಿ ಇದ್ದು, ಭಕ್ತರ ತೆತ್ತಿಗನು ತಾನಾಗಿ—ಅದರಲ್ಲಿ ತನ್ನ ನಂಬಿದ ಭಕ್ತಜನರು ದಾರೋ ಅವರಿಗೆ ದೂತಸದೃಶನಾಗಿ, ಸರ್ವತ್ರದಲಿ ಸಂತೈಪ—ದೇಹೇಂದ್ರಿಯಾದಿ ಸರ್ವತ್ರದಲ್ಲಿ ದೇವತಾಂತರ್ಗತನಾಗಿ ಇದ್ದು, ಇಂದ್ರಿಯಗಳು ದುರ್ವಿಷಯದಲ್ಲಿ ಪ್ರವರ್ತಿಸದಂತೆ ಸಂರಕ್ಷಣ ಮಾಡತಾನೆ.

**ವಿಶೇಷಾರ್ಥ :**— ಮ್ಯಾಲೆ ಹೇಳಿದ ಸಂಖ್ಯಾ ೩೪,೫೬,೦೦೦ ಹ್ಯಾಂಗೆಂದರೆ, ೭೨,೦೦೦ × ೪೮ = ೩೪,೫೬,೦೦೦ ಆಗತದೆ.

**ಮಣಿಗಳೊಳಗಿಹ ಸೂತ್ರದಂದದಿ ।**
**ಪ್ರಣವಪಾದ್ಯನು ಸರ್ವಚೇತನ ।**
**ಗಣದೊಳಿದ್ದನವರತ ಸಂತೈಸುವನು ತನ್ನವರ ॥**
**ಪ್ರಣತಕಾಮದ ಭಕ್ತಚಿಂತಾ ।**
**ಮಣಿ ಚಿದಾನಂದೈಕದೇಹನು ।**
**ಅಣುಮಹದ್ಗತನಲ್ಪರೋಪಾದಿಯಲಿ ನೆಲೆಸಿಪ್ಪ ॥ ೭ ॥**

ಜೀವರು ಈಶಾಧೀನರೆಂಬೋದಕ್ಕೆ ದೃಷ್ಟಾಂತ ಹೇಳತಾರೆ.

ಮಣಿಗಳೊಳಗಿಹ ಸೂತ್ರದಂದದಿ–ಮಣಿಗತ ಛಿದ್ರಗಳಲ್ಲಿ ವಿದ್ಯಮಾನವಾದ ದಾರ ದೋಪಾದಿಯಲ್ಲಿ, ಪ್ರಣವಪಾದ್ಯನು–ಓಂಕಾರಪ್ರತಿಪಾದ್ಯನಾದ, ಅಣುಸ್ವರೂಪನಾದ ಜೀವಗೆ, ಬಿಂಬನಾದ ಪರಮಾತ್ಮನೇ ಸೂತ್ರಸದೃಶನು. ಸರ್ವಚೇತನಗಣ– ಸರ್ವ– ಸಮಸ್ತರಾದ, ಚೇತನಗಣ–ಚೇತನರೂಪ ಜೀವಸಮೂಹವೇನು, ಅಚೇತನರಾದ ವೃಕ್ಷಾದಿ ಜೀವರೇನು (ಈ ಉಭಯವಿಧರಾದ ಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರು ಮಣಿ ಸದೃಶರು), ದೊಳು–ಇಂಥಾ ಜೀವಾಖ್ಯ ಮಣಿಗತ ಅಸ್ವತಂತ್ರರೆಂಬೋದೇ ಛಿದ್ರ, ಹೃದಯಾಕಾಶವೆಂಬೋದೇ ಅವಕಾಶ. ಇಂಥಾ ಛಿದ್ರಾವಕಾಶದೊಳು ಬಿಂಬನೆಂಬೋ ಸೂತ್ರ ಪೋಣಿಸಲ್ಪಟ್ಟಿದೆ. ಸೂತ್ರಾಧಾರ ಮಣಿಗಳು ಹ್ಯಾಂಗೋ, ಹಾಂಗೆ ಬಿಂಬನೆಂಬೋ ಸೂತ್ರಾಧಾರ ಜೀವರು. ಈ ಪ್ರಕಾರ ಈಶಾಧೀನರು, ಇದ್ದು–ಪರಮಾತ್ಮ ಪೂರ್ವೋಕ್ತ ದೃಷ್ಟಾಂತಾನುಸಾರ ಇದ್ದು, ಅನವರತ–ನಿರಂತರ ಅವಿಯೋಗನಾಗಿ, ಸಂತೈಸುವನು– ಲಿಂಗಭಂಗಾನಂತರ ತ್ರಿವಿಧರಸ ಎಲ್ಲೆಲ್ಲಿ ಇಡಬೇಕೋ ಅಲ್ಲಲ್ಲಿ ಇಟ್ಟು, ಅವರವರ ಸ್ವರೂಪ ಯೋಗ್ಯತಾನುಸಾರ ಸಂರಕ್ಷಣ ಮಾಡುವನು. ಮೋಕ್ಷಸ್ಥಾನದಲ್ಲಿ, ಪ್ರಣತ–ಸ್ವರೂಪತಃ ಪರಮಾತ್ಮ ಸರ್ವೋತ್ತಮನೆಂತಲೂ, ತಾನು ಭೃತ್ಯ ಎಂತಲೂ ಸ್ವರೂಪ ಸ್ವಭಾವದಲ್ಲಿದ್ದು ವಂದನ ಮಾಡತಕ್ಕ, ಮುಕ್ತರಾದ, ತನ್ನವರ–ತನ್ನ ಭಕ್ತರ, ಕಾಮದ–ತಮ್ಮ ತಮ್ಮ ಯೋಗ್ಯತಾನುಸಾರ ಕಾಮ ಮಾಡಿದ್ದರನ್ನ ಕೊಡತಕ್ಕವ. ತದನ್ಯರಿಗೆ ಇಂಥಾದ್ದು ಕೊಡದವ. ಭಕ್ತಚಿಂತಾಮಣಿ–ಭಕ್ತರ ಅಭೀಷ್ಟ ಪೂರ್ಣಮಾಡೋದರಲ್ಲಿ ಚಿಂತಾಮಣಿ ಸದೃಶನಾದವ. ಚಿದಾನಂದೈಕದೇಹನು–ದೇವರು ಚಿದಾನಂದ, ಜೀವನೂ ಚಿದಾನಂದನೇ. ಆದರೂ, ಪರಮಾತ್ಮ ಅಸದೃಶವಾದ ಚಿದಾನಂದದೇಹ ಉಳ್ಳವನು. ಏಕ–ಒಬ್ಬನಾದ ಪರಮಾತ್ಮನೇ ಹೊರತು ಅನ್ಯರು ದಾರೂ ಇಲ್ಲ ಎಂತ ಅರ್ಥ. ಅಣುಮಹದ್ಗತ– ಅಣು– ಅತ್ಯಣುವಾದ ಜೀವನಲ್ಲೂ, ಮಹತ್–ದೊಡ್ಡದಾದ ಸ್ಥೂಲಶರೀರದಲ್ಲೂ, ಗತ–ಇದ್ದವ ನಾಗಿ, ಅಲ್ಪರೋಪಾದಿಯಲಿ–ಈ ಎರಡು ಅಧಿಷ್ಠಾನಗಳಲ್ಲಿ ತನ್ನ ಸ್ವಶಕ್ತಿ (ವ್ಯಕ್ತ) ಮಾಡದಲೆ ಅಧಿಷ್ಠಾನರಾದ ಜೀವರು ಅಲ್ಪರಾದ್ದರಿಂದ, ಅಲ್ಪರಾದ ಜೀವರೋಪಾದಿಯಲ್ಲಿ ತಾನೂನೂ ಅಲ್ಪನಾಗೇ, ನೆಲೆಸಿಪ್ಪ–ಆವಾಸನಾಗಿ ಇದ್ದಾನೆ. ಇದರಂತೆ ಸ್ಥೂಲದೇಹ ದಲ್ಲೀನೂ ಎಂತ ತಿಳಿಯಬೇಕು. ಅಲ್ಪರೋಪಾದಿಯಲ್ಲಿ ಆವಾಸನೇ ಹೊರತು ಅಲ್ಪನಲ್ಲ. ರಾಮಕೃಷ್ಣಾದಿ ಅವತಾರವತ್ ಎಂತ ಅರ್ಥ.

**ಈ ಸುಷುಮ್ನಾದ್ಯಖಿಳ ನಾಡೀ ।**
**ಕೋಶ ನಾಭಿಮೂಲದಲಿ ವೃಷ ।**
**ಣಾಸನದ ಮಧ್ಯದಲಿ ಇಪ್ಪದು ತುಂದಿನಾಮದಲಿ ॥**
**ಆ ಸರೋಜಾಸನಮುಖರು ಮೂ ।**
**ಲೇಶನಾನಂದಾದಿ ಸುಗುಣೋ ।**
**ಪಾಸನೆಯ ಗೈವುತಲಿ ದೇಹಗಳೊಳಗೆ ಇರುತಿಹರು ॥ ೮ ॥**

ನಾಡೀ ಉತ್ಪತ್ತಿಸ್ಥಾನ, ಮೂಲೇಶನ ವಿಚಾರ ಹೇಳತಾರೆ.

ಈ–ಈ ವರ್ತಮಾನ ಸ್ಥೂಲದೇಹಗತ, ಸುಷುಮ್ನಾದಿ–ಸುಷುಮ್ನಾನಾಡೀ, ಆದಿ ಶಬ್ದದಿಂದ, ವಜ್ರಿಕಾ, ಆರ್ಯಕಾ, ಪ್ರಕಾಶಿನೀ, ವೈದ್ಯುತೀ, ಎಂತ ನಾಲ್ಕು ತಿಳಿಯು ಬೇಕು. ಅಂತು ಐದು ನಾಡೀ ಸೇರಿ ಒಂದು ಸುಷುಮ್ನಾ ಎಂತ ಸಾಂಕೇತವು. "ಸುಷುಮ್ನಾ ಪಂಚಪ್ರಭೇದಿನಿ" ಎಂತ ಹಿಂದೆ ಹೇಳಿಯದೆ. ಇದೂ ಅಲ್ಲದೆ, ಅಖಿಳ–ಅನ್ಯವಾದ ಸಮಸ್ತವಾದ, ನಾಡೀಕೋಶ–ನಾಡಿಗಳ ಸಮೂಹವು, ಇದು ಯಾವತ್ತೂ, ನಾಭಿ–ನಾಭಿದೇಶದಲ್ಲಿ, ಮೂಲದಲಿ–ನಾಭಿಗೆ ಕೆಳಗೆ ಇರತಕ್ಕ ಅಧೋಭಾಗವಾದ, ವೃಷಣಾಸನದ ಮಧ್ಯದಲಿ–ಶಿಶ್ನ, ಆಸನ ಇವೆರಡಕ್ಕೂ ಮಧ್ಯಪ್ರದೇಶದಲ್ಲಿ ಈ ಎರಡೂ ಸ್ಥಾನಗಳಿಂದ ಉತ್ಪತ್ತಿ. ಈ ವೃಷಣಾಸನಮಧ್ಯದಲ್ಲಿ, ತುಂದಿನಾಮದಲಿ–ತುಂದಿ ಎಂತ ಕರಿಸತಕ್ಕ ಮಾಂಸದ ಗಡ್ಡೆ ಒಂದು, ಇಪ್ಪದು–ಇರೋದಾಗಿ ಆದೆ. ಮೂಲೇಶನ–ನಾಡೀ ಉತ್ಪತ್ತಿಗೆ ಮೂಲಸ್ಥಾನದಲ್ಲಿ ಇರತಕ್ಕ ಪರಮಾತ್ಮಗೆ ಮೂಲೇಶ ಎಂತ ಹೆಸರು. ಈ ಮೂಲೇಶ ಬ್ಯಾರೆ. ನಾಡೀ ಉತ್ಪತ್ತಿಗೂ, ನಾಡೀ ವಿಭಾಗಗಳಿಗೂ ಇವನೇ ಕಾರಣ. ನಾಡೀ ವಿಭಾಗಗಳ ಮಾಡಿ, ಆಯಾ ನಾಡಿಗಳಲ್ಲಿ ಅಂಶವಿಶೇಷದಿಂದ ಇದ್ದಾನೆ. ಇಂಥಾ ಮೂಲೇಶನ ಮೂಲಸ್ಥಾನದಲ್ಲೂ, ನಾಡಿಗಳಲ್ಲೂ, ಆ ಸರೋಜಾಸನಮುಖರು–ಪೂರ್ವೋಕ್ತರಾದ ಬ್ರಹ್ಮಾದಿ ತತ್ವೇಶರೇನು, ನಾಡೀ ಅಭಿಮಾನಿ ದೇವತೆಗಳೇನು, ಇವರೇ ಮೊದಲಾದವರು, ಆನಂದಾದಿ ಸುಗುಣೋಪಾಸನೆಯ ಗೈವುತಲಿ–ಪರಮಾತ್ಮನ ಅಸದೃಶವಾದ ಜ್ಞಾನಾನಂದಾದಿ ಸುಗುಣೋಪಾಸನ ಮಾಡುತ್ತಾ, ದೇಹಗಳೊಳಗೆ ಇರುತಿಹರು–ಸರ್ವ ಪ್ರಾಣಿಗಳ ಸ್ಥೂಲದೇಹದ ಒಳಗೆ ಇರೋವರಾಗಿ ಇದ್ದಾರೆ.

**ವಿಶೇಷಾರ್ಥ :–** ಮೇಲೆ ಹೇಳಿದ ತುಂದಿಯಲ್ಲಿ ಸುಷುಮ್ನಾದಿ ಪಂಚಭೇದ ನಾಡಿಗಳು ಉತ್ಪನ್ನವಾಗಿ ಶಿರಸ್ಸುವರೆಗೂ ವ್ಯಾಪಿಸಿ, ಅದರಲ್ಲಿ ಸುಷುಮ್ನಾ ಬ್ರಹ್ಮರಂಧ್ರ ದಲ್ಲೀನು, ಅದಕ್ಕೆ ಸುತ್ತ ನಾಲ್ಕು ನಾಡಿಗಳೂನೂ ಇರೋದಾಗಿ ಅವೆ. ಇದೇವೇ ನಾಡೀ ಉತ್ಪತ್ತಿಗೆ ಮೂಲಸ್ಥಾನವು. ಈ ಸುಷುಮ್ನಾಕ್ಕೆ ನಾಭಿ ಪ್ರದೇಶದಿಂದ ಇಳಾ, ಪಿಂಗಳಾ ನಾಡಿಗಳು ಎರಡು ಹೊರಟು ಎರಡು ಮೂಗಿನ ದ್ವಾರಗಳ ಆಶ್ರಯ ಮಾಡಿ ಶ್ವಾಸೋಚ್ಛ್ವಾಸಕ್ಕೆ ಕಾರಣಗಳಾಗಿ ಅವೆ. ಈ ಇಳಾ ಪಿಂಗಳಾ ನಾಡಿಗಳಿಂದ ಶಾಖೋಪ ಶಾಖೆಗಳು ಹೊರಟು ೭೨,೦೦೦ ನಾಡಿಗಳು ಆಗೋವಾಗಿ ಅವೆ. ಇದರ ವಿವರ–ಪ್ರಮಾಣ : "ಏಕೋತ್ತರಶತಂ ನಾಡ್ಯಃ ಶರೀರೇಸ್ಮಿನ್ ಸಮಾಹಿತಾಃ | ತತ್ರ ಪಂಚ ಪ್ರಧಾನಾಃ ಸ್ಯುಃ ಪಿಂಗಳೀಡಾ ಚ ನಾಡೀನೀ || ೧ || ಸುಷುಮ್ನಾ ವಜ್ರಿಕಾರ್ಯಾ ಚ ಚತುರ್ದಿಕ್ಷುಚ ಸಂಸ್ಥಿತಾಃ | ಚತುಸ್ರಃ ಸಂಸ್ಥಿತಾ ಮಧ್ಯೇ ಸುಷುಮ್ನೈಕಾ ಪ್ರಧಾನತಃ || ೨ || ತಾಸಾಂ ಶತಂ ಶತಂ ಶಾಖಾಃ ಏಕೈಕಸ್ಯಾಃ ಪ್ರಕೀರ್ತಿತಾಃ | ತತ್ರ ಸುಷುಮ್ನಾಶಾಖಾನಾಂ ಪ್ರತಿಶಾಖಾ ಶತಾಂತಿಮಾನ್ || ೩ || "

**ಅರ್ಥ :**— ೧೦೧ ನಾಡೀಗಳು ಶರೀರದಲ್ಲಿ ಇರೋವಾಗಿ ಅವೆ. ಸುಷುವ್ನಾ ನಾಡಿ ಒಂದು. ಈ ನಾಡಿ ಪಂಚ ಪ್ರಭೇದದಿಂದ ಒಂದು ನಾಡೀ ಎಂತ ಕರಸುತದೆ. ಇದು ಮಧ್ಯ ನಾಡಿ. ಇದಕ್ಕೆ ಸುತ್ತ ಪ್ರಭೇದ ನಾಡಿಗಳು ನಾಲ್ಕೂ ದಿಕ್ಕಿನಲ್ಲಿ ನಾಲ್ಕು ನಾಡಿಗಳು ಇರೋವಾಗಿ ಅವೆ.

ಅವುಗಳ ಹೆಸರು—

| | | | | |
|---|---|---|---|---|
| ೧. | ೧. | ವಜ್ರಿಕಾ | ೨೫ | ಈ ವಜ್ರಿಕಾದಿನಾಡೀ ಸಹಿತ ಇದು ಸುಷುವ್ನಾಕ್ಕೆ ನಾಲ್ಕೂ ದಿಕ್ಕಿನಲ್ಲಿ ಇರತಕ್ಕ ನಾಡಿಗಳ ಶಾಖಾಗಳು— ೧೦೦. ಇದಲ್ಲದೇ ಸುಷುವ್ನಾ ಪಂಚ ಪ್ರಭೇದ ನಾಡಿಗೆ ಸುತ್ತ ಪ್ರತ್ಯೇಕವಾಗಿ ನಾಲ್ಕೂ ಕಡಿ ನಾಲ್ಕು ನಾಡಿಗಳು ಅವೆ. ಅವುಗಳ ಹೆಸರು ಎರಡು ಪ್ರಕಾರ ವಿಭಾಗವು. ಈ ವಿಭಾಗ, ಪ್ರಮಾಣದಲ್ಲಿ ಅದೆ. ಅದರನ್ನ ಮುಂದೆ ಬರೆಯಲ್ಪಡುತ್ತದೆ. |
| | ೨. | ಆರ್ಯಕಾ | ೨೫ | |
| | ೩. | ಪ್ರಕಾಶಿನೀ | ೨೫ | |
| | ೪. | ವೈದ್ಯುತೀ | ೨೫ | |
| | ೫. | ಸುಷುವ್ನಾ | ೧ | |
| | | ಅಂತು | ೧೦೧ | |
| ೨. | ೧. | ಪಿಂಗಳಾ | ೨೫ | ಪಿಂಗಳಾದಿ ಸಹಿತ ಈ ಪ್ರಕಾರ ಪ್ರತಿ ನಾಡೀಗೂ ಶಾಖಾಗಳು ಬೆಳೆದು ಅಂತು ನೂರು ಶಾಖಾಗಳು ಆಗೋವಾದುವು. ೧೦೦ಕ್ಕೆ ಪ್ರತಿನಾಡೀ ಒಂದಕ್ಕೆ ನೂರು ಪ್ರಕಾರ ಬೆಳೆದು ಹತ್ತು ಸಾವಿರ ಆಯಿತು. ೧೦,೦೦೦. ಅಂತು ವೊತ್ತ ನಾಡಿಗಳು ೧೦,೦೦೦ +೧೦೦=೧೦,೧೦೦ ನಾಡಿಗಳು. |
| | ೨. | ಇಡಾ | ೨೫ | |
| | ೩. | ವಜ್ರಿಕಾ | ೨೫ | |
| | ೪. | ಆರ್ಯಕಾ | ೨೫ | |
| | | ಅಂತು | ೧೦೦ | |

**ಪ್ರಮಾಣಕ್ಕೆ ಅರ್ಥ :**— ಏಕೋತ್ತರಶತಂ ನಾಡ್ಯಃ—ನೂರಾ ಒಂದು ನಾಡಿಗಳು (೧೦೧), ಶರೀರೇsಸ್ಮಿನ್ ಸಮಾಹಿತಾಃ—ಈ ಮನುಷ್ಯರ ಸ್ಥೂಲದೇಹದಲ್ಲಿ ಕೂಡಿಕೊಂಡು ಇರೋವಾಗಿ ಅವೆ. ತತ್ರ—ಈ ೧೦೧ ನಾಡಿಗಳಲ್ಲಿ, ಪಂಚ ಪ್ರಧಾನಾಃ ಸ್ಯುಃ—ಐದು ನಾಡಿಗಳು ಪ್ರಧಾನ ನಾಡಿಗಳು. ಈ ಐದಕ್ಕೆ ಮತ್ತು ನಾಲ್ಕು ದಿಕ್ಕಿನಲ್ಲಿ, ಪಿಂಗಳಾ—ಪಿಂಗಳಾನಾಡಿ, ಇಡಾ ಚ—ಇಡಾನಾಡಿ, ನಾಡೀನೀ—ಈ ಎರಡು ನಾಡಿಗಳೇನು, ಇವಲ್ಲದೆ ವಜ್ರಿಕಾ—ವಜ್ರಿಕಾ ನಾಡೀನೂ, ಆರ್ಯಾ—ಆರ್ಯಕಾ ನಾಡೀನೂ, ಈ ನಾಲ್ಕೂ ನಾಡೀಗಳು, ಸುಷುವ್ನಾ-ಪಂಚಭೇದಯುಕ್ತವಾದ ಸುಷುವ್ನಾ ನಾಡೀಗೆ, ಚತುರ್ದಿಕ್ಷು—ನಾಲ್ಕು ದಿಕ್ಕುಗಳಲ್ಲಿ, ಸಂಸ್ಥಿತಾಃ—ಇರೋವಾಗಿ ಅವೆ. ವಜ್ರಿಕಾರ್ಯಕಾನಾಡಿ ಪ್ರತ್ಯೇಕ ಪ್ರತ್ಯೇಕವಾಗಿ ಎರಡು ವಿಧದಿಂದ ಇರೋವಾಗಿ ಅವೆ. ಅದದು ಬ್ಯಾರೆ ಅಂತ ಅರ್ಥ, ಚತುಸ್ರಃ ಸಂಸ್ಥಿತಾಃ—ಪ್ರಥಮದಲ್ಲಿ ಹೇಳಿದ ವಜ್ರಿಕಾ, ಆರ್ಯಕಾ, ಪ್ರಕಾಶಿನೀ, ವೈದ್ಯುತಿ ನಾಲ್ಕು ದಿಕ್ಕಿನಲ್ಲಿ ನಾಲ್ಕು ನಾಡಿಗಳು ವಿದ್ಯಮಾನಗಳಾಗಿ, ಮಧ್ಯೇ—ಮಧ್ಯ ಭಾಗದಲ್ಲಿ, ಸುಷುವ್ನೈಕಾ—ಸುಷುವ್ನಾ ನಾಡಿ ಒಂದೇ, ಪ್ರಧಾನತಃ—ಪ್ರಧಾನ ದೆಶೆಯಿಂದ ಇರೋವಾಗಿ ಅದೆ. ಅಂತು, ಎರಡು ಪ್ರಕಾರ ಸುಷುವ್ನಾ ಅನ್ಯನಾಡೀಗಳಿಂದಾವೃತವಾಗಿದೆ.

ತಾಸಾಂ–ಇಡಾಪಿಂಗಳಾದಿ ನಾಲ್ಕು ನಾಡಿಗಳಿಗೆ ಹಾಂಗೆ ಸುಷುಮ್ನಾ ನಾಡೀ ಪಂಚ ಪ್ರಭೇದಿನಿ ಎಂಬ ಐದು ನಾಡಿಗಳ ಒಳಗೆ ಸುಷುಮ್ನಾನಾಡೀ ವ್ಯತಿರಿಕ್ತ ನಾಲ್ಕು ನಾಡಿ ಗಳಿಗೆ, ಏಕೈಕಸ್ಯಾಃ–ಒಂದೊಂದು ಭಾಗಗತ ನಾಲ್ಕು ನಾಲ್ಕು ನಾಡಿಗಳಿಗೆ, ಶತಂ ಶತಂ ಶಾಖಾಃ–ಪ್ರತಿ ನಾಲ್ಕು ಶಾಖಾಕ್ಕೆ, ಒಂದೊಂದು ಶಾಖಾಗಳಿಗೆ, ಇಪ್ಪತ್ತೈದು ಶಾಖಾಗಳ ಪ್ರಕಾರ ಬೆಳೆದು ನೂರು ನೂರು ಶಾಖಾಗಳು ಆಗೋವಾದವು. ಎರಡಕ್ಕೂ ಸೇರಿ ೨೦೦ ಶಾಖಾಗಳು, ಪ್ರಕೀರ್ತಿತಾಃ–ಈ ಪ್ರಕಾರ ಹೇಳೋದಾಗತದೆ. ಎರಡು ಪ್ರಕಾರ ಸುಷುಮ್ನಾ ಶಾಖಾಗಳು ಹೇಳಿದಂತಾಯಿತು. ಹ್ಯಾಂಗೆಂದರೆ, ಪ್ರಥಮತಃ ೧೦೧ ಹೇಳಿದ್ದು, ಎರಡನೇ ಸಾರಿ ವಿಭಾಗ ಮಾಡಿ ಹೇಳಿದ್ದು ಒಂದು. ಅಂತು ಎರಡು ಪ್ರಕಾರ ಎರಡಕ್ಕೂ ಶಾಖಾ ವಿಭಾಗ ಒಂದೇ ಆದ್ದರಿಂದ ತಾಸಾಂ ಎಂಬೋ ಶಬ್ದದಿಂದ ವಿಭಾಗ ವಿಚಾರ ಎರಡಕ್ಕೂ ಗ್ರಾಹ್ಯ, ತತ್ರ–ಆ ಎರಡು ಪ್ರಕಾರ ವಿಭಾಗದಲ್ಲಿ, ಸುಷುಮ್ನಾಶಾಖಾಯಾಂ–ಎರಡನೇ ಸಾರಿ ಹೇಳಿದ ಸುಷುಮ್ನಾ ಶಾಖಾಗಳು ೧೦೦ಕ್ಕೆ, ಪ್ರತಿಶಾಖಾ–ಪ್ರತಿಶಾಖಾ ಒಂದಕ್ಕೆ ಶಾಖಾ ಬೆಳೆದು, ಶತಾಂತಿಮಾ–ನೂರು ಶಾಖಾದಿಂದ ಅಧಿಕವಿಲ್ಲದೆ ಹತ್ತು ಸಾವಿರ ವಾಯಿತು. ಹತ್ತು ಸಾವಿರ ಅಂತ್ಯದಿಂದ ಯುಕ್ತವಾಗಿದೆ. ಆದ್ಯಂತ ಮೂಲ ಶಾಖಾಗಳು ೧೦೦. ಉಪಶಾಖಾಗಳು ೧೦,೦೦೦. ಅಂತು ೧೦,೧೦೦ ಆಗತದೆ. ತತ್ರ ಸುಷುಮ್ನಾ ಶಾಖಾನಾಂ ಎಂಬ ವಚನದಿಂದ ಎರಡೂ ಏಕೆ ಗ್ರಾಹ್ಯ ಮಾಡಬಾರದೆಂದರೆ, ಮುಂದೆ ವಿಭಾಗ ಎರಡನೇದಕ್ಕೆ ಮಾತ್ರ ಹೇಳಿದ್ದಾರೆ, ಮೊದಲನೇದಕ್ಕೆ ಹೇಳಲಿಲ್ಲ. ಎರಡೂ ಗ್ರಾಹ್ಯ ಮಾಡಿದರೆ, ನಾಡಿಗಳು ಒಂದಕ್ಕೆ ಎರಡಾಗಿ ೭೨,೦೦೦ಕ್ಕೆ ದ್ವಿಗುಣವಾಗೋವಾಗ ತವೆ. ಆದ್ದರಿಂದ ಒಂದಕ್ಕೇ ವಿಭಾಗ ಎಂತ ಸಿದ್ಧವು. ಪ್ರಥಮ ೧೦೧ ನಾಡೀ, ಅದು ಜೀವನ ಪ್ರಮಾಣ ಮಾರ್ಗ ನಾಡಿಗಳು. ಅದರ ವಿಭಾಗವಿಲ್ಲ.

ಪ್ರಮಾಣ :–"ನವಶಾಖಾಶತಾನಾಂ ಚ ಅಷ್ಟಶಾಖಾ ಷಡ್ಡೈವ ತು | ಷಣ್ಣವತಿ ಶತಾನಾಂ ತು ದಶಶಾಖಾ ಇಮೋ ಮತಾಃ || ೪ || ದ್ವಾಸಪ್ತತಿಂ ಚ ನಾಡೀನಾಂ ವಿಭಾಗೋ ವೇದ ತತ್ವತಃ | ಸ ಏವ ಭಿಷಜಾಂ ಶ್ರೇಷ್ಠೋ ಲಕ್ಷಣಾನಿ ನಿಬೋಧಯೇತ್ || ೫ ||

೧೦,೧೦೧ ಶಾಖಾಗಳಿಗೆ ಉಪಶಾಖಾಗಳು ಬೆಳೆದು ಎಲ್ಲಾ ಸೇರಿ ಎಪ್ಪತ್ತೆರಡು ಸಾವಿರ ಆಗತದೆ ಎಂತ ಹೇಳತಾರೆ.

ಶತಾನಾಂ ಚ ನವ ಶಾಖಾ ೧೦೦ × ೯ = ೯೦೦–ನೂರಕ್ಕೆ ೯ರ ಪ್ರಕಾರ ಬೆಳದದ್ದು.
ಅಷ್ಟ ಶಾಖಾ ೩೦೦ × ೮ = ೨,೪೦೦–ಮುನ್ನೂರಕ್ಕೆ ೮ರ ಪ್ರಕಾರ ಬೆಳದದ್ದು.
ಷಣ್ಣವತಿ ಶತಾನಾಂ ತು
ಷಡ್ಡೈವ ತು ೯,೬೦೦ × ೬ = ೫೭,೬೦೦–೯೬ ನೂರಕ್ಕೆ ೬ರ ಪ್ರಕಾರ ಬೆಳದದ್ದು.
ದಶ ಶಾಖಾ ೧೦೦ × ೧೦ = ೧,೦೦೦–ನೂರಕ್ಕೆ ೧೦ರ ಪ್ರಕಾರ ಬೆಳದದ್ದು.

ಅಂತು ೧೦,೧೦೦ + ೬೧,೯೦೦ = ೭೨,೦೦೦
ಪ್ರಥಮದಲ್ಲಿ ಸುಷುಮ್ನಾ ವಿಭಾಗಮಾಡಿದ್ದು ೧೦೧
ಅಂತು ಮೊತ್ತ ನಾಡಿ ೭೨,೧೦೧.

ಇವೋ ಮತಾಃ–ಈ ವಿಭಾಗ ಸಮ್ಮತವಾದದ್ದು. ದ್ವಾಸಪ್ತತಿಂ ಚ ನಾಡೀನಾಂ–೭೨,೦೦೦ ನಾಡಿಗಳಿಗೆ, ತತ್ವತಃ–ದೇಹತತ್ವದಶಿಯಿಂದ, ವೇದ–ತಿಳಿಯೋವನಾಗಬೇಕು. ಸ ಏವ ಭಿಷಜಾಂ ಶ್ರೇಷ್ಠಃ–ಅವನೇವೇ ವೈದ್ಯಶ್ರೇಷ್ಠನಾದವನು. ಲಕ್ಷಣಾನಿ ನಿಬೋಧಯೇತ್– ಅವನೇವೇ ರೋಗಲಕ್ಷಣಗಳ ತಿಳಕೋತಕ್ಕವ. ಈ ಪ್ರಕಾರ ನಾಡೀಕಲ್ಪಲತಾದಲ್ಲಿ ಹೇಳತದೆ.

**ಸೂರಿಗಳು ಚಿತ್ತೈಸುವದು ಭಾ ।**
**ಗೀರಥಿಯೆ ಮೊದಲಾದ ತೀರ್ಥಗ ।**
**ಳೀರಧಿಕ ಎಪ್ಪತ್ತು ಸಾವಿರ ನಾಡಿಯೊಳಗಿಹವು ॥**
**ಈ ರಹಸ್ಯವನಲ್ಪ ಜನರಿಗೆ ।**
**ತೋರಿ ಪೇಳದೆ ನಾಡಿನದಿಯೊಳು**
**ಧೀರರನುದಿನ ಮಜ್ಜನವ ಮಾಡುತಲೆ ಸುಖಿಸುವರು ॥ ೯ ॥**

ನಾಡಿಗಳಲ್ಲಿ ನದಿಗಳು ಅವೆ ಎಂತ ಹೇಳತಾರೆ.

ಸೂರಿಗಳು–ಜ್ಞಾನಿಗಳು, ಚಿತ್ತೈಸುವದು–ಚಿತ್ತದಿಂದ ತಿಳಿಯುವುದು. ಭಾಗೀರಥಿಯೆ– ಭಾಗೀರಥೀ ನದಿ ಅಭಿಮಾನಿದೇವತೆಯು, ಮೊದಲಾದ–ಆದಿಯಾಗಿ ನದ್ಯಭಿಮಾನಿ ಗಳು, ನದಿಗಳು, ತೀರ್ಥಗಳು–ಸರ್ವ ತೀರ್ಥಾಭಿಮಾನಿಗಳು ಅಂದರೆ, ತೀರ್ಥಾಭಿಮಾನಿ ದೇವತೆಗಳು, ತೀರ್ಥಗಳು, ಈರಧಿಕ ಎಪ್ಪತ್ತುಸಾವಿರ ನಾಡಿಯೊಳಗಿಹವು–೭೨,೦೦೦ ನಾಡಿಗಳೊಳಗೆ, ಅಷ್ಟೇ ಸಂಖ್ಯಾದಿಂದ ನದಿಗಳು, ನದ್ಯಭಿಮಾನಿ ದೇವತೆಗಳು ಇರೋ ರಾಗಿದ್ದಾರೆ. ಇದರಂತೆ ಮೂರುವರೆ ಕೋಟಿ ರೋಮಕೂಪಗಳಲ್ಲಿ ತೀರ್ಥಗಳು, ತೀರ್ಥಾಭಿ ಮಾನಿ ದೇವತೆಗಳು ಇರೋರಾಗಿದ್ದಾರೆ. ಈ ರಹಸ್ಯವನು–ಈ ಪ್ರಕಾರ ಇರತಕ್ಕ ಗೋಪ್ಯವಾದ ವಿಷಯಗಳ, ಅಲ್ಪ ಜನರಿಗೆ–ಭಗವದ್ದ್ವೇಷಿಗಳಿಗೆ, ಅಲ್ಪಾಧಿಕಾರಿಗಳಾದ ಉದಾಸೀನರಾದ ಶ್ರದ್ಧಾರಹಿತರಾದ ಮನುಷ್ಯರಿಗೆ, ತೋರಿ ಪೇಳದೆ–ತಾನು ತಿಳಕೊಂಡದ್ದು ಅವರಿಗೆ ಉಪದೇಶ ಮಾಡದೆ, ತಿಳಿಸದೆ, ನಾಡಿನದಿಯೊಳು–ನಾಡೀಗತ ನದಿಯೊಳಗೆ, ರೋಮಕೂಪಗತ ತೀರ್ಥಗಳಲ್ಲಿ, ಧೀರರನುದಿನ–ಭಾವವಿರಕ್ತರಾದ ಧೀರರು ಪ್ರತಿದಿವಸ ದಲ್ಲೂ, ಮಜ್ಜನವ ಮಾಡುತಲೆ–ಸ್ನಾನಮಾಡುತ್ತಾ, ಎಂದರೆ, ಸ್ನಾನಕ್ರಮ, ದೇಹದಲ್ಲಿ ಜೀವನಾದವ ರೋಮನಾಡ್ಯಾದಿ ಸರ್ವತ್ರ ವ್ಯಾಪ್ತನಾಗಿ ಇರೋಣದರಿಂದ, ಆಯಾ ತೀರ್ಥ, ನದ್ಯಾದಿಗಳಲ್ಲಿ ಸ್ನಾನ ಸರ್ವದಾ ಮಾಡತಲೇ ಇದ್ದಾನೆ. ಇದರನ್ನ ಅನುಸಂಧಾನ ಮಾಡಿ, ತಿಳಿದು, ಈ ರೀತ್ಯಾ ಸ್ನಾನಮಾಡಿ ತದ್ಗತ ಭಗವದ್ರೂಪಗಳ ಅನುಸಂಧಾನದಿಂದ ತಿಳಿದು ದರ್ಶನಮಾಡಿ ಹೃದಯಾಂತರ್ಗತ ಬಿಂಬನಲ್ಲಿ ನಾಡ್ಯಂತರ್ಗತ ರೂಪಗಳ, ತೀರ್ಥ ಗತ ರೂಪಗಳ ಐಕ್ಯಚಿಂತನಾದಿಂದ ಅರ್ಪಿಸುತ್ತಾ, ಈ ಪ್ರಕಾರ ಸ್ನಾನಾನುಸಂಧಾನ ಮಾಡುತ್ತಾ, ಸುಖಿಸುವರು–ಆನಂದಪಡೋವರಾಗುತ್ತಾರೆ. ಅನುಸಂಧಾನ ಮಾಡದೆ ಹೋದರೆ ಭಾಗೀರಥೀ ನದೀಸ್ಥ ಜಲಚರಗಳಂತೆ ಫಲರಹಿತರಾಗತಾರೆ ಅಂತ ತಾತ್ಪರ್ಯ.

**ತಿಳಿವುದೀ ದೇಹದೊಳಗಿಹ ಎಡ ।**
**ಬಲದ ನಾಡಿಗಳೊಳಗೆ ದಿವಿಜರು ।**
**ಜಲಜಸಂಭವ ವಾಯು ವಾಣ್ಯಾದಿಗಳು ಬಲದಲ್ಲಿ ॥**
**ಎಲರುಣಿಗ ವಿಹಗೇಂದ್ರ ಚಳಿವೆ ।**
**ಟ್ಟೆಳಿಯ ಷಣ್ಮಹಿಷಿಯರು ವಾರುಣಿ ।**
**ಕುಲಿಶಧರ ಕಾಮಾದಿಗಳು ಎಡಭಾಗದೊಳಿಹರು ॥ ೧೦ ॥**

ಎಡಬಲಗತ ನಾಡಿಗಳಲ್ಲಿ ಅಭಿಮಾನಿ ದೇವತೆಗಳ ಹೇಳತಾರೆ.

ಈ ದೇಹದೊಳಗಿಹ–ಈ ಸ್ಥೂಲದೇಹದಲ್ಲಿ ಇರತಕ್ಕ, ಎಡಬಲದ ನಾಡಿಗಳೊಳಗೆ–ಎಡಭಾಗ, ಬಲಭಾಗ ಇವುಗಳಲ್ಲಿ, ದಿವಿಜರು–ದೇವತೆಗಳು ಇರೋವರಾಗಿ ಇದ್ದಾರೆ. ಇವರನ್ನ, ತಿಳಿವುದು–ತಿಳಿಯೋವನಾಗಬೇಕು. ಆ ತಿಳಿಯೋ ಕ್ರಮ ಹ್ಯಾಂಗೆಂದರೆ :–ಬಲದಲ್ಲಿ–ಬಲಭಾಗ ಅಂದರೆ, ಸವ್ಯಪಾರ್ಶ್ವದಲ್ಲಿ ೩೬,೦೦೦ ನಾಡಿಗಳೊಳಗೆ, ಜಲಜ ಸಂಭವ–ಬ್ರಹ್ಮದೇವರು, ವಾಯು–ಜೀವೋತ್ತಮರಾದ ವಾಯುದೇವರು, ವಾಣ್ಯಾದಿಗಳು–ಸರಸ್ವತೀ ಭಾರತೀ ಇವರಿಬ್ಬರು, ಅಂತು ನಾಲ್ಕು ಮಂದಿ, ಈ ಭಾಗಗತ ನಾಡೀಗತ ನದಿಗಳಲ್ಲಿ ಇರೋವರಾಗಿದ್ದಾರೆ. ಎಡಭಾಗದೊಳು–ಎಡಭಾಗ ಅಂದರೆ ಅಪಸವ್ಯಪಾರ್ಶ್ವದಲ್ಲಿ ೩೬,೦೦೦ ನಾಡಿಗಳೊಳಗೆ ತದ್ಗತ ನದಿಗಳೊಳಗೆ, ಎಲರುಣಿಗ–ಗಾಳಿಯನ್ನು ಉಣತಕ್ಕ ಸರ್ಪ, ಶೇಷದೇವರು ಅಂತ ತಾತ್ಪರ್ಯ. ವಿಹಗೇಂದ್ರ–ಪಕ್ಷಿಶ್ರೇಷ್ಠನಾದ ಗರುಡದೇವರು, ಚಳಿವೆಟ್ಟ–ಹಿಮಾಚಲನ, ಅಳಿಯ–ಜಾಮಾತನಾದ ರುದ್ರದೇವರು, ಷಣ್ಮಹಿಷಿಯರು–ನೀಲ, ಜಾಂಬವತಿ ಮೊದಲಾದ ದೇವರ ಹೆಂಡತಿಯರಾದ ಆರು ಮಹಿಷಿಯರು, ವಾರುಣಿ–ಶೇಷಪತ್ನಿ ವಾರುಣೀ, ಸೌಪರ್ಣೀ, ಪಾರ್ವತೀ, ಕುಲಿಶಧರ–ಇಂದ್ರ ದೇವರು, ವಜ್ರಾಯುಧ ಧರಿಸಿದವ, ಕಾಮ–ಮನ್ಮಥ, ಆದಿಗಳು–ಇವರೇ ಮೊದಲಾದವರು, ಇವರು ಎಡಭಾಗಗತ ನಾಡೀಗತ ನದಿಗಳಲ್ಲಿ ಇರೋವರಾಗಿದ್ದಾರೆ. ಮುಖ್ಯಾಮುಖ್ಯತ್ವೇನ, ಸರ್ವರೂ ಸರ್ವತ್ರ ವ್ಯಾಪ್ತರು ಎಂತ ತಾತ್ಪರ್ಯ.

**ಇಕ್ಕೆಲದೊಳಿಹ ನಾಡಿಯೊಳು ದೇ ।**
**ವಕ್ಕಳಿಂದೊಡನಾಡುತಲಿ ಪೊಂ ।**
**ಬಕ್ಕಿದೇರನು ಜೀವರಧಿಕಾರಾನುಸಾರದಲಿ ॥**
**ತಕ್ಕ ಸಾಧನವ ಮಾಡಿ ಮಾಡಿಸು ।**
**ತಕ್ಕರದಿ ಸಂತೈಪ ಭಕ್ತರ**
**ಪಕ್ಕಗೊಡನಸುರರ್ಗೆ ಸತ್ಪುಣ್ಯಗಳನಪಹರಿಪ ॥ ೧೧ ॥**

ಯೋಗ್ಯತಾನುಸಾರ ಸಾಧನ ಮಾಡಸತಾನೆಂದು ಹೇಳತಾರೆ.

ಇಕ್ಕೆಲದೊಳಿಹ–ಈ ಸ್ಥೂಲದೇಹದೊಳಗೆ ಎಡಬಲಭಾಗದಲ್ಲಿರತಕ್ಕ, ನಾಡಿಯೊಳು–ಎಪ್ಪತ್ತೆರಡು ಸಾವಿರ ನಾಡಿಯೊಳು, ಪೊಂಬಕ್ಕಿದೇರನು–ಪೊಂಬಕ್ಕಿ–ಸ್ವರ್ಣಸದೃಶವಾದ, ಕಾಂತಿಯುಕ್ತವಾದ ಹಕ್ಕಿ, ಗರುಡ, ದೇರನು–ಈ ಗರುಡನನ್ನೇ ರಥವಾಗಿ ಉಳ್ಳ ಪರಮಾತ್ಮನು, ದೇವಕ್ಕಳಿಂದ–ನಾಡಿ ಅಭಿಮಾನಿ, ನದಿ ಅಭಿಮಾನಿ, ತತ್ವಾಭಿಮಾನಿ, ಏತಾದೃಶರಾದ ದೇವತೆಗಳಿಂದ, ಒಡನಾಡುತಲಿ–ಕೂಡಿಕೊಂಡು ಆಡುತ್ತ, ಜೀವರಧಿಕಾರಾನುಸಾರದಲಿ–ತ್ರಿವಿಧ ಜೀವರ ಸ್ವರೂಪ ಯೋಗ್ಯತಾನುಸಾರ, ತಕ್ಕ ಸಾಧನವ–ಆಯಾ ಜನ್ಮಕ್ಕೆ ಯೋಗ್ಯವಾದ ತಕ್ಕಷ್ಟು ಸಾಧನ, ಅಕ್ಕರದಿ–ಶ್ರದ್ಧೆಯಾಗಿ, ಮಾಡಿ–ಬಿಂಬಕ್ರಿಯಾದ್ವಾರಾ ತನ್ನ ಸ್ವಾಖ್ಯ ಇಂದ್ರಿಯಗಳ ದ್ವಾರಾ ಮಾಡಿ, ಮಾಡಿಸುತ–ದೇಹೇಂದ್ರಿಯಗಳ ದ್ವಾರಾ ಎಂದರೆ ತತ್ವೇಶರಿಂದ ಅವರ ದ್ವಾರಾ, ಜೀವನಿಂದ ಜೀವನ ದ್ವಾರಾ ದೇಹದಿಂದ ಮಾಡಿಸುತ್ತ, ಭಕ್ತರ–ತನ್ನ ಭಕ್ತರನ್ನು, ಸಂತೈಪ–ಪರಿಯವಸಾನಕ್ಕೆ ತನ್ನ ಸಂದರ್ಶನ ಕೊಟ್ಟು ಸುಖಪ್ರದನಾಗಿ ಸಂತೈಪ. ಅಸುರರಿಗೆ ತನ್ನ ಅಪರೋಕ್ಷ ಕೊಡದೆ ದುಃಖವನ್ನೇ ಕೊಟ್ಟು ಈ ರೀತ್ಯಾ ಸಂರಕ್ಷಿಸುತ್ತಾನೆ. ಅಸುರರ್ಗೆ–ಅಸುರರು ಅಪಕ್ವ ದಶಾದಲ್ಲಿ ಯಜ್ಞ ಯಾಗಾದಿಗಳ, ಪುಣ್ಯ ಕಾರ್ಯಗಳ ಮಾಡತಾರೆ. ಇಂಥಾ ಪುಣ್ಯಗಳನ್ನು ಅವರು ಭಗವದರ್ಪಣ ಮಾಡೋದಿಲ್ಲ. ಅದನ್ನ ಅವರಿಗೆ, ದಕ್ಕಗೊಡನು–ದಕ್ಕೋ ಹಾಂಗೆ ಮಾಡನು. ಮಾಡದೆ, ಸತ್ಪುಣ್ಯಗಳನು–ಒಳ್ಳೇದಾದಂಥಾ ಸತ್ಕರ್ಮಗಳ, ಪುಣ್ಯಗಳ, ಅಪಹರಿಪ–ಪರಮಾತ್ಮ ಅಪಹಾರ ಮಾಡೋವನಾಗಿ ಮಹಾಫಲ ಹೊಂದಬೇಕಾದ್ದಕ್ಕೆ, ಅಲ್ಪ ಫಲದಿಂದ ಪರ್ಯವಸಾನ ಮಾಡತಾನೆ. ಮತ್ತು ಮುಕ್ತಿಯೋಗ್ಯರಾದ ಕಾಲಕ್ಕೂ 'ಕೃಷ್ಣಾರ್ಪಣ' ಎನ್ನದ ಸತ್ಪುಣ್ಯಗಳನ್ನು ಅಸುರರು ಅಪಹರಿಸುತ್ತಾರೆ. ಅದರನ್ನ ಅವರಿಗೆ ದಕ್ಕಗೊಡದೆ ಪರಮಾತ್ಮ ಅಪಹರಿಸಿ ಪುಣ್ಯ ಮಾಡಿದವರಿಗೆ ಅಲ್ಪ ಫಲ ಕೊಟ್ಟು ಉಳದದ್ದು ದೇವತೆಗಳಿಗೆ ವಿಭಾಗ ಮಾಡಿ ಕೊಡೋವನಾಗತಾನೆ.

**ತುಂದಿವಿಡಿದಾಶಿರದ ಪರಿಯಂ ।**
**ತೊಂದೆ ವ್ಯಾಪಿಸಿ ಇಹುದು ತಾವರೆ ।**
**ಕಂದನಿಹನದರೊಳಗೆ ಇದಕೀರ್ರೈದು ಶಾಖೆಗಳು ॥**
**ಒಂದಧಿಕದಶಕರಣಗಳು ಸಂ ।**
**ಬಂಧಗೈದಿಹವಲ್ಲಿ ರವಿಶಶಿ ।**
**ಸಿಂಧುನಾಸತ್ಯಾದಿಗಳು ನೆಲೆಗೊಂಡಿಹರು ಸತತ ॥ ೧೨ ॥**

ಇಂದ್ರಿಯಗಳು ವ್ಯಾಪಿಸಿದ ನಾಡಿಗಳ ಹೇಳತಾರೆ.

ತುಂದಿ–ವೃಷಣಾಸನ ಮಧ್ಯಗತ ಪೂರ್ವೋಕ್ತ ನಾಡಿ ಉತ್ಪತ್ತಿಗೆ ಕಾರಣವಾದ ಗಡ್ಡಿ, ವಿಡಿದು–ಈ ಗಡ್ಡಿಯಲ್ಲಿ ಸುಷುಮ್ನಾ ನಾಡಿ ಉತ್ಪನ್ನವಾಗಿ ಇದು ಆರಂಭ ಮಾಡಿ, ಆ ಶಿರದ ಪರಿಯಂತ–ಆಯಾ ದೇಹಗತ ಶಿರಸ್ಸಿನಲ್ಲಿ ವಿದ್ಯಮಾನವಾದ ಬ್ರಹ್ಮರಂಧ್ರ ಪರಿಯಂತ, ಒಂದೆ–ಈ ಸುಷುಮ್ನಾ ನಾಡಿ ಒಂದೇ, ವ್ಯಾಪಿಸಿ ಇಹುದು–ವ್ಯಾಪಿಸಿ ಇರೋದಾಗಿ ಅದೆ. ಈ ಪ್ರಕಾರ ಋಜುವಾಗಿ ವ್ಯಾಪಿಸಿ ಇರೋ ನಾಡಿ ಇದು ಒಂದೇ. ಅನ್ಯ

ನಾಡಿಗಳು ಹೀಂಗಿಲ್ಲ. ವ್ಯತ್ಯಸ್ತವಾಗಿ ಅವೆ. ಅದರೊಳಗೆ—ಈ ಸುಷುಮ್ನಾ ನಾಡಿ ಒಳಗೆ, ತಾವರೆಕಂದನಿಹ—ಕಮಲದಲ್ಲಿ ಉತ್ಪನ್ನರಾದ ಬ್ರಹ್ಮದೇವರು ಅಭಿಮಾನಿಯಾಗಿ ಇದ್ದಾರೆ. ಇದಕೆ ಈರೈದು ಶಾಖಾಗಳು—ಈ ಸುಷುಮ್ನಾಕ್ಕೆ ಹತ್ತು ಶಾಖಾಗಳು. ಅಂತು. ಹನ್ನೊಂದು ಆಗತವೆ. ಈ ಹನ್ನೊಂದು ಶಾಖಾಗಳು, ಒಂದಧಿಕದಶಕರಣಗಳು—ದಶೇಂದ್ರಿಯಗಳು, ಮನಸ್ಸು ಅಂದರೆ, ಮನೋ ಇಂದ್ರಿಯ, ಅಂತು ಏಕಾದಶೇಂದ್ರಿಯ ಗಳು. ಇವ್ರಗಳಲ್ಲಿ, ಸಂಬಂಧಗೈದಿಹವ್ರು—ಸಂಬಂಧವಾಗಿ ಇರೋವಾಗಿ ಅವೆ. ಇದರ ವಿವರ ಪೂರ್ವದಲ್ಲಿ ೧೦೧ ನಾಡೀ ವಿಭಾಗ ಹೇಳಿದ್ದು. ಸುಷುಮ್ನಾ ನಾಡೀ ವ್ಯತಿರಿಕ್ತ ಸುಷುಮ್ನಾ ಸಾಂಕೇತ ಆರ್ಯಕಾ, ವಜ್ರಿಕಾ, ಪ್ರಕಾಶಿನೀ, ವೈದ್ಯುತೀ ಎಂತ ನಾಲ್ಕು ನಾಡೀಗಳ ವಿಭಾಗ. ಈಗ ಹೇಳೋದು ಸುಷುಮ್ನಾ ಶಾಖಾ ಎಂತ ತಿಳಿಯಬೇಕು.

| ಶಬ್ದ ಕೃತುನಾಡಿ ಇದೇ ಸುಷುಮ್ನಾ | ಮನಸ್ಸು | ಗರುಡ, ಶೇಷ, ಇಂದ್ರ, ಕಾಮ | ಗೋವಿಂದ |
|---|---|---|---|
| ಶಬ್ದಗ್ರಹನಾಡಿ | ಶ್ರವಣೇಂದ್ರಿಯ | ಚಂದ್ರ | ವಿಷ್ಣು |
| ರೂಪಗ್ರಹನಾಡಿ | ನೇತ್ರೇಂದ್ರಿಯ | ಸೂರ್ಯ | ಮಧುಸೂದನ |
| ಸ್ಪರ್ಶಗ್ರಹನಾಡಿ | ತ್ವಗಿಂದ್ರಿಯ | ಅಹಂಕಾರಪ್ರಾಣ | ತ್ರಿವಿಕ್ರಮ |
| ರಸಗ್ರಹನಾಡಿ | ಜಿಹ್ವೇಂದ್ರಿಯ | ವರುಣ | ವಾಮನ |
| ಗಂಧಗ್ರಹನಾಡಿ | ನಾಸಿಕೇಂದ್ರಿಯ | ಅಶ್ವಿನೀ ದೇವತೆಗಳು | ಶ್ರೀಧರ |
| ಹಸ್ತಿ ಜಿಹ್ವಾ-ಅಲಂಬುಸಾ | ಪಾಣಿದ್ವಯ | ದಕ್ಷ | ಪದ್ಮನಾಭ |
| ಯಶಸ್ವಿನೀ ನಾಡಿ | ವದನ | ಅಗ್ನಿ | ಹೃಷೀಕೇಶ |
| ಗಾಂಧಾರೀ-ಪೂಷಾ | ಪಾದದ್ವಯ | ಜಯಂತ | ದಾಮೋದರ |
| ಶಂಖಿನೀನಾಡಿ | ಗುದ | ಮಿತ್ರನಾಮಕಸೂರ್ಯ | ಸಂಕರ್ಷಣ |
| ಕುಹುನಾಡಿ | ಉಪಸ್ಥ | ಸ್ವಾಯಂಭುವ ಮನು | ವಾಸುದೇವ |

ಈ ಪ್ರಕಾರ ನಾಡಿಗಳಲ್ಲಿ ಇಂದ್ರಿಯಗಳು, ತದಭಿಮಾನಿಗಳು, ತನ್ನಿಯಾಮಕ ಭಗವದ್ರೂಪ ಗಳು ಇರೋವಾಗಿ ಅವೆ. ಆ ಎರಡು ನಾಡಿಗಳು ಹೆಚ್ಚಾಗಿ ಅವೆ ಎಂತ ತೋರತದೆ. ಒಂದರಲ್ಲಿ ಪ್ರಭೇದಗಳು.

## ಪ್ರಕಾರಾಂತರ

ಇಡಾ—ಎಡದ ಮೂಗು
ಪಿಂಗಳಾ—ಬಲದ ಮೂಗು
ಸುಷುಮ್ನಾ—ಬ್ರಹ್ಮರಂಧ್ರ
ಗಾಂಧಾರಿ—ಎಡದ ಕಣ್ಣು
ಹಸ್ತಿ ಜಿಹ್ವಾ—ಬಲದ ಕಣ್ಣು
ಪೂಷಾ—ಬಲದ ಕಿವಿ
ಯಶಸ್ವಿನೀ—ಎಡದ ಕಿವಿ
ಅಲಂಬುಸಾ—ಮುಖದ್ವಾರ
ಕುಹು—ಲಿಂಗ, ಶಿಶ್ನ
ಶಂಖಿನೀ—ಗುದಸ್ಥಾನ

ಇವ್ರಗಳು ದಶದ್ವಾರಗಳ ಆಶ್ರಯಿಸಿ ಇರ ತಕ್ಕ ನಾಡಿಗಳು. ಅಲ್ಲಿ—ಆ ಏಕಾದಶೇಂ ದ್ರಿಯಗಳಲ್ಲಿ, ರವಿಶಶಿಸಿಂಧುನಾಸತ್ಯಾದಿ ಗಳು—ಸೂರ್ಯ, ಚಂದ್ರ, ವರುಣ, ಅಶ್ವಿನೀ ದೇವತೆಗಳು, ಮೊದಲಾದವರು, ಇವರು ಯಾವತ್ತೂ ಮುಂದಿ ಇಂದ್ರಿಯಾಭಿಮಾನಿ ಗಳು. ನೆಲೆಗೊಂಡಿಹರು ಸತತ—ನಿರಂತರ ಆವಾಸರಾಗಿ ಇದ್ದಾರೆ ಎಂತ ತಿಳಿಯಬೇಕು.

**ಪೊಕ್ಕಳಡಿವಿಡಿದೊಂದೆ ನಾಡಿಯು ।**
**ಸುಕ್ಕದಲೆ ಧಾರಾಳರೂಪದಿ**
**ಸಿಕ್ಕಿಹುದು ನಡುದೇಹದೊಳಗೆ ಸುಷುಮ್ನನಾಮದಲಿ ॥**
**ರಕ್ಕಸರನೊಳ ಪೊಗಗೊಡದೆ ದಶ ।**
**ದಿಕ್ಕಿನೊಳಗೆ ಸಮೀರದೇವನು ।**
**ಲೆಕ್ಕಿಸದೆ ಮತ್ತೊಬ್ಬರನು ಸಂಚರಿಪ ದೇಹದೊಳು ॥ ೧೩ ॥**

ಸುಷುಮ್ನಾ ನಾಡಿಯಲ್ಲಿ ವಾಯುದೇವರು ದೈತ್ಯರನ್ನ ಪ್ರವೇಶಮಾಡಿಸೋದಿಲ್ಲ ಎಂತ ಹೇಳತಾರೆ.

ಪೊಕ್ಕಳಡಿವಿಡಿದು–ನಾಭಿಗೆ ಅಧೋಭಾಗಗತ ವೃಷಣಾಸನ ಮಧ್ಯಗತ ತುಂದಿ ಆರಂಭಮಾಡಿ, ಒಂದೆ ನಾಡಿಯು–ಸುಷುಮ್ನಾನಾಡಿ ಒಂದೇ, ಸುಕ್ಕದಲೆ–ಡೊಂಕು ಇಲ್ಲದೇನೆ, ಧಾರಾಳರೂಪದಿ–ಸರಿಯಾಗಿ ಉದ್ದಕ್ಕೆ ಧಾರಾಳರೂಪದಿಂದ, ಸುಷುಮ್ನನಾಮದಲಿ–ಸುಷುಮ್ನಾ ಎಂಬ ಹೆಸರಿನಿಂದ ಹೊರಟು, ನಡುದೇಹದೊಳಗೆ–ದೇಹದ ಒಳಗೆ, ವಜ್ರಿಕಾ, ಆರ್ಯಕಾ, ಪ್ರಕಾಶಿನೀ, ವೈದ್ಯುತೀ ಈ ನಾಡಿಗಳ ಮಧ್ಯದಲ್ಲಿ, ಸಿಕ್ಕಿಹುದು–ಶಿರಃಪರಿಯಂತ ವ್ಯಾಪಿಸಿ ಅತಿ ಕೃಶವಾಗಿ, ಸೂಕ್ಷ್ಮವಾಗಿ ಅದೆ. ಒಳಗೆ–ಈ ಸುಷುಮ್ನಾ ನಾಡಿ ಒಳಗೆ, ರಕ್ಕಸರನು–ಸ್ಥೂಲದೇಹಗತರಾದ ದೈತ್ಯರ, ಒಳ ಪೊಗಗೊಡದೆ–ಪ್ರವೇಶ ಮಾಡಿಸದ ಹಾಂಗೆ, ದಶದಿಕ್ಕಿನೊಳಗೆ–ಹತ್ತು ದಿಕ್ಕುಗಳಲ್ಲಿ ವ್ಯಾಪಿಸಿ ಇರುವ ಹತ್ತು ನಾಡಿ, ಹತ್ತು ಇಂದ್ರಿಯಗಳು, ಇವುಗಳಲ್ಲಿ, ಸಮೀರದೇವನು–ವಾಯುದೇವರು, ಪ್ರಾಣಾದಿ ಪಂಚರೂಪ, ನಾಗಾದಿ ಪಂಚರೂಪ, ಅಂತು ದಶರೂಪದಿಂದ ಕಾದಿದ್ದು, ಲೆಕ್ಕಿಸದೆ–ಅಸುರರನ್ನ ಲಕ್ಷ್ಯಮಾಡದೆ ಮತ್ತೊಬ್ಬರನು–ದೇವತೆಗಳ ವ್ಯತಿರಿಕ್ತ ಮತ್ತೊಬ್ಬರಾದ ದೈತ್ಯರನ್ನ ನಾಡೀ ಒಳಗೆ ಪ್ರವೇಶ ಮಾಡಿಸಧಾಂಗೆ ತಾನು, ದೇಹದೊಳು–ದೇಹದಲ್ಲಿ ದಶರೂಪದಿಂದ ದಶಸ್ಥಾನದಲ್ಲಿ, ಸಂಚರಿಪ–ಸಂಚರಿಸೋವನಾಗಿ ಇದ್ದಾನೆ.

**ಇನಿತು ನಾಡೀಶಾಖೆಗಳು ಈ ।**
**ತನುವಿನೊಳಗಿಹವೆಂದು ಏಕಾ ।**
**ತ್ಮನು ದ್ವಿಸಪ್ತತಿಸಾವಿರಾತ್ಮಕನಾಗಿ ನಾಡಿಯೊಳು ॥**
**ವನಿತೆಯಿಂದೊಡಗೂಡಿ ನಾರಾ ।**
**ಯಣ ದಿವಾರಾತ್ರಿಯೊಳಗೀ ಪರಿ ।**
**ವನಜಜಾಂಡದೊಳಖಿಳಜೀವರೊಳಿದ್ದು ಮೋಹಿಸುವ ॥ ೧೪ ॥**

ಜೀವರನ್ನ ಮೋಹಯುಕ್ತರನ್ನಾಗಿ ಮಾಡತಾನೆಂತ ಹೇಳತಾರೆ.

ಇನಿತು–ಈ ಪೂರ್ವೋಕ್ತ ಪ್ರಕಾರ, ನಾಡೀಶಾಖೆಗಳು–೭೨,೦೦೦ ನಾಡೀ ಶಾಖೆಗಳು, ಈ ತನುವಿನೊಳಗೆ–ಈ ವರ್ತಮಾನ ಸ್ಥೂಲದೇಹದ ಒಳಗೆ, ಇಹವೆಂದು–ಇರೋ

ವಾಗಿ ಅವೆ ಎಂತ ತಿಳಿದು, ನಾಡೀಗತ ವಿಚಾರಪೂರ್ವೋಕ್ತ ಪ್ರಕಾರ ಅನುಸಂಧಾನದಿಂದ ಅರಿತವನಾಗಿ ಮತ್ತೆ, ಏಕಾತ್ಮನು–ಸರ್ವೋತ್ತಮನಾದ ಸ್ವಾಮಿಯಾದ, ನಾರಾಯಣ– ಮೂಲರೂಪನಾದ ನಾರಾಯಣದೇವರು, ವನಿತೆಯಿಂದೊಡಗೂಡಿ–ತನ್ನ ಪತ್ನಿಯಾದ ಲಕ್ಷ್ಮೀದೇವಿಯರಿಂದ ಕೂಡಿಕೊಂಡು, ನಾಡಿಯೊಳು–೭೨,೦೦೦ ನಾಡಿಗಳ ಒಳಗೆ, ದ್ವಿಸಪ್ತತಿಸಾವಿರಾತ್ಮಕನಾಗಿ–ಎಪ್ಪತ್ತೆರಡು ಸಾವಿರಾತ್ಮಕ ಸಂಖ್ಯಾಯುಕ್ತವಾದ ರೂಪ ಗಳಿಂದ ಯುಕ್ತನಾಗಿ ಮತ್ತೆ ಅಷ್ಟೇ ಸಂಖ್ಯಾ ಲಕ್ಷ್ಮೀರೂಪಗಳಿಂದ ಕೂಡಿದವನಾಗಿ, ದಿವಾರಾತ್ರಿಯೊಳಗೆ–ನಾಡೀಗತ ಹಗಲಭಿಮಾನಿ, ರಾತ್ರಿ ಅಭಿಮಾನಿ ದೇವತೆಗಳ ಒಳಗೆ ಅಂತರ್ಯಾಮಿಯಾಗಿ ಇದ್ದಾನೆ. ಈ ಪರಿ–ಇವೇ ಪ್ರಕಾರ, ವನಜಜಾಂಡದೊಳು– ವನ–ಉದಕದೆಶೆಯಿಂದ, ಜ–ಉತ್ಪನ್ನವಾದ ಕಮಲದಲ್ಲಿ, ಜ–ಉತ್ಪನ್ನರಾದ ಬ್ರಹ್ಮ ದೇವರು, ಅಂಡದೊಳು–ದೇಹಸಾಂಕೇತವಾದ ಐವತ್ತು ಕೋಟಿ ವಿಸ್ತಾರವಾದ ಬ್ರಹ್ಮಾಂಡ ದಲ್ಲಿ ಇರತಕ್ಕ, ಅಖಿಳಜೀವರೊಳಿದ್ದು–ಸಮಸ್ತ ಪ್ರಾಣಿ ಅಂತರ್ಗತನಾಗಿದ್ದು, ಮೋಹಿಸುವ– ಆಯಾ ಜೀವರ ಯೋಗ್ಯತಾನುಸಾರ ವಿಷಯದಲ್ಲಿ ಮೋಹಯುಕ್ತರನ್ನಾಗಿ ಮಾಡತಾನೆ.

[ದಾವ ದಾವ ನಾಡಿಯಿಂದ ದಾವ ದಾವ ಇಚ್ಛಾ ಹುಟ್ಟಿಸುತ್ತಾನೆಂದರೆ, ಸುದರ್ಶನನಾಡೀ–ಪ್ರತ್ಯಕ್ಷದಿಂದ ಜ್ಞಾಪಕದಿಂದ ಭಕ್ತರ ಸಂದರ್ಶನೇಚ್ಛಾ ಈ ನಾಡೀ ಶ್ರೋತ್ರಪ್ರವೇಶ. ಜಿತಾನಾಡೀ–ಈ ನಾಡೀ ದ್ವಾರಾ ಧೈರ್ಯಜನಕ. ಈ ನಾಡೀ ನಾಸಾಪ್ರವೇಶ. ಸೌಮ್ಯನಾಡೀ–ಶಾಂತಿ ಉತ್ಪತ್ತಿ, ಜಿಹ್ವಾಪ್ರವೇಶ. ಮೋಹನಾಡೀ– ಮೋಹಜ್ಞಾನ ಉತ್ಪತ್ತಿ, ತ್ವಗಿಂದ್ರಿಯಪ್ರವೇಶ. ಕುಮಾರನಾಡೀ–ಸಂತಾನೇಚ್ಛಾ, ವಾಕ್ ಪ್ರವೇಶ. ಮೃತಾನಾಡೀ–ಮರಣೇಚ್ಛಾ, ಹಸ್ತಪ್ರವೇಶ. ಸತ್ಯಾನಾಡೀ–ಸತ್ಯೇಚ್ಛಾ, ಪಾದಪ್ರವೇಶ. ಸುಮಧ್ಯಮನಾಡೀ–ಮಿಶ್ರಜ್ಞಾನ, ಗುದಪ್ರವೇಶ. ಮಾನಾಶನಾಡೀ– ಉಪಾಸೇಚ್ಛಾ, ಚಕ್ಷುಪ್ರವೇಶ. ನಾಶೀನಾಡೀ–ತಿನಸು ಉಂಟಾಗತದೆ. ಸ್ತ್ರೀಭೋಗೇಚ್ಛಾ, ಉಪಸ್ಥಪ್ರವೇಶ, ಶಿರಾನಾಡೀ–ಸಂಭೋಗಕ್ರಿಯಾ, ಮನಃಪ್ರವೇಶ. ಅಸುರಾನಾಡೀ– ಸುರಾಪಾನೇಚ್ಛಾ, ಅಹಂಕಾರವೃತ್ತಿಪ್ರವೇಶ. ಸೂರ್ಯನಾಡೀ–ತಿಳುವಳಿಕೆ ಉಂಟಾಗೋ ಇಚ್ಛಾ, ಬುದ್ಧಿಪ್ರವೇಶ. ಭಾಸ್ವತೀ ನಾಡೀ–ತಿಳುವಳಿಕೆ ಉಂಟಾಗೋಣ, ಚಿತ್ತಪ್ರವೇಶ. ಈ ಪ್ರಕಾರ ನಾಡೀಗತ ನಾರಾಯಣ, ನಾಡಿಗಳ ದ್ವಾರಾ ಮೋಹ ಹುಟ್ಟಿಸತಾನೆಂತ ತಾತ್ಪರ್ಯ. ಆಯಾ ಇಂದ್ರಿಯಗಳಲ್ಲಿ ಆಯಾ ನಾಡಿಗಳು ಪ್ರವೇಶಮಾಡಿ ಅದೇ ಪೂರ್ವೋಕ್ತ ಹದಿನಾಲ್ಕು ನಾಡಿಗಳಲ್ಲಿ ದಾವ ದಾವ ನಾಡಿಯಲ್ಲಿ ಪರಮಾತ್ಮ ಜೀವನ ಮನಸ್ಸು ಪ್ರವೇಶ ಮಾಡಸತಾನೋ ಆಯಾ ನಾಡಿಯಂತೆ ಇಚ್ಛಾ ಉಂಟುಮಾಡತಾನೆ. ಈ ಪ್ರಕಾರ ಪ್ರತಿನಾಡಿಯಲ್ಲಿ ಕಾರ್ಯಭೇದಗಳು ಅವೆ ಎಂತ ಅರ್ಥ.]

**ದಿನದಿನದಿ ವರ್ಧಿಸುವ ಕುಮುದಾ ।**
**ಪ್ತನ ಮುಯೂಖದ ಸೊಬಗ ಗತಲೋ ।**
**ಚನ ವಿಲೋಕಿಸಿ ಮೋದಬಡಬಲ್ಲನೆ ನಿರಂತರದಿ ॥**

**ಕುನರರಿಗೀ ಸುಕಥಾಮೃತದ ಭೋ ।**
**ಜನದಸುಖ ದೊರಕುವದೆ ಲಕುಮಿಮಾ ।**
**ಮನೋಹರನ ಸದ್ಗುಣವ ಕೀರ್ತಿಪ ಭಕುತಗಲ್ಲದಲೆ ॥ ೧೫ ॥**

ಈ ಗ್ರಂಥ ಹರಿಭಕ್ತಿಗೆ ಪ್ರಯೋಜನ ಎಂತ ಹೇಳತಾರೆ.

ದಿನದಿನದಿ–ಪ್ರತಿದಿನದಲ್ಲೂ, ಶುಕ್ಲಪಕ್ಷದಲ್ಲಿ, ವರ್ಧಿಸುವ–ಕಾಂತಿಯಿಂದ ಅಭಿವೃದ್ಧಿಯಾಗುವ, ಕುಮುದಾಪ್ತನ–ಕುಮುದಪುಷ್ಪಗಳಿಗೆ ಆಪ್ತನಾದ ಚಂದ್ರನ, ಮಯೂಖದ ಸೊಬಗ–ಕಿರಣಗಳ ಸೌಂದರ್ಯವು, ಗತಲೋಚನ–ಅಂಧಕನಾದ ಪುರುಷ, ವಿಲೋಕಿಸಿ–ವಿಶೇಷಾಕಾರವಾಗಿ ನೋಡಿ, ಮೋದಬಡಬಲ್ಲನೇ–ಸಂತೋಷಪಡೋದಕ್ಕೆ ಅರಿಯೋನೆ? ಅರಿಯಲಾರ. ತದ್ವತ್, ದಿನದಿನದಲ್ಲಿ ಹರಿಕಥಾಮೃತಸಾರವೆಂಬ ಚಂದ್ರನು, ಜ್ಞಾನ ಭಕ್ತ್ಯಾದಿಗಳನ್ನು ಅಭಿವೃದ್ಧಿಮಾಡತಕ್ಕವನು. ಇಂಥಾ ಚಂದ್ರನ್ನ, ಕಣ್ಣು ಇಲ್ಲದೆ ಇರುವ ಕುರುಡನಾದ, ಕುನರರಿಗೆ–ವಿಷಯಾಸಕ್ತನಾದ ಜ್ಞಾನನೇತ್ರದಿಂದ ಶೂನ್ಯನಾದ ಕುತ್ಸಿತ ನರನಿಗೆ, ಈ ಸುಕಥಾಮೃತದ ಭೋಜನದ ಸುಖ–ವರ್ತಮಾನ ಸಮೀಚೀನವಾದ ಹರಿಕಥಾಮೃತಸಾರದ ಭೋಜನಾ ಎಂದರೆ, ಶ್ರವಣೇಂದ್ರಿಯ ದ್ವಾರ ಭೋಜನ ಮಾಡಿ, ಅದರಿಂದ ಆಗತಕ್ಕ ಸುಖ, ನಿರಂತರದಿ–ಸದಾ ಸರ್ವಕಾಲವೂ, ದೊರಕುವದೆ–ಸಿಕ್ಕೋದೇ ಎಂದರೆ, ಸಿಕ್ಕಲಾರದೆಂದು ತಾತ್ಪರ್ಯ. ಲಕುಮಿಮಾಮನೋಹರನ–ಲಕ್ಷ್ಮೀದೇವೇರ ಮನಸ್ಸನ್ನು ಅಪಹರಿಸತಕ್ಕ ಲಾವಣ್ಯಾದಿ ಸೌಂದರ್ಯವುಳ್ಳ ಮಹಾಮಹಿಮನಾದ ಪರಮಾತ್ಮನ, ಸದ್ಗುಣವ–ಸತು, ಚಿತು, ಆನಂದ ಈ ಗುಣಗಳ, ಕೀರ್ತಿಪ–ಮಾಹಾತ್ಮ್ಯ ತಿಳಿದು ಪರಮಾತ್ಮನ್ನ ಕೀರ್ತನ ಮಾಡತಕ್ಕ, ಭಕುತಗಲ್ಲದಲೆ–ಭಕ್ತರಿಗೇ ಹೊರ್ತು ಅನ್ಯರಿಗೆ ಇದರ ಭೋಜನದ ಸುಖ ದೊರೆಯಲಾರದು ಎಂತ ತಾತ್ಪರ್ಯ

**ಈ ತನುವಿನೊಳಗಿಹವು ಓತ ।**
**ಪ್ರೋತರೂಪದಿ ನಾಡಿಗಳು ಪುರು ।**
**ಹೂತಮುಖರಲ್ಲಿಹರು ತಮ್ಮಿಂದಧಿಕರೊಡಗೂಡಿ ॥**
**ಭೀತಿಗೊಳಿಸುತ ದಾನವರ ಸಂ ।**
**ಘಾತನಾಮಕ ಹರಿಯ ಗುಣ ಸಂ ।**
**ಪ್ರೀತಿಯಲಿ ಸದುಪಾಸನೆಯ ಗೈವುತಲೆ ಮೋದಿಪರು ॥ ೧೬ ॥**

ದೇಹಗತ ದೈತ್ಯರನ, ದೇಹಗತ ದೇವತೆಗಳು ಭೀತಿಪಡಸತಾರೆ ಅಂತ ಹೇಳತಾರೆ.

ಈ ತನುವಿನೊಳಗೆ–ಈ ಸ್ಥೂಲದೇಹದ ಒಳಗೆ, ನಾಡಿಗಳು–೭೨,೦೦೦ ನಾಡಿಗಳು, ಓತಪ್ರೋತರೂಪದಿ–ತಂತುಗಳಿಂದ ವಸ್ತ್ರ, ತಿರ್ಯಕ್ ತಂತುಗಳಿಂದಲೂ, ಊರ್ಧ್ವ ತಂತುಗಳಿಂದಲೂ ನಿರ್ಮಾಣ ಹ್ಯಾಂಗೋ, ತದ್ವತ್, ವಸ್ತ್ರಗತ ದಾರಗಳು ದೃಷ್ಟಾಂತವಾಗಿ, ಇಹವು–ಇರೋವಾಗಿ ಅವೆ. ದೃಷ್ಟಾಂತಾನುಸಾರ ಸುತ್ತಿಕೊಂಡು ಇರೋವಾಗಿ

ಅವೆ. ಅಲ್ಲಿ–ಈ ಪ್ರಕಾರ ಇರತಕ್ಕ ೭೨,೦೦೦ ನಾಡಿಗಳಲ್ಲಿ, ಪುರುಹೂತಮುಖರು–ಇಂದ್ರನೇ ಮೊದಲಾದ ತತ್ವದೇವತೆಗಳು, ತಮ್ಮಿಂಪಧಿಕರೊಡಗೂಡಿ–ತಮ್ಮ ನೋಡಲು ಅಧಿಕರಾದ ಗರುಡ, ಶೇಷ, ವಾಯು, ಬ್ರಹ್ಮ, ಸರಸ್ವತೀ ಮೊದಲಾದವರ ಸಂಗಾತ ಕೂಡಿಕೊಂಡು, ಇಹರು–ನಾಡೀಗಳಲ್ಲಿ ಇರೋವರಾಗಿದ್ದಾರೆ. ಭೀತಿಗೊಳಿಸುತ–ನಾಡಿಗಳಲ್ಲಿ ಇರತಕ್ಕ ದೈತ್ಯರನ್ನ ಭಯಪಡಿಸುತ್ತ, ದಾನವರ–ನಾಡೀಗಳಲ್ಲಿ ಇರತಕ್ಕ ದೈತ್ಯರ, ಸಂಘಾತ–ವ್ಯಾಪಾರ ನಡಿಯದಂತೆ ಅವರನ್ನ ಥಂಡಾಗಿ ಸಂಹಾರ ಮಾಡುತ್ತ, ದೈತ್ಯರ ಸಂಹಾರಕಾರಕನಾದ ಸಂಕರ್ಷಣ ನಾಮದಿಂದ ಕರಿಸತಕ್ಕ ನಾಡೀಗತನಾದ, ನಾಮಕ–ಸಂಘಾತನಾಮಕನಾದ, ಹರಿಯ–ಪರಮಾತ್ಮನ, ಗುಣ ಸಂಪ್ರೀತಿಯಲಿ–ಸುಗುಣಗಳ ಅತ್ಯಂತ ಪ್ರೀತಿಯಿಂದ ತಥಾ ಆಸಕ್ತಿಯಿಂದ, ಸದುಪಾಸನೆಯ ಗೈವುತಲೆ–ಸಮೀಚೀನವಾದ ಉಪಾಸನಾ ಮಾಡುತಲೇ, ಮೋದಿಪರು–ಸದಾ ಸಂತೋಷದಿಂದ ಇರೋವರಾಗಿ ಇದ್ದಾರೆ. ಈ ಪ್ರಕಾರ ಅನುಸಂಧಾನದಿಂದ ಯುಕ್ತರಾದವರಿಗೆ ದೇಹದಲ್ಲಿ ದೈತ್ಯರ ವ್ಯಾಪಾರ, ದೇವತೆಗಳು ನಡಿಸೋದಿಲ್ಲ. ನಾಡಿಗಳ ವಿಶೇಷ ಪ್ರಮಾಣಗಳು ಬರಿಯಲ್ಪಡುತ್ತವೆ.

ಕಂಠಮಧ್ಯೇ ಸ್ಥಿತಾ ನಾಡೀ ಸುಷುಮ್ನೇತಿ ಪ್ರಕೀರ್ತಿತಾ ।
ತಿಷ್ಠಂತಿ ಪರಿತಸ್ಸರ್ವಾಶ್ಚಕ್ರೇಸ್ಮಿನ್ನಾಡಿಕಾಸ್ತತಃ ॥ ೧ ॥

ಸಾರ್ಧತ್ರಿಕೋಟಿನಾಡ್ಯೋ ಹಿ ಸ್ಥೂಲಸೂಕ್ಷ್ಮಾಶ್ಚ ದೇಹಿನಾಂ ।
ನಾಭಿಕಂದನಿಬಧ್ಯಾಸ್ತಾಃ ತಿರ್ಯಗೂರ್ಧ್ವಮಧಃಸ್ಥಿತಾಃ ॥ ೨ ॥

ತಿಸ್ರಃ ಕೋಟ್ಯೋರ್ಧಕೋಟೀ ಚ ಯಾನಿ ಲೋಮಾನಿ ಮಾನುಷೇ ।
ನಾಡೀಮುಖಾನಿ ಸರ್ವಾಣಿ ಧರ್ಮಬಿಂದುಂ ಕ್ಷರಂತಿ ಚ ॥ ೩ ॥

ನಾನಾನಾಡೀಪ್ರಸವಗಂ ಸರ್ವಭೂತಾಂತರಾತ್ಮನಿ ।
ಊರ್ಧ್ವಮೂಲಮಧಃಶಾಖಂ ವಾಯುಮಾರ್ಗೇಣ ಸರ್ವಗಂ ।
ದ್ವಿಸಪ್ತತಿಸಹಸ್ರಾಣಿ ನಾಡ್ಯಃ ಸ್ಯುಃ ವಾಯುಗೋಚರಾಃ ॥ ೪ ॥

ಕರ್ಮಮಾರ್ಗೇಣ ಸುಷಿರಾ ತಿರ್ಯಂಚ ಸುಶಿರಾತ್ಮಕಾ ।
ತರ್ಪಯಂತಿ ರಸೈರ್ದೇಹಂ ನದ್ಯಸ್ತೋಯೈರಿವಾರ್ಣವಂ ॥ ೫ ॥

ದ್ವಿಸಪ್ತತಿಸಹಸ್ರಂ ತು ತಾಸಾಂ ಸ್ಥೂಲಂ ಪ್ರಕೀರ್ತಿತಾಃ ।
ದೇಹೇ ಧಮನ್ಯೋ ಧನ್ಯಾಸ್ತಾಃ ಪಂಚೇಂದ್ರಿಯಗುಣಾವಹಾಃ ॥ ೬ ॥

ನಾಭಿಕಂದಸ್ಥಿತಾಸ್ತಾಸ್ತು ನಾಭೌ ಚಕ್ರೇ ಪ್ರವೇಷ್ಟಿತಾಃ ।
ತಾಸಾಂ ಚ ಸೂಕ್ಷ್ಮಸುಶಿರ ಶತಾನಿ ಸಪ್ತಸ್ವಧಾನಿ ವೈ ॥ ೭ ॥

ರಸಕೃದನ್ನರಸಂ ವಹದ್ಭಿಃ ಆಪ್ಯಾಯತೇ ವಪುರಿದಂ ಹಿ ನೃಣಾ ।
ಮಮಿಾಷಾಮಂಬು ಪ್ರಸಿದ್ಧಿರಿವ ಸಿಂಧುಶಲೈಸ್ಸಮುದ್ರಂ ॥ ೮ ॥

ಆಪಾದತಃ ಪ್ರಭೃತಿ ಗಾತ್ರಮಶೇಷಮಾಸಾಂ
ಆಮಸ್ತಕಾದಪಿ ಚ ನಾಭಿಪುರಃಸ್ಥಿತೇನ |
ಏತನ್ಮೃದಂಗ ಇವ ಚರ್ಮಚಯೇನ ಬಂಧಂ
ಕಾಯಂ ಸೃಣಾಮಿಹಸಿರಾಶತಸಪ್ತಕೇನ || ೯ ||

ಇಳಾ ಚ ಪಿಂಗಳಾ ಚೈವ ಸುಷುಮ್ನಾ ಚ ಸರಸ್ವತೀ |
ವಾರುಣೀ ಚೈವ ಪೂಷಾ ಚ ಹಸ್ತಿಜಿಹ್ವಾ ಯಶಸ್ವಿನೀ || ೧೦ ||

ವಿಶ್ವೋದರೀ ಕುಹೂಶ್ಚೈವ ಶಂಖಿನೀ ಚ ಯಶಸ್ವಿನೀ |
ಅಲಂಬುಸಾ ಚ ಗಾಂಧಾರೀ ಮುಖ್ಯಾಶ್ಚೈತಾಶ್ಚತುರ್ದಶ || ೧೧ ||

ಇಳಾ ಚ ಪಿಂಗಳಾ ಚೈವ ಸುಷುಮ್ನಾ ಚ ಸರಸ್ವತೀ |
ಗಾಂಧಾರೀ ಹಸ್ತಿಜಿಹ್ವಾ ಚ ಕುಹೂ ಪೂಷಾ ಯಶಸ್ವಿನೀ || ೧೨ ||

ಏತಾಶ್ಚ ಪ್ರಾಣನಾಡ್ಯೋ ಹಿ ಜೀವಕೋಶಪ್ರತಿಷ್ಠಿತಾಃ |
ತತ್ರ ಪ್ರಧಾನನಾಡ್ಯಸ್ತು ದತ್ತಾ ವಾಯುಪ್ರವಾಹಕಾಃ || ೧೩ ||

ಇಳಾಪಿಂಗಳಯೋಶ್ಚೈವ ಸುಷುಮ್ನಾ ಚೋರ್ಧ್ವಗಾಮಿನೀ |
ಗಾಂಧಾರೀ ಹಸ್ತಿಜಿಹ್ವಾ ಚ ಪೂಷಾ ಚ ಗಮನೇ ಸ್ಥಿತಾ || ೧೪ ||

ಅಲಂಬುಸಾಯಶಸ್ವಿನ್ಯೌ ದಕ್ಷಿಣಾಂಗೇ ಸಮನ್ವಿತೌ |
ಕುಹೂ ಚ ಶಂಖಿನೀ ಚೈವ ವಾಮಾಂಗೇ ಚಾವಲಂಬಿತೇ || ೧೫ ||

ಏತಾಃ ಸುದರ್ಶನಾಡೀಷು ನಾನಾಕಾರ್ಯಪ್ರಸೂತಿಕಾಃ |
ಇಳಾ ಚ ವಾಮನಾಸಾಯಾಂ ದಕ್ಷಿಣೇ ಪಿಂಗಳಾ ಮತಾ |
ಸುಷುಮ್ನಾ ಬ್ರಹ್ಮರಂಧ್ರೇ ಚ ಗಾಂಧಾರೀ ವಾಮಚಕ್ಷುಷಿ || ೧೬ ||

ದಕ್ಷಿಣೇ ಹಸ್ತಿಜಿಹ್ವಾ ಚ ಪೂಷಾ ಕರ್ಣೇತಿ ದಕ್ಷಿಣೇ |
ವಾಮೇ ಯಶಸ್ವಿನೀ ಜ್ಞೇಯಾ ಮುಖೇ ಚಾಲಂಬುಸಾ ಮತಾ || ೧೮ ||

ಕುಹುಶ್ಚ ಲಿಂಗಮೂಲೇಸ್ಯಾಚ್ಛಂಖಿನೀ ಶಿರಸೋಪರಿ |
ಏವಂ ದ್ವಾರಂ ಸಮಾಶ್ರಿತ್ಯ ತಿಷ್ಠಂತಿ ದಶನಾಡಿಕಾಃ || ೧೯ ||

ಪ್ರಾಣಾಪಾನಸಮಾನಾಶ್ಚ ಉದಾನೋ ವ್ಯಾನ ಏವ ಚ |
ನಾಗಃ ಕೂರ್ಮೋಽಥ ಕೃಕಲೋ ದೇವದತ್ತೋ ಧನಂಜಯಃ || ೨೦ ||

ಏತೇ ನಾಡೀಷು ಸರ್ವಾಸು ಚರಂತಿ ದಶವಾಯವಃ |
ಏತೇಷು ವಾಯವಃ ಪಂಚ ಮುಖ್ಯಪ್ರಾಣಾದಯಃ ಸ್ಮೃತಾಃ || ೨೧ ||

ತೇಷು ಮುಖ್ಯತಮಾವೇತೌ ಪ್ರಾಣಾಪಾನೌ ನರೋತ್ತಮೌ |
ಪ್ರಾಣ ಏವೈತಯೋರ್ಮುಖ್ಯಸ್ಸರ್ವಪ್ರಾಣಭೃತಾಂ ಸದಾ || ೨೨ ||

ಶಬ್ದಗ್ರಹಾ ಶ್ರುತೌ ನಾಡೀ ರೂಪಗ್ರಹಾ ಚ ಲೋಚನೇ |
ಗಂಧಗ್ರಹಾ ನಾಸಿಕಾಯಾಂ ರಸನಾಯಾಂ ರಸಾವಹಾ || ೨೩ ||
ಏವಂ ತ್ವಚಿ ಸ್ಪರ್ಶವಾಹಾ ಶಬ್ದಕೃದ್ಧೃದಯಾನ್ಮುಖೇ |
ಮನೋಬುದ್ಧ್ಯಧಿಕಂ ಸರ್ವಂ ಹೃದಯೇಷು ಪ್ರತಿಷ್ಠಿತಂ || ೨೪ ||
ಪುರೀತತಾಮಸಸ್ತಸ್ಯಾ ನಿದ್ರಾ ಸಮುಭಿಜಾಯತೇ |
ಗಾಂಧಾರೀ ಹಸ್ತಿಜಿಹ್ವಾಖ್ಯಾ ಸಪೂಷಾಲಂಬುಸಾ ಮತಾ || ೨೫ ||
ಯಶಸ್ವಿನೀ ಶಂಖಿನೀ ಚ ಕುಹುಃ ಸ್ಯುಸ್ಸಪ್ತನಾಡಯಃ |
ಇಳಾ ಪೃಷ್ಟೇ ತು ಗಾಂಧಾರೀ ಮಯೂರಗಳಸನ್ನಿಭಾ || ೨೬ ||
ಸವ್ಯಪಾದಾದಿನೇತ್ರಾಂತಾ ಗಾಂಧಾರೀ ಪ್ರಕೀರ್ತಿತಾ |
ಹಸ್ತಿಜಿಹ್ವಾತ್ವಪಲಪ್ರೇಕ್ಷಾ ನಾಡೀ ತಸ್ಯಾಃ ಪುರಃಸ್ಥಿತಾಃ || ೨೭ ||
ಸವ್ಯಭಾಗಸ್ಯ ಮೂರ್ಧಾದಿಪಾದಾಂಗುಷ್ಟಾಂತಮಾಶ್ರಿತಾಃ |
ಪೂಷಾ ತು ಪಿಂಗಳಾ ಪೃಷ್ಟೇ ನೀಲಜೀಮೂತಸನ್ನಿಭಾ || ೨೮ ||

**ಜಲಟಕುಕ್ಕುಟಖೇಟಜೀವರ |**
**ಕಳೆವರಗಳೊಳಗಿದ್ದು ಕಾಣಿಸಿ |**
**ಕೊಳದೆ ತತ್ತದ್ರೂಪ ತನ್ನಾಮದಲಿ ಕರೆಸುತಲಿ ||**
**ಜಲರುಹೇಕ್ಷಣ ವಿವಿಧ ಕರ್ಮಂ |**
**ಗಳ ನಿರಂತರ ಮಾಡಿ ಮಾಡಿಸಿ ತ |**
**ತ್ಫಲಗಳುಣ್ಣದೆ ಸಂಚರಿಸುವನು ನಿತ್ಯಸುಖಪೂರ್ಣ || ೧೭ ||**

ನಾಡೀದ್ವಾರಾ ವ್ಯಾಪಾರಗಳ ನಡಿಸುತ್ತಾನೆ ಎಂತ ಹೇಳತಾರೆ.

ಜಲ–ಉದಕದಲ್ಲಿ, ಅಟ–ಸಂಚಾರ ಮಾಡತಕ್ಕ ಜಲಚರ ಪ್ರಾಣಿಗಳು, ಕುಕ್ಕುಟ–ಕು, ಎಂದರೆ ಭೂಮಿ, ಈ ಭೂಮಿಯಲ್ಲಿ ಸಂಚರಿಸತಕ್ಕ ಪ್ರಾಣಿಗಳು. ಮಾನುಷಾದಿ, ಪಶ್ವಾದಿ, ಖೇಟ–ಖೇ, ಆಕಾಶದಲ್ಲಿ, ಅಟ–ಸಂಚರಿಸತಕ್ಕ ಪ್ರಾಣಿಗಳು ಅಂದರೆ, ಪಕ್ಷಿಗಳು ಮೊದಲಾದುವು. ಪಕ್ಷಿಗಳೂ, ಬ್ರಹ್ಮಾದಿ ತ್ರಿವಿಧ ಜೀವರೂ, ಇದರಲ್ಲೇ ಅಂತರ್ಭೂತರು. ಜೀವರ–ಈ ಯಾವತ್ತೂ ಪ್ರಾಣಿಗಳ, ಕಳೆವರಗಳೊಳಗಿದ್ದು–ಪೂರ್ವೋಕ್ತ ಪ್ರಕಾರ ಸ್ಥೂಲದೇಹದಲ್ಲಿ, ನಾಡೀಗಳಲ್ಲಿ ಇದ್ದು, ಕಾಣಿಸಿಕೊಳದೆ–ದೇಹಗತ ಸರ್ವನಾಡಿಗಳ ಒಳಗೆ, ಸರ್ವ ಇಂದ್ರಿಯಗಳ ಒಳಗೆ ಪ್ರಕಾಶತೋ ಜೀವನೇನು, ಜೀವನ ಇಂದ್ರಿಯಗಳೇನು ವ್ಯಾಪ್ತವಾಗಿ ಅವೆ, ಆ ವ್ಯಾಪ್ತವಾದ ಸ್ವರೂಪೇಂದ್ರಿಯಗಳಿಂದ ಜಡೇಂದ್ರಿಯಗಳ ದ್ವಾರಾ ಸರ್ವಪದಾರ್ಥಗಳ ನೋಡತಾನೆ. ನೋಡಿ ಅದರನ್ನ ತಿಳಕೋತಾನೆ. ತದ್ವತ್, ದೇಹದ ಒಳಗಿನ ನಾಡ್ಯಾದಿಗಳ ಸ್ಥಿತಿಗಳ ಕಾಣೋದಿಲ್ಲ. ಅದಕ್ಕೆ ದೃಷ್ಟಾಂತ, ಲೋಕದಲ್ಲಿ ಸರ್ವ ಪ್ರಾಣಿಗಳಿಗೆ ಎದುರಿಗೆ ಇರೋ ಪದಾರ್ಥ ಕಾಣತದೆ ಹೊರತು ಹಿಂದಿರುವ

ಪದಾರ್ಥಗಳು ಕಾಣೋದಿಲ್ಲ. ಹಿಂದೆ ತಿರುಗಿ ನೋಡಿದರೆ ಹಿಂದಿನ ಪದಾರ್ಥಗಳು ಕಾಣತವೆ ಹೊರತು ಮುಂದಿನ ಪದಾರ್ಥಗಳು ಕಾಣೋದಿಲ್ಲ. ತದ್ವತ್ ಜೀವನ ಇಂದ್ರಿಯಗಳು ಸ್ಥೂಲ ದೇಹದಲ್ಲಿ ಅಭಿಮುಖವಾಗಿ ವ್ಯಾಪ್ತವಾಗಿ ಪ್ರಾಕೃತ ವಿಷಯಗಳ ನೋಡುತ್ತಾ ಅವೆ. ತನಗೆ ಹಿಂದೆ ಇರತಕ್ಕಂಥಾ ನಾಡಿಗಳ, ತದ್ಗತ ಪರಮಾತ್ಮನ ದಾವಾಗ ತಿರಿಗಿ ನೋಡತಾನೋ ಆಗ್ಗೆ ಕಾಣುತಾನೆ. ಆಗ್ಗೆ ಎದುರಿಗೆ ಇದ್ದ ವಿಷಯಾದಿ ಗಳು ಕಾಣೋದಿಲ್ಲ. ಆದ್ದರಿಂದ ಅಂತರ ಸ್ಥಿತಿ, ಅಂತರ್ಗತ ಪರಮಾತ್ಮ ಜೀವರಿಗೆ ಕಾಣಿಸಿ ಕೊಡದೆ ಇದ್ದಾನೆ. ಮತ್ತು ಜೀವರಿಗೆ ಅತಿ ಸಮೀಪನಾದ ಪರಮಾತ್ಮ, ಅತಿ ಸಮೀಪವಾದ ರೆಪ್ಪೆ ಕಣ್ಣಿಗೆ ಕಾಣದೇ ಹ್ಯಾಂಗದೋ, ತದ್ವತ್ ಕಾಣಿಸಿಕೊಳ್ಳದೆ ಇರೋವ ನಾಗಿದ್ದಾನೆ. ಜಲರುಹೇಕ್ಷಣ–ಕಮಲಪತ್ರದೋಪಾದಿಯಲ್ಲಿ ಕಣ್ಣುಗಳು ಉಳ್ಳ ಪರ ಮಾತ್ಮ, ತತ್ತದ್ರೂಪ–ಆಯಾ ನಾಡೀರೂಪದಿಂದಲೂ, ತನ್ನಾಮದಲಿ–ಆಯಾ ನಾಡಿ ನಾಮದಿಂದಲೂ, ಕರೆಸುತಲಿ–ಕರಿಸುತ್ತಾ, ನಿರಂತರ–ಪ್ರತಿದಿನದಲ್ಲೂ, ವಿವಿಧಕರ್ಮಂಗಳ– ದೇಹೇಂದ್ರಿಯಾದಿಗಳಿಂದ ಆಯಾ ನಾಡಿಗಳ ದ್ವಾರಾ ನಾನಾ ವಿಚಿತ್ರಕರ್ಮಗಳ, ಮಾಡಿ ಮಾಡಿಸಿ–ಬಿಂಬಕ್ರಿಯಾ ದ್ವಾರಾ ಮಾಡಿ, ಜೀವನ ಕಡಿಯಿಂದ ದೇಹದ್ವಾರಾ ಮಾಡಿ ಮಾಡಿಸಿ, ತತ್ಫಲಗಳುಣ್ಣದೆ–ಆಯಾ ಜಡಕರ್ಮಜನಿತ ಜಡಫಲಗಳ ತಾನು ಉಣ್ಣದೆ, ಜೀವರಿಗೆ ಉಣಿಸುತ್ತ, ನಿತ್ಯಸುಖಪೂರ್ಣ–ಆ ಜೀವಭುಕ್ತಗತ ನಿತ್ಯವಾದ ಸುಖಪೂರ್ಣ ಗಳಾದ ತದ್ವಾಚ್ಯ ಸ್ವಾಖ್ಯರೂಪಗಳಾದ ತನ್ನ ರೂಪಗಳ ಫಲದಿಂದ ತಾನೇ ಭೋಜನ ಮಾಡಿ, ಸಂಚರಿಸುವನು–ದೇಹಗತ ನಾಡಿಗಳೊಳಗೆ ಸಂಚಾರಮಾಡತಾನೆ. ಮಾನುಷ ರೋಪಾದಿಯಲ್ಲಿ ನಾಡಿಗಳು ಸರ್ವಪ್ರಾಣಿಗಳಿಗೂ ಏಕಪ್ರಕಾರವಲ್ಲ, ತಾರತಮ್ಯಾನುಸಾರ ನ್ಯೂನಗಳಾಗಿ ಇರೋವಾಗಿ ಅವೆ.

**ತಿಳಿದುಪಾಸನೆಗೈವುತೀಪರಿ ।**
**ಮಲಿನನಂತಿರು ದುರ್ಜನರ ಕಂ ।**
**ಗಳಿಗೆ ಗೋಚರಿಸದೆ ವಿಪಶ್ಚಿತರೊಡನೆ ಗರ್ವಿಸದೆ ॥**
**ಮಳೆಬಿಸಿಲುಹಸಿತೃಷೆ ಜಯಾಪಜಯ ।**
**ಖಳರ ನಿಂದಾನಿಂದೆ ಭಯಗಳಿ ।**
**ಗಳುಕದಲೆ ಮದ್ದಾನೆಯಂದದಿ ಚರಿಸು ಧರೆಯೊಳಗೆ ॥ ೧೮ ॥**

ಜ್ಞಾನಿಯಾದವ ಇರತಕ್ಕ ಕ್ರಮ ಹೇಳತಾರೆ.

ತಿಳಿದು–ಪೂರ್ವೋಕ್ತ ಅನುಸಂಧಾನ ಮರಿಯದಲೇ ಸರ್ವಕರ್ತನಾದವ ಈಶ, ನಾನು ಅವನ ಅಧೀನಕರ್ತನೆಂದು ತಿಳಿದು ಮತ್ತು ದಾವಾಗಾದರೆ ಪೂರ್ವೋಕ್ತ ಅನು ಸಂಧಾನದ ಮರವು ಬಂದರೆ, ಆಗ್ಗೆ ಅಹಂ ಕರ್ತಾ ಎಂಬ ಅಜ್ಞಾನ ಪ್ರಾಪ್ತವಾಗತದೆ ಎಂತ ತಿಳಿದು, ಉಪಾಸನೆಗೈವುತ–ಹೃದಯಾಕಾಶದಲ್ಲಿ ದೇಹೇಂದ್ರಿಯಾದಿಗಳಲ್ಲಿ ಸರ್ವಗತ

ಪರಮಾತ್ಮನ್ನ, ದೇಹೇಂದ್ರಿಯಾದಿಗಳ ವ್ಯಾಪಾರ ಮಾಡಿಸೋದರಲ್ಲಿ ಸ್ವತಂತ್ರ ಕರ್ತನೆಂದು ಉಪಾಸನಾ ಮಾಡತಾ, ಈ ಪರಿ–ಈ ಪ್ರಕಾರ ಇರಬೇಕು. (ಈ ಪ್ರಕಾರ ಕ್ರಮು), ಮಲಿನನಂತಿರು–ಏನೂ ತಿಳಿಯದ ಅಜ್ಞಾನಿಯಂತಿದ್ದು, ದುರ್ಜನರ ಕಂಗಳಿಗೆ ಗೋಚರಿಸದೆ–ದುರ್ಜನರಾದ ತಮೋಯೋಗ್ಯರ ಕಣ್ಣುಗಳಿಗೆ, ಈ ಅನುಷ್ಠಾನ ಗೋಚರ ಮಾಡಬ್ಯಾಡ, ಅವರಿಗೆ ನಿನ್ನ ಯೋಗ್ಯತೆ ತಿಳಿಸಿಕೊಡಬ್ಯಾಡ, ಅವರ ಕಣ್ಣಿಗೆ ಕಾಣಬ್ಯಾಡ, ಅವರ ಸಾಂಗತ್ಯ ಮಾಡಬ್ಯಾಡ, ಎಂತ ತಾತ್ಪರ್ಯ. ವಿಪಶ್ಚಿತರೊಡನೆ–ಭಗವದ್ಭಕ್ತರ ಸಂಗ ಮಾಡುತ್ತ, ಅವರ ಸಂಗತ, ಗರ್ವಿಸದೆ–ಅಹಂಕಾರಯುಕ್ತ ಮಾತುಗಳಾಡುತ್ತಾ ಅವರನ್ನು ಅಹಂಕಾರದಿಂದ ಧಿಕ್ಕಾರಮಾಡದೆ, ನಾನು ಸರ್ವವೂ ತಿಳಿದವನು ಎಂದು ಗರ್ವಪಡದೆ ಮಹಾ ದೀನನಾಗಿ, ಮತ್ತು, ಮಳೆ–ಮಳೆ ಏನು, ಬಿಸಿಲು–ಬಿಸಿಲೇನು, ಹಸಿ–ಕ್ಷುತ್, ತೃಷೆ–ನೀರಡಿಕೆ, ಜಯ–ಯತ್ನಕಾರ್ಯ ಜಯವಾದ ಕಾಲಕ್ಕೂ, ಅಪಜಯ–ಯತ್ನಕಾರ್ಯ ಅಪಜಯವಾದ ಕಾಲಕ್ಕೂ (ಇವುಗಳಿಂದ ನಾನಾ ಪ್ರಕಾರ ಬಾಧಿತನಾದ ಕಾಲಕ್ಕೂ), ಖಳರ–ತಮೋಯೋಗ್ಯರ ಹಾಂಗೆ ಅಜ್ಞಾನಿಯಾದವರ, ನಿಂದಾ–ದೂಷಣೆ, ಅನಿಂದೆ–ಭೂಷಣೆ, ಭಯಗಳಿಗೆ–ರೋಗಾದಿಭಯ, ಮರಣಭಯ, ರಾಜಭಯ, ಲೋಕಭಯ, ಅಳುಕದಲೆ–ಇತ್ಯಾದಿಗಳು ಪ್ರಾಪ್ತವಾದಕಾಲಕ್ಕೂ ಅದರದರ ವಶನಾಗಿ ಹೆದರವೆ, ಈ ಯಾವತ್ತರ ಅಂತರ್ಗತನಾದ ಪರಮಾತ್ಮನಲ್ಲಿ ಲಕ್ಷ್ಯ ಇಟ್ಟು ಸರ್ವಕರ್ತ ಪರಮಾತ್ಮನ್ನ ಮರಿಯದೆ, ಜೀವರಲ್ಲಿ ಸ್ವಾಧೀನಕರ್ತೃತ್ವ ಆರೋಪಿಸದೆ, ಸರ್ವವೂ ಈಶ್ವರನಿಂದ ಪ್ರಾಪ್ತವಾದದ್ದೆಂದು ತಿಳಿದು, ಅನುಸಂಧಾನ ಮಾಡುತ್ತಾ, ಧರೆಯೊಳಗೆ–ಭೂಮಿಯೊಳಗೆ, ಮದ್ದಾನೆಯಂದದಿ–ಮದ ಹಿಡಿದ ಆನೆ ದಾವ ರೀತ್ಯಾ ನಿರ್ಲಕ್ಷ್ಯದಿಂದ ಸಂಚಾರ ಮಾಡತದೋ, ತದ್ವತ್, ಚರಿಸು–ನೀನು ಸಂಚಾರಮಾಡೋವನಾಗು.

ಅಸ್ವತಂತ್ರನಾದ ಜೀವನ್ನ, ನೀನು ಹೀಂಗೆ ಮಾಡು, ಹಾಂಗೆ ಮಾಡು ಎಂತ ಹೇಳೋಣದರಿಂದ ಜೀವರಿಗೆ ಇರತಕ್ಕ ಅನಾದಿಸ್ವರೂಪಭೂತ ಸ್ವಾತಂತ್ರ್ಯ ಈಶಾಧೀನವಲ್ಲ ಎಂತ ತೋರತದೆ. ಪರಸ್ಪರ ಬರತಕ್ಕ ವಿರೋಧಕ್ಕೆ ಪರಿಹಾರವೇನೆಂದರೆ, ಜೀವನ ಸ್ವರೂಪಭೂತ ಅನಾದಿ ಸ್ವಾತಂತ್ರ್ಯ, ಈಶಾಧೀನ. ತದ್ವತ್, ಜೀವೇಂದ್ರಿಯಗಳು, ಜೀವ, ಜೀವನ ಪ್ರಯತ್ನ, ಜೀವಭೋಗ್ಯ ಅನಾದಿಕರ್ಮ ಈಶಾಧೀನವೆಂಬುದು ಪ್ರತ್ಯಕ್ಷಾದಿಗಳಿಂದ ಸಿದ್ಧವು. ಪ್ರಥಮತಃ ಜೀವನ ಪ್ರಯತ್ನಾದಿಗಳು ಸೃಷ್ಟಿಗೆ ಬಾರದೆ ಅಸೃಜ್ಯರಾಶಿಗತರಾಗಿ ಇರೋ ಕಾಲದಲ್ಲಿ ಸುಪ್ತವಾಗಿ ಇರುತ್ತವೆ. ಜೀವರ ಸೃಷ್ಟಿಗೆ ತಂದ ಕಾಲದಲ್ಲಿ ಜಾಗ್ರದಾವಸ್ಥಾಯುಕ್ತರನ್ನಾಗಿ ಮಾಡಿ, ಅನಾದಿಕರ್ಮವ ಅನುಸರಿಸಿ ಪ್ರಯತ್ನಾದಿಗಳ ವ್ಯಕ್ತಮಾಡಿ, ತದಾರಭ್ಯ ಸುಪ್ತಿಕಾಲ ವ್ಯತಿರಿಕ್ತ ಜಾಗ್ರತರಾಗಿ ಇರೋ ಸರ್ವಕಾಲದಲ್ಲಿ, ಜೀವನ ಪ್ರಯತ್ನಾದಿಗಳ ವ್ಯಕ್ತಮಾಡಿ, ಜೀವನ ಪ್ರಯತ್ನಾದಿಗಳ ದ್ವಾರಾ ಜೀವಗೆ ತಿಳಿಸಿ, ಪರಮಾತ್ಮ ವ್ಯಾಪಾರಗಳ ನಡಸತಾನೆ. ಅರಲವಕಾಲವಾದರೂ ಸುಮ್ಮಗೆ ಇರೋದಿಲ್ಲ. ಅದರಲ್ಲಿ ಅನಾದಿ ಜಡಕರ್ಮಾನುಸಾರ ವಿಧಿನಿಷೇಧಗಳು, ಜ್ಞಾನಾಜ್ಞಾನ

*

ಗಳು, ಅನುಸಂಧಾನಮಾರ್ಗವು ಜೀವರ ಪ್ರಯತ್ನ ವ್ಯಕ್ತಮಾಡಿ. ತದ್ದ್ವಾರಾ ಜೀವಗೆ ತಿಳಿಸಿ, ಅವನ ಪ್ರಯತ್ನ ದ್ವಾರಾ, ಅವನ ಕರ್ಮ ದ್ವಾರಾ, ಅವನ ಇಂದ್ರಿಯಗಳಿಂದ ಅವನ ದ್ವಾರಾ, ಕರ್ಮಾದಿಗಳ ಮಾಡಸತಾನೆ. ಆಗ್ಗೆ ಜೀವಗೆ ವಿಧಿನಿಷೇಧಾದಿಗಳು ತಿಳಿಯುತ್ತಾ ಬರುತ್ತವೆ. ಕಾರಣ ಹೊರತು, ಕಾರ್ಯ ಅಭಿವ್ಯಕ್ತಿ ಇಲ್ಲ. ಆದ್ದರಿಂದ, ಜೀವನ ಪ್ರಯತ್ನಾದಿಗಳು ಕಾರಣ, ತಜ್ಜನಿತಾದಿಗಳು ಕಾರ್ಯಗಳು. ಈ ಕಾರಣಗಳು ಇಲ್ಲದವು ಈಶ್ವರನ ವ್ಯಾಪಾರಗಳು, ಈಶ್ವರನ ಸ್ವಾಖ್ಯಪ್ರದೇಶಗತ ಸ್ವರಮಣ ವ್ಯಾಪಾರಗಳು. ಜೀವನೆಂಬೋ ಕಾರಣ ಅಂಗೀಕರಿಸದಿದ್ದರೆ ಜಗತ್ತೇ ಇಲ್ಲ. ಜೀವನೆಂಬೋ ಕಾರಣ ಅಂಗೀಕರಿಸಿ ಪರಾಧೀನತ್ವ ಅಂಗೀಕರಿಸದಿದ್ದರೆ ಸರ್ವೋತ್ತಮನಾದ ಈಶನೇ ಇಲ್ಲದಾಗತದೆ. ಈ ಪ್ರಕಾರ, ಮಾಡು ಎಂತ ಜೀವನ್ನೇ ವಿವಕ್ಷಾ ಮಾಡುವ್ರದು ಅನುಪಚಾರಕ್ಕೆ ಕಾರಣ. ಇದರಿಂದ ಜೀವ, ಅವನ ಪ್ರಯತ್ನ, ಸ್ವಾತಂತ್ರ್ಯ ಇತ್ಯಾದಿಗಳು ಅನಾದಿಯಿಂದ ಇವೆ ಎಂತಲೂ, ಅವು ಈಶಾಧೀನ ಎಂತಲೂ, ಈ ಈಶ್ವರ ಬ್ಯಾರೆ, ಜೀವ ಬ್ಯಾರೆ ಎಂತಲೂ, ದ್ಯೋತಕಾರ್ಥ ಜೀವನ ವಿವಕ್ಷಾ ಮಾಡಿ, ಮಾಡು ಎಂತ ಹೇಳೋದಕ್ಕೆ ಕಾರಣ. ಹಾಂಗೆ ವಿವಕ್ಷಾ ಮಾಡದೆ, ಅಸ್ವತಂತ್ರನ ಯಾಕೆ ವಿವಕ್ಷಾ ಮಾಡಬೇಕೆಂದು ಬಿಟ್ಟರೆ, ಈಶ್ವರನೇ ವಿವಕ್ಷಾ ಮಾಡಬೇಕು. ಅವನು ಮಾಡು ಎಂತ ನಿಯಮನ ಮಾಡಿಸಿಕೋತಕ್ಕ ಅಸ್ವತಂತ್ರನಲ್ಲವಾದ್ದರಿಂದ, ಜೀವನೇ ಆಗಬೇಕಾಯಿತು. ಪೂರ್ವೋಕ್ತ ವಿವಕ್ಷಾದಿಂದ ಜೀವನ್ನ ತೆಗೆದುಕೋಬೇಕು. ಜೀವಗೆ ಶಾಸ್ತ್ರದ್ವಾರಾ, ಸತ್ಸಂಗತಿದ್ವಾರಾ ಶುಭಾಶುಭಗಳು, ಅನುಷ್ಠಾನಕ್ರಮಗಳು ಅನ್ಯರಲ್ಲಿ ಇದ್ದು ತಿಳಿಸುತ್ತಾ, ಮತ್ತೊಬ್ಬರಲ್ಲಿ ಹಾಂಗೆ ಮಾಡತೇನೆಂತ ಅನಿಸುತ್ತಾ, ಲಿಂಗಭಂಗವಾಗೋವರಿವಿಗೂ, ತದನಂತರ ಅರಲವಕಾಲ ಬಿಡದೆ ತಿಳಿಸ ತಾನೇ ಇರತಾನೆ. ಮಾಡು ಎಂತ ಪ್ರಯೋಗಮಾಡಿದ್ದಕ್ಕೆ ಇದು ತಾತ್ಪರ್ಯ. ಜೀವನ ವಿವಕ್ಷಾ ಮಾಡದಿದ್ದರೆ, ಪರಮಾತ್ಮನ ವಿವಕ್ಷಾ ಮಾಡಬೇಕಾಗತದೆ. ಪರಮಾತ್ಮಗೆ ನಿಯಾಮಕರು ದಾರೂ ಇಲ್ಲ. ಈ ವಿವಕ್ಷಾದಿಂದ ಮಾಡು ಎಂತ ಜೀವಗೆ ಸಂಬೋಧನ. ಅಷ್ಟೇ ಹೊರತು ಈಶಾಧೀನವಲ್ಲದೆ ಜೀವಗೆ ಬ್ಯಾರೆ ಕರ್ತೃತ್ವ ಅದೆ ಎಂತ ತಾತ್ಪರ್ಯದಿಂದ ಮಾಡು ಎಂತ ತಾತ್ಪರ್ಯವಲ್ಲ.

**ಕಾನನಗ್ರಾಮಸ್ಥ ಸರ್ವ ।**
**ಪ್ರಾಣಿಗಳು ಪ್ರತಿದಿವಸದಲಿ ಏ ।**
**ನೇನು ಮಾಡುವ ಕರ್ಮಗಳು ಹರಿಪೂಜೆಯೆಂದರಿದು ॥**
**ಧೇನಿಸುತ ಸದ್ಭಕ್ತಿಯಲಿ ಪವ ।**
**ಮಾನಮುಖದೇವಾಂತರಾತ್ಮಕ ।**
**ಶ್ರೀನಿವಾಸನಿಗರ್ಪಿಸುತ ಮೋದಿಸುತ ನಲಿಯುತಿರು ॥ ೧೯ ॥**

ಸರ್ವಪ್ರಾಣಿಗಳು ಮಾಡತಕ್ಕ ಕರ್ಮ ಭಗವತ್ಪೂಜಾತ್ವೇನ ಅರ್ಪಿಸು ಎಂತ ಹೇಳತಾರೆ.

ಕಾನನ–ಅಡವಿಗಳಲ್ಲಿ ವಿದ್ಯಮಾನಗಳಾದ, ಗ್ರಾಮಸ್ಥ–ಗ್ರಾಮಗಳಲ್ಲಿ ವಿದ್ಯಮಾನ ಗಳಾದ, ಸರ್ವಪ್ರಾಣಿಗಳು–ಕರಚರಣಾದಿಗಳಿಂದಲೂ, ರೆಕ್ಕೆಗಳಿಂದಲೂ ಸಹಿತವಾದ ಸರ್ವಪ್ರಾಣಿಗಳು, ಸ್ಥಾವರಜೀವರು, ವ್ಯತಿರಿಕ್ತ ಎಂತ ಅರ್ಥ. ಪ್ರತಿದಿವಸದಲಿ–ಪ್ರತಿದಿನ ಹಗಲುರಾತ್ರಿಗಳಲ್ಲೂ, ಏನೇನು ಮಾಡುವ ಕರ್ಮಗಳು–ದೇಹಭೇದಗಳಿಂದ ಮಾಡುವ ಪಾಪವೋ ಪುಣ್ಯವೋ, ಇಂಥಾದ್ದು ಏನೇನು ಕಾರ್ಯಗಳ ಮಾಡತಾರೋ, ಆಯಾ ಕಾರ್ಯಗಳು ನಿನ್ನ ದೃಷ್ಟಿಗೆ ಗೋಚರವಾದದ್ದು ಹಾಂಗೆ ನೀನು ಮಾಡುವ ಯಾವತ್ತೂ ಕಾರ್ಯಗಳು, ಹರಿಪೂಜೆ ಎಂದರಿದು–ಪರಮಾತ್ಮನ ಪೂಜಾ ಎಂತ ಅರಿತವನಾಗಿ, ಅರಿಯೋ ಪ್ರಕಾರ, ಪವಮಾನಮುಖದೇವಾಂತರಾತ್ಮಕ–ವಾಯುದೇವರೇ ಮೊದಲಾದ ಇಂದ್ರಿಯಾಭಿಮಾನಿಗಳಾದ ದೇವತೆಗಳ, ಆಯಾ ಪ್ರಾಣಿಗಳ ಕರ್ಮಕ್ಕೆ ಕಾರಣಗಳಾದ ಇಂದ್ರಿಯಗಳಲ್ಲಿ ತಿಳದು ಅಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ, ಅಂತ ರಾತ್ಮಕನಾಗಿರತಕ್ಕ ಶ್ರೀನಿವಾಸನಿಗೆ, ಸದ್ಭಕ್ತಿಯಲಿ–ವಿಷಯವಿರಕ್ತಿಪೂರ್ವಕ ಮಾಹಾತ್ಮ್ಯ ಸುದೃಢಜ್ಞಾನದಿಂದ, ಅತಿಸ್ನೇಹದಿಂದ ಯುಕ್ತವಾದ ಭಕ್ತಿಯಿಂದ, ಧೇನಿಸುತ–ಆಯಾ ಇಂದ್ರಿಯಗಳಲ್ಲಿ ತಜ್ಜನಿತ ಕರ್ಮಗಳಲ್ಲಿ ಹಾಂಗೆ, ನಿನ್ನ ದೇಹೇಂದ್ರಿಯಾದಿ ಕರ್ಮಗಳಲ್ಲಿ, ನಿನ್ನ ಹೃದಯಾಕಾಶಗತ ಉಪಾಸ್ಯಮೂರ್ತಿಯನ್ನ ಐಕ್ಯ ಚಿಂತಿಸಿ, ಏಕಮನಸ್ಕನಾಗಿ ಧ್ಯಾನಮಾಡುತ್ತಾ, ಶ್ರೀನಿವಾಸನಿಗರ್ಪಿಸುತ–ಪರಸ್ಪರ ಅಂತರ್ಗತ ಭಗವದ್ರೂಪಗಳಿಂದ, ಭಗವದ್ರೂಪಗಳಿಗೆ ಐಕ್ಯಚಿಂತನರೂಪದಿಂದ, ಶ್ರೀದೇವಿ ವಕ್ಷಸ್ಥಳವಾಗಿ ಉಳ್ಳ ಶ್ರೀಹರಿಗೆ ಅರ್ಪಣ ಮಾಡುತ್ತಾ, ಮೋದಿಸುತ–ಸಂತೋಷಪಡುತ್ತಾ, ನಲಿಯುತಿರು–ಸಂಚಾರ ಮಾಡುತ್ತಾ ಇರು. ಇದರಿಂದ ನೋಡಿದ ಪಾಪಗಳ ಲೇಪವಿಲ್ಲ. ನೋಡಿದ ಪುಣ್ಯ ಗಳೊಳಗೆ ಭಾಗ ಬರುತದೆ. ಪೂರ್ವೋಕ್ತ ಪ್ರಕಾರ ಅರ್ಪಿತಪುಣ್ಯದಿಂದ ಜ್ಞಾನ ಭಕ್ತ್ಯಾದಿಗಳು ಅಭಿವೃದ್ಧಿ ಆಗೋವಾಗತವೆ ಈ ರೀತ್ಯಾ ಶಾಸ್ತ್ರಮೂಲಕವಾಗಿ ಅನ್ಯಾಧಿಷ್ಠಾನದಲ್ಲಿ ಇದ್ದು ಆ ಜೀವನ ದ್ವಾರಾ ಈ ಜೀವಗೆ ಮಾಡು ಎಂತ ತಿಳಸತಾನೆ. ಈ ಜೀವಾಂತರ್ಗತನಾದ ಪರಮಾತ್ಮ, ಈ ಜೀವನ ದ್ವಾರಾ ಉಪದೇಶ ಮಾಡಿದ ಜೀವನ ಮುಂದೆ ಹಾಂಗೇ ಮಾಡತೇನೆ, ಸರ್ವವೂ ತಿಳಿಯಿತು ಎಂತ ನುಡಿಸೋವನಾಗ ತಾನೆ. ಈ ಪ್ರಕಾರ ಅಸ್ವತಂತ್ರರಾದ ಜೀವರು ಶಿಷ್ಯರಾದ ಜೀವರಿಗೆ ಮಾಡು ಎಂತ ಹೇಳೋಣವೇನು, ಎರಡೂ ಜೀವನ್ನ ಜೀವರ ವಿವಕ್ಷಾ ಮಾಡಿ ಹೇಳೋ ಕ್ರಮ. ಇದೇ ಹೊರತು ಉಭಯ ಜೀವರೂ ಪರಾಧೀನಸ್ವಾತಂತ್ರ್ಯರು, ಅಲ್ಲದೇನೇ ಈಶ್ವರನೋಪಾದಿ ಯಲ್ಲಿ ಸ್ವಾಧೀನಸ್ವಾತಂತ್ರ್ಯರಾಗಿ, ಅದರಿಂದ ಹೇಳೋಣವೇನು, ಆದನನುಸರಿಸಿ ಪ್ರತ್ಯು ತ್ತರಗಳ ಕೊಡೋಣವೇನು ಅಲ್ಲ. ಆತ ಏವ, ಮಾಡು ಎಂಬುದಕ್ಕೆ ಇದು ತಾತ್ಪರ್ಯ.

**ನೋಕನೀಯನು ಲೋಕದೊಳು ಶುನಿ ।**
**ಸೂಕರಾದಿಗಳೊಳಗೆ ನೆಲೆಸಿ ।**
**ದ್ವೇಕಮೇವಾದ್ವಿತೀಯ ಬಹುರೂಪಾಹ್ವಯಗಳಿಂದ ॥**

**ತಾ ಕರೆಸುತೊಳಗಿದ್ದು ತಿಳಿಸದೆ ।**
**ಶ್ರೀಕಮಲಭವಮುಖ್ಯ ಸಕಲ ದಿ ।**
**ವೌಕಸಗಣಾರಾಧ್ಯ ಕೈಕೊಂಡನುದಿನದಿ ಪೊರೆವ ॥ ೨೦ ॥**

ಇಂಥಾ ಐಕ್ಯಾನುಸಂಧಾನದಿಂದ ಮಾಡತಕ್ಕ ಸರ್ವಪೂಜಾ ಸ್ವೀಕಾರ ಮಾಡತಾನೆಂತ ಹೇಳತಾರೆ.

ನೋಕನೀಯನು– ಕನೀಯನು–ಕಡಿಮೆ, ನೋ–ಅಲ್ಲ, ಕಡಿಮೆ ಆದವನಲ್ಲಾ. ಎಲ್ಲಾರಕಿಂತಲೂ ದೊಡ್ಡವ, ಸರ್ವೋತ್ತಮ ಎಂತ ಅರ್ಥ. ಇಂಥ ಪರಮಾತ್ಮ, ಲೋಕದೊಳು–ಹದಿನಾಲ್ಕು ಲೋಕದೊಳು, ಹಾಂಗೆ ತಮಸ್ಸು, ವೈಕುಂಠ, ಏತಾದೃಶ ಲೋಕಗಳು ಎರಡು, ಅಂತು ಹದಿನಾಲ್ಕು ಲೋಕಗತ, ಶುನಿ–ನಾಯಿ, ಸೂಕರ–ಹಂದಿ, ಆದಿಗಳೊಳಗೆ–ಇವೇ ಮೊದಲಾದ ಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರುಗಳ ಸ್ವರೂಪ ದೇಹಗಳೊಳಗೆ, ಏಕಮೇವ–ತಾನು ಒಬ್ಬನೇವೇ, ಅದ್ವಿತೀಯ–ದ್ವಿತೀಯಶೂನ್ಯ ಅಕ್ಷರಳಾದ ರಮಾ ಸಹಿತನಾಗಿ, ವಾಯು ಬ್ರಹ್ಮಾದಿ ಕ್ಷರರಾದ ದ್ವಿತೀಯರಿಂದ ಶೂನ್ಯನಾಗಿ, ಬಹುರೂಪ–ಬ್ರಹ್ಮ ವಾಯ್ವಾದಿ ತತ್ತ್ವೇಶರ ರೂಪ ತಾನಾಗಿ, ಆಹ್ವಯ– ಬ್ರಹ್ಮ ವಾಯ್ವಾದಿ ನಾಮಗಳಿಂದ ಯುಕ್ತನಾಗಿ, ಗಳಿಂದ–ಇತ್ಯಾದಿ ನಾಮ ರೂಪಗಳಿಂದ, ನೆಲೆಸಿದ್ದು–ಆವಾಸನಾಗಿದ್ದು, ತಾ ಕರೆಸುತ–ಆಯಾ ಜೀವಾಕಾರ, ಜೀವನಾಮದಿಂದ ಬಿಂಬನೆಂದು, ತಾ ಕರೆಸುತ, ಒಳಗಿದ್ದು–ಜೀವನ ಅಂತರ್ಗತನಾಗಿದ್ದು, ತಿಳಿಸದೆ–ತಾನು ಇರೋ ಸಂಗತಿ ಸಾಧನಾತ್ಪೂರ್ವದಲ್ಲಿ, ಅಪರೋಕ್ಷದಿಂದ ತಿಳಿಸದೆ, ಆಯಾ ಜೀವರ ಸ್ವರೂಪದಲ್ಲಿ ಇರೋವನಾಗಿದ್ದಾನೆ. ಶ್ರೀ–ಸ್ಥೂಲ ದೇಹದಲ್ಲಿ ಆದರೋ ಶ್ರೀದೇವಿಯರು, ಕಮಲಭವ–ಬ್ರಹ್ಮದೇವರು, ಮುಖ್ಯ–ಇನ್ನೂ ಮುಖ್ಯರಾದ, ಸಕಲದಿವೌಕಸಗಣ–ಸಮಸ್ತರಾದ ತತ್ತ್ವಾಭಿಮಾನಿ ದೇವತಾ ಗಣಗಳಿಂದ, ಆರಾಧ್ಯ–ಪೂಜಿತನಾದವ, ಕೈಕೊಂಡು–ಜೀವದೇಹಾಂತರ್ಗತನಾಗಿ ಇದ್ದು, ಪೂರ್ವೋಕ್ತ ಪ್ರಕಾರ ಜೀವರಿಗೆ ಯೋಗ್ಯತಾನುಸಾರ ಅನುಸಂಧಾನಮಾರ್ಗ ಪ್ರೇರಿಸಿ, ಅವರ ದ್ವಾರಾ ತಾನು ಅರ್ಪಣೆ ಮಾಡಿಸಿಕೊಂಡು ಅದರಲ್ಲಿ ತನ್ನ ಸ್ವಾಖ್ಯಗಳ, ಕೈಕೊಂಡು–ತಾನು ಕೈಕೊಂಡು ಅಂದರೆ, ಸ್ವೀಕಾರ ಮಾಡಿ, ಅನುದಿನದಿ–ಪ್ರತಿದಿನದಲ್ಲೂ, ಪೊರೆವ–ಜ್ಞಾನಭಕ್ತಿವೈರಾಗ್ಯಗಳ ಅತಿಶಯ ಮಾಡಿ ರಕ್ಷಿಸೋವನಾಗತಾನೆ.

**ಇನಿತುಪಾಸನೆಗೈವುತಿಹ ಸ ।**
**ಜ್ಜನರು ಸಂಸಾರದಲಿ ಪ್ರತಿಪ್ರತಿ ।**
**ದಿನಗಳಲಿ ಏನೇನು ಮಾಡುವುದೆಲ್ಲ ಹರಿಪೂಜೆ ॥**
**ಎನಿಸಿಕೊಂಬುವು ಸತ್ಯವೀ ಮಾ ।**
**ತಿನಲಿ ಸಂಶಯಬಡುವ ನರನ ।**
**ಲ್ಪನು ಸುನಿಶ್ಚಯ ಬಾಹ್ಯಕರ್ಮವ ಮಾಡಿ ಫಲವೇನು ॥ ೨೧ ॥**

ಅಂತರಾನುಸಂಧಾನವಿಲ್ಲದವ ಬಾಹ್ಯಕರ್ಮ ಮಾಡಿಯೂ ಫಲವಿಲ್ಲ ಎಂತ ಹೇಳ ತಾರೆ.

ಇನಿತು—ಈ ಪೂರ್ವೋಕ್ತ ಪ್ರಕಾರ, ಉಪಾಸನೆ—ಅಂತರ್ಗತನ ತಿಳಿದು ಭಗವ ದುಪಾಸನೆ, ಗೈವುತಿಹ—ಮಾಡತಾ ಇರತಕ್ಕ, ಸಜ್ಜನರು—ಜ್ಞಾನಿಗಳಾದ ಭಗವದ್ಭಕ್ತರು, ಸಂಸಾರದಲಿ—ದಾರಾಪುತ್ರಾದಿಗಳಿಂದ ಸಹಿತವಾದ ಸಂಸಾರದಲ್ಲಿ, ಪ್ರತಿಪ್ರತಿ ದಿನಗಳಲಿ—ಪ್ರತಿಪ್ರತಿ ದಿವಸಗಳಲ್ಲೂ, ಏನೇನು ಮಾಡುವುದೆಲ್ಲ—ಏನೇನು ವ್ಯಾಪಾರಗಳ ಮಾಡ ತಾರೋ ಅವು ಯಾವತ್ತೂ, ಹರಿಪೂಜೆ—ಆಯಾ ಅಂತರ್ಗತನಾದ ಪರಮಾತ್ಮನ ಪೂಜಾ ಎಂತ ಅನುಸಂಧಾನ ಮಾಡಿದ ಅಧಿಕಾರಿಗೆ ಅವು ಹರಿಪೂಜಾ ಎಂತಲೇ, ಎನಿಸಿಕೊಂಬುವು—ಹೇಳಿಸಿಕೊಳ್ಳಲ್ಪಡುತ್ತವೆ. ಆದರ ಪ್ರಕಾರ ದೃಷ್ಟಾಂತ :— ಲೋಕದಲ್ಲಿ ಪರಮಾತ್ಮನ ಪೂಜಾಕ್ಕೆ ಅಧಿಷ್ಠಾನಗಳು ಜಡ, ಚೇತನ ಎಂತ ಎರಡು. ಸರ್ವರೂ ಅಧಿಷ್ಠಾನಗತ ಪರ ಮಾತ್ಮನ ಪೂಜಾಧಿಕಾರಿಗಳು. ಲಿಂಗಭಂಗಾನಂತರ ದೇಹಾಧಿಷ್ಠಾನಗತ ಭಗವತ್ಪೂಜಾ, ಸಂಸಾರದಶಾದಲ್ಲಿ ಸಾಲಿಗ್ರಾಮಾದಿ, ಪ್ರತಿಮಾದಿ ದೇವರ ಪೂಜಾದಿಗಳು, ಮಾಡಿದರೇನೇ ದೇವರ ಪೂಜಾ ಆಗತದೆ, ಇಲ್ಲದಿದ್ದರೆ ಇಲ್ಲ. ತದ್ವ್ಯತಿರಿಕ್ತ, ಸಂಸಾರದಶಾದಲ್ಲಿ ಇದ್ದ ಪುರುಷ ಅಹಂಮಮತಾದಿಗಳಿಂದ ದೂರನಾಗಿ ಅಂತರ್ಗತ ಪರಮಾತ್ಮನ್ನ ತಿಳಿದು ಮಾಡ ತಕ್ಕ ಆಚಾರ ಉಪಚಾರ ಮೊದಲಾದದ್ದು ಯಾವತ್ತೂ, ಹರಿಪೂಜಾ ಎಂತ ತಿಳಿದರೆ, ಎಲ್ಲಾನೂ ಪರಮಾತ್ಮನ ಪೂಜಾ ಎಂತ ಹೇಳಿಸಿಕೊಳ್ಳಲ್ಪಡುತ್ತದೆ. ಸತ್ಯವು—ನಿಶ್ಚಯ ವಾದದ್ದು. ಈ ಮಾತಿನಲಿ—ಈ ಆಡಿದ ಮಾತಿನಲ್ಲಿ ಇದು ಯಾವತ್ತೂ ವೇದವಾಕ್ಯ ಎಂತ ತಿಳಿಯದೆ, ಸಂಶಯಬಡುವ ನರನು-ಉಪಾಸನಮಾಡದೇ ಇರತಕ್ಕ ಸಂದೇಹಜ್ಞಾನಿಯಾದ ಮನುಷ್ಯ, ಅಲ್ಪನು—ಅಜ್ಞಾನಿಯಾದವನು. ಸುನಿಶ್ಚಯ—ಸಮೀಚೀನವಾದ ಶಾಸ್ತ್ರಾದಿಗಳಿಂದ ಸರ್ವೋತ್ತಮನೆಂದು ನಿಶ್ಚಯನಾದ ಪರಮಾತ್ಮನ ಅನುಸಂಧಾನದಿಂದ ರಹಿತನಾಗಿ, ಬಾಹ್ಯ—ಬಾಹ್ಯದಲ್ಲಿ ಕಾಣತಕ್ಕ ಅಧಿಷ್ಠಾನವನ್ನೇ ದೇವರ ಪೂಜಾ ಎಂತ, ಕರ್ಮವ ಮಾಡಿ—ಪೂಜಾದಿ ಕಾರ್ಯಗಳ ಮಾಡಿದರೂ, ಫಲವೇನು—ಫಲವಿಲ್ಲ ಎಂತ ತಾತ್ಪರ್ಯ. ವಿಧ್ಯುಕ್ತಾನುಸಾರ ಅಂತರ್ಗತನ ತಿಳದೇ ಸಂಸಾರದಲ್ಲಿ ಇದ್ದು ಏನೇನು ಮಾಡುವ ಕರ್ಮ ಗಳು ಯಾವತ್ತೂ, ದೇವರ ಪೂಜಾನೇ ಆಗತವೆ ಎಂತ ತಾತ್ಪರ್ಯ.

**ಭೋಗ್ಯಭೋಕ್ತೃಗಳೊಳಗೆ ಹರಿ ತಾ ।**
**ಭೋಗ್ಯಭೋಕ್ತನು ಎನಿಸಿ ಯೋಗ್ಯಾ ।**
**ಯೋಗ್ಯರಸಗಳ ದೇವದಾನವಗಣಕೆ ಉಣಿಸುವನು ॥**
**ಭಾಗ್ಯನಿಧಿ ಭಕ್ತರಿಗೆ ಸದ್ವೈ ।**
**ರಾಗ್ಯಭಕ್ತಿಜ್ಞಾನವೀವಾ ।**
**ಯೋಗ್ಯರಿಗೆ ದ್ವೇಷಾದಿಗಳ ತನ್ನಲ್ಲಿ ಕೊಡುತಿಪ್ಪ ॥ ೨೨ ॥**

ಪರಮಾತ್ಮ ತನ್ನ ಸ್ವಾಖ್ಯಗಳ ತಾನು ಸ್ವೀಕರಿಸಿ ತದನ್ಯ, ಅನ್ಯರಿಗೆ ಕೊಡತಾನೆ ಎಂತ ಹೇಳತಾರೆ.

ಭೋಗ್ಯ–ಭೋಜನಾದಿಗಳಿಂದ ಭೋಗ ಮಾಡೋದಕ್ಕೆ ಯೋಗ್ಯವಾದ ಅನೇಕ ದ್ರವ್ಯಗಳೇನು, ಭೋಕ್ತೃ–ಆಯಾ ಪದಾರ್ಥಗಳ ಭೋಜನ ಮಾಡತಕ್ಕ ದೇಹಧಾರಿಗಳಾದ ಪ್ರಾಣಿಗಳು ಇವರುಗಳು ಏನು, ಗಳೊಳಗೆ–ಈ ಉಭಯಾಧಿಷ್ಠಾನಗಳೊಳಗೆ, ಹರಿ ತಾ–ಇವುಗಳಿಗೆ ಬಿಂಬನಾಗಿ, ಅದರಲ್ಲಿ ತದಾಕಾರ ತನ್ನಾಮದಿಂದ ಇರತಕ್ಕ ಹರಿನಾಮಕ ಪರಮಾತ್ಮನು, ತಾನು, ಭೋಗ್ಯ–ಭೋಗ್ಯವಸ್ತುವಿನಲ್ಲಿ ಭೋಗ್ಯ ಎಂತಲೂ, ಭೋಕ್ತೃ–ಭೋಜನ ಮಾಡೋವನಲ್ಲಿ ಭೋಕ್ತೃ ಎಂತಲೂ, ಎನಿಸಿ–ತನ್ನಾಮದಿಂದ ಕರಿಸಿ ಇರೋವನಾಗಿ ಇದ್ದಾನೆ. ಈ ಪ್ರಕಾರ ಇದ್ದು, ಯೋಗ್ಯಾಯೋಗ್ಯರಸಗಳ–ಯೋಗ್ಯರಾದ ಭಗವದ್ಭಕ್ತರು, ಅಯೋಗ್ಯರಾದ ಭಗವದ್ದ್ವೇಷಿಗಳು, ಈ ಉಭಯರೂ ಭೋಜನ ಮಾಡತಕ್ಕ ಯೋಗ್ಯಾಯೋಗ್ಯ ರಸಗಳಿಂದ ಯುಕ್ತವಾದ ಪದಾರ್ಥಗಳ ಬಿಂಬ ಕ್ರಿಯಾ ದ್ವಾರಾ ಭೋಜನ ಮಾಡಿಸಿ ತದ್ಗತ ತನ್ನ ಸ್ವಾಖ್ಯಗಳಾದ ಯೋಗ್ಯಾಯೋಗ್ಯ ವಾಚ್ಯಗಳಾದ ತನ್ನ ರಸಗಳ ತಾನು ಸ್ವೀಕಾರಮಾಡಿ, ಅನ್ಯವಾದ ತದ್ಗತ ದೇವತಾರಸಗಳು, ದೈತ್ಯರಸಗಳು ಎಂದರೆ, ದೇವದೈತ್ಯರು ರಸರೂಪದಿಂದ ಪದಾರ್ಥದಲ್ಲೂ, ದೇಹದಲ್ಲೂ ಇರೋವರಾಗಿದ್ದಾರೆ. ಈ ಉಭಯರಿಗೂ ಅವರವರಿಗೆ ಯೋಗ್ಯವಾದ ರಸಗಳ, ದೇವದಾನವಗಣಕೆ–ದೇಹಗತ ದೇವತೆಗಳಿಗೆ, ದೈತ್ಯರಿಗೆ, ತನ್ನ ಕ್ರಿಯಾ ದ್ವಾರಾ, ಉಣಿಸುವನು–ಅವರವರ ರಸಗತ ರಸಾಕಾರ ರೂಪಗಳ ದೇಹಗತ ರೂಪಗಳಲ್ಲಿ ಐಕ್ಯ ಐದಿಸುತ, ಈ ರೀತಿಯಾಗಿ ಉಣಿಸುವನು. ಜಡರಸ ದೇಹಕ್ಕೆ ಉಪಚಯ ಮಾಡಿಸುವ. ಈ ಅನುಸಂಧಾನದಿಂದ ಮಾಡತಕ್ಕ ಸರ್ವಕರ್ಮವೂ ಭಗವತ್ಪೂಜಾ ಎಂತ ಕರಿಸುತದೆ. ಇದರಿಂದ, ಭಕ್ತರಿಗೆ–ಸ್ವರೂಪಸ್ವಭಾವದಲ್ಲಿ ಭಕ್ತಿ ಉಳ್ಳ ಪ್ರಾಣಿಗಳಿಗೆ, ಸದ್ವೈರಾಗ್ಯ–ವಿಷಯವಿರಕ್ತಿಪೂರ್ವಕವಾದ ಸಮೀಚೀನ ಭಾವವೈರಾಗ್ಯವೇನು, ಭಕ್ತಿ–"ಸ್ನೇಹೋ ಭಕ್ತಿರಿತಿ ಪ್ರೋಕ್ತಃ" ಎಂತ ಅನಿಸತಕ್ಕ ಭಕ್ತಿ ಏನು, ಜ್ಞಾನವ–ತಾರತಮ್ಯ ಪಂಚಭೇದದಿಂದ ಯುಕ್ತವಾದ ಹರಿ ಸರ್ವೋತ್ತಮ, ವಾಯು ಜೀವೋತ್ತಮಪೂರ್ವಕ ದಿವ್ಯಜ್ಞಾನ ಏತಾದೃಶವಾದ, ನಿಧಿ–ಸಮುದ್ರಸದೃಶವಾದ, ಭಾಗ್ಯ–ಭಾಗ್ಯಗಳ, ಈವ–ಕೊಡೋವನಾಗತಾನೆ. ಇಂಥಾ ಅನುಸಂಧಾನರಹಿತರಾದ ಸ್ವರೂಪ ಸ್ವಭಾವದಲ್ಲಿ, ಅಯೋಗ್ಯರಿಗೆ–ಅಯೋಗ್ಯರಾದ ದೈತ್ಯರಿಗೆ, ತನ್ನಲ್ಲಿ–ಪರಮಾತ್ಮನಾದ ತನ್ನಲ್ಲಿ, ದ್ವೇಷಾದಿಗಳ–ನವವಿಧ ದ್ವೇಷಗಳ, ಕೊಡುತಿಪ್ಪ–ಕೊಡತಾ ಇರೋವನಾಗತಾನೆ. ಅಯೋಗ್ಯಶಬ್ದದಿಂದ ಮಿಶ್ರ ಜೀವರೂನೂ ಅಂತರ್ಭೂತರೆಂದು ತಾತ್ಪರ್ಯ.

**ವಿಶೇಷಾರ್ಥ :–** ಶಾಂಡಿಲ್ಯತತ್ವ "ವಿನಾ ಯದರ್ಪಣಂ ಸಮ್ಯಕ್ ಫಲಂ ನಾಪ್ನೋತ್ಯಸಂಶಯಃ | ದೇಹಿನಾ ಯಾಃ ಪ್ರವರ್ತಂತೇ ಪ್ರಾತರಾರಭ್ಯ ಸತ್ಕ್ರಿಯಾಃ || ತಾಶ್ಚ ವಿಷ್ಣ್ವರ್ಪಣಂ ಕುರ್ವನ್ ಕರ್ಮಪಾಶಾತ್ ವಿಮುಚ್ಯತೇ ||"

**ಈ ಚತುರ್ದಶಭುವನದೊಳಗೆ ಚ |**
**ರಾಚರಾತ್ಮಕ ಜೀವರಲ್ಲಿ ವಿ |**
**ರೋಚನಾತ್ಮಜವಂಚಕನು ನೆಲಸಿದ್ದು ದಿನದಿನದಿ ||**

**ಯಾಚಕನು ಎಂದೆನಿಸಿಕೊಂಬ ಮು ।**
**ರೀಚಿದಮನ ಸುಹಂಸರೂಪಿ ನಿ ।**
**ಷೇಚಕಾಹ್ವಯನಾಗಿ ಜನರಭಿಲಾಷೆ ಪೂರೈಪ ॥ ೨೩ ॥**

ಪರಮಾತ್ಮ ದ್ವಂದ್ವಕರ್ಮಗಳ ಯಾಚನಾ ಮಾಡಿ ತೆಗೆದುಕೊಂಡು ಅದಕ್ಕೆ ಪ್ರತ್ಯಾಮ್ನಾಯ, ಭಕ್ತರ ಅಭಿಲಾಷೆ ಪೂರ್ತಿ ಆಗತಕ್ಕ ಮತ್ತೊಂದು ಫಲರೂಪವಾದ ಪದಾರ್ಥಗಳ ಕೊಡತಾನೆಂತ ಹೇಳತಾರೆ.

ಈ ಚತುರ್ದಶಭುವನದೊಳಗೆ_ವರ್ತಮಾನ ಹದಿನಾಲ್ಕು ಲೋಕಗಳೊಳಗೆ ವಿದ್ಯಮಾನರಾದ, ಚರಾಚರಾತ್ಮಕ– ಚರ_ಮಾನುಷಪಶ್ವಾದಿ ಚಲನಮಾಡೋ ಜೀವರು, ಅಚರ_ವೃಕ್ಷಾದಿ ಸ್ಥಾವರಜೀವರಾದ, ಜೀವರಲ್ಲಿ_ಈ ಉಭಯರಾದ ಜೀವರುಗಳಲ್ಲಿ, ವಿರೋಚನಾತ್ಮಜ_ವಿರೋಚನನ ಪುತ್ರನಾದ ಬಲಿಚಕ್ರವರ್ತಿಯು, ವಂಚಕನು_ಈ ಬಲಿಚಕ್ರವರ್ತಿಯ ವಂಚನಮಾಡೋ ಉದ್ದಿಶ್ಯ ಅವತಾರಮಾಡಿದ ಶ್ರೀ ವಾಮನದೇವರು, ನೆಲಸಿದ್ದು_ಸರ್ವಜೀವಾಂತರ್ಗತನಾಗಿದ್ದು, ದಿನದಿನದಿ_ಪ್ರತಿದಿನದಲ್ಲೂನೂ, ಯಾಚಕನು_ಯಾಚನಾ ಮಾಡತಕ್ಕವನು, ಎಂದೆನಿಸಿಕೊಂಬ_ಎಂತ ಕರಿಸಲ್ಪಡತಾನೆ. (ದೇವರ ವ್ಯತಿರಿಕ್ತ ರಮಾಬ್ರಹ್ಮಾದಿ ಯಾವತ್ತೂ ಜೀವರು ತಾರತಮ್ಯಾನುಸಾರ ಯಾಚಕರೆಂದು ಕರಿಸೋವರಾಗುತ್ತಾರೆ. ಆ ಯಾಚನಕರ್ಮ ವಾಮನದೇವರು ಮಾಡಸತಾನೆ. ಯಾಚಕರಲ್ಲಿ ವಾಮನದೇವರ ಅನುಸಂಧಾನ ಇರಬೇಕು). ಮರೀಚಿದಮನ_ಅನಂತ ಸೂರ್ಯರ ಕಾಂತಿಗಳ ಸೋಲಿಸತಕ್ಕವನು, ಸುಹಂಸರೂಪಿ_ಸಮೀಚೀನವಾದ ಹಂಸ ನಾಮಕ ಪರಮಾತ್ಮ, ಆಹ್ವಯನಾಗಿ – ಈ ನಾಮಗಳಿಂದ ಯುಕ್ತವಾದ ಮೂರು ರೂಪಗಳಿಂದ ಯುಕ್ತನಾಗಿ, ಜನರಭಿಲಾಷೆ_ಜೀವರ ಇಷ್ಟಾರ್ಥಗಳ ( ಜನಶಬ್ದ ಜೀವಪರ ಮಾಡಬೇಕು), ಪೂರೈಪ – ಪೂರ್ಣಮಾಡತಾನೆ. ಒಂದು ರೂಪದಿಂದ ಯಾಚನ ಮಾಡತಾನೆ. ಮೂರು ರೂಪದಿಂದ ಯಾಚನಿ ಪೂರ್ಣಮಾಡತಾನೆಂತ ತಾತ್ಪರ್ಯ. (ಆ ಪೂರ್ಣ ಎಂಬುದು ಸಾತ್ವಿಕ, ರಾಜಸ, ತಾಮಸ ಭೇದೇನ ಪೂರ್ಣಮಾಡತಾನಾದ್ದರಿಂದ, ಮೂರಕ್ಕೂ ಮೂರು ಭಗವದ್ರೂಪಗಳು ಪ್ರಕಾರಾಂತರ), ವಾಮನ_ಜೀವಕೃತ ಕರ್ಮಗಳ ತನಗೆ ಸಮರ್ಪಿಸಿರೆಂದು ಯಾಚನಾ ಮಾಡಿ ತೆಗೆದುಕೋತಕ್ಕವ, ಸುಹಂಸ_ಅರ್ಪಿತಮಾಡಿದ ಕರ್ಮಗಳ ಪುಣ್ಯಪಾಪ ವಿಭಾಗ ಮಾಡಿ ಭಕ್ತರಿಗೆ ಉಣ್ಣಿಸಿ, ಪಾಪ ದೈತ್ಯರಿಗೆ ಸೇರಿಸತಕ್ಕವ. ಮರೀಚಿದಮನ_ದೈತ್ಯರ ತೇಜಸ್ಸನ್ನು ಭಂಗಮಾಡಿ, ಅವರು ಮಾಡಿದ ಕರ್ಮಗಳೊಳಗೆ ಪುಣ್ಯ ತೆಗೆದು ಭಕ್ತರಿಗೆ ವಿಭಾಗವಮಾಡಿ, ಪಾಪಗಳ ದೈತ್ಯರಿಗೆ ಉಣಿಸತಕ್ಕವ. ನಿಷೇಚಕ_ಭಕ್ತರ ಅಭೀಷ್ಟ ಪೂರ್ಣಮಾಡತಕ್ಕವ. ಕ್ರಮವಿಷಮದಿಂದ ತ್ರಿವಿಧ ಜೀವರಲ್ಲೂ ಅನ್ವಯ. ಬಲಿಚಕ್ರವರ್ತಿಯೋಪಾದಿಯಲ್ಲಿ ಅತಿಥಿಗಳಿಗೆ ವಿಮುಖನಾಗದವನ ಬಾಗಿಲ ದೇವರು ಕಾಯಿತಾನೆ. ಭಂಗಮಾಡಿದವ ಶುಕ್ರಾಚಾರ್ಯರೋಪಾದಿಯಲ್ಲಿ ಹಾನಿ ಹೊಂದತಾನೆ.

ತ್ರಿವಿಕ್ರಮರೂಪದಿಂದ ಭಾಗೀರಥೀದ್ವಾರಾ ಲೋಕ ಪವಿತ್ರಮಾಡಿದಂತೆ ಅತಿಥಿ ಸಂತುಷ್ಟನಾದರೆ ವಂಶ ಉದ್ಧಾರ ಮಾಡತಾನೆ. ತದ್ವ್ಯತಿರಿಕ್ತ ಅಲ್ಲಿ ವಿಪರೀತಗಳೇ ಆಗೋದಾಗತವೆ.

**ಅನ್ನದನ್ನಾದನ್ನಮಯ ಸ್ವಯ ।**
**ಮನ್ನ ಬ್ರಹ್ಮಾದ್ಯಖಿಳಚೇತನ ।**
**ಕನ್ನಕಲ್ಪಕನಾಹನನಿರುದ್ಧಾದಿ ರೂಪದಲಿ ॥**
**ಅನ್ಯರನಪೇಕ್ಷಿಸದೆ ಗುಣಕಾ ।**
**ರುಣ್ಯಸಾಗರ ಸೃಷ್ಟಿಸುವನು ಹಿ ।**
**ರಣ್ಯಗರ್ಭನೊಳಿದ್ದು ಪಾಲಿಸುವನು ಜಗತ್ರಯವ ॥ ೨೪ ॥**

ಅನ್ನಗಳ ಕಲ್ಪನಾ ಮಾಡಿ ಸಂರಕ್ಷಣ ಮಾಡತಕ್ಕ ಭಗವದ್ರೂಪಗಳ ಹೇಳತಾರೆ.

ಅನ್ನದ–ತ್ರಿವಿಧ ಜೀವರಿಗೆ ಅನ್ನ ಕೊಡತಕ್ಕವ. ಸರ್ವಾಂತರ್ಗತನಾಗಿ, ಅನ್ನಾದ–'ಅದ ಭಕ್ಷಣೇ' ಇತಿ ಧಾತುಪರ್ಯಾಲೋಚನಯಾ ದೇಹಾಂತರ್ಗತನಾಗಿ ಅನ್ನವನ್ನು ಭೋಜನಮಾಡತಕ್ಕವ. ಅನ್ನಮಯ–ಅನ್ನಾಂತರ್ಗತನಾಗಿ ತದಾಕಾರದಿಂದ ಅನ್ನಮಯ ಎಂತ ಕರಿಸತಕ್ಕವ. ಸ್ವಯಮನ್ನ–ಜೀವರಿಗೆ ಜಡರೂಪವಾದ ಅನ್ನವು, ಪರಮಾತ್ಮ ತನಗೆ ತಾನೇ ಸ್ವಯಮಾಗಿ ಅನ್ನನಾಗೇ ಇದ್ದಾನೆ. ಜೀವರಿಗೆ ಜಡಾನ್ನ ಭೋಜನ ಮಾಡಿಸಿ, ತದ್ಗತ ತನ್ನ ಸ್ವಾಖ್ಯ ತಾನು ಭೋಜನಮಾಡೋವನಾಗತಾನೆ. ಬ್ರಹ್ಮಾದಿ–ಬ್ರಹ್ಮದೇವರೇ ಆದಿಯಾಗಿ, ಅಖಿಳ ಚೇತನಕೆ – ಸಮಸ್ತರಾದ ತ್ರಿವಿಧ ಚೇತನಕ್ಕೆ, ಕಾರುಣ್ಯಸಾಗರ–ಕರುಣಾಸಮುದ್ರನಾದ, ಅನ್ಯರನಪೇಕ್ಷಿಸದೆ–ರಮಾಬ್ರಹ್ಮಾದಿಗಳನ್ನೂ ಅಪೇಕ್ಷಾ ಮಾಡದೇನೆ, ಅನಿರುದ್ಧಾದಿ ರೂಪದಲಿ–ಅನಿರುದ್ಧ ಪ್ರದ್ಯುಮ್ನಾದಿ ರೂಪಗಳಿಂದ, ಅನ್ನಕಲ್ಪಕನಾಹನು–ಅವರವರ ಯೋಗ್ಯತಾನುಸಾರ ಜಡಾನ್ನವನ್ನ ಕಲ್ಪನಾ ಮಾಡೋವನಾಗತಾನೆ. ಗುಣ–ಮೂಲ ಜಡಪ್ರಕೃತ್ಯಾತ್ಮಕ ಗುಣತ್ರಯಗಳಿಂದ, ಹಿರಣ್ಯಗರ್ಭದೊಳಿದ್ದು–ಬ್ರಹ್ಮಾಂತರ್ಗತನಾಗಿ ಬ್ರಹ್ಮರೂಪದಿಂದ ಇದ್ದು, ಸೃಷ್ಟಿಸುವನು–ಚರಾಚರಗಳ ಸೃಷ್ಟಿಮಾಡುವನು. ಪಾಲಿಸುವನು–ಸ್ವಯಂ ವಿಷ್ಣುರೂಪದಿಂದ ಸಂರಕ್ಷಣ ಮಾಡುವನು. ರುದ್ರಾಂತರ್ಗತನಾಗಿ ರುದ್ರರೂಪದಿಂದ ಸಂಹಾರಮಾಡುವನು. ಜಗತ್ರಯವ–ಪುನಃ ಪೂರ್ವೋಕ್ತಪ್ರಕಾರ ಜಗತ್ರಯಗಳ ಸೃಷ್ಟಿಮಾಡುವನು.

**ತಾ॥** ಈ ಪ್ರಕಾರ ಅನ್ನ ಕಲ್ಪನಾ ಮಾಡಿ ತನ್ನ ಸ್ವಾಖ್ಯ ಅನ್ನವನ್ನ ತಾನು ಭೋಜನಮಾಡಿ ತದನ್ಯಗಳ ಜೀವರಿಗೆ ವಿಭಾಗಮಾಡಿಕೊಡತಾನೆಂತ ತಾತ್ಪರ್ಯ. ಈ ಪ್ರಕಾರ ಅನ್ನಾದಿಗಳ ಕಲ್ಪನಾ ಮಾಡಿದ ಭಗವದ್ರೂಪಗಳ ತಿಳಿಯಬೇಕು. ಮತ್ತು ಸ್ಥೂಲಸೃಷ್ಟಿಯು ಪೂರ್ವೋಕ್ತ ಅನಿರುದ್ಧರೂಪದಿಂದಲೇ ಆಗೋದಾಗತದೆ.

**ತ್ರಿಪದ ತ್ರಿದಶಾಧ್ಯಕ್ಷ ತ್ರಿಸ್ಥ ।**
**ತ್ರಿಪಥಗಾಮಿನಿಪಿತ ತ್ರಿವಿಕ್ರಮ ।**
**ಕೃಪಣವತ್ಸಲ ಕುವಲಯದಳಶ್ಯಾಮ ನಿಸ್ಸೀಮ ॥**
**ಅಪರಿಮಿತಚಿತ್ಸುಖಗುಣಾತ್ಮಕ ।**
**ವಪುಷ ವೈಕುಂಠಾದಿಲೋಕಾ ।**
**ಧಿಪ ತ್ರಯೀಮಯ ತನ್ನವರ ನಿಷ್ಕಪಟದಿಂ ಪೊರೆವ ॥ ೨೫ ॥**

ಪರಮಾತ್ಮನ ಗುಣಾನುವರ್ಣನೆ ಮಾಡತಾರೆ.

ತ್ರಿಪದ–ಲಿಂಗಭಂಗಾನಂತರ ತ್ರಿವಿಧ ಜೀವರಿಗೆ ತ್ರಿವಿಧವಾದ ಪದ ಎಂದರೆ, ನ ಚ ಪುನರಾವರ್ತಿ ಪದಗಳ ಕೊಡತಕ್ಕವ, ತ್ರಿದಶ–ದೇವತೆಗಳ ಒಳಗೆ, ಅಧ್ಯಕ್ಷ–ಶ್ರೇಷ್ಠನಾದವ, ಸರ್ವೋತ್ತಮನಾದವ, ತ್ರಿಸ್ಥ–ಶ್ವೇತದ್ವೀಪ, ಅನಂತಾಸನ, ವೈಕುಂಠ—ಈ ಮೂರು ಸ್ಥಳಗಳಲ್ಲಿ ಇರತಕ್ಕವ. ತ್ರಿವಿಧ ಜೀವಾಂತರ್ಗತನಾಗಿ, ಬಿಂಬನಾಗಿ ಇರತಕ್ಕವ. ತ್ರಿಪಥಗಾಮಿನಿಪಿತ–ಭಾಗೀರಥಿದೇವಿಯವರಿಗೆ ತಂದೆಯಾದವ, ಮೂರು ವಿಧ ಜ್ಞಾನಮಾರ್ಗದಿಂದ ಸಂಚಾರಮಾಡತಕ್ಕ ತ್ರಿವಿಧ ಜೀವರಿಗೆ ತಂದೆಯಾದವ, ತ್ರಿವಿಕ್ರಮ–ತ್ರಿವಿಕ್ರಮರೂಪಿಯಾದವ, ಕುವಲಯದಳಶ್ಯಾಮ–ನೀಲೋತ್ಪಲದೋಪಾದಿಯಲ್ಲಿ ಶ್ಯಾಮವರ್ಣೋಪೇತನಾದವ, ನಿಸ್ಸೀಮ–ಆದ್ಯಂತಶೂನ್ಯನಾದವ, ಅಪರಿಮಿತಚಿತ್ಸುಖ–ಅಪಾರವಾದ ಜ್ಞಾನವೇನು, ಆನಂದವೇನು, ಗುಣಾತ್ಮಕ–ತನಗೆ ಅಭಿನ್ನವಾದ ಸತ್ತ್ವಾದಿಗುಣಗಳೇನು, ಇವುಗಳಿಂದ ಪ್ರಚುರನಾದ, ವಪುಷ–ಶರೀರ ಉಳ್ಳವ. ವೈಕುಂಠಾದಿಲೋಕಾಧಿಪ–ವೈಕುಂಠಾದಿ ಲೋಕಗಳಿಗೆ ಸ್ವಾಮಿಯಾದವನು, ತ್ರಯೀಮಯ–ವೇದದಿಂದ ತಿಳಿಸಿಕೊಳ್ಳಲ್ಪಟ್ಟ ಇಂಥಾ ಪರಮಾತ್ಮ, ನಿಷ್ಕಪಟದಿಂ–ಕಪಟದಿಂದ ರಹಿತರಾಗಿ ಭಜಿಸತಕ್ಕ, ತನ್ನವರ–ತನ್ನ ಭಕ್ತರನ್ನ, ಕೃಪಣವತ್ಸಲ–ಪುಣ್ಯವೇ ಮಾಡೋದರಲ್ಲಿ ಲೋಭವುಳ್ಳಂಥಾ ಭಕ್ತರಲ್ಲಿ ಸ್ನೇಹವುಳ್ಳವ. ಇಂಥಾ ಪರಮಾತ್ಮ, ಪೊರೆವ–ಸಂರಕ್ಷಿಸುವ.

**ವಿಶೇಷಾರ್ಥ :–** ಈ ನುಡಿಯಲ್ಲಿ ನಿಷ್ಕಪಟರಾದ ಭಕ್ತರ ಪಾಲಿಸತಾನೆ ಎಂತ ಹೇಳತಾರೆ. ಬ್ರಹ್ಮರೂಪದಿಂದ ಬ್ರಹ್ಮಾಂತರ್ಗತನಾಗಿ ಸೃಷ್ಟಿಯು, ಸಾಕ್ಷಾತ್ ವಿಷ್ಣುರೂಪ ಧರಿಸಿ ಪಾಲನೆ ಮಾಡತಾನೆ ಎಂತ ಹೇಳಿ, ಸಂಹಾರವೂ ಮಾಡತಾನೆ ಎಂತ ಹೇಳತಾರೆ. ತ್ರಿಪದ ಎಂದರೆ, ಬ್ರಹ್ಮಾಂಡದಲ್ಲಿ ವಿದ್ಯಮಾನರಾದ ಯಾವತ್ತೂ ಜೀವರಿಗೆ ತ್ರಿಪದವನ್ನು ಕೊಡತಾನೆ, ಪ್ರಳಯಾನಂತರದಲ್ಲಿ ಎಂತ ತಾತ್ಪರ್ಯ. ಇದರಿಂದ ಪ್ರಳಯವೂ ಹೇಳಿದಂತಾಯಿತು. ಪ್ರಳಯಕ್ಕೆ ದಾವ ಭಗವದ್ರೂಪ ಎಂದರೆ ಸಂಕರ್ಷಣನು. ಈ ಸಂಕರ್ಷಣನು ಜಗತ್ಪ್ರಳಯ ಮಾಡತಾನೆ. ತದನಂತರ ತ್ರಿವಿಧ ಜೀವರಿಗೆ ತ್ರಿಪದ ಎಂದರೆ, ಅವರವರ ಯೋಗ್ಯತಾನುಸಾರ, ತ್ರಿವಿಧ ಜೀವರಿಗೆ ಮುಕ್ತಿಯೋಗ್ಯರಾದವರು ಸುಖಸ್ವರೂಪರಾದಕಡಿಯಿಂದ ವೈಕುಂಠಾದಿ ಸುಖಸ್ಥಾನಪದವು, ನಿತ್ಯಸಂಸಾರಿಗಳಿಗೆ ಮಿಶ್ರವಾದ ಸುಖದುಃಖ ಏಕಕಾಲಾವಚ್ಛೇದೇನ ಭೋಗಿಸತಕ್ಕ ಪದ ಎಂತ ತಾತ್ಪರ್ಯ.

ತಮೋಯೋಗ್ಯರು ದುಃಖಸ್ವರೂಪವುಳ್ಳವರಾದಕಡಿಯಿಂದ, ಅಂಥಂತವಾದಿ ದುಃಖ ಸ್ಥಾನಪದವು. ಈ ಪ್ರಕಾರ ತ್ರಿಪದ ಎಂದರೆ, ತ್ರಿ–ಮೂರಾದಂಥಾ, **ಪ** ಎಂದರೆ ಪಾಲನರೂಪವಾದ ಸ್ಥಾನವನ್ನ, **ದ** ಎಂದರೆ ಕೊಟ್ಟವನಾಗಿ, **ಪ** ಎಂದರೆ ಅವರವರ ಯೋಗ್ಯತಾನುಸಾರ ಪಾಲನೆ ಮಾಡತಾನೆ. ಪದ ಎಂಬುದರನ್ನ ಆವರ್ತನ ಮಾಡಿ ಕೊಂಡು ಒಂದಾವರ್ತಿ ಪದ ಎಂತ ಏಕಪದವಾಗಿಯೂ, ಮತ್ತೊಂದಾವರ್ತಿ ಪದ ಎಂತ ಭಿನ್ನಪದವಾಗಿಯೂ ಮಾಡಿಕೋಬೇಕು. ತ್ರಿದಶಾಧ್ಯಕ್ಷ– ತ್ರಿ ಎಂದರೆ ತ್ರಿವಿಧಜೀವರಿಗೆ, ದಶಾ–ಯೋಗ್ಯತಾ ತ್ರಿವಿಧವಾದವ ಪರಮಾತ್ಮನೇ ಹೊರತು, ಅನ್ಯರು ದಾರೂ ಇಲ್ಲ ಎಂತ ತಾತ್ಪರ್ಯ. ತ್ರಿಸ್ಥ ಎಂದರೆ, ತ್ರಿವಿಧ ಜೀವರಲ್ಲಿ ತ್ರಿವಿಧರೂಪದಿಂದ, ಸ್ಥ–ಇರ ತಕ್ಕವ. ಆ ರೂಪಗಳು ದಾವವೆಂದರೆ—ವಾಸುದೇವರೂಪದಿಂದ ಮುಕ್ತರಲ್ಲಿ, ಸಂಕರ್ಷಣ ರೂಪದಿಂದ ತಮೋಯೋಗ್ಯರಲ್ಲಿ, ನಿತ್ಯಸಂಸಾರಿಗಳಲ್ಲಿ ಪ್ರದ್ಯುಮ್ನರೂಪದಿಂದ ಇದ್ದಾನೆ. ಆಯಾ ಭಗವದ್ರೂಪಗಳಿಗೆ ಆಯಾ ಜೀವವರ್ಣವೇ ಇರುತ್ತದೆ. ಆಯಾ ಜೀವವರ್ಣ ಗಳು ಎಂಥಾವೆಂದರೆ, ಮುಕ್ತಿಯೋಗ್ಯರು ಶುಭ್ರವರ್ಣ, ನಿತ್ಯಸಂಸಾರಿಗಳು ರಕ್ತವರ್ಣ, ತಮೋಯೋಗ್ಯರು ಕಪ್ಪುವರ್ಣ. ಈ ಪ್ರಕಾರ ಸ್ವರೂಪದೇಹವರ್ಣವುಳ್ಳವರು. ತ್ರಿಪಥ ಗಾಮಿನಿಪಿತ ಎಂದರೆ, ತ್ರಿ ಎಂದರೆ ಮೂರಾದಂಥಾ, ಪಥ–ಜ್ಞಾನಮಾರ್ಗದಿಂದ, ಗಾಮಿನಿ–ನಡಿಯತಕ್ಕವರು. ತ್ರಿವಿಧಜ್ಞಾನ ದಾವದೆಂದರೆ, ಮುಕ್ತಿಯೋಗ್ಯರದು, ಹರಿಸರ್ವೋತ್ತಮ ವಾಯು ಜೀವೋತ್ತಮ ತಾರತಮ್ಯಪಂಚಭೇದ ಸತ್ಯವೆಂಬ ಭೇದ ಮಾರ್ಗ. ನಿತ್ಯಸಂಸಾರಿಗಳದು, ಪಂಚಭೇದ ಅಂಗೀಕರಿಸಿ ತಾರತಮ್ಯ ಅಂಗೀಕರಿಸದ ಮಿಶ್ರಜ್ಞಾನ. ತಮೋಯೋಗ್ಯರದು, ಮಿಥ್ಯಾಮಾರ್ಗ. ಈ ಮೂರು ಮಾರ್ಗದಿಂದ ನಡಿಯತಕ್ಕವರಿಗೆ, ಪಿತ–ತಂದೆಯಾದವ ಪರಮಾತ್ಮ ಎಂತ ತಾತ್ಪರ್ಯ. ಇಂಥಾ ಪರಮಾತ್ಮ ದಾರಲ್ಲಿ ಅನುಗ್ರಹ ಮಾಡತಾನೆಂದರೆ, ಕೃಪಣವತ್ಸಲ– ಕೃಪಣ–ಲೋಭಿ, ಭೇದಜ್ಞಾನಪೂರ್ವಕ ಜ್ಞಾನ, ಭಕ್ತಿ, ವೈರಾಗ್ಯಾದಿಗಳ ವೆಚ್ಚಮಾಡದೆ, ತಾನು ಮಾಡಿದ ತಪಸ್ಸನ್ನೂ ವೆಚ್ಚಮಾಡದೆ ಅದರನ್ನೇ ಆರ್ಜನಮಾಡಿ ಸಕಾಮದಲ್ಲಿ ವೆಚ್ಚಮಾಡದೆ ಪರ ಮಾತ್ಮಗೆ ಅರ್ಪಿಸತಕ್ಕ ಇಂಥಾ ಕೃಪಣ ದಾವನೋ ಅವನಲ್ಲಿ, ವತ್ಸಲ–ಎಂದರೆ ವಾತ್ಸಲ್ಯ ಉಳ್ಳವ ಪರಮಾತ್ಮ. ಕುವಲಯದಳಶ್ಯಾಮ – ನೀಲೋತ್ಪಲವರ್ಣದೋಪಾದಿಯಲ್ಲಿ, ಶ್ಯಾಮವರ್ಣ ಉಳ್ಳವ ಎಂದರೆ, ಇಂಥಾ ವರ್ಣವುಳ್ಳವ ಶ್ರೀಕೃಷ್ಣ. ಕಲಿಯುಗದಲ್ಲಿ ಕೃಷ್ಣ ರೂಪವನ್ನ ಭಜಿಸಬೇಕೆಂತ ತಾತ್ಪರ್ಯ. ನಿಸ್ಸೀಮ–ಸರ್ವಪ್ರಾಣಿಗಳಿಗೂ ಸೀಮಾ ಉಂಟು. ಇವಗೆ ಸೀಮಾ ಇಲ್ಲ. ಎಂದರೆ ಆದ್ಯಂತವಿಲ್ಲ, ಅಪರಿಮಿತ ಎಂದರೆ, ರೂಪವೇನು, ಗುಣವೇನು, ಶಕ್ತಿ ಏನು, ಇನ್ನೂ ಯಾವತ್ತರಿಂದಲೂ ಮಿತಿರಹಿತನಾದ ಪರಮಾತ್ಮ, ಚಿತ್ಸುಖಗುಣಾತ್ಮಕ–ಚಿತ್ಸುಖ ಎಂದರೆ ಜ್ಞಾನಸುಖ, ಎಂದರೆ ಸಂತೋಷ, ಐಶ್ವರ್ಯ ಗುಣ ಎಂದರೆ ನಿರ್ದೋಷವಾದ ಕಲ್ಯಾಣಗುಣಗಳು, ಆತ್ಮಾ ಎಂದರೆ ಇವುಗಳಿಂದಲೆ, ವಪುಷ–ಶರೀರ ಉಳ್ಳವ, ವೈಕುಂಠಾದಿ ಲೋಕಾಧಿಪ–ವೈಕುಂಠ, ಶ್ವೇತದ್ವೀಪ, ಅನಂ ತಾಸನ ಈ ಮೂರು ಲೋಕಕ್ಕೂ, ತದನ್ಯವಾದ ಹದಿನಾಲ್ಕು ಲೋಕಗಳಿಗೂ, ತದ್ಗತ

ಪ್ರಾಣಿಗಳಿಗೂ ಅಧಿಪತಿ, ಯಜಮಾನನಾದವ. ತ್ರಯೀಮಯ–ವೇದಪ್ರತಿಪಾದ್ಯನಾಗಿ ಇರತಕ್ಕವ. ಇಂಥಾ ಪರಮಾತ್ಮ ತನ್ನವರ, ನಿಷ್ಕಪಟದಿಂ ಪೊರೆವ–ನಿಷ್ಕಾಪಟ್ಯದಿಂದ ತನ್ನ ನಂಬಿದ ಭಕ್ತರ ಸಂರಕ್ಷಿಸುತ್ತಾನೆ. ನಿಷ್ಕಾಪಟ್ಯದಿಂದ ಪರಮಾತ್ಮನ ಪಾದ ನಂಬ ಬೇಕೆಂಬ ತಾತ್ಪರ್ಯ. ತಮೋಯೋಗ್ಯರು, ಇವರಲ್ಲಿ ಇರತಕ್ಕ ಪರಮಾತ್ಮ, ನಿತ್ಯ ಸಂಸಾರಿಗಳು, ಇವರ ಅಂತರ್ಗತ ಪರಮಾತ್ಮನ ವರ್ಣಗಳು ಮ್ಯಾಲೆ ಹೇಳಲ್ಪಟ್ಟವೆ.

**ಲವಣಮಿಶ್ರಿತ ಜಲವು ತೋರ್ಪುದು ।**
**ಲವಣದೋಪಾದಿಯಲಿ ಜಿಹ್ವೆಗೆ ।**
**ವಿವರಗೈಸಲು ಶಕ್ಯವಾಗುವದೇನೊ ನೋಳ್ಪರಿಗೆ ॥**
**ಸ್ವವಶವ್ಯಾಪಿಯೆನಿಸಿ ಲಕ್ಷ್ಮೀ ।**
**ಧವ ಚರಾಚರದೊಳಗೆ ತುಂಬಿಹ ।**
**ನವಿದಿತನ ಸಾಕಲ್ಯ ಬಲ್ಲವರಾರು ಸುರರೊಳಗೆ ॥ ೨೬ ॥**

ಬಿಂಬನಾದ ಪರಮಾತ್ಮಗೆ ಪ್ರತಿಬಿಂಬರಾದ ಜೀವರಿಗೆ ಭೇದ ಹೇಳತಾರೆ. ಪರ ಮಾತ್ಮ ಸರ್ವತ್ರದಲ್ಲಿ ವ್ಯಾಪ್ತನಾಗಿ ಗೋಚರನಾಗದೆ ಇದ್ದಾನೆ. ಗೋಚರನಾಗದ ಮಾತ್ರಕ್ಕೆ ಇಲ್ಲ ಎಂತ ತಿಳಿಯಬಾರದು. ದೃಷ್ಟಾಂತದಿಂದ ಹೇಳತಾರೆ. ಜಗತ್ತಿಗೂ ಪರಮಾತ್ಮಗೂ ಭೇದ ಎಂತ ತಿಳಿಯಬೇಕು.

ಲವಣಮಿಶ್ರಿತ ಜಲವು–ಛಲೋ ಸೀನೀರು ತಂದು ಅದರಲ್ಲಿ ಉಪ್ಪು ಮೇಳನ ಮಾಡಿದರೆ ಎರಡೂ ಕಲತುಹೋಗತವೆ. ಜಲವು–ಆ ನೀರು, ಜಿಹ್ವೆಗೆ–ನಾಲಿಗೆಗೆ ಸ್ಪರ್ಶ ವಾದರೆ, ಲವಣದೋಪಾದಿಯಲಿ–ಉಪ್ಪುನೀರಿನೋಪಾದಿಯಲ್ಲಿ, ತೋರ್ಪುದು–ತೋರೋ ದಾಗತದೆ. ನೋಳ್ಪರಿಗೆ–ಅದೇ ಉದಕವನ್ನ ಕಣ್ಣಿಂದ ನೋಡತಕ್ಕವರಿಗೆ ಉಪ್ಪುಮಿಶ್ರಿತ ವಾದ ನೀರು ಎಂತಲೂ, ಈ ಉದಕದಲ್ಲಿ ಉಪ್ಪುಭಾಗ ಬ್ಯಾರೆ ಅದೆ ಎಂತ ತಿಳಿಯ ಲಾರದು. ವಿವರಗೈಸಲು–ನಾಲಿಗೆ, ನೀರಿನಲ್ಲಿ ಉಪ್ಪುಮಿಶ್ರವಾಗಿದೆ ಎಂತ ತಿಳಕೋತದೆ ಹೊರತು, ತದ್ಗತ ಲವಣವನ್ನ ಬ್ಯಾರೆ, ಉದಕವನ್ನ ಬ್ಯಾರೆ ವಿವರಮಾಡೋದಕ್ಕೆ, ಶಕ್ಯ ವಾಗುವುದೇನೊ–ಸಾಧ್ಯವಾಗೋದೆ? ಸಾಧ್ಯವಾಗಲಾರದು ಎಂತ ತಾತ್ಪರ್ಯ. ಸ್ವವಶ– ತನ್ನ ವಶ ತಾನೇ ಆದ, ಅನ್ಯರ ವಶನಲ್ಲದ, ಸ್ವತಂತ್ರನಾದ, ವ್ಯಾಪಿ–ಸರ್ವತ್ರ ವ್ಯಾಪ್ತ ನಾದವನು, ಎನಿಸಿ–ಎಂತ, ಲಕ್ಷ್ಮೀಧವ–ರಮಾಪತಿಯಾದ ಪರಮಾತ್ಮ, ಚರಾಚರ ದೊಳಗೆ–ಚೇತನಾಚೇತನ ಸರ್ವತ್ರದಲ್ಲೂ, ತುಂಬಿಹನು–ಆಯಾ ಜೀವಾಕಾರದಂತೆ ಬಿಂಬ ನಾಗಿ ಅವಿಯೋಗನಾಗಿ ತುಂಬಿದ್ದಾನೆ. ಜಲದಲ್ಲಿ ವಿದ್ಯಮಾನವಾದ ಲವಣಜ್ಞಾನ, ಜಿಹ್ವೆಗೆ ತಿಳಿಯೋದಾಗತದೆ. ತದ್ವತ್, ಜ್ಞಾನಸ್ವರೂಪಿಗಳಾದ ಭಗವದ್ಭಕ್ತರಿಗೆ ಜೀವ, ಜೀವಾಂತರ್ಗತ ಪರಮಾತ್ಮ, ಬ್ಯಾರೆ ಬ್ಯಾರೆ ಆಗಿ ಇರೋದು ತಿಳಿಯೋದಾಗತದೆ. ಅದೇ ಜಲವನ್ನ ನೇತ್ರದಿಂದ ನೋಡೋ ಜನರಿಗೆ ತದ್ಗತ ಭೇದ ಹ್ಯಾಂಗೆ ತಿಳಿಯೋದಿಲ್ಲವೊ, ತದ್ವತ್, ಸ್ವರೂಪತಃ ಅಜ್ಞಾನಸ್ವರೂಪಿಗಳಾದ ದೈತ್ಯರಿಗೆ ಕಾಣೋದಿಲ್ಲ. ಅವಿದಿತನ–

ಈ ಪ್ರಕಾರ ದೈತ್ಯರಿಗೆ ತಿಳಿಯದೆ ಇರತಕ್ಕವನು, ದೇವತೆಗಳಿಗೇ ತಿಳಿದವನು. ಇಂಥಾ ಪರಮಾತ್ಮನ, ಸಾಕಲ್ಯ–ಆದ್ಯಂತಸಹಿತಗಳಾದ, ಸುರರೊಳಗೆ–ರಮಾಬ್ರಹ್ಮಾದಿ ದೇವತೆಗಳ ಒಳಗೆ, ಬಲ್ಲವರಾರು–ತಿಳಿದವರು ಯಾರು ? ದಾರೂ ಇಲ್ಲ ಎಂತ ತಾತ್ಪರ್ಯ.

**ತಾ||** ಯೋಗ್ಯತಾನುಸಾರ ಕಾಣೋವರಾಗುತ್ತಾರೆ. ಕ್ಷೀರೋದಕಗಳು ಮೇಳನವಾಗಿದ್ದಂತೆ ಪರಮಾತ್ಮ ಚರಾಚರದಲ್ಲಿ ತುಂಬಿ ಇದ್ದಾನೆ. ಕ್ಷೀರ ನೀರು ವಿಭಾಗ ಮಾಡಿ ಯೋಗ್ಯತೆ ಗ್ರಹಣ ಮಾಡತಕ್ಕದ್ದು ಹಂಸಪಕ್ಷಿಯೇ ಹೊರತು, ಅನ್ಯವಾದ ಪಕ್ಷಿಗಳಿಗೆ ಇಂಥಾ ಯೋಗ್ಯತೆ ಇಲ್ಲ. ಹಂಸದೋಪಾದಿಯಲ್ಲಿ ಭಗವದ್ಭಕ್ತರು ; ಅನ್ಯಪಕ್ಷಿಗಳೋಪಾದಿಯಲ್ಲಿ ಭಗವದ್ದ್ವೇಷಿಗಳು ಎಂತ ತಾತ್ಪರ್ಯ.

**ವ್ಯಾಪ್ಯನಂದದಿ ಸರ್ವಜೀವರೊ ।**
**ಳಿಪ್ಪ ಚಿನ್ಮಯ ಘೋರಭವ ಸಂ ।**
**ತಪ್ಯಮಾನರು ಭಜಿಸೆ ಭಕುತಿಗಳಿಂದಲಿಹಪರದಿ ॥**
**ಪ್ರಾಪ್ಯನಾಗುವನವರವಗುಣಗ ।**
**ಳೊಪ್ಪುಗೊಂಬನು ಭಕ್ತವತ್ಸಲ ।**
**ತಪ್ಪಿಸುವ ಬಹುಜನ್ಮದೋಷಗಳವರಿಗನವರತ ॥ ೨೭ ॥**

ಭಕ್ತರ ದೋಷ ಪರಿಹಾರಮಾಡಿ ಉದ್ಧಾರಮಾಡತಾನೆ ಎಂತ ಹೇಳತಾರೆ.

ವ್ಯಾಪ್ಯ–ವ್ಯಾಪ್ಯ, ವ್ಯಾಪಕ ಎಂತ ಎರಡು ವಿಧ. ವ್ಯಾಪ್ಯ ಎಂದರೆ ಅಲ್ಪ ಶಕ್ತಿ, ಅಲ್ಪ ಜ್ಞಾನ ಇತ್ಯಾದಿ ಅಲ್ಪಗಳ ಸಾಂಕೇತವು. ವ್ಯಾಪಕ ಎಂದರೆ ಪೂರ್ಣ ಶಕ್ತಿ, ಪೂರ್ಣ ಜ್ಞಾನ ಇತ್ಯಾದಿ ಮಹತ್ತುಗಳಿಗೆ ಸಾಂಕೇತವು. ಅಲ್ಪ ಶಕ್ತಿ, ಅಲ್ಪ ಜ್ಞಾನಾದಿಗಳಿಂದ ಯುಕ್ತರಾದ, ಸರ್ವಜೀವರೊಳು–ಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರೊಳು, ರಮಾದೇವಿಯರಲ್ಲೂ, ಚಿನ್ಮಯ–ಪೂರ್ಣ ಶಕ್ತಿ, ಪೂರ್ಣ ಜ್ಞಾನನಾದ, ಅಪರಿಚ್ಛಿನ್ನನಾದ ಪರಮಾತ್ಮ ಅವರವರಿಗೆ ಬಿಂಬನಾಗಿ, ನಂದದಿ–ವ್ಯಾಪ್ತರಾದ ಅಸ್ವತಂತ್ರ ಚೇತನರ ಸ್ವರೂಪ ಶಕ್ತಿ, ಜ್ಞಾನ ಇವುಗಳೋಪಾದಿಯಲ್ಲಿ, ತನ್ನ ಜ್ಞಾನಶಕ್ತಿಗಳ ಪ್ರದರ್ಶನ ಮಾಡತಾ, ಇಪ್ಪ–ಇರೋವನಾಗಿದ್ದಾನೆ. ಇದರಿಂದ ಅಲ್ಪಶಕ್ತ ಎಂತಾಗಲಿ, ಅಲ್ಪಜ್ಞಾನಿ ಎಂತಾಗಲಿ ತಿಳಿಯಬಾರದು. ಅಧಿಷ್ಠಾನದ ಯೋಗ್ಯತಾನುಸಾರ ಇರೋವನಾಗಿದ್ದಾನೆ. ಜೀವನಲ್ಲಿ ಜೀವಗೆ ತಿಳಿಸದೇನೆ ತನ್ನ ಅಚಿಂತ್ಯ ಕಾರ್ಯಗಳ ನಡಸತಾನೇ ಇರುತ್ತಾನೆ. ಘೋರ–ಕ್ರೂರವಾದ ನರಕಾದಿಗಳಿಗೆ ಗುರಿಮಾಡತಕ್ಕ ಸಂಸಾರದಲ್ಲಿ, ಮಹಾಕ್ಲೇಶಾದಿಗಳ ಕೊಡತಕ್ಕ ಅನೇಕ ವಿಧವಾದ ಪಾಪಗಳ ಮಾಡಿಸುವಂಥ ಘೋರವಾದ ಅಹಂಮಮತಾದಿಗಳಿಂದ, ಭವ–ಸಂಸಾರದಲ್ಲಿ, ಸಂತಪ್ಯಮಾನರು–ಛಂದಾಗಿ ತಪ್ತರಾಗಿ ನಾನಾ ದುಃಖಗಳ ಅನುಭವ ಮಾಡತಕ್ಕವರು, ಭಕುತಿಗಳಿಂದ–ಭಕ್ತಿ, ಜ್ಞಾನ, ವೈರಾಗ್ಯಗಳಿಂದ ಯುಕ್ತನ್ನಾಗಿ ಮಾಡಿ ಅಹಂಮಮತಾದಿಗಳ ಬಿಡಿಸಿ ಉದ್ಧಾರಮಾಡಬೇಕೆಂದು, ಭಜಿಸೆ–ಗುರೂಪ

ದೇಶವಮಾರ್ಗದಿಂದ ಭಜಿಸಿದರೆ, ಅಹಂಮಮತಾದಿಗಳ ಬಿಡಿಸಿ, ಇಹಪರದಿ_ಇಹಲೋಕ ವಲ್ಲಿ ಸಂಸಾರದುಃಖಗಳ ಪರಿಹಾರಮಾಡಿ ಪರಲೋಕದಲ್ಲಿ ನರಕಾದ್ಯನರ್ಥಗಳ ತಪ್ಪಿಸಿ, ಪ್ರಾಪ್ಯನಾಗುವನು_ಹೃದಯಗತ ಬಿಂಬ ಅಪರೋಕ್ಷದಿಂದ ತಿಳಿಯುತಾನೆ. ಅವರವಗುಣ ಗಳೊಪ್ಪುಗೊಂಬನು_ಇಂಥಾವರಗಳ ಅವಗುಣಗಳ ಸುಗುಣತ್ವೇನ ಒಪ್ಪಿಕೋತಾನೆ. ಭಕ್ತವತ್ಸಲ_ತನ್ನ ಭಕ್ತರಲ್ಲಿ ಅತಿಪ್ರೇಮಾಸ್ಪದನಾದ ಪರಮಾತ್ಮ ಇಂಥಾ ಅಧಿಕಾರಿಗೆ, ಬಹುಜನ್ಮದೋಷಗಳ_ಅಪರೋಕ್ಷಾತ್ಪೂರ್ವದಲ್ಲಿ ಮಾಡಿದ ಬಹುಜನ್ಮದೋಷಗಳ, ತಪ್ಪಿಸುವ_ನಾಶರೂಪದಿಂದ ತಪ್ಪಿಸೋವನಾಗತಾನೆ. ಅವರಿಗನವರತ_ಇಂಥಾ ಅಧಿಕಾರಿ ಗಳು ಅಪರೋಕ್ಷಾನಂತರ ಅನವರತ ಮಾಡಿದ ಕರ್ಮಗಳ ಅವರಿಗೆ ನಿರ್ಲೇಪವಮಾಡ ತಾನೆಂತ ತಾತ್ಪರ್ಯ ಮತ್ತು ಅವರಿಗೆ ಅನವರತ ಜ್ಞಾನಭಕ್ತ್ಯಾದಿಗಳು ನ್ಯೂನವಾಗದೆ ಅತಿಶಯವಾಗತಾ ಇರತವೆ ಎಂತ ತಾತ್ಪರ್ಯ.

**ವಿಶೇಷಾರ್ಥ :_** ಈ ಶ್ಲೋಕದಲ್ಲಿ ಮುಕ್ತಿಯೋಗ್ಯರಿಗೆ ಅಪರೋಕ್ಷ ವಿಚಾರ ಹೇಳಿತು. ಆದರೆ ತಮೋಯೋಗ್ಯರಿಗೆ, ನಿತ್ಯಸಂಸಾರಿಗಳಿಗೆ ಅಪರೋಕ್ಷ ಆಗೋ ವಿಚಾರ ಬಹಳ ಗಹನವಾದಕಡಿಯಿಂದ (ಸಂಧ್ಯಂತರದಲ್ಲಿ) ಸೂಕ್ಷ್ಮವಾಗಿ ಸಾರಾಂಶವು ಬರೆಯ ಲ್ಪಡುತ್ತದೆ.

**ಹಲವು ಬಗೆಯಲಿ ಹರಿಯ ಮನದಲಿ ।**
**ಒಲಿಸಿ ನಿಲ್ಲಿಸಿ ಏನು ಮಾಡುವ ।**
**ಕೆಲಸಗಳು ಅವನಂಘ್ರಿಪೂಜೆಗಳೆಂದು ನೆನೆವುತಿರು ॥**
**ಹಲಧರಾನುಜ ತಾನೆ ಸರ್ವ ।**
**ಸ್ಥಳಗಳಲಿ ನೆಲೆಸಿದ್ದು ನಿಶ್ಚಂ ।**
**ಚಲ ಭಕುತಿ ಸುಜ್ಞಾನ ಭಾಗ್ಯವ ಕೊಟ್ಟು ಸಂತೈಪ ॥ ೨೮ ॥**

ಅಪರೋಕ್ಷಜ್ಞಾನಕ್ಕೆ ಸಾಧನ ಮಾರ್ಗ ಹೇಳತಾರೆ.

ಹಲವು ಬಗೆಯಲಿ_ಸರ್ವಜ್ಞರ ಶಾಸ್ತ್ರವನ್ನು ಶ್ರವಣಮನನಾದಿಗಳ ಮಾಡಿ ಸಜ್ಜನರ ಸಾಂಗತ್ಯದಿಂದ ಅವರು ಆಡೋ ಮಾತುಗಳನ್ನ ಶ್ರದ್ಧಾದಿಂದ ಮನಕೆ ತಂದು, ಹೇಯ ದಾವದು, ಅಹೇಯ ದಾವದು ಇತ್ಯಾದಿಗಳ ನಾನಾ ಪ್ರಕಾರ ಆಲೋಚನೆ ಮಾಡಿ, ಹರಿಯ_ಪರಮಾತ್ಮ ಸರ್ವೋತ್ತಮನೆಂದು ತಿಳದು, ಮನದಲಿ_ಇಂಥಾ ಪರಮಾತ್ಮನ್ನ ಮನೋಗೋಳಕವಾದ ಹೃದಯಾಕಾಶದಲ್ಲಿ, ನಿಲ್ಲಿಸಿ_ಸುಲಕ್ಷಣವಾದ ಪ್ರತಿಮಾವನ್ನ ಉಪಾಸ್ಯಮೂರ್ತಿಯನ್ನಾಗಿ ಮಾಡಿಕೊಂಡು, ಭಕ್ತಿಯಿಂದ ತಂತ್ರಸಾರೋಕ್ತ ಪ್ರಕಾರ ಬಿಂಬಾವಾಹನ ಮಾಡಿ ಎಂದರೆ, ಬಿಂಬ ಇಂಥಾವನೆಂದು ತಿಳಿಯದ್ದರಿಂದ ಆವಾಹನ ಮಾಡೋ ವಿಧ ಹ್ಯಾಂಗೆಂದರೆ, ಬಿಂಬನಲ್ಲಿ ಸರ್ವ ರೂಪಗಳು ಇರೋವಾಗಿ ಅವೆ. (ನವ ನಾರೀಕುಂಜರವತ್). ಅದರಲ್ಲಿ ವರ್ತಮಾನ ಉಪಾಸ್ಯರೂಪವು ಅದೆ. ಈ ರೂಪ

ಬಿಂಬಗತ ಅನೇಕ ರೂಪಗಳೊಳಗೆ ಏಕದೇಶರೂಪವಾದ್ದರಿಂದ ಉಪಾಸ್ಯ ಪ್ರತಿಮಾಂತರ್ಗತ ತದಾಕಾರರೂಪದಲ್ಲಿ ಏತಾದೃಶರೂಪವೇ ಬಿಂಬನಲ್ಲಿ ಏಕದೇಶವಾಗಿ ಇರತಕ್ಕದ್ದರನ್ನ ಬಿಂಬ ಕಣ್ಣಿಗೆ ಕಾಣದ ಕಾಲಕ್ಕೂ, ಅನುಸಂಧಾನದಿಂದ, ಮನಃಸಂಕಲ್ಪದಿಂದ ಆವಾಹನ ಮಾಡಿದರೆ, ನಮಗೆ ಗೋಚರವಲ್ಲದೇನೆ ಪರಮಾತ್ಮ ಆವಾಹಿತನಾಗತಾನೆ. ಈ ಪ್ರಕಾರ ಅನುಸಂಧಾನದಿಂದ ಪೂಜಾ ಮಾಡತಾ, ಈ ಪ್ರಕಾರ ಬಾಹ್ಯದಲ್ಲಿ ಬಹುಕಾಲ ಪೂಜಾ ಮಾಡಿ, ಈ ಸಂಸ್ಕಾರಬಲದಿಂದ ಇದೇ ಪ್ರತಿಮಾವನ್ನ ಹೃದಯಾಕಾಶದಲ್ಲಿ ನಿಲ್ಲಿಸಿ, ಅಲ್ಲಿ ಮಾನಸನಿರ್ಮಿತ ದ್ರವ್ಯಾದಿಗಳಿಂದ ಪೂಜಾದಿಗಳ ಮಾಡುತ್ತ, ಒಲಿಸಿ–ಅಂತರ್ಗತಗಳಾದ ಭಗವದ್ರೂಪಗಳಿಗೆ ಪರಸ್ಪರ ಐಕ್ಯಚಿಂತನಾ ಮಾಡಿ ಪೂಜ್ಯ ಪೂಜಕ ಪೂಜಾಸಾಧನಿಗಳು ನೀನೇ ಎಂದು ತಿಳಿದು, ಭಗವದ್ರೂಪಗಳಿಂದ ಭಗವದ್ರೂಪಗಳಿಗೆ ಪೂಜಾತ್ವೇನ ಅನು ಸಂಧಾನ ಮಾಡಿ ಅರ್ಪಿಸುತಾ ಬಂದರೆ, ಪರಮಾತ್ಮ ಒಲಿಯೋವನಾಗತಾನೆ. ಇಂಥಾ ಪೂಜಾದಿಂದ ಒಲಿಸಿ ಏನೇನು ಮಾಡುವ ಕೆಲಸಗಳು, ಏಕಾದಶೇಂದ್ರಿಯಗಳಿಂದ, ಏನು ಮಾಡುವ ಕೆಲಸಗಳು–ಏನೇನು ಮಾಡುವ ವ್ಯಾಪಾರಗಳು, ಸ್ವಾಧೀನಕರ್ತನಾದ ಪರ ಮಾತ್ಮನ ಕ್ರಿಯಾ ದ್ವಾರಾ ಅವನ ಅಧೀನ ಕರ್ತೃತ್ವ ಉಳ್ಳ ಪ್ರತಿಬಿಂಬನಾದ ತಾನು ಮಾಡತೇನೆಂತ ತಿಳಿದು, ಅಹಂ ಸ್ವಾಧೀನಕರ್ತಾ ಎಂಬದನ್ನ ಮರೆತು ಈ ರೀತ್ಯಾ ಯಾವತ್ತೂ ಕೆಲಸಗಳ ಮಾಡುತ್ತಾ, ಆ ಯಾವತ್ತೂ ಕೆಲಸಗಳು, ಅವನಂಘ್ರಿ– ಉಪಾಸ್ಯ ಪ್ರತೀಕಾಂತರ್ಗತ ಪರಮಾತ್ಮನ ಪಾದಗಳಿಗೆ ಮಾಡತಕ್ಕ, ಪೂಜೆಗಳೆಂದು– ಪೂಜಾ ಎಂತ ಅನುಸಂಧಾನ ಮಾಡಿ, ನೆನೆವುತಿರು–ಸರ್ವತ್ರದಲ್ಲಿ, ಸರ್ವಕಾಲದಲ್ಲಿ ಈ ಉಪಾಸ್ಯಮೂರ್ತಿಯನ್ನು ನೆನೆಯುತ್ತಾ ಇರೋವನಾಗು. ಪೂಜಾ ಎಂದರೆ, ಅರ್ಪಿ ಸೋಣ. ಮಾಡತಕ್ಕ ಸರ್ವವ್ಯಾಪಾರಾಂತರ್ಗತ ಭಗವದ್ರೂಪಗಳಿಗೂ, ಉಪಾಸ್ಯ ಪ್ರತೀಕಾಂತರ್ಗತ ಭಗವದ್ರೂಪಗಳಿಗೂ ಐಕ್ಯಚಿಂತನಾದಿಂದ ನೆನೆಯುತ್ತಾ ಇರು. ಇದೇ ಪೂಜಾ ಎಂತ ತಾತ್ಪರ್ಯ. ಹಲಧರ–ನೇಗಿಲು ಧರಿಸಿ ಇರುವಂಥಾ ಬಲರಾಮದೇವರು, ಇವನ, ಅನುಜ–ತಮ್ಮನಾದ ಶ್ರೀಕೃಷ್ಣದೇವರು, ತಾನೆ–ತನ್ನ ಇಚ್ಛಾದಿಂದ ತಾನೇವೇ, ಸರ್ವಸ್ಥಳಗಳಲಿ–ತನ್ನ ಸಮಸ್ತವಾದ ಏಕಾದಶೇಂದ್ರಿಯಗಳಲ್ಲಿ, ನೆಲೆಸಿದ್ದು–ಆವಾಸನಾಗಿದ್ದು ವ್ಯಾಪಾರಗಳ ಮಾಡಿಸತಕ್ಕ ಇಂದ್ರಿಯಾಂತರ್ಗತನಾದ ಪರಮಾತ್ಮ, ನಿಶ್ಚಂಚಲ– ಚಂಚಲರಹಿತವಾದ, ಭಕುತಿ–ಭಕ್ತಿಯೇನು, ವೈರಾಗ್ಯವೇನು, ಸುಜ್ಞಾನ–ಹರಿಸರ್ವೋ ತ್ತಮ, ವಾಯುಜೀವೋತ್ತಮ, ತಾರತಮ್ಯ ಪಂಚಭೇದವೆಂಬೊ ಸಮೀಚೀನಜ್ಞಾನ, ಅತಿಶಯವಾಗಿ ಅತಿದಾರ್ಢ್ಯರೂಪವಾದ, ಭಾಗ್ಯವ ಕೊಟ್ಟು ಸಂತೈಪ–ಇಂಥಾ ಭಾಗ್ಯವ ಕೊಟ್ಟು ಸಂರಕ್ಷಣೆ ಮಾಡುವ. ಅಜ್ಞಾನಾದಿಗಳ ಕೊಡದೆ ಕಾಯುವನು.

**ದೋಷಗಂಧವಿದೂರ ನಾನಾ ।**
**ವೇಷಧಾರಕ ಈ ಜಗತ್ರಯ ।**
**ಪೋಷಕ ಪುರಾತನಪುರುಷ ಪುರುಹೂತಮುಖವಿನುತ ॥**

**ಶೇಷವರಪರಿಯಂಕಶಯನ ವಿ ।**
**ಭೀಷಣಪ್ರಿಯ ವಿಜಯಸಖ ಸಂ ।**
**ತೋಷ ಬಡಿಸುವ ಸುಜನರಿಷ್ಟಾರ್ಥಗಳ ಪೂರೈಸಿ ॥ ೨೯ ॥**

ಭಗವದ್ಭಕ್ತರ ಇಷ್ಟಗಳ ಪೂರ್ಣಮಾಡತಾನೆ ಎಂತ ಹೇಳತಾರೆ.

ಈ ಜಗತ್ರಯವ–ಈ ವರ್ತಮಾನ ತ್ರಿವಿಧ ಜೀವರ, ಪೋಷಕ–ಅವರವರ ಸ್ವರೂಪ ಯೋಗ್ಯತಾನುಸಾರ ಜ್ಞಾನಾದಿಗಳ ವ್ಯಕ್ತಮಾಡಿಕೊಟ್ಟು, ಅವರವರ ಸಾಧನಿ ಪೂರ್ತಿ ಮಾಡಿಸಿ, ಲಿಂಗಭಂಗಾನಂತರ ಅವರವರ ಯೋಗ್ಯಸ್ಥಾನಗಳಲ್ಲಿ ಇಟ್ಟು ಸಂರಕ್ಷಣ ಮಾಡುವಂಥಾ, ಪುರಾತನಪುರುಷ–ಅನಾದಿಕಾಲದಿಂದ ಏಕಮೇವಾದ್ವಿತೀಯನಾದ ಪುರುಷ, ಪುರುಹೂತಮುಖವಿನುತ–ಇಂದ್ರ, ಇವನಿಂದ ಉತ್ತಮರಾದ ರಮಾಬ್ರಹ್ಮಾದಿಗಳಿಂದಲೂ ಅವರರಾದ ಇನ್ನೂ ಯಾವತ್ತೂ ದೇವತೆಗಳಿಂದಲೂ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ, ವರ–ಸರ್ಪಗಳೊಳಗೆ ಶ್ರೇಷ್ಠನಾದ, ಶೇಷ–ಶೇಷದೇವರನ್ನ, ಪರಿಯಂಕಶಯನ–ಮಂಚವನ್ನಾಗಿ ಮಾಡಿಕೊಂಡು ಮಲಗಿರುವ ಇಂಥಾ ದೇವರು, ವಿಭೀಷಣಪ್ರಿಯ– 'ವಿ'–ವಿಶೇಷಾಕಾರವಾಗಿ, 'ಭೀಷಣ'–ಲೋಕಭಯಂಕರನಾದ, ಅತಿಭೀಷಣನಾದ ಪರಮಾತ್ಮ, ತನ್ನಲ್ಲಿ ದೃಢಚಿತ್ತವುಳ್ಳ ಅಧಿಕಾರಿಗಳಿಗೆ ಪ್ರಿಯನಾದವ, ವಿಭೀಷಣಗೆ ಅತಿಪ್ರಿಯನಾದ, ವಿಜಯಸಖ–ಇಂದ್ರಿಯಗಳ ವಿಷಯಾದಿಗಳಲ್ಲಿ ಬಿಡದೆ ಜಯ ಉಳ್ಳ ಅಧಿಕಾರಿಗಳಿಗೆ ಮಿತ್ರನಾದವ, ಪಾಂಡುರಾಯನ ಮಗ ಅರ್ಜುನನಿಗೆ ಸ್ನೇಹಿತನಾದವ, ಇಂಥಾ ಪರಮಾತ್ಮ, ನಾನಾ ವೇಷಧಾರಕ–ಪಾಪಪುಣ್ಯಾತ್ಮಕ ಕರ್ಮಾನುಸಾರ ವೇಷಸಾಂಕೇತಗಳಾದ ನಾನಾ ಜನ್ಮಗಳ ಧರಿಸತಕ್ಕವರಾದ ಪ್ರಾಣಿಗಳ, ದೋಷಗಂಧವಿದೂರ–ಮೋಕ್ಷಕ್ಕೆ ಪ್ರತಿಬಂಧಕಗಳಾದ ದೋಷಸಂಬಂಧವಾದ ಪಾಪದಿಂದ ದೂರರನ್ನಾಗಿ ಮಾಡಿ, ಸುಜನರ–ಸ್ವರೂಪತಃ ಸಜ್ಜನರಾದವರ, ಇಷ್ಟಾರ್ಥಗಳ–ತನ್ನ ಅಪರೋಕ್ಷದ್ವಾರಾ ಲಿಂಗಭಂಗ ಐದಿಸಿ, ಸ್ವರೂಪೇಂದ್ರಿಯಗಳಿಗೆ ಇಷ್ಟವಾದ ಪ್ರಯೋಜನಗಳ, ಪೂರೈಸಿ–ಪೂರ್ಣಮಾಡಿ, ಸಂತೋಷಬಡಿಸುವ–ಪ್ರಳಯಾವಸಾನದಲ್ಲಿ ತನ್ನ ಭಕ್ತರ ಸಂತೋಷಪಡಿಸೋವನಾಗತಾನೆ. ತ್ರಿವಿಧ ಜೀವರು ಈಶ್ವರನಿಂದ ರಚಿತರಲ್ಲ ಮತ್ತು ಅವರವರ ಯೋಗ್ಯತಾನೂ ಈಶ್ವರನಿಂದ ರಚಿತವಲ್ಲ, ಸ್ಥೂಲದೇಹಗಳು ಈಶ್ವರನಿಂದ ರಚಿತಗಳು. ಜೀವರ ಅನಾದಿ ಯೋಗ್ಯತಾನುಸಾರ ತ್ರಿವಿಧಗತಿಯು, ಸ್ಥಿತಿಕಾಲದಲ್ಲಿ ಅನಾದಿಕರ್ಮಾನುಸಾರ ಸುಖದುಃಖಾದಿಗಳು ಕಾಣೋಣದರಿಂದ ಈಶ್ವರನಲ್ಲಿ ದಾವ ದೋಷವೂ ಕೂಡೋದಿಲ್ಲ.

**ಶ್ರೀಮಹೀಸೇವಿತಪದಾಂಬುಜ ।**
**ಭೂಮ ಸದ್ಭಕ್ತ್ಯೈಕಲಭ್ಯ ಪಿ ।**
**ತಾಮಹಾದ್ಯಮರಾಸುರಾರ್ಚಿತಪಾದಪಂಕೇಜ ॥**

**ವಾಮವಾಮನ ರಾಮ ಸಂಸಾ ।**
**ರಾಮಯೌಷಧ ಹೇ ಮಮ ಕುಲ ।**
**ಸ್ವಾಮಿ ಸಂತೈಸೆನಲು ಬಂದೊದಗುವನು ಕರುಣಾಳು ॥ ೩೦ ॥**

ಪರಮಾತ್ಮನ್ನ ಈ ಪ್ರಕಾರ ಸ್ತೋತ್ರಮಾಡಬೇಕೆಂದು ಹೇಳತಾರೆ. ಹೃದಯಾಕಾಶ ದಲ್ಲಿ ಪರಮಾತ್ಮನ ಧ್ಯಾನಮಾಡಬೇಕೆಂತಲೂ ಹೇಳತಾರೆ.

ಶ್ರೀ–ಧ್ಯಾನಕ್ಕೆ ಯೋಗ್ಯನಾದ ಪರಮಾತ್ಮನ್ನ ಶ್ರೀದೇವಿಯರು, ಮಹೀ–ಭೂದೇವಿ ಯರು, ಈ ಉಭಯರಿಂದ ಸಹಿತನಾದ ಪರಮಾತ್ಮ, ಸೇವಿತಪದಾಂಬುಜ–ಶ್ರೀ, ಭೂ ದೇವಿಯರಿಂದ ಸೇವಿತವಾದ ಪಾದಕಮಲಗಳು ಉಳ್ಳವ, ಭೂಮ–ಪೂರ್ಣನಾದಂಥಾವ ತಥಾ, ಸಾರ್ವಭೌಮನಾದವ, ಸದ್ಭಕ್ತ್ಯೈಕಲಭ್ಯ–ಸಮೀಚೀನವಾದ ಹರಿಸರ್ವೋತ್ತಮ, ವಾಯುಜೀವೋತ್ತಮ, ತಾರತಮ್ಯ ಪಂಚಭೇದಯುಕ್ತವಾದ ವಿಷಯವಿರಕ್ತಿಪೂರ್ವಕವಾದ ಸ್ನೇಹಾಖ್ಯ ಒಂದಾದ ಭಕ್ತಿಯಿಂದ ಪ್ರಾಪ್ಯನಾಗತಕ್ಕವ. ತದ್ವ್ಯತಿರಿಕ್ತ ಅನೇಕವಾದ ಸತ್ಕರ್ಮಗಳಿಂದ ಲಭ್ಯನಾಗುವನಲ್ಲ. ಎಂದರೆ ಕರ್ಮತ್ಯಾಗದಲ್ಲಿ ತಾತ್ಪರ್ಯವಲ್ಲ. ನಿಷ್ಕಾಮನಾಗಿ, ಭಕ್ತಿಪೂರ್ವಕವಾಗಿ ಕರ್ಮಮಾಡಬೇಕೆಂತ ತಾತ್ಪರ್ಯ. ಮತ್ತು ಏಕ–ಒಬ್ಬನಾದ ಪರಮಾತ್ಮ, ಭಕ್ತಿಗೆ ಲಭ್ಯನಾದವನು. ಪಿತಾಮಹಾದಿ–ಬ್ರಹ್ಮದೇವರೇ ಆದಿಯಾಗಿ, ಅಮರ–ದೇವತೆಗಳು, ಇವರು ಎಂಥಾವರೆಂದರೆ, ಜರಾಮರಣವರ್ಜಿತರು, ಅಸುರ–ವಾಯುದೇವರು (ಅಸುಷು ರತಃ - ಅಸುರಃ ಎಂತ ವಿಗ್ರಹ), ಪ್ರಾಣಿಗಳಲ್ಲಿ ಇರ ತಕ್ಕವನೆಂದು ತಾತ್ಪರ್ಯ. ಇಂಥಾವರುಗಳಿಂದ, ಅರ್ಚಿತಪಾದಪಂಕೇಜ–ಪೂಜಿತವಾದ ಪಾದಕಮಲಗಳು ಉಳ್ಳವ ಎಂತ ಸ್ತೋತ್ರಮಾಡಬೇಕು. ಇನ್ನೂ ಎಂಥಾವನೆಂದರೆ, ವಾಮ–ಅತಿಸುಂದರನಾಗಿನ್ನು, ವಾಮನ–ಅತಿಮನೋಹರನಾಗಿನ್ನು, ರಾಮ–ಸ್ವರಮಣ ನಾಗಿನ್ನು, ಹೃದಯಾಕಾಶದಲ್ಲಿ ಚಿಂತಿಸಿ ಸ್ತೋತ್ರಮಾಡಿ, ಸಂಸಾರ–ಅಹಂಮಮತಾ ಎಂಬ ಸಂಸಾರಾಖ್ಯ, ಆಮಯ–ರೋಗಕ್ಕೆ, ಔಷಧ–ಔಷಧಸ್ಥಾನಾಪನ್ನನಾದವ. ಅಹಂ ಮಮತಾಖ್ಯರೋಗ ಪರಿಹಾರವಾಗಬೇಕಾದರೆ, ಪರಮಾತ್ಮನ ಶಕ್ತಿ, ಜೀವನ ಶಕ್ತಿ, ಜೀವ ಪರಮಾತ್ಮರ ವ್ಯಾಪಾರಗಳು ಇತ್ಯಾದಿಗಳು, ಪ್ರತ್ಯಕ್ಷ, ಅನುಮಾನ, ಆಗಮಗಳಿಂದ ವಿಚಾರರೂಪವಾದ ಔಷಧ ಪಾನಮಾಡಿದರೇ, ಅಹಂಮಮತಾದಿಗಳು ಬಿಡೋವಾಗತವೆ. ಆದ್ದರಿಂದ ಔಷಧರೂಪನಾದ ಎಲೈ ಪರಮಾತ್ಮನೇ, ಹೇ ಮಮ ಕುಲಸ್ವಾಮಿ–ಎಲೈ ನನ್ನ ಕುಲಸ್ವಾಮಿಯಾದವನೇ, ಸಂತೈಸೆನಲು–ನಿನ್ನ ಹೃದಯಗತ, ನೀನು ಉಪಾಸನಾ ಮಾಡತಕ್ಕ ಭಗವತ್ಪ್ರತೀಕದಲ್ಲಿ ಅಂತರ್ಗತನ ತಿಳಿದು ಪೂರ್ವೋಕ್ತಪ್ರಕಾರ ಧ್ಯಾನಪೂರ್ವಕ ಸ್ತೋತ್ರಮಾಡಿ, ಕಾಪಾಡು ಎಂತ ಅಂದರೆ, ಕರುಣಾಳು–ದಯಾಳುವಾದ ಪರಮಾತ್ಮ, ಒಂದೊದಗುವನು–ವಾಸನಾಪ್ರತೀಕಾಂತರ್ಗತ ತದಾಕಾರ ಪರಮಾತ್ಮ ಪ್ರತಿಮಾದಿಂದ ಭೇದಿಸಿಕೊಂಡು ಪ್ರತ್ಯಕ್ಷನಾಗಿ ಒದಗೋವನಾಗತಾನೆ.

**ದನುಜದಿವಿಜರೊಳಿದ್ದು ಅವರವ ।**
**ರನುಸರಿಸಿ ಕರ್ಮಗಳ ಮಾಳ್ಪನು ।**
**ಜನನಮರಣಾದ್ಯಖಿಳದೋಷವಿದೂರ ಎಮ್ಮೊಡನೆ ।**
**ಜನಿಸುವನು ಜೀವಿಸುವ ಸಂಹ ।**
**ಕ್ಷಣೆಯ ಮಾಡುವ ಎಲ್ಲ ಕಾಲದಿ ।**
**ಧನವ ಕಾಯಿದಿಹ ಸರ್ಪನಂತನಿಮಿತ್ತಬಾಂಧವನು ॥ ೩೧ ॥**

ಜೀವಗೆ ಬಿಂಬನಾದ ಪರಮಾತ್ಮಗೆ ಉತ್ಪತ್ತ್ಯಾದಿ ಲಕ್ಷಣಗಳ ಹೇಳತಾರೆ.

ದನುಜ—ಕಲ್ಯಾದಿ ತೃಣಾಂತ ದೈತ್ಯರಲ್ಲಿ ಇವರು ಅಂತರ್ಭೂತರಾದ ನಿತ್ಯಸಂಸಾರಿಗಳು, ದಿವಿಜರ—ಬ್ರಹ್ಮದೇವರು ಆರಂಭಮಾಡಿ ತೃಣಾಂತ ಮುಕ್ತಿಯೋಗ್ಯರ, ಒಳಿದ್ದು—ಈ ಯಾವತ್ತೂ ತ್ರಿವಿಧಜೀವರ ಸ್ವರೂಪದೊಳಗೆ ಬಿಂಬನಾಗಿದ್ದು, ಅವರವರನುಸರಿಸಿ—ಅವರವರ ಸ್ವರೂಪಯೋಗ್ಯತಾ ಅನುಸರಿಸಿನ್ನು, ಅದನನುಸರಿಸಿ ಲಿಂಗಗತ ತೃತೀಯ ಪರಿಚ್ಛೇದವಾದ ತಮಃಪರಿಚ್ಛೇದಗತ ಈಶ್ವರನಿಂದ ರಚಿತವಲ್ಲದ, ಲಿಂಗದೇಹದ ಸಂಗಡ ಅನಾದಿಯಿಂದ ಇರತಕ್ಕ ಜಡಕರ್ಮ ಅನುಸರಿಸಿನ್ನೂ, ಲಿಂಗದ ಪ್ರಥಮಪರಿಚ್ಛೇದವಾದ ಸತ್ವಪರಿಚ್ಛೇದಗತ ಅನಾದಿಭೂತವಾದ ಜೀವನ, ಜಡಮನೋಗತ ಜೀವನ, ಜಡಪ್ರಯತ್ನ ಇವು ಮೂರೂ ಆಯಾ ಜೀವರಿಗೆ ಇದ್ದದ್ದರನ್ನ ಅನುಸರಿಸಿ ಇರತಕ್ಕ ಆ ಮೂರರಲ್ಲಿ, ತದಾಕಾರ ತದ್ವಾಚ್ಯನಾಗಿದ್ದು, ಕರ್ಮಗಳ ಮಾಳ್ಪನು—ರಾಶೀಗತರಾದ ಜೀವರ, ಸೃಷ್ಟಿಗೆ ತಂದು ಸ್ಥೂಲದೇಹಗಳ ಕೊಟ್ಟು, ಪೂರ್ವೋಕ್ತ ಕರ್ಮ, ಪ್ರಯತ್ನ, ಸ್ವಭಾವ ಇವುಗಳ ವ್ಯಕ್ತಮಾಡೋವನಾಗತಾನೆ. ಜನನಮರಣ—ಜೀವರು ಎಂಥಾವರೆಂದರೆ, ಪರಮಾತ್ಮನಿಂದ ಉಂಟಾದವರಲ್ಲ, ಪರಮಾತ್ಮನಿಂದ ನಾಶಹೊಂದತಕ್ಕವರಲ್ಲ. ಮತ್ತು, ಆದಿ ಅಖಿಳದೋಷವಿದೂರ—(ಜನನಮರಣವೇ ಆದಿಯಾಗಿ ಆಯುಧದಿಂದ ಛೇದವಾಗಲಿ, ಅಗ್ನಿಯಿಂದ ದಹನವಾಗಲಿ, ಇತ್ಯಾದಿ ಅನೇಕ ದೋಷಗಳಿಂದ ದೂರರಾದವರು ಜೀವರು.) ಅನಾದ್ಯನಂತಕಾಲಕ್ಕೂ, ತದ್ವತ್ ಜೀವಾಂತರ್ಗತನಾದ ಪರಮಾತ್ಮ ಜನನಾದ್ಯಖಿಳ ದೋಷದೂರನು. ಜೀವ, ಪರಮಾತ್ಮ ಈ ಉಭಯರೊಳಗೆ ಜೀವನಾದವ, ಅಂತರ್ಗತನಾದ ತನ್ನ ಬಿಂಬನಾದ ಪರಮಾತ್ಮನ ಅಧೀನ. ಪರಮಾತ್ಮ, ಜೀವಾಧೀನನಲ್ಲ. ಜೀವನ ನಿತ್ಯತ್ವ, ಜೀವನ ಛೇದಭೇದಾದಿರಹಿತತ್ವ, ಅನಾದಿಯಿಂದ ಈಶ್ವರಾಧೀನವಾದದ್ದು. ಈಶ್ವರ, ಜೀವಾಧೀನನಲ್ಲ, ಅನಾದಿಯಿಂದ ಇದು ನೇಮ. ಅದರಮೇಲೆ ವಿಚಾರವಿಲ್ಲ. ಜೀವರುಗಳ, ಪರಮಾತ್ಮ ಸ್ಥೂಲದೇಹದಿಂದ ಸಹಿತರನ್ನಾಗಿ ಮಾಡೋಣವೇ ಸೃಷ್ಟಿ. ಆ ಸ್ಥೂಲದೇಹಗಳ ಪರಮಾತ್ಮ ಬಿಡಿಸೋಣವೇ ಮರಣ. ಜೀವರಿಗೆ ಜನನಮರಣಾದಿಗಳು ಎಂಬೋದು ಇದೇವೇ. ಎಮ್ಮೊಡನೆ ಜನಿಸುವನು—ಜೀವರುಗಳಾದ ನಮ್ಮಗಳಿಗೆ ಬಿಂಬನಾದ ಅನಾದ್ಯನಂತಕಾಲಕ್ಕೆ ಅವಿಯೋಗನಾದ ನಮ್ಮ ಸಂಗಾತಲೇ ಇರತಕ್ಕ ಪರಮಾತ್ಮ ನಮ್ಮ ಸಂಗಾತಲೇ ತಾನೂನೂ ಸ್ಥೂಲದೇಹಗಳ ಒಳಗೆ ಪ್ರವೇಶಮಾಡತಾನೆ, ಆದ್ದರಿಂದ

*

ಜನಿಸೋಣ. ಈ ರೀತಿ, ಜೀವಿಸುವ–ದೇಹತ್ಯಾಗದವರಿಗೂ ದೇಹದಲ್ಲಿ ಜೀವನ ಸಹಿತ ವಾಗಿ ಇರುತ್ತಾನೆ. ಇದೇ ಜೀವಿಸೋಣ ಎಂಬುದು. ಸಂರಕ್ಷಣೆಯ ಮಾಡುವ–ಆಯಾ ಸ್ಥೂಲದೇಹಗಳಲ್ಲಿ ಅಂತರ್ಗತನಾಗಿದ್ದು ರಕ್ಷಣೆಮಾಡುವ. ಎಲ್ಲ ಕಾಲದಿ–ಅನಾದ್ಯನಂತ ಕಾಲಕ್ಕೂ ಈಶ್ವರಾಧೀನ, ಜೀವ, ಜೀವೇಶ್ವರರಿಗೆ ಭೇದ, ಜೀವೇಶ್ವರರಿಗೆ ಅವಿಯೋಗ, ಈ ಪ್ರಕಾರ ಇರೋದಾಗಿ ಅದೆ, ಇದಕ್ಕೆ ಆದ್ಯಂತಗಳು ಇಲ್ಲ. ಅನಿಮಿತ್ತಬಾಂಧವನು–ಅತಿ ಸಮೀಪನಾದ ಬಂಧು ಆದವ. ಧನವ ಕಾಯಿದಿಹ–ಸ್ವಪ್ರಯೋಜನರಹಿತವಾಗಿ ಧನವನ್ನು ಕಾದಿರತಕ್ಕ, ಸರ್ಪನಂತೆ–ಸರ್ಪದೋಪಾದಿಯಲ್ಲಿ ಜೀವಾಂತರ್ಗತನಾಗಿ ಜೀವ ರನ್ನ ಕಾದುಕೊಂಡಿದ್ದು, ಅವರವರ ಯೋಗ್ಯತಾನುಸಾರ ಕಾಪಾಡತಾನೆಂತ ತಾತ್ಪರ್ಯ.

**ಬಿಸರುಹಾಪ್ತಾಗಸದಿ ತಾನುದ ।**
**ಯಿಸಲು ವೃಕ್ಷಂಗಳ ನೆಳಲು ಪಸ ।**
**ರಿಸುವವಿಳೆಯೊಳು ಅಸ್ತಮಿಸಲಲ್ಲಲ್ಲೆ ಲೀನಿಪವು ॥**
**ಶ್ವಸನಮುಖ್ಯಮರಾಂತರಾತ್ಮಕ ।**
**ನೊಶದೊಳಿರುತಿಪ್ಪವು ಜಗತ್ರಯ ।**
**ಬಸಿರೊಳಿಂಬಿಟ್ಟಿಲ್ಲ ಕರ್ಮವ ತೋರ್ಪ ನೋಳ್ಪರಿಗೆ ॥ ೩೨ ॥**

ಚರಾಚರಾತ್ಮಕ ಜಗತ್ತು ಈಶಾಧೀನವೆಂದು ಹೇಳತಾರೆ.

ಬಿಸುರುಹ–ಕಮಲಕ್ಕೆ, ಆಪ್ತ–ಆಪ್ತನಾದ, ತಾನು–ಸೂರ್ಯನಾದ ತಾನು, ಆಗಸದಿ–ಆಕಾಶದಲ್ಲಿ, ಉದಯಿಸಲು–ಉದಯನಾದರೆ, ವೃಕ್ಷಂಗಳ ನೆಳಲು – ಗಿಡಗಳ ನೆರಳು, ಇಳೆಯೊಳು–ಭೂಮಿಯೊಳು, ಪಸರಿಸುವವು–ವಿಸ್ತಾರವಾಗಿ ವ್ಯಾಪಿಸೋವಾಗ ತವೆ. ಅಸ್ತಮಿಸಲು–ಸೂರ್ಯಾಸ್ತಮಯವಾದರೆ, ಅಲ್ಲಲ್ಲೆ–ಆಯಾ ವೃಕ್ಷಾದಿಗಳಲ್ಲೇ, ಲೀನಿಪವು–ಕತ್ತಲೆ ಒಳಗೆ ವೃಕ್ಷಛಾಯಾ ಸೇರೋದಾಗತದೆ. ವೃಕ್ಷಸದೃಶನಾದ ಜೀವಾಂತ ರ್ಗತನಾದ, ಜೀವಾಕಾರ ಬಿಂಬಗೆ, ನೆರಳುಸದೃಶರಾದವರು ಪ್ರತಿಬಿಂಬರಾದ ಜೀವರು. ವೃಕ್ಷ ಚಲಿಸಿದಂತೆ ನೆರಳೂ ಚಲಿಸಿ, ವೃಕ್ಷಾಧೀನವಾಗಿರುತ್ತದೆ. ವೃಕ್ಷಛಾಯಾಗಳ ದೃಷ್ಟಾಂತಕ್ಕೆ ಜೀವ, ಪರಮಾತ್ಮರು ದೃಷ್ಟಾಂತ. ಜೀವರು ಪರಮಾತ್ಮನ ಅಧೀನರು ಎಂತ ತಾತ್ಪರ್ಯ. ಶ್ವಸನಮುಖ್ಯಮರ–ವಾಯುದೇವರೇ ಮೊದಲಾದ ಮುಖ್ಯರಾದ ದೇವತೆಗಳೇನು, ಉಪಲಕ್ಷಣಯಾ ಅಸ್ವತಂತ್ರರಾದ ರಮಾಸಹಿತ ತ್ರಿವಿಧ ಜೀವರೇನು, ಇವರಲ್ಲಿ, ಅಂತರಾತ್ಮಕನ–ಅಂತರ್ಯಾಮಿಯಾಗಿ ಇರುವ ಬಿಂಬರೂಪಿ ಪರಮಾತ್ಮನ, ವಶದೊಳಿರುತಿಪ್ಪವು–ಅಧೀನದೊಳಗೆ ಇರೋವಾಗಿ ಅವೆ. ವೃಕ್ಷಾಧೀನಗತ ಛಾಯಾ ದೋಪಾದಿಯಲ್ಲಿ ಎಂತ ತಾತ್ಪರ್ಯ. ಸೂರ್ಯೋದಯ, ಸೂರ್ಯಾಸ್ತಮಯ ಎಂಬುದು, ಸೃಷ್ಟಿಕಾಲ ಒಂದು, ಲಯಕಾಲ ಒಂದು, ಎಂತ ಸಾಂಕೇತ. ಸೂರ್ಯೋದಯವಾದರೆ ವೃಕ್ಷಗತ ನೆರಳುಗಳು ವ್ಯಕ್ತ ಹ್ಯಾಂಗೋ, ಹಾಂಗೆ ಸೃಷ್ಟಿಕಾಲ ಪ್ರಾಪ್ತವಾದರೆ, ಛಾಯಾ

ಸದೃಶರಾದ, ಪ್ರತಿಬಿಂಬರಾದ, ತನ್ನ ಉದರದಲ್ಲಿ ಪ್ರಳಯಕಾಲದಲ್ಲಿ ಸೇರಿದ ಜೀವರನ್ನ ಸೃಷ್ಟಿರೂಪದಿಂದ ವ್ಯಕ್ತಮಾಡತಾನೆ. ಅಸ್ತಮಾನಕ್ಕೆ ಸದೃಶವಾದ ಲಯಕಾಲ ಪ್ರಾಪ್ತವಾದರೆ ವೃಕ್ಷಗಳ ನೆರಳು ವೃಕ್ಷದಲ್ಲಿ ಲಯ ಐದಿದಂತೆ ಸರ್ವಜೀವರನ್ನ ಉದರದಲ್ಲಿ ಧರಿಸತಾನೆ. ಈ ಪ್ರಕಾರ ಸೃಷ್ಟಿಕಾಲಗಳು ಆಗತಾ ಇರತವೆ. ಅಂತು ವೃಕ್ಷಛಾಯಾ ದೃಷ್ಟಾಂತ ಬಿಂಬ ಪ್ರತಿಬಿಂಬಕ್ಕೂ ಸೃಷ್ಟಿಲಯಗಳಿಗೂ ಸಮನ್ವಯವು. ಇನ್ನು ಸೂರ್ಯನ ದೃಷ್ಟಾಂತ ಸೃಷ್ಟಿಕಾಲ, ಪ್ರಳಯಕಾಲ ತೋರಿಸಿಕೊಡತಕ್ಕ ಕಾಲನಾಮಕ ಪರಮಾತ್ಮ, ಹಾಂಗೆ ಸೃಷ್ಟಿಕಾರಣನಾದ ಮೂಲರೂಪಿ ನಾರಾಯಣದೇವರು, ಎರಡಕ್ಕೂ ಒಬ್ಬ ಸೂರ್ಯನೇ ದೃಷ್ಟಾಂತ. ಜಗತ್ರಯ–ತ್ರಿವಿಧ ಜೀವರ, ಒಸಿರೊಳಿಂಬಿಟ್ಟು–ಸೃಷ್ಟಿಮಾಡಿದ ಜೀವರ ಪೂರ್ವೋಕ್ತ ದೃಷ್ಟಾಂತಾನುಸಾರ ತನ್ನ ಉದರದಲ್ಲಿ, ಪ್ರಳಯಕಾಲದಲ್ಲಿ ಆಶ್ರಯಮಾಡಿ ಇಟ್ಟು, ಆಗ್ಗೆ ಕರ್ಮರೂಪವಾದ ವ್ಯಾಪಾರಶೂನ್ಯರನ್ನಾಗಿ ಮಾಡಿ, ನಿದ್ರಾಯುಕ್ತರನ್ನಾಗಿ ಮಾಡಿ ಇರತಾನೆ. ಎಲ್ಲ ಕರ್ಮವ–ಸೃಷ್ಟಿಕಾಲ ಪ್ರಾರಂಭವಾಗೋಣವೇ, ಪೂರ್ವೋಕ್ತ ದೃಷ್ಟಾಂತಾನುಸಾರ ಸೃಷ್ಟಿಮಾಡಿ ಉದರಗತರಾಗಿ, ಕರ್ಮಶೂನ್ಯರಾಗಿ ನಿದ್ರಾಯುಕ್ತರಾದ ಸರ್ವಪ್ರಾಣಿಗಳಿಗೆ ಪುನಃ ಯಾವತ್ತು ಕರ್ಮಗಳ, ತೋರ್ಪ–ವ್ಯಕ್ತಮಾಡಿ ತೋರಿಸಿ, ಅವರವರು ಮಾಡತಕ್ಕ ಕರ್ಮಗಳ ಅವರವರಿಗೆ ತಿಳಿಸಿ ಮಾಡಸತಾನೆ. ನೋಳ್ಪರಿಗೆ–ಮತ್ತು ಜ್ಞಾನಮಾರ್ಗದಿಂದ, ತನ್ನ ಧ್ಯಾನಾದಿಗಳಿಂದ ನೋಡತಕ್ಕವರಿಗೆ ತನ್ನ ರೂಪವನ್ನು ಹೃದಯಾಕಾಶದಲ್ಲಿ ತೋರುವನು ಎಂತ ತಾತ್ಪರ್ಯ.

**ತ್ರಿಭುವನೈಕಾರಾಧ್ಯ ಲಕ್ಷ್ಮೀ ।**
**ಸುಭುಜಯುಗಳಾಲಂಗಿತಾಂಗ ।**
**ಸ್ವಭು ಸುಖಾತ್ಮ ಸುವರ್ಣವರ್ಣ ಸುಪರ್ಣವರವಹನ ।**
**ಅಭಯದಾನಂತಾರ್ಕಶಶಿ ಸ ।**
**ನ್ನಿಭ ನಿರಂಜನ ನಿತ್ಯದಲಿ ತನ ।**
**ಗಭಿನಮಿಸುವರಿಗೀವ ಸರ್ವಾರ್ಥಗಳ ತಡೆಯದಲೆ ॥ ೩೩ ॥**

ಭಕ್ತರ ಇಷ್ಟಾರ್ಥಗಳ ಪೂರ್ತಿಮಾಡತಾನೆಂತ ಹೇಳತಾರೆ.

ತ್ರಿಭುವನ–ಚತುರ್ದಶ ಲೋಕದಲ್ಲಿ ಇರುವ ಸಮಸ್ತ ಪ್ರಾಣಿಗಳಿಂದ, ಆರಾಧ್ಯ–ಛಂದಾಗಿ ಪೂಜಿತನಾದವ, ಏಕ–ಮುಖ್ಯನಾದ, ಅಸದೃಶನಾದ, ಸರ್ವೋತ್ತಮನಾದ, ಸರ್ವೋತ್ತಮತ್ವೇನ ಪೂಜಾ ತೆಗೆದುಕೊಳ್ಳತಕ್ಕವ ಪರಮಾತ್ಮ ಒಬ್ಬನೇ ಹೊರತು ಅನ್ಯರಲ್ಲ. ಮತ್ತು ಪ್ರಳಯಕಾಲದಲ್ಲಿ, ಲಕ್ಷ್ಮೀ–ನಿತ್ಯಮುಕ್ತರಾದ ಲಕ್ಷ್ಮೀದೇವಿಯರ, ಯುಗಳ–ಎರಡಾದಂಥ, ಸುಭುಜ–ಸಮೀಚೀನವಾದ ಭುಜಗಳಿಂದ, ಆಲಿಂಗಿತಾಂಗ–ಆಲಿಂಗನ ಮಾಡಿಸಿಕೊಳ್ಳಲ್ಪಟ್ಟ ಶರೀರವುಳ್ಳವ, ಸ್ವಭು–ತನಗೆ ತಾನೇ ಸ್ವಾಮಿ, ತನ್ನಿಂದ ತಾನೇ ಅವತರಿಸತಕ್ಕವ, ಸುಖಾತ್ಮ–ಅಸದೃಶ ಆನಂದರೂಪಿಯಾದವ, ಸುವರ್ಣವರ್ಣ–ಭಂಗಾರ

ದೋಪಾದಿಯಲ್ಲಿ ಶರೀರಕಾಂತಿ ಉಳ್ಳವ, ಸುಪರ್ಣವರ–ಶ್ರೇಷ್ಠನಾದ ಸಮೀಚೀನವಾದ ಪಕ್ಷ ಉಳ್ಳ ಗರುಡದೇವರ, ವಹನ–ವಾಹನವಾಗಿ ಉಳ್ಳವ, ಅಭಯದ–ತನ್ನ ಭಕ್ತರಿಗೆ ಬರುವ ಭಯ ಪರಿಹಾರ ಮಾಡಿ, ಅಭಯರೂಪವಾದ ಸುಖವನ್ನು ಕೊಡತಕ್ಕವ, ಅನಂತಾರ್ಕ–ಅನಂತ ಸೂರ್ಯರೇನು, ಶಶಿ–ಅನಂತ ಚಂದ್ರರೇನು, ಇವರುಗಳೋಪಾದಿಯಲ್ಲಿ, ಸನ್ನಿಭ–ಕಾಂತಿಯುಕ್ತನಾದವ ಎಂದರೆ, ಭಂಗಾರವರ್ಣದೋಪಾದಿಯಲ್ಲಿ ಕೆಲವರಿಗೆ, ತಾರತಮ್ಯಾನುಸಾರ ಅನಂತ ಸೂರ್ಯಕಾಂತಿಯುಕ್ತನಾಗಿ ಕೆಲವರಿಗೆ, ಇನ್ನೂ ಕೆಲವರಿಗೆ ಚಂದ್ರಕಾಂತಿಯುಕ್ತನಾಗಿ ತೋರತಾನೆ. ಸುವರ್ಣ ಸೂರ್ಯಚಂದ್ರಾದಿ ಸಮಸ್ತಕಾಂತಿಗಳು ಮೇಳನವಾದ ಕಾಂತಿಯುಕ್ತನಾದವ ಮತ್ತು ದೇಹಕಾಂತಿ ಸೂರ್ಯನೋಪಾದಿಯಲ್ಲಿ (ಮುಖಕಾಂತಿ ಚಂದ್ರನೋಪಾದಿಯಲ್ಲಿ) ಉಳ್ಳವ, ನಿರಂಜನ–ದೋಷದೂರನಾದ ಇಂಥಾ ಪರಮಾತ್ಮನೆಂದು ಸ್ತುತಿಸುವವರಿಗೆ, ನಿತ್ಯದಲಿ–ಪ್ರತಿದಿನದಲ್ಲೂ, ತನಗಭಿನಮಿಸುವರಿಗೆ–ತನಗೆ ವಂದನ ಮಾಡತಕ್ಕವರಿಗೆ, ತಡೆಯದಲೆ–ಆಲಸ್ಯಮಾಡದೆ, ಸರ್ವಾರ್ಥಗಳ–ಅವರವರ ಯೋಗ್ಯತಾಕ್ಕೆ ಮಿಂಚದಂತೆ ಸರ್ವ ಪ್ರಯೋಜನಗಳ, ಈವ–ಕೊಡೋವನಾಗತಾನೆ.

**ಕವಿಗಳಿಂದಲಿ ತಿಳಿದು ಪ್ರಾತಃ ।**
**ಸವನ ಮಾಧ್ಯಂದಿನವು ಸಾಯುಮು ।**
**ಸವನಗಳು ವಸುರುದ್ರರಾದಿತ್ಯರೊಳು ರಾಜಿಸುವ ॥**
**ಪವನನೊಳು ಕೃತಿ ಜಯ ಸುಮಾಯಾ ।**
**ಧವನ ಮೂರ್ತಿತ್ರಯವ ಚಿಂತಿಸಿ ।**
**ದಿವಸವೆಂಬಾಹುತಿಗಳಿಂದರ್ಚಿಸುತ ಸುಖಿಸುತಿರು ॥ ೩೪ ॥**

ಛಾಂದೋಗ್ಯೋಪನಿಷದ್ಭಾಷ್ಯೋಕ್ತ ಸವನತ್ರಯ ವಿಚಾರ ಹೇಳತಾರೆ.

ಸವನ–ಕಾಲವಿಶೇಷವು, ಆ ಕಾಲ ಎಂಬುದು ಆಯುಷ್ಕಾಲವು. ಪ್ರಾತಃ–ಮಾತೃಗರ್ಭದಿಂದ ಭೂಪತನ ಕಾಲ ದಾವದದೇ ಇದು ಪ್ರಾತಃ ಶಬ್ದದಿಂದ ಪ್ರಥಮ ಸವನ, ಪ್ರಥಮ ಭಾಗದ ಆಯುಷ್ಯ ಕಾಲ, ಮಾಧ್ಯಂದಿನವು–ಒಂದು ದಿನಕ್ಕೆ ಎರಡನೇ ಕಾಲವಾದ ಮಧ್ಯಾಹ್ನ ಹ್ಯಾಗೋ ಹಾಂಗೆ ಆಯುಸ್ಸಿಗೆ ಮಧ್ಯಕಾಲ ದಾವದದೇ ಇದೇ ಎರಡನೇದಾದ ಮಧ್ಯಕಾಲದ ಆಯುಷ್ಕಾಲ. ಸಾಯಮು–ಒಂದು ದಿನಕ್ಕೆ ಅಂತ್ಯ ಭಾಗವಾದ ಸಾಯಂಕಾಲ ಸದೃಶವಾದ ಆಯುಸ್ಸಿಗೆ ಅಂತ್ಯ ಭಾಗದ ಕಾಲ. ಅಂತು ಒಂದು ದಿನಕ್ಕೆ ಕಾಲತ್ರಯಗಳು ಇದ್ದಂತೆ, ಆಯುಷ್ಕಾಲಕ್ಕೆ ಕಾಲತ್ರಯಗಳು ತಿಳೀಬೇಕು. ಸೂರ್ಯೋದಯಾರಭ್ಯ ಅಸ್ತಮಾನದವರಿಗೂ ಕಾಲತ್ರಯಗಳು ಹ್ಯಾಂಗೋ, ಹಾಂಗೆ ಒಬ್ಬ ಜೀವಗೆ ಜನನಾರಭ್ಯ ಮರಣಾಂತವರಿಗೂ ಕಾಲತ್ರಯ ಎಂತ ಸಾಂಕೇತವು. ಸವನಗಳು–ಸವನ ಸಾಂಕೇತ ಆಯುಸ್ಸಿಗೆ ಆಗತಕ್ಕ ಕಾಲತ್ರಯಗಳಲ್ಲಿ ಅನುಸಂಧಾನ ಮಾಡತಕ್ಕ ಕ್ರಮವನ್ನು, ಕವಿಗಳಿಂದಲಿ ತಿಳಿದು–ಭಗವದ್ಭಕ್ತರಾದ ಜ್ಞಾನಿಗಳಿಂದ ತಿಳಿದು,

ಸವನತ್ರಯಗಳಿಗೆ ಅಭಿಮಾನಿಗಳಾದ, ವಸು–ಪ್ರಾತಃಸವನಕ್ಕೆ ಅಷ್ಟ ವಸುಗಳು ಅಭಿಮಾನಿ ದೇವತೆಗಳು, ರುದ್ರ–ಮಾಧ್ಯಾಹ್ನಸವನಕ್ಕೆ ಏಕಾದಶ ರುದ್ರರು ಅಭಿಮಾನಿ ದೇವತೆಗಳು, ಆದಿತ್ಯ–ಸಾಯಮಸವನಕ್ಕೆ ದ್ವಾದಶಾದಿತ್ಯರು. ಈ ಪ್ರಕಾರ ನೂರು ವರ್ಷದ ಆಯುಃ ಕಾಲಕ್ಕೂ ಅದಕ್ಕೆ ಸಂಬಂಧಿಸಿದ ಪ್ರತಿದಿನಕ್ಕೂ ತಿಳಿಯೋವನಾಗಬೇಕು. ಹತ್ತು ಹತ್ತು ಘಳಿಗಿಗೆ ಒಂದೊಂದು ಸವನವೆಂದು ತಾತ್ಪರ್ಯ. ರೊಳು–ಸವನತ್ರಯಾಭಿಮಾನಿಗಳಾದ ವಸುರುದ್ರಾದಿತ್ಯರೊಳಗೆ, ಪವನ–ಜೀವೋತ್ತಮರಾದ ವಾಯುದೇವರು, ರಾಜಿಸುವ–ಪ್ರಕಾಶಮಾನರಾಗಿ ಇದ್ದಾರೆ. ನೊಳು–ಈ ಭಾರತೀರಮಣಮುಖ್ಯಪ್ರಾಣದೇವರೊಳು, ಕೃತಿ–ಪ್ರಾತಃಸವನಕ್ಕೆ ಕೃತಿನಾಮಕ ಲಕ್ಷ್ಮೀದೇವೇರ ಪತಿ, ಪ್ರದ್ಯುಮ್ನ, ಜಯ–ಮಾಧ್ಯಾಹ್ನಸವನಕ್ಕೆ ಜಯಾನಾಮಕ ಲಕ್ಷ್ಮೀದೇವಿಯರ ಪತಿ, ಸಂಕರ್ಷಣ, ಮಾಯಾ–ಸಾಯಮಸವನಕ್ಕೆ ಮಾಯಾನಾಮಕ ಲಕ್ಷ್ಮೀದೇವಿಯರ ಪತಿ, ವಾಸುದೇವ, ಸು–ನಿರ್ದೋಷಗಳಾದ ರಮಾರೂಪಗಳಿಗೆ, ಧವನ–ಪತಿಯಾದ ಪ್ರದ್ಯುಮ್ನಾದಿ ಭಗವದ್ರೂಪಗಳು. ಈ ಪ್ರಕಾರ, ಮೂರ್ತಿತ್ರಯವ–ರಮಾರೂಪಗಳು ಮೂರು, ಪರಮಾತ್ಮನ ರೂಪಗಳು ಮೂರು, ಚಿಂತಿಸಿ–ಮನಸಾ ಆಯಾ ಅಧಿಷ್ಠಾನಗಳಲ್ಲಿ ಚಿಂತಿಸಿ, ದಿವಸವೆಂಬ–ದಿವಸಗಳು ಎನ್ನತಕ್ಕವೇ ಆಹುತಿದ್ರವ್ಯಗಳ ಮಾಡಿ ಹೋಮ ರೂಪದಿಂದಲೂ, ಆಹುತಿಗಳಿಂದ–ಈ ದಿವಸಗತ ಕ್ಷಣಲವಾದಿ ಕಾಲಗಳನ್ನು ಪೂಜಾದ್ರವ್ಯತ್ವೇನ ಅನುಸಂಧಾನ ಮಾಡಿನ್ನು ಇವುಗಳೆಂಬ ಆಹುತಿಗಳಿಂದ, ಅರ್ಚಿಸುತ–ಪೂರ್ವೋಕ್ತ ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ರೂಪಗಳಿಗೆ ಅರ್ಚನಿ ಮಾಡುತ, ಸುಖಿಸುತಿರು–ಈ ಪ್ರಕಾರ ಆಯುಸ್ಸನ್ನು ಸಾರ್ಥಕ್ಯ ಮಾಡಿಕೊಂಡು ಭಗವದುಪಾಸನಾ ಮಾಡುತ್ತಾ ಸುಖಪಡುತ್ತಾ ಇರೋವನಾಗು ಎಂತ ತಾತ್ಪರ್ಯ. ಮೇಲೆ ಹೇಳಿದ ಅರ್ಚನಿ ಪ್ರಕಾರ, ಖಂಡಕಾಲಗತ ಪರಮಾತ್ಮನ ರೂಪಗಳ, ಅಖಂಡಕಾಲಗತ ಪರಮಾತ್ಮನಲ್ಲಿ ಐಕ್ಯಚಿಂತನಾ ರೂಪದಿಂದ ಅರ್ಚನಿ ಹೋಮ ಮಾಡುತ್ತಾ ಮತ್ತು ಕಾಲಾಂತರ್ಗತ ಪರಮಾತ್ಮಗೂ, ಸೂರ್ಯಾಂತರ್ಗತ ಪರಮಾತ್ಮಗೂ ಐಕ್ಯ ಚಿಂತಿಸುತ್ತಾ ದೇಹಾಂತರ್ಗತ ಬಿಂಬಗೂ ಕಾಲಾಂತರ್ಗತ ಬಿಂಬಗೂ ಐಕ್ಯ ಚಿಂತಿಸುತ್ತಾ ಇದೇ ಪ್ರಕಾರ, ರಾತ್ರಿ ಕಾಲ ಅನುಸಂಧಾನ ಚಂದ್ರಾಂತರ್ಗತನಲ್ಲೂ ಅರ್ಚನಿ ಮಾಡುತ್ತಾ, ರಾತ್ರಿಗೆ ಸ್ತ್ರೀ ದೇವತೆಗಳ ತಿಳಿಯಬೇಕು.

**ಚತುರವಿಂಶತ್ಯಬ್ದ ವಸುದೇ ।**
**ವತೆಗಳೊಳು ಪ್ರದ್ಯುಮ್ನನಿಪ್ಪನು ।**
**ಚತುಶ್ಚತ್ವಾರಿಂಶತಿಗಳಲಿ ಸಂಕರ್ಷಣಾಖ್ಯ ॥**
**ಹುತವಹಾಕ್ಷನೊಳಿಹನು ಮಾಯಾ ।**
**ಪತಿಯು ಹದಿನಾರಧಿಕ ದ್ವಾತ್ರಿಂ ।**
**ಶತಿ ವರುಷಗಳಲಿಪ್ಪನಾದಿತ್ಯನೊಳು ಸಿತಕಾಯ ॥ ೩೫ ॥**

ಪೂರ್ವೋಕ್ತ ಸವನತ್ರಯ ವಿಚಾರವೇ, ಪ್ರತಿ ಸವನಕ್ಕೆ ಆಗತಕ್ಕ ವರುಷಗಳ ಸಂಖ್ಯಾ ಹೇಳುತಾರೆ.

ಚತುರವಿಂಶತಿ–ಇಪ್ಪತ್ತುನಾಲ್ಕು ಸಂಖ್ಯಾಕವಾದ ಅಬ್ದ–ವರುಷಗಳು ಪ್ರಾತಃ ಸವನವು, ಇದಕ್ಕೆ, ವಸುದೇವತೆಗಳು–ಅಷ್ಟ ವಸುಗಳು ಅಭಿಮಾನಿ ದೇವತೆಗಳು, ಳೊಳು–ಇವರೊಳಗೆ, ಪ್ರದ್ಯುಮ್ನನಿಪ್ಪನು–ಕೃತಿಸಮೇತನಾಗಿ, ಭಾರತೀರಮಣ ಮುಖ್ಯ ಪ್ರಾಣಾಂತರ್ಗತನಾಗಿ, ಪ್ರದ್ಯುಮ್ನ ಎಂಟು ರೂಪಗಳಿಂದ ಇರೋವನಾಗಿದ್ದಾನೆ. ಚತುಶ್ಚತ್ವಾರಿಂಶತಿ–ನಾಲ್ವತ್ತುನಾಲ್ಕು ಸಂಖ್ಯಾಕವಾದ, ಗಳಲಿ–ಮಧ್ಯಾಹ್ನ ಸವನ ವರುಷಗಳಿಗೆ ಮನಿಗಳಾದ, ಹುತವಹಾಕ್ಷನೊಳು–ಅಗ್ನಿಸದೃಶ ನೇತ್ರ ಉಳ್ಳ ಹನ್ನೊಂದು ರುದ್ರರಲ್ಲಿ, ಸಂಕರ್ಷಣಾಖ್ಯ–ಜಯಾಸಮೇತನಾಗಿ, ಮುಖ್ಯಪ್ರಾಣಾಂತರ್ಗತನಾಗಿ ಸಂಕರ್ಷಣ ಹನ್ನೊಂದು ರೂಪದಿಂದ, ಇಹನು–ಇರೋವನಾಗಿದ್ದಾನೆ. ದ್ವಾತ್ರಿಂಶತಿ– ಮೂವತ್ತೆರಡು, ಹದಿನಾರಧಿಕ–ಅಧಿಕ ಹದಿನಾರು ಎಂದರೆ ನಾಲ್ವತ್ತೆಂಟು, ವರುಷಗಳಲಿ– ತೃತೀಯ ಸವನವಾದ ಸಾಯಮ ಸವನ ನಾಲ್ವತ್ತೆಂಟು ವರ್ಷಗಳಲ್ಲಿ, ಆದಿತ್ಯ–ಅಭಿಮಾನಿ ಗಳಾಗಿ ಇರತಕ್ಕ ದ್ವಾದಶಾದಿತ್ಯರು, ನೊಳು–ಈ ದ್ವಾದಶಾದಿತ್ಯರಲ್ಲಿ, ಸಿತಕಾಯ–ಶುದ್ಧ ವಾದ ಶರೀರ ಉಳ್ಳ, ಮಾಯಾಪತಿಯು–ಮಾಯಾನಾಮಕ ಲಕ್ಷ್ಮೀಸಮೇತನಾದ ವಾಸುದೇವ, ಇಪ್ಪನು–ಹನ್ನೆರಡು ರೂಪದಿಂದ ಇರೋವನಾಗಿದ್ದಾನೆ. ಪ್ರಥಮ ಸವನ ಇಪ್ಪತ್ತುನಾಲ್ಕು ವರ್ಷಗಳಲ್ಲಿ ಪ್ರದ್ಯುಮ್ನ ರೂಪ. ದ್ವಿತೀಯ ಸವನ ನಾಲ್ವತ್ತು ನಾಲ್ಕು ವರ್ಷಗಳಲ್ಲಿ ಸಂಕರ್ಷಣ ರೂಪಗಳು. ತೃತೀಯ ಸವನ ನಾಲ್ವತ್ತೆಂಟು ವರುಷಗಳಲ್ಲಿ ವಾಸುದೇವ ರೂಪಗಳು. ಅಂತು ೧೧೬ ವರ್ಷಗಳು. ಈ ರೀತಿ ೧೧೬ ವರ್ಷಗಳ ಅನುಸಂಧಾನ ಮಾಡಬೇಕೆಂತ ತಾತ್ಪರ್ಯ. ಪ್ರಕಾರಾಂತರ ಪ್ರಥಮ ಸವನಕ್ಕೆ ಅಷ್ಟವಸುಗಳೊಳಗೆ ಅಗ್ನಿ ಒಬ್ಬನೇ, ಪ್ರದ್ಯುಮ್ನ, ದ್ವಿತೀಯ ಸವನಕ್ಕೆ ಕೈಲಾಸಪತಿ ರುದ್ರ ಒಬ್ಬನೇ, ಸಂಕರ್ಷಣ. ತೃತೀಯ ಸವನಕ್ಕೆ ವಿವಸ್ವಾನ್ ನಾಮಕ ಸೂರ್ಯ ಒಬ್ಬನೇ ವಾಸುದೇವ ಎಂತ. ಈ ರೀತ್ಯಾನೂ ಸಮನ್ವಯ ಮಾಡಬಹುದೆಂದು ತಾತ್ಪರ್ಯ.

**ಷೋಡಶೋತ್ತರಶತ ವರುಷದಲಿ ।**
**ಷೋಡಶೋತ್ತರಶತ ಸುರೂಪದಿ ।**
**ಕ್ರೀಡಿಸುವ ವಸುರುದ್ರರಾದಿತ್ಯರೊಳು ಸತಿಸಹಿತ ॥**
**ವ್ರೀಡವಿಲ್ಲದೆ ಭಜಿಪ ಭಕ್ತರ ।**
**ಪೀಡಿಸುವ ದುರಿತೌಘಗಳ ದೂ ।**
**ರೋಡಿಸುತ ಬಳಿಯಲಿ ಬಿಡದೆ ನೆಲಸಿಪ್ಪ ಭಯಹಾರಿ ॥ ೩೬ ॥**

ಪೂರ್ವೋಕ್ತ ಸವನತ್ರಯ ವಿಚಾರವೇ ಹೇಳಿ, ನೂರಹದಿನಾರು ರೂಪಗಳಿಂದ ದುರಿತಗಳ ಪರಿಹಾರ ಮಾಡತಾನೆಂದು ಪ್ರಸ್ತಾಪಿತವಿಷಯವೇ ವಿವರವಾಗಿ ತಿಳಿಸುತ್ತಾರೆ.

ಷೋಡಶೋತ್ತರಶತವರುಷದಲಿ–ನೂರಾಹದಿನಾರು ವರುಷಗಳಲ್ಲಿ ಎಂದರೆ, ಇದರ ಪ್ರಕಾರ ವರುಷಕ್ಕೆ ೧೦ ತಿಂಗಳು, ೧೦ ದಿನಗಳು, ೨೦ ಘಳಿಗೆ, ೮ ಪಳಗಳು. ಈ ಸಾಂಕೇತದಿಂದ ಒಂದು ವರುಷ. ಇಂಥಾ ವರುಷಗಳು ೧೧೬ಕ್ಕೆ, ೧೨ ತಿಂಗಳು ಅಂದರೆ, ರೂಢಿಯಲ್ಲಿರತಕ್ಕ ಹನ್ನೆರಡು ತಿಂಗಳು ಸಾಂಕೇತವಾದ ವರುಷಗಳು ನೂರೇ ಆಗೋವಾಗತವೆ. ಇಂಥಾ ನೂರಾಹದಿನಾರು ವರುಷಗಳಲ್ಲಿ ಮತ್ತು ಹನ್ನೆರಡು ತಿಂಗಳು ಸಾಂಕೇತ ನೂರಾಹದಿನಾರು ವರುಷಗಳು ಒಂದು, ಷೋಡಶೋತ್ತರಶತ ಸುರೂಪದಿ–೨೪ ಪ್ರದ್ಯುಮ್ನರೂಪ, ೪೪ ಸಂಕರ್ಷಣರೂಪ, ೪೮ ವಾಸುದೇವರೂಪ. ಅಂತು ೧೧೬. ಇವು ಹನ್ನೆರಡು ತಿಂಗಳ ಸಾಂಕೇತ ವರುಷಗಳು. ಈ ಪ್ರಕಾರ ೧೧೬ ರೂಪಗಳಿಂದ ತದಭಿಮಾನಿಗಳಾದ, ವಸು–ವಸುವಾದ ಅಗ್ನಿರೂಪಗಳು—೨೪ ವರುಷಕ್ಕೆ ೨೪ ರೂಪಗಳು, ತದಂತರ್ಗತ ಇಷ್ಟೇ ಪ್ರದ್ಯುಮ್ನರೂಪಗಳು, ರುದ್ರರು–ಕೈಲಾಸಾಧಿಪತಿಯಾದ ರುದ್ರರೂಪಗಳು—೪೪ ವರುಷಕ್ಕೆ ೪೪ ರೂಪಗಳು, ತದಂತರ್ಗತ ಇಷ್ಟೇ ಸಂಕರ್ಷಣ ರೂಪಗಳು, ಆದಿತ್ಯ–ವಿವಸ್ವಾನ್ ನಾಮಕ ಸೂರ್ಯನ ರೂಪಗಳು—೪೮ ವರುಷಕ್ಕೆ ೪೮ ರೂಪಗಳು, ತದಂತರ್ಗತ ಇಷ್ಟೇ ವಾಸುದೇವರೂಪಗಳು, ರೊಳು–ಈ ವಸುರುದ್ರಾದಿತ್ಯರೂಪಗಳೊಳು, ಸತಿಸಹಿತ–ಪ್ರದ್ಯುಮ್ನಾದಿ ರೂಪಗಳು, ಪತ್ನೇರು ಸಹ ೧೧೬ ರೂಪಗಳಿಂದ, ಕ್ರೀಡಿಸುವ–ಆಯುರ್ಮಾನ ವರುಷಗಳಲ್ಲಿ ಸಂಚಾರಮಾಡುವನು. ವ್ರೀಡವಿಲ್ಲದೆ–ಲಜ್ಜಾರಹಿತರಾಗಿ, ಭಜಿಪ ಭಕ್ತರ–ಪೂರ್ವೋಕ್ತ ಅನುಸಂಧಾನದಿಂದಲೂ, ಇನ್ನೂ ಅನೇಕ ಪ್ರಕಾರ ಪರಮಾತ್ಮನ ಭಜನಮಾಡತಕ್ಕ ಭಗವದ್ಭಕ್ತರ, ಪೀಡಿಸುವ–ಈ ೧೧೬ ವರುಷ ಆಯುಷ್ಕಾಲಗಳಲ್ಲಿ ರೋಗಾದ್ಯುಪದ್ರವಗಳಿಂದ ಪೀಡಿಸತಕ್ಕ, ದುರಿತೌಘಗಳ–ಜನ್ಮಾಂತರೀಯವಾದ ಪಾಪಸಮೂಹಗಳ, ದೂರೋಡಿಸುತ–ತನ್ನ ಧ್ಯಾನಾದಿಗಳಿಂದ, ಪ್ರಾಯಶ್ಚಿತ್ತದಿಂದ ಓಡಿಸಿ, ತದ್ದ್ವಾರಾ ಬರತಕ್ಕ ರೋಗಾದ್ಯುಪದ್ರವಗಳನ್ನು ದೂರಮಾಡಿ ಓಡಿಸುತ್ತಾ, ಭಯಹಾರಿ–ನಾನಾ ವಿಧ ಸಂಸಾರಭಯಗಳ ಪರಿಹರಿಸತಕ್ಕ ಪರಮಾತ್ಮ, ಬಳಿಯಲಿ ಬಿಡದೆ–ಇಂಥಾ ಅಧಿಕಾರಿಯ ಬಿಡದೆ, ಭಕ್ತನೆಂದು ಸ್ವೀಕರಿಸಿ, ನೆಲಸಿಪ್ಪ–ತನ್ನ ವಿಸ್ಮೃತಿ ಬಾರದಂತೆ ಸ್ಮೃತಿರೂಪನಾಗಿ ಮನಸ್ಸಿನಲ್ಲಿ ವಾಸವಾಗಿರುತ್ತಾನೆ.

**ಮೂರಧಿಕ ಎಂಭತ್ತು ಸಹಸ್ರ ।**
**ನೂರು ಇಪ್ಪತ್ತೆನಿಪರೂಪದಿ ।**
**ತೋರುತಿಪ್ಪ ದಿವಾನಿಶಾಧಿಪರೊಳಗೆ ನಿತ್ಯದಲಿ ॥**
**ಭಾರತಿ ಪ್ರಾಣರೊಳಗಿದ್ದು ನಿ ।**
**ವಾರಿಸುತ ಭಕ್ತರ ದುರಿತ ಹಿಂ ।**
**ಕಾರ ನಿಧನ ಪ್ರಥಮರೂಪದಿ ಪಿತೃಗಳನೆ ಪೊರೆವ ॥ ೩೭ ॥**

ಪೂರ್ವೋಕ್ತ ಸವನತ್ರಯವಿಚಾರವೇ, ನೂರು ವರುಷಕ್ಕೆ ರಾತ್ರಿ ಹಗಲುಗಳಿಗೆ ಆಗತಕ್ಕ ಭಗವದ್ರೂಪಗಳ ಹೇಳತಾರೆ.

ಎಂಭತ್ತು ಸಹಸ್ರ–ಎಂಭತ್ತು ಸಹಸ್ರ, ಮೂರಧಿಕ–ಅಧಿಕ ಮೂರು ಸಾವಿರ, ಐನೂರು ಇಪ್ಪತ್ತು–ಐದುನೂರ ಇಪ್ಪತ್ತು, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಎನತಕ್ಕ, ರೂಪದಿ–ಮೂರು ರೂಪಗಳಿಂದ, ಎಂದರೆ, ವರುಷಕ್ಕೆ ಹನ್ನೆರಡು ತಿಂಗಳು ಮ್ಯಾರಿಗೆ ೧೧೬ ವರುಷಕ್ಕೆ ಆಗತಕ್ಕ ಅಹೋರಾತ್ರಿಗಳು ಹ್ಯಾಂಗೆಂದರೆ :–

| ವರುಷ | ಹಗಲು | ರಾತ್ರಿ | ಮೊತ್ತ | ಭಗವದ್ರೂಪಗಳು |
|---|---|---|---|---|
| ೨೪ | ೮,೬೪೦ | ೮,೬೪೦ | ೧೭,೨೮೦ | ಪ್ರದ್ಯುಮ್ನ ರೂಪಗಳು |
| ೪೪ | ೧೫,೮೪೦ | ೧೫,೮೪೦ | ೩೧,೬೮೦ | ಸಂಕರ್ಷಣ ರೂಪಗಳು |
| ೪೮ | ೧೭,೨೮೦ | ೧೭,೨೮೦ | ೩೪,೫೬೦ | ವಾಸುದೇವ ರೂಪಗಳು |
| ೧೧೬ | ೪೧,೭೬೦ | ೪೧,೭೬೦ | ೮೩,೫೨೦ | |

ಪ್ರದ್ಯುಮ್ನಾದಿ ಎಂಭತ್ತು ಮೂರು ಸಾವಿರದ ಐನೂರ ಇಪ್ಪತ್ತು ರೂಪದಿಂದ, ದಿವಾ–ಹಗಲುಗಳಿಗೆ, ನಿಶಾ–ರಾತ್ರಿಗಳಿಗೆ, ಅಧಿಪ–ಅಭಿಮಾನಿಗಳಾದ, ರೊಳಗೆ–ದೇವತೆಗಳ ಒಳಗೆ, ನಿತ್ಯದಲಿ–ಪ್ರತಿದಿನದಲ್ಲೂ, ಭಾರತಿ–ರಾತ್ರಿ ಅಭಿಮಾನಿ ದೇವತೆಗಳಲ್ಲಿ ಭಾರತಿ ದೇವಿಯರು, ಪ್ರಾಣ–ಹಗಲಭಿಮಾನಿ ದೇವತೆಗಳಲ್ಲಿ ಪ್ರಾಣದೇವರು, ರೊಳಗೆ – ಈ ಭಾರತೀರಮಣಮುಖ್ಯಪ್ರಾಣಾಂತರ್ಗತನಾಗಿ, ತೋರುತಿಪ್ಪ – ೮೩,೫೨೦ ರೂಪಗಳಿಂದ ತದಾಕಾರದಿಂದ ಇದ್ದು, ಹಗಲು ರಾತ್ರಿಗಳ ವ್ಯಕ್ತ ಮಾಡಿ, ಪ್ರಾಣಿಗಳಿಗೆ ತೋರಿಸುತ್ತಾ ಇರೋವನಾಗಿ ಇದ್ದಾನೆ. ಇದ್ದು–ಈ ಪೂರ್ವೋಕ್ತ ಪ್ರಕಾರ ಇದ್ದು, ಪ್ರಕಾಶಮಾನನಾಗಿರುವ, ಪರಮಾತ್ಮನ್ನ ಅನುಸಂಧಾನದಿಂದ ತಿಳದು ಆಯುಷ್ಕಾಲವನ್ನು ಹೋಮ ರೂಪದಿಂದ, ಅರ್ಚನೆ ರೂಪದಿಂದ ಅರ್ಪಿತ ಮಾಡತಕ್ಕ, ಭಕ್ತರ–ತನ್ನ ಭಕ್ತರಾದವರ, ದುರಿತ–ಹಗಲು ಮಾಡಿದ ಪಾಪಗಳ, ರಾತ್ರಿ ಮಾಡಿದ ಪಾಪಗಳ (೬ನೇ ಸಂಧಿ ೧೪ನೇ ಶ್ಲೋಕದ ಟೀಕಾ ನೋಡಿ), ಹೀಂಕಾರ– "ಸಂಕರ್ಷಣೋ ಹಿ ಸಂಹರ್ತಾ ಪ್ರದ್ಯುಮ್ನಃ ಪರಮೇಶ್ವರಃ || ಹೀಂಕಾರ ಇತಿ ಸಂಪ್ರೋಕ್ತೋ ಹೀತಿ ಸೃಷ್ಟಿರುದೀರ್ಯತೇ ||" ಎಂತ ಛಾಂದೋಗ್ಯ ಭಾಷ್ಯರೀತ್ಯಾ ಹೀಂಕಾರಶಬ್ದವಾಚ್ಯನಾಗಿ ಹಗಲಿನಲ್ಲಿ ಮಾಡಿದ ಪಾಪಗಳನ್ನು, ನಿಧನ–"ಪ್ರಸ್ತಾವೋ ನಿಧನಂ ಚಾಪಿ ಸಂಕರ್ಷಣ ಉದಾಹೃತಃ||" ಎಂಬ ಛಾಂದೋಗ್ಯ ಭಾಷ್ಯರೀತ್ಯಾ ನಿಧನಶಬ್ದವಾಚ್ಯನಾಗಿ, ರಾತ್ರಿ ಮಾಡಿದ ಪಾಪಗಳ, ನಿವಾರಿಸುತ–ಅವರವರ ಅನುಸಂಧಾನ, ಧಾರಧ್ಯಾನುಸಾರ, ಪರಿಹಾರ ಮಾಡುತ್ತ, ಪ್ರಥಮ ರೂಪದಿ–ಪ್ರಥಮ ರೂಪವಾದ ಹೀಂಕಾರ ರೂಪದಿಂದ, ಪಿತೃಗಳನೆ ಪೊರೆವಾ–ಅವನ ಪಿತೃಗಳನ್ನ ಸಂರಕ್ಷಿಸುತ್ತಾನೆ. ನಿಧನ, ಹೀಂಕಾರ ರೂಪಗಳು ಹಗಲು ಮಾಡಿದ ಪಾಪದಲ್ಲಿ, ಹೀಂಕಾರ, ರಾತ್ರಿ ಮಾಡಿದ ಪಾಪದಲ್ಲಿ ನಿಧನ ಇರೋವರಾಗಿ ಪರಿಹರಿಸುತ್ತಾರೆ. ಇವನ ಯೋಗ್ಯತಾ ಹಿಡಿದು, ಈ ಪುಣ್ಯದೊಳಗೆ, ಪಿತೃಗಳಿಗೆ ಸೇರಬೇಕಾದ ಭಾಗ ಎಷ್ಟೋ ಅಷ್ಟು ಭಾಗ ಹೀಂಕಾರ ತೆಗೆದುಕೊಂಡು, ಪಿತೃಗಳ ರಕ್ಷಿಸುತ್ತಾನೆ.

ಈ ದೇಹ, ಮಾತಾಪಿತೃಗಳ ದೇಹಾಂಶವಾದ್ದರಿಂದ ಪಾಪ ಪುಣ್ಯಗಳಿಗೆ ಈ ದೇಹವೇ ಕಾರಣವಾದ್ದರಿಂದ ಈ ದೇಹಾಂಶ ವಿವಕ್ಷಯಾ ಪಿತೃಗಳಿಗೆ ಭಾಗ ಉಂಟು. ಆ ಭಾಗ ದಿಂದ ಪಿತೃಗಳ ರಕ್ಷಣಾ ಮಾಡತಾನೆ ಎಂತ ತಾತ್ಪರ್ಯ. ಪುಣ್ಯ ಪಾಪಗಳು ಎರಡೂ ಪಿತೃಗಳಿಗೆ ಭಾಗ ಉಂಟು. ರಾತ್ರಿ ಹಗಲುಗಳಿಗೆ ಅಭಿಮಾನಿಗಳಾದ ದೇವತೆಗಳು ಪ್ರಾಚುರ್ಯಾಪ್ರಾಚುರ್ಯದಿಂದ ಉಭಯರೂ ಉಭಯಕಡಿ ಇದ್ದಾರೆಂದು ತಾತ್ಪರ್ಯ.

**ಬುದ್ಧಿಪೂರ್ವಕ ಉತ್ತಮೋತ್ತಮು ।**
**ಶುದ್ಧ ಊರ್ಣಾಂಬರವ ಪಂಕದೊ ।**
**ಳದ್ದಿ ತೆಗೆಯಲು ಲೇಪವಾಗುವದೇ ಪರೀಕ್ಷಿಸಲು ॥**
**ಪದ್ಮನಾಭನು ಸರ್ವಜೀವರೊ ।**
**ಳಿದ್ದರೇನು ಗುಣತ್ರಯಗಳಿಂ ।**
**ಬದ್ಧನಾಗುವನೇನೊ ನಿತ್ಯಸುಖಾತ್ಮ ಚಿನ್ಮಯನು ॥ ೩೮ ॥**

ಜೀವಾಂತರ್ಗತನಾಗಿ ಅವಿಯೋಗನಾಗಿ ಇದ್ದರೂ ತ್ರಿಗುಣಬದ್ಧ, ಜೀವನೇ ಹೊರತು ಈಶ್ವರ ತ್ರಿಗುಣದಿಂದ ಬದ್ಧನಲ್ಲ ಎಂತಲೂ, ಪರಮಾತ್ಮ ಎಲ್ಲಿದ್ದರೂ ನಿರ್ಲಿಪ್ತನೆಂದು ಹೇಳತಾರೆ.

ಬುದ್ಧಿಪೂರ್ವಕ–ಮನಃಪೂರ್ವಕವಾಗಿ ಪ್ರಯತ್ನದಿಂದ, ಉತ್ತಮೋತ್ತಮು–ಶ್ರೇಷ್ಠ ವಾದದ್ದರೊಳಗೆ ಅತಿಶ್ರೇಷ್ಠವಾದ, ಶುದ್ಧ–ಪರಿಶುದ್ಧವಾದ, ನಿರ್ದೋಷವಾದ, ಊರ್ಣಾಂ ಬರವ–ಕಂಬಳಿಯನ್ನು, ಪಂಕದೊಳದ್ದಿ ತೆಗೆಯಲು–ಕೆಸರಿನಲ್ಲಿ ಛಂದಾಗಿ ತೋಯಿಸಿ ತೆಗೆ ದರೆ, ಲೇಪವಾಗುವದೇ–ಆ ಕೆಸರು ಕಂಬಳಿಗೆ ಲೇಪವಾಗೋದೇ ? ಎಂದರೆ ಲೇಪವಾಗೋ ದಿಲ್ಲ, ಲೇಪವಾಗಲಾರದು ಎಂತ ಅರ್ಥ. ಪರೀಕ್ಷಿಸಲು–ಆ ಕಂಬಳಿಯನ್ನು ತಂದು ಪರೀಕ್ಷಿ ಮಾಡಲು ಲೇಪವಾಗೋದಿಲ್ಲ. ತದ್ವತ್, ಪದ್ಮನಾಭನು–ಪದ್ಮನಾಭನಾದ ಶ್ರೀಪರ ಮಾತ್ಮನು, ಶುದ್ಧಕಂಬಳಿಗೆ ಸದೃಶನಾದವ. ಸರ್ವಜೀವರೊಳಿದ್ದರೇನು–ತ್ರಿಗುಣದಿಂದ ಬದ್ಧರಾದ ಜೀವರಲ್ಲಿ ಇದ್ದಕಾಲಕ್ಕೂ, ಗುಣತ್ರಯಗಳಿಂ–ಪಂಕಸದೃಶವಾದ ಗುಣತ್ರಯ ಗಳಿಂದ, ಬದ್ಧನಾಗುವನೇನೊ–ಜೀವ ಬದ್ಧನಾಗುವೋಪಾದಿಯಲ್ಲಿ ಪರಮಾತ್ಮ ಬದ್ಧನೆ ? ಬದ್ಧನಲ್ಲ ಎಂತ ತಾತ್ಪರ್ಯ. ದೃಷ್ಟಾಂತ, ಪಂಕ ಊರ್ಣಾಂಬರವತ್. ನಿತ್ಯ–ಈ ಪ್ರಕಾರ ಜೀವಾಂತರ್ಗತನಾಗಿ ಅವಿಯೋಗನಾಗಿ ಇದ್ದಕಾಲಕ್ಕೂ, ಸುಖಾತ್ಮ–ಉಪಾಧಿಯಿಂದಲೂ, ವಿಕಾರದಿಂದಲೂ ರಹಿತನಾಗಿ ತನ್ನ ಸಂಪೂರ್ಣವಾದ ಸುಖದಿಂದ ಇರತಕ್ಕವನು ಶ್ರೀಪರ ಮಾತ್ಮ. ಚಿನ್ಮಯನು–ಆನಂದಾದಿ ಜ್ಞಾನಸ್ವರೂಪಿಯಾದವನು. ಸೂರ್ಯನ ಪ್ರಕಾಶಕ್ಕೆ ಅಂಧಕಾರ ಹ್ಯಾಂಗೆ ಲೇಪವಿಲ್ಲವೋ, ಹಾಂಗೇನೇ ಪರಮಾತ್ಮ, ಸಚ್ಚಿದಾನಂದಾತ್ಮಕ ವಾದ ಶರೀರ ಉಳ್ಳವನು ಎಂತ ತಾತ್ಪರ್ಯ.

**ಸಕಲ ದೋಷವಿದೂರ ಶಶಿ ಪಾ ।**
**ವಕ ಸಹಸ್ರಾನಂತಸೂರ್ಯ ।**
**ಪ್ರಕರ ಸನ್ನಿಭಗಾತ್ರ ಲಕುಮಿಾಕಳತ್ರ ಸುರಮಿತ್ರ ॥**
**ವಿಖನಸಾಂಡದೊಳಿಪ್ಪ ಬ್ರಹ್ಮಾ ।**
**ದ್ಯಖಿಳ ಚೇತನಗಣಕೆ ತಾನೆ ।**
**ಸಖನೆನಿಸಿಕೊಂಡಕುಟಿಲಾತ್ಮಕನಿಪ್ಪನವರಂತೆ ॥ ೩೯ ॥**

ಪೂರ್ವೋಕ್ತ ಜೀವಾಂತರ್ಗತ ಪರಮಾತ್ಮನ ವಿಚಾರ ಹೇಳತಾರೆ.

ಸಕಲದೋಷವಿದೂರ–ಜೀವನಾದವ ಸಕಲ ದೋಷಗಳಿಂದ ಯುಕ್ತವಾದ ಲಿಂಗ ದೇಹದಿಂದ ಬಂಧಿತನಾಗಿ ವಿಕಾರ ಐದತಕ್ಕವ. ತದ್ಗತ ಪರಮಾತ್ಮ, ಇಂಥಾ ಸಕಲದೋಷ ರೂಪವಾದ ಲಿಂಗದೇಹದಿಂದ ವಿಶೇಷಾಕಾರದಿಂದ ದೂರನಾದವ ಮತ್ತು ಜೀವಾಂತರ್ಗತ ನಾದ ಕಾಲಕ್ಕೂ, ಜೀವಗೆ ಬಂಧಕರೂಪವಾದ ಲಿಂಗದೇಹದಿಂದ ತಾನು ಬಂಧಿತನಲ್ಲದೆ ದೂರನಾದವನು. ಶಶಿ–ಚಂದ್ರನು, ಪಾವಕ–ಅಗ್ನಿ, ಸೂರ್ಯ–ಸೂರ್ಯನು, ಲೋಕ ದೊಳಗೆ ಅತಿಶಯವಾದ ಕಾಂತಿಗೆ ದೃಷ್ಟಾಂತ ಇವರು ಮೂರು ಮಂದಿಯೇ ಹೊರತು, ಮತ್ತೂ ಪ್ರಕಾಶಮಾನವಾದ ವಸ್ತುವು ಇನ್ನು ದಾವುದೂ ಇಲ್ಲ. ಇವರ ಅನುಸರಿಸೇ ಪ್ರಕಾಶವು, ಪ್ರಕರ–ಇವರು ಮೂರೂ ಮಂದಿ ತಾರತಮ್ಯಾನುಸಾರ ಕಾಂತಿಯಲ್ಲಿ ಶ್ರೇಷ್ಠರು. ಸಹಸ್ರಾನಂತ–ಅನಂತವಾದ ಇಂಥಾ ಸೂರ್ಯ, ಚಂದ್ರ, ಅಗ್ನಿಗಳ ಕಾಂತಿ ಏಕಕಾಲಾವ ಚ್ಛೇದೇನ ಒಂದೇ ಕಡೆ ಸೇರಿದರೆ ಎಷ್ಟು ಕಾಂತಿ ಇರೋದೋ, ತತೋಪ್ಯಧಿಕವಾದ, ಸನ್ನಿಭ–ಕಾಂತಿಯುಕ್ತವಾದ, ಗಾತ್ರ–ಶರೀರ ಉಳ್ಳವನಾಗಿ, ಕಳತ್ರ–ಪತ್ನಿಯಾದ, ಲಕುಮಿ–ಲಕ್ಷ್ಮೀದೇವಿಯರಿಂದ ಸಹಿತನಾಗಿ ಸರ್ವರಿಗೆ ಬಿಂಬನಾಗಿ ಇದ್ದಾನೆ. ಸುರಮಿತ್ರ– ಸುರಶಬ್ದದಿಂದ ಬ್ರಹ್ಮಾದಿ ತೃಣಾಂತ ಭಗವದ್ಭಕ್ತರಾದ ಮುಕ್ತಿಯೋಗ್ಯರಿಗೆ ಸ್ನೇಹಿತ ನಾದವ. ವಿಖನಸಾಂಡ–'ವಿಖನಸ' ಎಂದರೆ ಬ್ರಹ್ಮದೇವರು,'ಅಂಡ'–ಇವನ ಅಂಡಸಾಂಕೇತ ವಾದ ಅಂದರೆ, ಬ್ರಹ್ಮಾಂಡ ಎಂತ ಅರ್ಥ. ದೊಳಿಪ್ಪ–ಈ ಬ್ರಹ್ಮಾಂಡದೊಳಿಪ್ಪ, ಬ್ರಹ್ಮಾದಿ– ಬ್ರಹ್ಮದೇವರೇ ಆದಿಯಾಗಿ ಇರತಕ್ಕ, ಅಖಿಳ–ಸಮಸ್ತವಾದ, ಚೇತನಗಣಕೆ–ಭಕ್ತರಾದ ಜೀವಸಮೂಹಗಳಿಗೆ, ತಾನೆ–ಪರಮಾತ್ಮನಾದ ತಾನೇನೇ, ಸಖನೆನಿಸಿಕೊಂಡು–ಸ್ನೇಹಿತ ಎಂತ ಕರೆಸಿಕೊಂಡು ಇರೋವನಾಗಿದ್ದಾನೆ. ಎಂದರೆ, ದಾವ ಪ್ರಾಣಿಗಳ ಸ್ವರೂಪ ಸ್ವಭಾವದಲ್ಲಿ ಪರಮಾತ್ಮ ತಮಗೆ ಸಖನೆಂದು ತಿಳಿದಿದ್ದಾರೋ ಅವರಿಗೆ, ಸಖನೆನಿಸಿ ಕೊಂಡು ಇರೋವನಾಗಿದ್ದಾನೆ. ತದನ್ಯಸ್ವಭಾವರಾದ ಮಿಶ್ರಜೀವರು, ತಮೋಯೋಗ್ಯ ರಿಗೆ ದ್ವೇಷಿ ಅಂತ ಎನಿಸಿಕೊಂಡು ಬಿಂಬನಾಗಿ ಇದ್ದಾನೆ. ಅಕುಟಿಲಾತ್ಮಕನು–ದ್ವೇಷ ರೂಪವಾದ ಸ್ವಭಾವದವರಿಗೆ ದೂರನಾದವನು, ತದನ್ಯರಾದ ಮುಕ್ತಿಯೋಗ್ಯರಿಗೆ ಕುಟಿಲ ರಹಿತನಾಗಿ ಇರುವನು. ಅವರವರ ಅನಾದಿಯೋಗ್ಯತಾ ಅನುಸರಿಸಿ ಇರೋವನೇ ಹೊರತು, ದೇವರಲ್ಲಿ ದ್ವೇಷಾಸೂಯಸ್ನೇಹವಿಲ್ಲ. ಇಪ್ಪನವರಂತೆ–ಈಶ್ವರನಿಂದ ರಚಿತರಲ್ಲದ

ಜೀವರ ಅನಾದಿಸ್ವರೂಪಯೋಗ್ಯತಾ ಅನುಸರಿಸಿ, ಅವರಂತೆ ಪರಮಾತ್ಮ ಇದ್ದಾನೆಂತ ತಾತ್ಪರ್ಯ.

**ದೇಶಭೇದಗಳಲ್ಲಿ ಇಪ್ಪಾ ।**
**ಕಾಶದೋಪಾದಿಯಲಿ ಚೇತನ ।**
**ರಾಶಿಯೊಳು ನೆಲಸಿಪ್ಪನವ್ಯವಧಾನದಲಿ ನಿರುತ ॥**
**ಶ್ರೀಸಹಿತ ಸರ್ವತ್ರ ನಿರವಾ ।**
**ಕಾಶ ಕೊಡುವಂದದಲಿ ಕೊಡುತ ನಿ ।**
**ರಾಶೆಯಲಿ ಸರ್ವಾಂತರಾತ್ಮಕ ಶೋಭಿಸುವ ಸುಖದ ॥ ೪೦ ॥**

ಪೂರ್ವೋಕ್ತ ಜೀವಾಂತರ್ಗತ ವಿಚಾರ ಹೇಳತಾರೆ.

ದೇಶಭೇದ – ಲೋಕದಲ್ಲಿ ಭಿನ್ನ ಭಿನ್ನಗಳಾದ ಪರಸ್ಪರ ಭೇದಯುಕ್ತಗಳಾದ ಸ್ಥೂಲ ಸೂಕ್ಷ್ಮಗಳಾದ ಗರ್ಭದಲ್ಲಿ ಅವಕಾಶಯುಕ್ತಗಳಾದ ಘಟಾದಿಗಳು ತಂಬಿಗಿ ಮೊದಲಾದ ಅನೇಕಗಳು ಇರೋವಾಗಿ ಅವೆ. ದೇಶಶಬ್ದ ಪ್ರಪಂಚಪರವು, ಗಳಲ್ಲಿ– ಇಂಥಾ ಭೇದಯುಕ್ತವಾದ ಘಟಾದಿಗಳಲ್ಲಿ ಅದರದರ ಯೋಗ್ಯತಾನುಸಾರ ತದಾಕಾರ ದಿಂದ ಆಕಾಶ ಪೂರ್ಣವಾಗಿ ಅದೆ. ಘಟಾದಿಗಳಿಗೆ ಭೇದವಿದ್ದಂತೆ ತದ್ಗತ ಆಕಾಶಕ್ಕೆ ಭೇದವಿಲ್ಲ. ಇಪ್ಪ–ಈ ಘಟಾದಿಗಳಲ್ಲಿ ಇರತಕ್ಕ, ಆಕಾಶದೋಪಾದಿಯಲಿ–ಆಕಾಶದಂತೆ, ಚೇತನರಾಶಿಯೊಳು–ಘಟಾದಿಗಳಿಗೆ ಸದೃಶವಾದ ಪ್ರಾಣಿಗಳ ಸಮೂಹಗಳಲ್ಲಿ ಆಕಾಶ ಸದೃಶನಾದ ಪರಮಾತ್ಮ, ನೆಲಸಿಪ್ಪನು–ಆವಾಸನಾಗಿ ತದಾಕಾರದಿಂದ ಬಿಂಬನಾಗಿ ಇದ್ದಾನೆ. ಪರಸ್ಪರ ಅಧಿಷ್ಠಾನರಾದ ಜೀವರಿಗೆ ಭೇದವಿದ್ದಂತೆ ಅಂತರ್ಗತ ಈಶ್ವರನ ರೂಪಗಳಿಗೆ ಪರಸ್ಪರ ಭೇದವಿಲ್ಲ. ಆಕಾಶವತ್ ಎಂತ ತಾತ್ಪರ್ಯ. ಅವ್ಯವಧಾನದಲಿ– ಜೀವಾಂತರ್ಗತ ಬಿಂಬ, ಪ್ರಳಯ ಕಾಲದಲ್ಲಿ ಬಿಟ್ಟು ಮೂಲದಲ್ಲಿ ಸೇರೋಣ, ಸೃಷ್ಟಿಕಾಲ ದಲ್ಲಿ ಪ್ರವೇಶ ಮಾಡೋಣ, ಇಂಥಾ ವ್ಯವಧಾನ ಉಂಟೇ ಎಂದರೆ ಇಲ್ಲ. ಸದಾ ಜೀವನ್ನ ಬಿಟ್ಟು ಹೋಗದೆ ಅವಿಯೋಗನಾಗಿ, ನಿರುತ–ಅನಾದ್ಯನಂತ ಕಾಲಕ್ಕೂ, ಶ್ರೀಸಹಿತ–ತನ್ನ ಪತ್ನಿಯಾದ ಶ್ರೀ ರಮಾದೇವಿಯರಿಂದ ಸಹಿತ ಮುಕ್ತ ಅಮುಕ್ತ, ಸೃಜ್ಯ ಅಸೃಜ್ಯ ಇತ್ಯಾದಿ, ಸರ್ವತ್ರ–ಸರ್ವತ್ರ ವಿದ್ಯಮಾನರಾದ ಪ್ರಾಣಿಗಳಲ್ಲಿ ಹಾಂಗೆ, ತದನ್ಯ ಸರ್ವತ್ರದಲ್ಲಿ, ನಿರವಕಾಶ–ಅವಕಾಶ ರಹಿತನಾಗಿ, ಆಕಾಶದೋಪಾದಿಯಲ್ಲಿ ಪರಿಪೂರ್ಣ ವ್ಯಾಪ್ತನಾಗಿದ್ದಾನೆ. ಇವನ ವ್ಯಾಪ್ತಿರಹಿತ ಪ್ರದೇಶವೇ ಇಲ್ಲ ಎಂತ ಅರ್ಥ. ಕೊಡುವಂದದಲಿ–ಅಧಿಕಾರಿಗಳು ತಮ್ಮ ತಮ್ಮ ಮನಸ್ಸನ್ನು ಅನಾದಿ ಸ್ವರೂಪ ಸ್ವಭಾವ ವನ್ನು ಅನುಸರಿಸಿ ಹ್ಯಾಂಗೆ ಹ್ಯಾಂಗೆ ಕೊಡುತಾರೋ, ಅದರೋಪಾದಿಯಲ್ಲಿ, ಕೊಡುತ– ಜ್ಞಾನ, ಭಕ್ತಿ, ವೈರಾಗ್ಯ, ಇನ್ನೂ ಐಶ್ವರ್ಯ, ತನ್ನ ಸಂದರ್ಶನ ಇವುಗಳ ಕೊಡತಾ ಎಂದರೆ, ಅಸ್ವತಂತ್ರನಾದ ಜೀವಗೆ ಸ್ವರೂಪಯೋಗ್ಯತಾ ಅನುಸರಿಸಿನ್ನೂ, ಅನಾದಿ ಕರ್ಮವನ್ನನುಸರಿಸಿನ್ನೂ ಬುದ್ಧಿಗಳ ವ್ಯಕ್ತಮಾಡಿ ಕೊಡುತ್ತಾ ಅದನನುಸರಿಸಿ ತನ್ನ

ಸಂದರ್ಶನ ಕೊಡುತ್ತಾ, ನಿರಾಶೆಯಲಿ–ತನಗೆ ಸ್ವಪ್ರಯೋಜನರಹಿತನಾಗಿ, ಸರ್ವಾಂತರಾತ್ಮಕ–ಸರ್ವ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿ ಇದ್ದು ಬಿಂಬರೂಪಿ ಪರಮಾತ್ಮ, ಶೋಭಿಸುವ–ಭಕ್ತರಿಗೆ ಪ್ರತ್ಯಕ್ಷನಾಗಿರುವ, ತದನ್ಯರಿಗೆ ಪ್ರತ್ಯಕ್ಷನಲ್ಲ. ಸುಖದ–ಲಿಂಗ ಭಂಗಾನಂತರ ತನ್ನ ಭಕ್ತರಿಗೆ ಸುಖಗತಿ ಕೊಡತಕ್ಕವ. ತದನ್ಯರಾದವರಿಗೆ ಲಿಂಗಭಂಗಾನಂತರ, ದುಃಖರೂಪವಾದ ಸುಖ ಕೊಡತಕ್ಕವ.

**ಶ್ರೀ ವಿರಿಂಚಾದ್ಯಮರಗಣಸಂ ।**
**ಸೇವಿತಾಂಘ್ರಿಸರೋಜ ಈ ಜಡ ।**
**ಜೀವರಾಶಿಗಳೊಳಹೊರಗೆ ನೆಲೆಸಿದ್ದು ನಿತ್ಯದಲಿ ॥**
**ಸಾವಕಾಶನು ಎನಿಸಿ ತನ್ನ ಕ ।**
**ಳೇವರದಲಿಂಬಿಟ್ಟು ಸಲಹುವ ।**
**ದೇವ ದೇವಕಿರಮಣ ದಾನವಹರಣ ಜಿತಮರಣ ॥ ೪೧ ॥**

ಇನ್ನೂ ಪರಮಾತ್ಮ ಎಂಥಾವನೆಂದರೆ ಹೇಳುತಾರೆ.

ಈ ಜಡಜೀವರಾಶಿಗಳೊಳು–ಸ್ವರೂಪತಃ ವೃಕ್ಷಾದಿ ಜಡಜೀವರು, ಸ್ವರೂಪತಃ ಮಾನುಷಪಶ್ವಾದಿ ಚೇತನಜೀವರು, ಈ ಉಭಯವಿಧರಾದ ಜೀವರ ಸಮೂಹದ ಸ್ವರೂಪಗಳೊಳಗೆ, ಎಂದರೆ, ಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರ ಸ್ವರೂಪದೊಳಗೂ, ಶ್ರೀ ವಿರಂಚಾದ್ಯಮರಗಣ–ಶ್ರೀದೇವಿಯರು, ಬ್ರಹ್ಮಾದಿ ತೃಣಾಂತ ದೇವತಾಗಣ ಹಾಂಗೆ ಉಪಲಕ್ಷಣಯಾ ಅಸುರ ನಿತ್ಯಸಂಸಾರಿಗಣ ಇವರುಗಳ, ಹೊರಗೆ–ಸ್ವರೂಪವಿವಕ್ಷಯಾ ಹೊರಗೆ ಇರತಕ್ಕ ಸ್ಥೂಲದೇಹಗಳೊಳಗೂ, ನೆಲೆಸಿದ್ದು–ಆವಾಸನಾಗಿದ್ದು, ನಿತ್ಯದಲಿ–ಪ್ರತಿನಿತ್ಯದಲ್ಲೂ, ಸಂಸೇವಿತಾಂಘ್ರಿಸರೋಜ–ಭಕ್ತರಾದ ಅವರವರಿಂದ ಅವರವರ ಶರೀರ ಗತನಾಗಿ ಛಂದಾಗಿ ಧ್ಯಾನೋಪಾಸನದಿಂದ ಸೇವಿತವಾದ ಪಾದಕಮಲಗಳು ಉಳ್ಳವ. ದ್ವೇಷಿಗಳಾದ ಅಸುರರ ವ್ಯಾವರ್ತನವು, ಸಾವಕಾಶನು ಎನಿಸಿ–ಪ್ರಳಯಕಾಲದಲ್ಲಿ ಸರ್ವ ಪ್ರಾಣಿಗಳ ವ್ಯಾಪಾರರಹಿತರನ್ನಾಗಿ ಮಾಡಿ, ಶ್ರಮಪರಿಹಾರಾರ್ಥ ನಿದ್ರಾಯುಕ್ತರನ್ನ ಮಾಡಿ, ಅವಕಾಶದಿಂದ ಸಹಿತರನ್ನಾಗಿ ಮಾಡತಾನಾದ್ದರಿಂದ ಸಾವಕಾಶನು ಎಂತ ಕರಿಸೋವನಾದ. ಈ ಪ್ರಕಾರ ಅವಕಾಶ ಕೊಟ್ಟು ಪ್ರಳಯದಲ್ಲಿ ಸರ್ವಪ್ರಾಣಿಗಳ, ತನ್ನ ಕಳೇವರದಲಿ–ನಾರಾಯಣದೇವರು ಆದ ತಾನು ತನ್ನ ದೇಹದಲ್ಲಿ, ಇಂಬಿಟ್ಟು–ಆಶ್ರಯಮಾಡಿ ಇಟ್ಟವನಾಗಿ, ಸಲಹುವ–ಸಂರಕ್ಷಣ ಮಾಡತಾನೆ. ದೇವ–ಕ್ರೀಡಾದಿ ಗುಣವಿಶಿಷ್ಟನಾದ, ದೇವಕಿರಮಣ–ದೇವಕೀದೇವಿಯ ಪುತ್ರನಾದ[1], ಲೋಕಾರಾಧ್ಯನಾದ, ಸರ್ವೋತ್ತಮನಾದ, ದಾನವಹರಣ–ದ್ವೇಷಿಗಳಾದ ದೈತ್ಯರ ಸಂಹಾರಕನಾದ, ಜಿತ ಮರಣ–ಕ್ಷರಜೀವರೋಪಾದಿಯಲ್ಲಿ ದೇಹಗಳ ಧರಿಸಿ ಮರಣರೂಪವಾದ ತಥಾ, ತ್ಯಾಗ ರೂಪವಾದ ಮರಣರಹಿತನಾದವ. ಇಂಥಾ ಪರಮಾತ್ಮ, ಸೃಷ್ಟಿ, ಸ್ಥಿತಿ, ಸಂಹಾರಾದಿಗಳ ಮಾಡುತ್ತಾ, ಭಕ್ತರ ಸಂರಕ್ಷಣೆ ಮಾಡುತ್ತಾನೆಂದು ತಾತ್ಪರ್ಯ.

[1] ಇದೇ ವ್ಯಾಖ್ಯಾನಕಾರರು ೮ ನೇ ಸಂಧಿ ೨೫ ನೇ ಶ್ಲೋಕದ ವಿವರವನ್ನು ಕೊಡುವ ಸಂದರ್ಭದಲ್ಲಿ "ದೇವಕೀ" ಪದಕ್ಕೆ ಶ್ರೀ ಲಕ್ಷ್ಮೀದೇವಿಯರಪರ ಅರ್ಥಮಾಡಿದ್ದಾರೆ. ಇಲ್ಲಿ ಹೇಳಿರುವ ಅರ್ಥ ಪ್ರಕ್ಷಿಪ್ತವಿರಬಹುದು.

**ಮೂಾಸ ಒಂದಕೆ ಪ್ರತಿದಿವಸದಲಿ ।**
**ಶ್ವಾಸಗಳು ಅಹವಷ್ಟ ಚತ್ವಾ ।**
**ರಿಂಶತಿಸಹಸ್ರಾಧಿಕಾರು ಸುಲಕ್ಷಸಂಖ್ಯೆಯಲಿ ॥**
**ಹಂಸನಾಮಕ ಹರಿಯ ಷೋಡಶ ।**
**ಈ ಶತಾಬ್ದದಿ ಭಜಿಸೆ ಒಲಿವ ದ ।**
**ಯಾಸಮುದ್ರ ಕುಚೇಲಗೊಲಿದಂದದಲಿ ದಿನದಿನದಿ ॥ ೪೨ ॥**

ಸ್ಥೂಲದೇಹದಿಂದ ಆಗತಕ್ಕ ಶ್ವಾಸಗಳು ೧೧೬ ವರುಷಕ್ಕೆ ಆಗತಕ್ಕದ್ದರನ್ನ ಹೇಳತಾರೆ.

ಪ್ರತಿದಿವಸದಲಿ–ಹಗಲು ರಾತ್ರಿ ಸೇರಿ ಒಂದು ದಿನದಲ್ಲಿ, ಶ್ವಾಸಗಳು–ನಾಸಿಕಾ ದ್ವಾರದಿಂದ ಬಿಡುವ ಶ್ವಾಸಗಳು ೨೧,೬೦೦ ಪ್ರಕಾರ, ಮಾಸ ಒಂದಕೆ–ತಿಂಗಳು ಒಂದಕ್ಕೆ, ಆರು ಸುಲಕ್ಷ ಅಧಿಕ–೬,೦೦,೦೦೦ದ ಮ್ಯಾಲೆ ಅಧಿಕ, ಚತ್ವಾರಿಂಶತಿ–೪೦,೦೦೦, ಅಷ್ಟಸಹಸ್ರ–೮,೦೦೦, ಅಂತು (೬,೪೮,೦೦೦) ಆರು ಲಕ್ಷದ ನಲವತ್ತೆಂಟು ಸಾವಿರ, ಸಂಖ್ಯೆಯಲಿ ಆಹವು–ಸಂಖ್ಯಾದಿಂದ ಆಗೋವಾಗತವೆ. **ಹಂಸ**ನಾಮಕ ಹರಿಯ–"ನಿತ್ಯಂ ಹೀನೋऽಖಿಲೈಃ ದೋಷೈಃ ಸಾರರೂಪೋ ಯತೋ ಹರಿಃ । **ಹಂಸ** ಇತ್ಯುಚ್ಯತೇ ತಸ್ಮಾದ್ವಾಯುಸ್ಥಃ ಶುಚಿಷನ್ಮತಃ ॥" ಎಂತ ಕಾಠಕೋಪನಿಷದ್ಭಾಷ್ಯಾನುಸಾರ ನಿರಂತರ ದಲ್ಲೂ ಸರ್ವದೋಷದಿಂದ ದೂರನಾದ **ಹಂಸ**ನಾಮಕನಾದ, **ಹಂಸ** ಎಂತ ಎರಡು ವರ್ಣ ವಿಶಿಷ್ಟವಾಗಿ ಹೊರಡತಕ್ಕ ಶ್ವಾಸೋಚ್ಛ್ವಾಸಗಳಿಗೆ ಬಿಂಬನಾದ ಹರಿಯ ತಿಳಿದು, **ಈ**–ಈ ಶ್ವಾಸಗಳು, ಶತ–ನೂರು, ಷೋಡಶ–ಹದಿನಾರು, ಅಂತು ನೂರಾಹದಿನಾರು, ಅಬ್ದದಿ–ಮನುಷ್ಯನ ಆಯುರ್ಮಾನ ೧೧೬ ವರ್ಷದಲ್ಲಿ ಆಗತಕ್ಕ ಶ್ವಾಸಗಳು ತೊಂಬತ್ತು ಕೋಟಿ ಇಪ್ಪತ್ತು ಲಕ್ಷ ಹದಿನಾರು ಸಾವಿರ ಆಗತವೆ. ಇಷ್ಟು **ಹಂಸ**ರೂಪಗಳು ಭೂತ ಭವಿಷ್ಯ ದ್ವರ್ತಮಾನ ಕಾಲಗತ ಶ್ವಾಸಗಳಲ್ಲಿ ಅನುಸಂಧಾನ ಮಾಡಿ ತಿಳದು, ಭಜಿಸೆ ದಿನದಿನದಿ–ಪ್ರತಿದಿನದಲ್ಲೂ ಭಜನ ಮಾಡಿದರೆ ಮೂಲ ರೂಪಿಯಾದ **ಹಂಸ**ನಾಮಕ ಹರಿಗೆ ಪ್ರತಿ ದಿನದಲ್ಲಿ ಬಿಡತಕ್ಕ ಶ್ವಾಸಗಳು ಕೆಲವು ಪೂಜಾ ಸಾಧನಗಳಾಗಿನ್ನು ಈ ಪ್ರಕಾರ ಪರಮಾ ತ್ಮಗೆ ಪ್ರೀತಿಯಾಗತವೆ. ಈ ರೀತ್ಯಾ ತಿಳದು ಉಪಾಸನಾ ಮಾಡತಾ ಬಂದರೆ, ದಯಾ ಸಮುದ್ರ–ಕರುಣಾಸಾಗರನಾದ ಶ್ರೀ ಪರಮಾತ್ಮ, ಕುಚೇಲಗೊಲಿದಂದದಲಿ–ಸುಧಾ ಮಗೆ ಪ್ರತ್ಯಕ್ಷನಾದ ರೀತಿಯಿಂದ, ಒಲಿವ–ತನ್ನ ಸಂದರ್ಶನ ಕೊಡೋವನಾಗತಾನೆ ಎಂತ ತಾತ್ಪರ್ಯ.

**ಸ್ಥೂಲದೇಹದೊಳಿದ್ದು ವರುಷಕೆ ।**
**ಏಳಧಿಕ ಎಪ್ಪತ್ತು ಲಕ್ಷದ ।**
**ಮೇಲೆ ಎಪ್ಪತ್ತಾರುಸಾವಿರ ಶ್ವಾಸಜಪಗಳನು ॥**

**ಗಾಳಿದೇವನು ಕರುಣದಲಿ ಈ ।**
**ರೇಳುಲೋಕದೊಳುಳ್ಳ ಚೇತನ ।**
**ಜಾಲದೊಳು ಮಾಡುವನು ತ್ರಿಜಗದ್ವ್ಯಾಪ್ತ ಪರಮಾಪ್ತ ॥ ೪೩ ॥**

ಶ್ವಾಸಜಪ ಆಗತಕ್ಕದ್ದು ಸ್ಥೂಲ ದೇಹದಲ್ಲಿ ಎಂತ ಹೇಳತಾರೆ.

ಗಾಳಿದೇವನು–ಜೀವೋತ್ತಮರಾದ ವಾಯುದೇವರು, ಸ್ಥೂಲದೇಹದೊಳಿದ್ದು–ಸ್ಥೂಲ ದೇಹದೊಳಿದ್ದವರಾಗಿ, ವರುಷಕೆ–ವರುಷ ಸಾಂಕೇತವಾದ ೩೬೦ ದಿನಕ್ಕೆ, ದಿನ ಒಂದಕ್ಕೆ ೨೧,೬೦೦ ಶ್ವಾಸದ ಮ್ಯಾರಿಗೆ, ಎಪ್ಪತ್ತು ಲಕ್ಷದ–(೭೦,೦೦,೦೦೦) ಎಪ್ಪತ್ತು ಲಕ್ಷ, ಏಳಧಿಕ–(೭,೦೦,೦೦೦) ಅಧಿಕ ಏಳುಲಕ್ಷದ, ಮೇಲೆ ಎಪ್ಪತ್ತಾರುಸಾವಿರ–ಎಂದರೆ ೭೭,೭೬,೦೦೦ ಅಂತು ಮೊತ್ತ ಇಷ್ಟು, ಶ್ವಾಸಜಪಗಳನು–ಈ ಎಪ್ಪತ್ತೇಳು ಲಕ್ಷದ ಎಪ್ಪತ್ತಾರು ಸಾವಿರ ಶ್ವಾಸ ಜಪಗಳನ್ನು, ಕರುಣದಲಿ–ಪರಮಾತ್ಮನ ಅನುಗ್ರಹದಿಂದ, ಈರೇಳು ಲೋಕದೊಳುಳ್ಳ–೧೪ ಲೋಕದೊಳು ವಿದ್ಯಮಾನರಾದ, ಚೇತನಜಾಲದೊಳು–ತ್ರಿವಿಧರಾದ ಪ್ರಾಣಿಗಳ ಸ್ಥೂಲ ಶರೀರಗಳಲ್ಲಿ, ಮಾಡುವನು–ಅವರವರ ಯೋಗ್ಯತಾನುಸಾರ ಶ್ವಾಸಕಾರ್ಯ ನಡಸತಾ ಇದ್ದಾರೆ. **'ಹಂಸ'** ಎಂಬ ಎರಡು ವರ್ಣಾತ್ಮಕ ಮಂತ್ರ ಮುಕ್ತಿಯೋಗ್ಯರು, ಈ ಶ್ಲೋಕಕ್ಕೆ ಪೂರ್ವ ಶ್ಲೋಕೋಕ್ತ ಪ್ರಮಾಣಾರ್ಥದಿಂದಲೂ, ಇನ್ನೂ **'ಸೋಹಂ'** ಎಂದರೆ **'ಸಃ'**–ತದಂತರ್ಯಾಮಿಯಾದಂಥಾ ಭಗವಂತನೇ, **'ಅಹಂ'**–ಮದಂತರ್ಯಾಮಿಯಾದಂಥಾವನು ಎಂದು ಅಂತರ್ಯಾಮಿ ಪರತಯಾದಿಂದಲೂ, **'ಸ್ವಾಹಾ'**–ಎಂದರೆ ಉಪಾಸನಾ ಮಾಡತೇನು ಎಂತ, ಈ ಪ್ರಕಾರ ಉಪಾಸನಾ ಮಾಡತಾರೆ. ನಿತ್ಯಸಂಸಾರಿಗಳು, ತಮೋಯೋಗ್ಯರು, ಇದಕ್ಕೆ ವ್ಯತ್ಯಾಸವಾಗಿ ಉಪಾಸನಾ ಮಾಡತಾರೆ. ಆದ್ದರಿಂದ ಒಂದು ಮಂತ್ರವೇ ತ್ರಿವಿಧರಿಗೆ ತ್ರಿವಿಧ ಫಲ ಕೊಡುತ್ತದೆ. ತ್ರಿಜಗದ್ವ್ಯಾಪ್ತ–ಈ ವಾಯುದೇವರು ತ್ರಿವಿಧಜೀವರ ಸ್ಥೂಲದೇಹದಲ್ಲಿ ವ್ಯಾಪ್ತರಾಗಿ ಶ್ವಾಸಕಾರ್ಯ ನಡಸತಾ, ಪರಮಾಪ್ತ–ಪರಮಾತ್ಮಗೆ ಕೇವಲ ಭಕ್ತರಾದ ಭಗವದ್ಭಕ್ತರಿಗೆ ಪರಮ ಮಿತ್ರರಾಗಿ ಇದ್ದಾರೆಂದು ತಾತ್ಪರ್ಯ.

" **ಓಂ ಹಂಸಃ ಸೋಽಹಂ ಸ್ವಾಹಾ** " ಎಂತ ಮೂಲಮಂತ್ರ. ಈ ಮಂತ್ರವನ್ನ ಶ್ರೀ ವಾಯುದೇವರು ಶ್ವಾಸಮಂತ್ರ ಜಪವಾಗಿ ಮಾಡತಾರೆ. ಈ ಮಂತ್ರವನ್ನ "ಪೂರ್ವೇದ್ಯುಃ ಪ್ರಾತರಾರಭ್ಯ ಅದ್ಯ ಸೂರ್ಯೋದಯಪರ್ಯಂತಂ ಮದ್ದೇಹಸ್ಥಿತ ಮುಖ್ಯಪ್ರಾಣೇನ ಮಯಾ ಚ ಕೃತೇನ ಷಟ್‌ಶತಾಧಿಕಏಕವಿಂಶತ್ಸಹಸ್ರಾತ್ಮಕಶ್ವಾಸ ರೂಪಹಂಸಮಂತ್ರಜಪೇನ ಭಗವಾನ್ ಹಂಸರೂಪೀ ಶ್ರೀ ಲಕ್ಷ್ಮೀನಾರಾಯಣಃ ಪ್ರೀಯತಾಂ । ಶ್ರೀಕೃಷ್ಣಾರ್ಪಣಮಸ್ತು ॥" ಎಂತ ಶ್ರೀ ವಾಯುದೇವರೂನೂ, ಅಧಿಕಾರಿಗಳೂನೂ ಮಾಡಿ, ಶ್ರೀಪರಮಾತ್ಮಗೆ ಸಮರ್ಪಣ ಮಾಡತಾರೆ. ಅಧಿಕಾರಿಗಳಾದ ತ್ರಿವಿಧ ಜೀವರಿಗೆ ಅವರವರ ಯೋಗ್ಯತಾನುಸಾರ ಫಲವಾಗತದೆ. ಈ ಹಂಸಮಂತ್ರ ಮೂರ

ಪ್ರಕಾರ :– **'ಹಂಸಃ', 'ಸೋಽಹಂ', 'ಸ್ವಾಹಾ'** ಎಂತ. ತಂತ್ರಸಾರದಲ್ಲಿ "ವಿಯತ್ಸ ಇತಿ ಯುಗ್ಮಾರ್ಣೋ ವಿಪರೀತಶ್ಚ ಸ ಸ್ಮೃತಃ | ವಿಸರ್ಗಹೀನೋ ವೇತಶ್ಚ ಬಿಂದುಹೀನೋತ್ತರಸ್ತಥಾ | ತ್ರಯ ಏತೇ ಮಹಾಮಂತ್ರಾಃ ಪುರುಷಾರ್ಥಚತುಷ್ಟಯೇ | ಕಲ್ಪವೃಕ್ಷಾಃ ಪ್ರಿಯಾ ವಿಷ್ಣೋರ್ವಿಶೇಷಜ್ಞಾನದಾಯಕಾಃ | ತೈರೇವ ತು ದ್ವಿರಾವೃತ್ತೈರಂಗಮೇಷಾಂ ಪ್ರಕೀರ್ತಿತಂ | ವಿಯದಿತಿ ಅತ್ರ ವಿಯತ್ ಆಕಾಶಬೀಜಂ **'ಹ'**ಕಾರ ಇತ್ಯರ್ಥಃ | ಸ ಚ ಬಿಂದುಸಹಿತ ಇತಿ ದ್ರಷ್ಟವ್ಯಂ ಬಿಂದುಹೀನ ಇತಿ ವಕ್ಷ್ಯಮಾಣತ್ವಾತ್ | ತತಃ ಸಃ ವಿಸರ್ಗಸಹಿತಃ **ಸ**ಕಾರ ಇತ್ಯರ್ಥಃ | ವಿಸರ್ಗಹೀನ ಇತಿ ವಕ್ಷ್ಯಮಾಣತ್ವಾತ್ | ಅನೇನ **'ಹಂಸಃ'** ಇತಿ ಯುಗ್ಮವರ್ಣೋ | ದ್ವ್ಯಕ್ಷರಃ ಮಂತ್ರಃ ಉಕ್ತೋ ಭವತಿ ||೧|| **ಸಃ ಹಂಸ** ಇತಿ ದ್ವ್ಯಕ್ಷರೋ ಮಂತ್ರಃ ವಿಪರೀತಃ ವ್ಯುತ್ಕ್ರಮೇಣ ಉಚ್ಚಾರಿತಶ್ಚೇತ್ **ಸೋಽಹ**ಮಿತ್ಯಪಿ ದ್ವ್ಯಕ್ಷರಃ ದ್ವಿತೀಯೋ ಮಂತ್ರಃ ಸ್ಮೃತಃ || ೨ ||

**'ಹಂಸಃ'** ಇತಿ ಅಕ್ಷರಯೋಃ ವ್ಯುತ್ಕ್ರಮೇಣ ಉಚ್ಚಾರಣೇ ಸತಿ ಸಃ **'ಹಂ'** ಇತಿ ಭವತಿ | ತತ್ರ ಸಕಾರವಿಸರ್ಗಸ್ಯ ಸ್ಥಾನಿವದ್ಭಾವೇನ ಸಕಾರತ್ವಾತ್ ತಸ್ಯ ಸಸಜುಷೋ ರುರಿತಿ ರುತ್ವೇ ತಸ್ಯ (ಚ) ಹಶಿ ಚೇತ್ಯುತ್ವೇ (ಚ) **'ಸೋಽಹಮಿತಿ'** ಭವತೀತಿ ಭಾವಃ | **'ಸಃ ಹಂ'** ಇತ್ಯತ್ರೈವ ಸಃ ಸಕಾರಃ ಸರ್ಗಹೀನಃ ಸರ್ಗೇಣ ವಿಸರ್ಗೇಣ ಹೀನಃ ರಹಿತಃ ಕರ್ತವ್ಯಃ | ಉಪಲಕ್ಷಣಮೇತತ್ ಅಕಾರರಹಿತಶ್ಚ ಕಾರ್ಯಃ | ವೇತಶ್ಚ | ವಾಕಾರೇಣ ಇತಃ ಯುಕ್ತಶ್ಚ ಕಾರ್ಯಃ | ತತಶ್ಚ **ಸ್ವಾ** ಇತಿ ಭವತಿ | ಅಯಂ ಚ ಬಿಂದುಹೀನೋತ್ತರಃ | ಬಿಂದುನಾ ಅನುಸ್ವಾರೇಣ ರಹಿತಃ | ಉಪಲಕ್ಷಣಮೇತತ್ | ಆಕಾರೇಣ ಸಹಿತಶ್ಚ ಉತ್ತರಃ **ಸ್ವಾ**ನಂತರಂ ಸ್ಥಿತಃ **'ಹಮಿತಿ'** ವರ್ಣಃ ಯಸ್ಮಿನ್ ಸ ತಥೋಕ್ತಃ | ತಥಾ ಪೂರ್ವವದೇವ ದ್ವ್ಯಕ್ಷರಃ **'ಸ್ವಾಹಾ'** ಇತಿ ತೃತೀಯೋ ಮಂತ್ರಃ ಸ್ಮೃತ ಇತ್ಯರ್ಥಃ | ತಥಾ ಚ **'ಹಂಸಃ' 'ಸೋಽಹಂ' 'ಸ್ವಾಹಾ'** ಮಂತ್ರತ್ರಯಾತ್ಮಕಃ ಮಾಲಾರೂಪಃ ಷಡಕ್ಷರ**'ಹಂಸ'**ಮಂತ್ರಃ ಉದ್ಧೃತೋ ಭವತಿ || "

ಇದಕ್ಕೆ ಅರ್ಥ :– ಹಕಾರ ಎಂಬುವದು ಆಕಾಶಬೀಜವಾದದ್ದು. ಅದು ಬಿಂದು ಸಹಿತವಾಗಿ ಇರುವಕಡಿಯಿಂದ ಹಂ ಎಂತ ಆಗಿ ನಂತರ ವಿಸರ್ಗಸಹಿತ ಸಕಾರ ಎಂತ ಅರ್ಥ. ವಿಸರ್ಗಯುಕ್ತವಾದರೇ 'ಹಂಸಃ' ಎಂಬುವ ಪ್ರಥಮ ಮಂತ್ರವಾಯಿತು. ಅದೇ ಹಂಸಮಂತ್ರವನ್ನು ವ್ಯುತ್ಕ್ರಮವಾಗಿ ಉಚ್ಚಾರಮಾಡಿದರೆ 'ಸೋಽಹಂ' ಎಂತ ದ್ವಿತೀಯ ಮಂತ್ರವಾಗುತ್ತದೆ. ಹಂಸಃ ಎಂಬುವ ಅಕ್ಷರದಲ್ಲಿ ಸಕಾರದ ವಿಸರ್ಗ ಸ್ಥಾನಿವದ್ಭಾವದಿಂದ ಸಕಾರವಾಗುತ್ತದೆ. ಅದಕ್ಕೆ (ಸಸಜುಷೋ ರುರಿತಿ ರುತ್ವೇ ತಸ್ಯ ಚ ಹಶಿ ಚೇತ್ಯುತ್ವೇ ಚ) ಎಂಬುವ ರೀತಿಯಿಂದ ಸೋಽಹಂ ಎಂಬುವ ದ್ವಿತೀಯ ಮಂತ್ರವಾಯಿತು. ಸಃ ಹಂ ಎಂಬುವದರಲ್ಲಿ ಸಃ ಸಕಾರಕ್ಕೆ ಸರ್ಗಹೀನವಾಗಿ, ಸರ್ಗ ವಿಸರ್ಗ ಹೀನವಾಗಿ 'ವೇ'ಗೆ ವಕಾರಯುಕ್ತವಾದರೆ ಸ್ವಾ ಎಂತ ಆಗುತ್ತದೆ. ಇದು ಬಿಂದುಹೀನೋತ್ತರವು. ಬಿಂದುವಿಂದಲೂ, ಅನುಸ್ವಾರರಹಿತವಾಗಿನ್ನೂ ಆಕಾರದಿಂದ ಸಹಿತವಾಗಿ ಅನಂತರದಲ್ಲಿ ಇರುವದ

ರಿಂದ ಹ ಎಂಬ ವರ್ಣವಾಯಿತು. ಪೂರ್ವದಂತೆ ಅಕ್ಷರದ್ವಯವೂ ಸೇರಿ ಸ್ವಾಹಾ ಎಂಬುವ ಮೂರನೇ ಮಂತ್ರವಾಯಿತು. ಷಡಕ್ಷರಯುಕ್ತವಾದ ಹಂಸಃ, ಸೋಽಹಂ, ಸ್ವಾಹಾ ಎಂಬುವ ಮಂತ್ರತ್ರಯಾತ್ಮಕವಾಯಿತು. ಇದಕ್ಕೆ ಅರ್ಥವೇನೆಂದರೆ :—

ಬೃಹದಾರಣ್ಯಭಾಷ್ಯೇ "ಶರೀರಾನಭಿಮಾನೀ ಯೋ ಹೃದಿ ಸಂಸ್ಥೋ ಜನಾರ್ದನಃ | ಅಭಿಮಾನವತೋ ದೇಹೇ ಜೀವಸ್ಯ ಸ ನಿಯಾಮಕಃ | ಸ ಏವ ಸೂರ್ಯಸಂಸ್ಥಶ್ಚ ಹಂಸಃ ಸೋಽಹಮಿತಿ ಶ್ರುತಃ | ಹಂತೃತ್ವಾದ್ಧ್ವಂಸನಾಮಾಸೌ ಸೋಹಂ ಚಾಸಾವಹೇ ಯತಃ | ಸ ಏವ ಸೂರ್ಯಸಂಸ್ಥೇನ ರೂಪೇಣೈವಾಕ್ಷಿಣಿ ಸ್ಥಿತಃ | ಅತೋಽಹಂ ಬ್ರಹ್ಮಾಸ್ಮೀತ್ಯಾದಿಷ್ವಹಂಶಬ್ದೋ ಅಹೇಯತ್ವವಾಚೀತಿ ಸಿದ್ಧಂ | ಅಹಮೇಷೋ ಹ್ಯಹೇಯತ್ವಾಜ್ಜೀವೇನ ಸಹಭಾವತಃ | ಅಸಾವಹರಿತಿ ಪ್ರೋಕ್ತಃ ಸರ್ವಲೋಕಪ್ರಕಾಶನಾತ್ | ಪ್ರಾಣೇ ಸ್ಥಿತೋ ಯಃ ಪುರುಷಃ ಸೋಽಸಾವಹಮಿತಿ ಸ್ಮೃತಃ | ಅಹೇಯತ್ವಾದಸುತ್ವಾಚ್ಚ ಮೇಯತ್ವಾದಸ್ಮಿನಾಮಕಃ | ಜುಹುರಾಣಮಲ್ಪಂ ಕುರ್ವತ್ ನ ಹಿ ಅಹಮಿಮಂ ಜಾನಾತೀತಿವತ್ | ಸರ್ವತ್ರಾಪ್ಯಹಂಶಬ್ದೋಽಹೇಯತ್ವ ವಾಚ್ಯೇವ ||" ಇತಿ ಛಾಂದೋಗ್ಯ ಭಾಷ್ಯೇ.

ಅಹಂ ಎಂಬುವ ಶಬ್ದಕ್ಕೆ "ಹಂ ನಾಮಾ ಹನ್ಯಮಾನತ್ವಾಜ್ಜೀವಸ್ಯ ಸಮುದಾಹೃತಂ | ಜೀವಾದನ್ಯೋ ಯತೋ ವಿಷ್ಣುಃ ಅಹಂನಾಮಾ ತತಃ ಸ್ಮೃತಃ ||" ಇತಿ ಐತರೇಯ ಭಾಷ್ಯೇ.

"ಅಹೇಯತ್ವಾದಹಂ ವಿಷ್ಣುಃ ಸ ತು ಸರ್ವಾಂತರತ್ವತಃ |" ಇತಿ ಐತರೇಯ ಭಾಷ್ಯೇ. ಸ್ವಾಹಾ ಎಂಬುವುದಕ್ಕೆ ಋಗ್ಭಾಷ್ಯೇ :— ಜ್ಞಾನಂ ತು ಚೇತನಂ ಸ್ವಾಹಾ ಸ್ವಭಾಗಗತಿಮಾನ್ ಸ್ಮೃತಃ ||

ಇನ್ನೂ ಸ್ವಾಹಾ ಎಂಬುದಕ್ಕೆ ಉಪಾಸನಕ್ಕೂ, ಸಮರ್ಪಣಕ್ಕೂ ಆರ್ಯರು ಅರ್ಥ ಹೇಳುತ್ತಾರೆ :— ಹಂಸಃ ಸಃ ಅಹಂ ಸ್ವಾಹಾ ಎಂತ ಪದ ಮಾಡಿಕೋಬೇಕು. ಸಃ— ಪ್ರಸಿದ್ಧನಾದ ಹಂಸಃ—ಹಂಸರೂಪೀ ಪರಮಾತ್ಮ, ಅಹಂ—ನಾನು, ಎರಡೂ ವಸ್ತುಗಳು ಸತ್ಯ. ನಾನು ಆ ಪರಮಾತ್ಮಗೆ ಭೃತ್ಯ. ನಾವಿಬ್ಬರೂ ಅವಿಯೋಗರಾಗಿ ಇದ್ದೇವು ಎಂತ ಶ್ರೀ ವಾಯುದೇವರು ಉಪಾಸನ ಮಾಡತಾರೆ, ಎಂತಲೂ, ಆ ಪ್ರಕಾರ ಅಧಿಕಾರಿಯಾದವರು ತಿಳದು ಉಪಾಸನ ಮಾಡಬೇಕೆಂತಲೂ, ಸೋಹಂ ಎಂದರೆ ಸಃ ತದಂತರ್ಯಾಮಿಯಾದ ಶ್ರೀಪರಮಾತ್ಮನೇ ಅಹಂ ಮದಂತರ್ಯಾಮಿ ಎಂತಲೂ, ಸ್ವಾಹಾ ಎಂದರೆ ಈ ಹಂಸರೂಪೀ ಪರಮಾತ್ಮಗೂ, ಸ್ವಕೀಯವಾದ ವ್ಯೂಹ ರೂಪಗಳಿಗೆ ಅಭೇದ ಎಂತಲೂ, ಈ ಪ್ರಕಾರ ಮುಕ್ತಿಯೋಗ್ಯರ ಉಪಾಸನ || ೧ || ನಿತ್ಯ ಸಂಸಾರಿಗಳು ಶ್ರೀ ಹಂಸನಾಮಕ ಪರಮಾತ್ಮಗೂ, ನನಗೂ ಭೇದ ಎಂತಲೂ, ಆನಂದದಲ್ಲಿ ತಾರತಮ್ಯವಿಲ್ಲದೆ ಜೀವ ಪರಮಾತ್ಮರು ಸಮಾನ ಎಂತಲೂ ಅವರ ಉಪಾಸನ || ೨ || ತಮೋಯೋಗ್ಯರು ಶ್ರೀ ಹಂಸರೂಪಿಯಾದ ಪರಮಾತ್ಮಗೂ ತನಗೂ ಅಭೇದಾ ಎಂತಲೂ,

ಅವನೇ ನಾನು ಎಂತಲೂ ಅವರ ಉಪಾಸನ || ೩ || ಇನ್ನು ಮುಕ್ತಿಯೋಗ್ಯರು, 'ಭೂ' ಶ್ರೀ ಹಂಸನಾಮಕ ಪರಮಾತ್ಮ ಗುಣಪೂರ್ಣನೆಂತಲೂ, ತಮೋಯೋಗ್ಯರು 'ಅಭೂ' ಅತ್ಯಂತವಾಗಿ ಅಪೂರ್ಣನೆಂತಲೂ, ನಿತ್ಯ ಸಂಸಾರಿಗಳು 'ಅಭೂ' ಎಂದರೆ ಉಭಯಾತ್ಮಕ ವಾಗಿ ಸಂದೇಹ ಜ್ಞಾನದಿಂದಲೂ ಶ್ವಾಸ ಬಿಡತಾ ಇರತಾರೆ. ಇದರ ಗುಣ ಆ, ಆ ಜೀವರ ನಿದ್ರಾ ಕಾಲದಲ್ಲಿ ಜ್ಞಾನಿಗಳಿಗೆ ವ್ಯಕ್ತವಾಗಿ ತೋರತದೆ ಎಂತ ತಾತ್ಪರ್ಯ.

**ಈರೆರಡು ದೇಹಗಳೊಳಿದ್ದು ಸ ।**
**ಮೀರದೇವನು ಶ್ವಾಸಜಪ ನಾ ।**
**ನೂರಧಿಕವಾಗಿಪ್ಪ ಎಂಭತ್ತಾರುಸಾಹಸ್ರ ।**
**ತಾ ರಚಿಸುವನು ದಿವಸ ಒಂದಕೆ ।**
**ಮೂರುವಿಧ ಜೀವರೊಳಗಿದ್ದು ಖ ।**
**ರಾರಿ ಕರುಣಾಬಲವಿದೆಂತುಟೊ ಪವನರಾಯನೊಳು । ೪೪ ।**

ವಾಯುದೇವರು ನಾಲ್ಕು ದೇಹಗಳಲ್ಲಿ ಹಂಸಮಂತ್ರ ಜಪ ಮಾಡತಾರೆಂತ ಹೇಳತಾರೆ.

ಸಮೀರದೇವನು — ಜೀವೋತ್ತಮರಾದ ವಾಯುದೇವರು, ಈರೆರಡು—ನಾಲ್ಕು, ದೇಹಗಳೊಳಗಿದ್ದು—ಸ್ಥೂಲ ದೇಹಗಳೊಳಗಿದ್ದು, ಎಂದರೆ ನಾಲ್ಕು ಶರೀರಗಳು ದಾವ ವೆಂದರೆ :— ೧) ಅಧಿಕಾರಿಯ ಸ್ಥೂಲದೇಹ ಒಂದು, ೨) ಈ ಸ್ಥೂಲದೇಹದಲ್ಲಿ ಸತ್ತ್ವ ಕಾರ್ಯಪ್ರವರ್ತಕರಾದ ದೇವತೆಗಳ ಸ್ಥೂಲದೇಹ ಒಂದು, ೩) ರಜೋಗುಣ ಕಾರ್ಯ ಪ್ರವರ್ತಕರಾದ ನಿತ್ಯ ಸಂಸಾರಿಗಳ ಸ್ಥೂಲದೇಹ ಒಂದು. ೪) ತಮೋಗುಣ ಕಾರ್ಯ ಪ್ರವರ್ತಕರಾದ ತಮೋಯೋಗ್ಯರ ಸ್ಥೂಲದೇಹ ಒಂದು. ಅಂತು ನಾಲ್ಕು. ನಮ್ಮ ದೇಹ ಸಹ ನಾಲ್ಕು ದೇಹಗಳಲ್ಲಿ ಮಿಳಿತರಾಗಿರುವ ನಾಲ್ಕೂ ಮಂದಿಯ ಸ್ಥೂಲ ದೇಹಗಳಲ್ಲಿ ಎಂತ ತಾತ್ಪರ್ಯ. ಮ್ಯಾಲಿನ ೪೩ನೇ ಶ್ಲೋಕದಲ್ಲಿ, ಸ್ಥೂಲ ದೇಹದಲ್ಲಿ ಶ್ವಾಸ ಜಪ ಮಾಡಸತಾರೆ ಎಂತ ಹೇಳಿ, ವರ್ತಮಾನ ೪೪ನೇ ಶ್ಲೋಕದಲ್ಲಿ ಈರೆರಡು ದೇಹ ಎಂತ ಹೇಳಿ ಇರೋಣದರಿಂದ, ಪೂರ್ವೋಕ್ತ ಸಂಗತಿ ರೀತ್ಯಾ ಸ್ಥೂಲ ದೇಹಗಳೇ ಗ್ರಾಹ್ಯ. ತದನ್ಯ ದೇಹಗಳು ಗ್ರಾಹ್ಯವಲ್ಲ. ಅಥವಾ ಸ್ವೇದಜ, ಉದ್ಭಿಜ, ಅಂಡಜ, ಜರಾಯುಜ, ಈ ನಾಲ್ಕು ದೇಹಗಳಲ್ಲಿ ಎಂತಲೂ ಅರ್ಥವೇ. ಈ ವಾಯುದೇವರು ನಾಲ್ಕು ರೂಪ ಗಳಿಂದ ಅಧಿಕಾರಿಯ ದೇಹಸ್ಥರಾದ ಒಬ್ಬೊಬ್ಬರಲ್ಲಿ, ದಿವಸ ಒಂದಕ್ಕೆ—ಒಂದು ದಿವಸಕ್ಕೆ ೨೧,೬೦೦ ಜಪಗಳ ಮ್ಯಾರಿಗೆ ನಾಲ್ಕು ವಿಧ ಸ್ಥೂಲದೇಹ ದ್ವಾರಾ ಒಂದು ದಿವಸಕ್ಕೆ, ಶ್ವಾಸಜಪ—ಹಂಸಾಖ್ಯ ಶ್ವಾಸ ಜಪಗಳ, ನಾನೂರಧಿಕವಾಗಿಪ್ಪ—೪೦೦ ಅಧಿಕವಾದ, ಎಂಭತ್ತಾರು ಸಾಹಸ್ರ—(೮೬,೦೦೦) ಎಂಭತ್ತಾರು ಸಾವಿರ, ಅಂತು (೮೬,೪೦೦) ಎಂಭ ತ್ತಾರು ಸಾವಿರದ ನಾನೂರು ಸಂಖ್ಯಾಕವಾದ ಶ್ವಾಸಜಪಗಳ, ತಾರಚಿಸುವನು—ತಾನು ಒಬ್ಬನೇ ಮಾಡುವನು. ಮೂರುವಿಧ ಜೀವರೊಳಗಿದ್ದು—ತ್ರಿವಿಧ ಜೀವರ ಸ್ಥೂಲಶರೀರ

*

ಗಳಲ್ಲಿದ್ದು ಶ್ವಾಸಕಾರ್ಯ ಮಾಡತಾರೆಂತ ತಾತ್ಪರ್ಯ. ಖರಾರಿ—ಖರಾಸುರಗೆ ಶತ್ರುವಾದ ಶ್ರೀ ಕೃಷ್ಣನ, ಕರುಣಾಬಲವು—ಅಂತಃಕರಣವೆಂಬೋ ಬಲ, ಪವನರಾಯನೊಳು—ಜೀವೋತ್ತಮರಾದ ವಾಯುದೇವರಲ್ಲಿ, ಇದೆಂತುಟೊ—ವಿಶೇಷಾಕಾರವಾಗಿ ಇರೋದಾಗಿದೆ ಎಂತ ತಾತ್ಪರ್ಯ. ಈ ಗ್ರಂಥ ಅಂದರೆ, ಶ್ರೀ ಹರಿಕಥಾಮೃತಸಾರದ ೭ನೇ ಸಂಧಿಯಾದ ಪಂಚತನ್ಮಾತ್ರ ಸಂಧಿಯಲ್ಲಿ, ೩ನೇ ಶ್ಲೋಕದಲ್ಲಿ, ಜೀವ, ಲಿಂಗ, ಅನಿರುದ್ಧ, ಸ್ಥೂಲ, ಎಂತ ನಾಲ್ಕು ಶರೀರ ಎಂತ ಹೇಳಿದ್ದಾರೆ. ೫ನೇ ಶ್ಲೋಕದಲ್ಲಿ ಪೂರ್ವೋಕ್ತ ನಾಲ್ಕು ಶರೀರಗಳೊಳಗೆ, ಸ್ಥೂಲ ಶರೀರದಲ್ಲಿ ಮಾತ್ರ ಹಂಸ ಮಂತ್ರ ಆಗತದೆ ಎಂತ ಹೇಳಿದ್ದಾರೆ. ೭ನೇ ಶ್ಲೋಕದಲ್ಲಿ ನಾಲ್ಕು ಶರೀರಗಳು ಸ್ಥೂಲ ಶರೀರಗಳು ಎಂತ ಹೇಳಿದ್ದಾರೆ. ೯ನೇ ಸಂಧಿಯಾದ ಉದಾತ್ತಾನುದಾತ್ತ ಸಂಧಿಯಲ್ಲಿ ವಾಯುದೇವರಿಗೆ ಲಿಂಗದಲ್ಲಿ, ಸ್ವರೂಪ ದಲ್ಲಿ ಪ್ರವೇಶ ಇಲ್ಲಾ ಎಂತ ಹೇಳಿದ್ದಾರೆ. ಆದಕಡಿಯಿಂದ ಈರೆರಡು ದೇಹಗಳು ಎಂದರೆ, ಸ್ಥೂಲ ದೇಹಗಳೇ ಗ್ರಾಹ್ಯ. ಅಷ್ಟೇ ಹೊರತು ಶ್ವಾಸ (ಅನಿರುದ್ಧ, ಲಿಂಗ, ಸ್ವರೂಪ ದೇಹಗಳ) ಆಯುಃಕಾಲವನ್ನು ಅನುಸರಿಸಿ ಇಲ್ಲ. ಶ್ವಾಸ ನಿರೋಧ ಮಾಡಿ ತಪಸ್ಸು ಮಾಡತಕ್ಕವರು ಬಹುಕಾಲ ಜೀವಿಸಿ ಇದ್ದಾರೆ. ಅದು ಇಲ್ಲದವರು ಅಲ್ಪಕಾಲ ಜೀವಿಸಿ ಇದ್ದಾರೆ. ಆಯುರ್ಮಾನ ನೇಮ ಎಂಬುದು ಸ್ಥೂಲದೇಹಕ್ಕೇವೇ, ಆಯುರ್ವೃದ್ಧಿ ಶ್ವಾಸದಿಂದಲೇ ಆದ ಕಾರಣ, ಶ್ವಾಸಕಾರ್ಯ ಸ್ಥೂಲಶರೀರದಲ್ಲೇವೇ. ಅನ್ಯವಾದ ಶರೀರ ಗಳಲ್ಲಲ್ಲ. ಇದರ ವಿಚಾರ ಶ್ವಾಸಸಂಧಿಯಲ್ಲಿ ವಿಸ್ತಾರವಾಗಿ ಹೇಳಿದ್ದಾರೆ.

**ಶ್ರೀಧವ ಜಗನ್ನಾಥವಿಠಲನು ।**
**ತಾ ದಯದಿ ವದನದೊಳು ನುಡಿದೋ ।**
**ಪಾದಿಯಲಿ ನಾ ನುಡಿದೆನಲ್ಲದೆ ಕೇಳಿ ಬುಧಜನರು ।**
**ಸಾಧುಲಿಂಗಪ್ರದರ್ಶಕರು ನಿ ।**
**ಷೇಧಿಸಿದರೇನಹುದು ಎನ್ನಪ ।**
**ರಾಧವೇನಿದರೊಳಗೆ ಪೇಳ್ವುದು ತಿಳಿದ ಕೋವಿದರು । ೪೫ ।**

ಭಗವದಾಜ್ಞಾದಿಂದಲೂ, ಭಗವಂತ ನನ್ನಲ್ಲಿ ಆವಿಷ್ಟನಾಗಿ ನುಡಿಸಿದ ಗ್ರಂಥವೆಂದು ಹೇಳತಾರೆ.

ಶ್ರೀಧವ—ಲಕ್ಷ್ಮೀದೇವಿಯರಿಗೆ ಪತಿಯಾದ, ಜಗನ್ನಾಥವಿಠಲನು — ಜಗತ್ತಿಗೇ ಸ್ವಾಮಿಯಾದ ಪಾಪಪರಿಹಾರಕನಾದ ಶ್ರೀಪರಮಾತ್ಮನು, ತಾ ದಯದಿ—ತಾನು ಅಂತಃ ಕರಣದಿಂದ, ವದನದೊಳು—ಬಾಯಿ ಒಳಗೆ ಆವಿಷ್ಟನಾಗಿ, ನುಡಿದೋಪಾದಿಯಲಿ—ನುಡಿಸಿ ಧಾಂಗೆ, ನಾನು ನುಡಿದೆನಲ್ಲದೆ—ನಾನು ಉಚ್ಚಾರಮಾಡಿದ್ದೇನೇ ಹೊರತು, ಅನ್ಯಮಾರ್ಗ ದಿಂದ ನುಡಿದ ಗ್ರಂಥವಿದಲ್ಲ. ಕೇಳಿ ಬುಧಜನರು—ಜ್ಞಾನಿಗಳಾದ ಭಗವದ್ಭಕ್ತರು ಕೇಳೋವ ರಾಗಿರಿ. ಈ ಗ್ರಂಥರಚನೆ ಮಾಡಿದ್ದು ಈ ರೀತಿ ಎಂತ ತಾತ್ಪರ್ಯ. ಸಾಧುಲಿಂಗ ಪ್ರದರ್ಶಕರು—ಅಂತಃಶುದ್ಧಿ ಇಲ್ಲದೆ ಬಾಹ್ಯದಲ್ಲಿ, ತಾವು ಕೇವಲ ಸಾಧುಗಳೆಂದು ದೇಹ

ವನ್ನು ಪ್ರದರ್ಶನ ಮಾಡತಕ್ಕವರು, ನಿಷೇಧಗೈಸಿದರೇನಹುದು—ಈ ಕಾರ್ಯವನ್ನು ನಿಷೇಧಮಾಡೋಣದರಿಂದ ಈ ಗ್ರಂಥಕ್ಕೆ ಏನಾದರೂ ಲೋಪ ಬರಲಾರದು. ಎನ್ನಪರಾಧ ವೇನಿದರೊಳಗೆ—ನನ್ನ ಮುಖದಿಂದ ಹೊರಟ ಈ ವಾಕ್ಯಗಳಲ್ಲಿ ಶ್ರೀಮದಾನಂದತೀರ್ಥರ ಸಿದ್ಧಾಂತಕ್ಕೆ ವಿರುದ್ಧವಾದ ಅಪರಾಧವಾಕ್ಯಗಳು ಏನವೆ ? ಇದರೊಳಗೆ ಏನೂ ಇಲ್ಲ. ಹಾಂಗೆ ಇರೋ ಪಕ್ಷಕ್ಕೆ, ತಿಳಿದ ಕೋವಿದರು—ತಿಳಿದ ಜ್ಞಾನಿಗಳು, ಪೇಳ್ವದು—ದೋಷ ವಿದ್ದರೆ ಹೇಳಬಹುದು ಎಂತ ಅರ್ಥ. ದೋಷವಿಲ್ಲವೇನೇ, ದೋಷವಿದ್ದ ಗ್ರಂಥದೋಪಾದಿ ಯಲ್ಲಿ ನಿರಾಕರಣಮಾಡಬಾರದು ಎಂತ ತಾತ್ಪರ್ಯ.

ಸಾಧುಲಿಂಗಪ್ರದರ್ಶಕರು ಅಂದರೆ, ಸಾಧು—ಸಾಧುಗಳಾದ ಜ್ಞಾನಿಗಳೋಪಾದಿ ಯಲ್ಲಿ, ಲಿಂಗಪ್ರದರ್ಶಕರು. ಲಿಂಗ—ಸ್ಥೂಲದೇಹವನ್ನ, ಪ್ರದರ್ಶಕರು—ಅಲಂಕಾರಗಳಿಂದಲೂ ವಾಕ್‌ಝರಿಯಿಂದಲೂ, ವೇದಾಂತವಾಕ್ಯಗಳ ಉಚ್ಚಾರದಿಂದಲೂ, ಜ್ಞಾನಿಗಳೋಪಾದಿ ಯಲ್ಲಿ ಪ್ರದರ್ಶನಮಾಡಿ ಜ್ಞಾನಪೂರ್ವಕವಾಗಿ, ಅಂತಃಶುದ್ಧಿ ಇಲ್ಲದ ಢಾಂಬಿಕರು ಎಂತ ಅರ್ಥ.

ತಮೋಯೋಗ್ಯರಿಗೆ, ನಿತ್ಯಸಂಸಾರಿಗಳಿಗೆ ಅಪರೋಕ್ಷವಿಲ್ಲದೆ ಅವರ ಕರ್ಮನಾಶ ಎಂಬುದು ಹ್ಯಾಂಗೆ ಎಂದರೆ :— ಆಗಾಮಿ, ಸಂಚಿತ, ಪ್ರಾರಬ್ಧ ಎಂತ ತ್ರಿವಿಧ ಕರ್ಮ ತ್ರಿವಿಧರಿಗೆ ಉಂಟು. ತ್ರಿವಿಧಕರ್ಮವು ನಾಶವಾಗಿ ತ್ರಿವಿಧರಿಗೆ ಲಿಂಗಭಂಗವಾಗತದೆ. ತದನಂತರ ಸ್ವರೂಪ ಅಭಿವ್ಯಕ್ತಿಯಾಗಿ ಸ್ವರೂಪಭೋಗಗಳ ಅನುಭವಿಸತಾರೆ. ಸ್ವರೂಪ ಅಭಿವ್ಯಕ್ತಿ ಆಗಬೇಕಾದರೆ ಭಗವದಪರೋಕ್ಷ ಕಾರಣವೆಂತ ಹೇಳೀತೆ, ತಮೋಯೋಗ್ಯ ರಿಗೆ ಭಗವದಪರೋಕ್ಷವಿಲ್ಲ. ಆದಕಾರಣ ತಮೋಯೋಗ್ಯರಿಗೆ ಸ್ವರೂಪ ಅಭಿವ್ಯಕ್ತಿ ಇಲ್ಲ ಎಂತ ಹೇಳಬೇಕಾಗತದೆ. ಹಾಂಗೆ ಹೇಳಿದರೆ ಪ್ರಮಾಣವಿರುದ್ಧವಾಗೋಣವಲ್ಲದೆ ಮುಕ್ತಿ ಯೋಗ್ಯರಿಗೆ ಕೂಡಾ ಭಗವದಪರೋಕ್ಷವಿಲ್ಲದೇನೇ ಸ್ವರೂಪ ಅಭಿವ್ಯಕ್ತಿ ಆಗತದೆ ಎಂತ ಹೇಳಬೇಕಾದೀತು ! ಹೀಗೆ ಒಡಂಬಡೋಣ ಎಂದರೆ ಭಗವದಪರೋಕ್ಷಾರ್ಥ, ಸಾಧನ ಮಾಡಬೇಕು ಎಂತಲೂ, ಸಾಧನಾನಂತರ ಭಗವದ್ದರ್ಶನವಾಗಿ ತದ್ದ್ವಾರಾ ಆಗಾಮಿ ಸಂಚಿತಗಳು ನಾಶವಾಗಿ ಪ್ರಾರಬ್ಧಭೋಗಕ್ಷಯವಾದ ಮೇಲೆ ಲಿಂಗಭಂಗವಾಗಿ ಸ್ವರೂಪ ಅಭಿವ್ಯಕ್ತಿ ಎಂತ ಹೇಳತಕ್ಕ ಪ್ರಮಾಣಕ್ಕೆ ವಿರೋಧ ಪ್ರಾಪ್ತವಾಗುತ್ತದೆ. ದೈತ್ಯರಿ ಗಾದರೋ ಆಗಾಮಿ ಸಂಚಿತಗಳು ನಾಶವಾಗಿ, ಪ್ರಾರಬ್ಧ, ಭೋಗದಿಂದ ಕ್ಷಯವಾಗಿ ಲಿಂಗ ಭಂಗವಾಗಿ ಸ್ವರೂಪ ಅಭಿವ್ಯಕ್ತಿ ಆಗೋಣವೇನೋ ಖರೆ. ಆದ್ದರಿಂದ ಇವರ ಕರ್ಮನಾಶ ಎಂಬುದು ಹ್ಯಾಂಗೆಂದರೆ, ತ್ರಿವಿಧಜೀವರಿಗೆ ತ್ರಿವಿಧಪ್ರಕಾರ ಅಪರೋಕ್ಷ ಉಂಟು. ತ್ರಿವಿಧರೂ ಭಗವದುಪಾಸನ ಮಾಡಿ ಅಪರೋಕ್ಷೀಕರಿಸಿಕೊಂಡೇ, ಆಗಾಮಿ ಸಂಚಿತಗಳು ನಾಶವಾಗಬೇಕು. ಆ ಅಪರೋಕ್ಷಗಳು ಹ್ಯಾಂಗೆ ಹ್ಯಾಂಗೆ ಆಗತವೆ ಎಂದರೆ, ಅವರವರ ಜ್ಞಾನಾನುಸಾರ ಅಪರೋಕ್ಷ ಆಗೋದಾಗತದೆ. ಅವರವರ ಜ್ಞಾನ ಎಂಬುದು ಎಂಥಾ ದ್ದೆಂದರೆ :—

ಮುಕ್ತಿಯೋಗ್ಯರದು ಜ್ಞಾನ ಜೀವ ಪರಮಾತ್ಮ ಬ್ಯಾರೆ ಎಂತಲೂ, ಆನಂದ ತಾರ ತಮ್ಯ ಹೇಳತಕ್ಕ ಜ್ಞಾನ ಮತ್ತು ಪರಮಾತ್ಮ ಸಾಕಾರ ಎಂತಲೂ, ಕೋಟಿಸೂರ್ಯ ಪ್ರಕಾಶ ಎಂತಲೂ, ಪರಮಾತ್ಮಗೂ ಅವನ ಗುಣಾದಿಕ್ರಿಯೆಗಳಿಗೂ ಅಭೇದ ಎಂತಲೂ ಉಪಾಸನ ಮಾಡತಕ್ಕ ಜ್ಞಾನ, ಮುಕ್ತಿಯೋಗ್ಯರದು.

ತಮೋಯೋಗ್ಯರ ಜ್ಞಾನ :– ಜೀವ ಬ್ಯಾರೆ ಪರಮಾತ್ಮ ಬ್ಯಾರೆ ಇಲ್ಲ. ಪರ ಮಾತ್ಮನೇ ಜೀವತ್ವೇನ ಪರಿಣಮಿಸಿ ಅವಿದ್ಯಾ ಅಧಿಷ್ಠಾನ ಮಾಡಿಕೊಂಡು ಜೀವ ಎಂತ ನಟನೆ ಮಾಡತಾ ಇದ್ದಾನೆ ಎಂತಲೂ, ಅವಿದ್ಯಾದಿಂದ ದೂರನಾದ ಜೀವ ಎಂತ ಕರೆಸಿ ಕೊಂಡ ಪರಮಾತ್ಮ, ತನ್ನಲ್ಲೇ ತಾನು ಐಕ್ಯನಾಗುತ್ತಾನೆ ಅಷ್ಟೇ ಹೊರತು ಜೀವ ಬ್ಯಾರೆ ಪರಮಾತ್ಮ ಬ್ಯಾರೆ ಇಲ್ಲವಾದ್ದರಿಂದ, ಜೀವ ಎಂತ ವ್ಯವಹರಿಸತಕ್ಕ ನಾನೇ ಬ್ರಹ್ಮನೇ ಹೊರತು ಬ್ಯಾರೆ ಬ್ರಹ್ಮನೇ ಇಲ್ಲ, ತದನ್ಯಜೀವರೂ ಇಲ್ಲ ಎಂತ ಈ ಪ್ರಕಾರ ಭಗವದುಪಾ ಸನ ಮಾಡತಕ್ಕ ಜ್ಞಾನ ತಮೋಯೋಗ್ಯರದು.

ನಿತ್ಯಸಂಸಾರಿಗಳ ಜ್ಞಾನ :– ಮಿಶ್ರವಾದದ್ದು, ಜೀವ ಪರಮಾತ್ಮರು ಭೇದ ಎಂಬ ಜ್ಞಾನ ಮಾತ್ರ ಉಂಟು ; ತಾರತಮ್ಯಜ್ಞಾನವಾಗಲಿ, ಅಹಂಬ್ರಹ್ಮ ಜ್ಞಾನವಾಗಲಿ ಎರಡ ರಲ್ಲೂ ಧಾರಢ್ಯವಿಲ್ಲದೆ ಭೇದಾಭೇದಗಳಿಂದ ಮಿಶ್ರವಾದ ಜ್ಞಾನ. ಇಂಥಾದ್ದೇ ಭಗವ ದುಪಾಸನ ಮಾಡತಾರೆ. ಇವರಿವರಿಗೆ ಇವರಿವರ ಜ್ಞಾನದಂತೇಲೇ ಭಗವದಪರೋಕ್ಷ, ತ್ರಿವಿಧರಿಗೆ ಉಂಟು.

ತ್ರಿವಿಧರೂನೂ ತಮ್ಮ ತಮ್ಮ ಹೃದಯಾಕಾಶದಲ್ಲಿ ಮಾನಸಪೂಜಾ ಮಾಡ ತಾರೆ. ಶಂಕರರು ಪೂಜಾ ಮಾಡಿದಂತೆ ಅದ್ವೈತವೇದಾಂತ ಗ್ರಂಥಗಳಲ್ಲಿ ಉಕ್ತವಾಗಿ ಅದೆ. ಶಂಕರರು ಮಾನಸಪೂಜಾ ಮಾಡಿ ಆ ಮಾನಸಪೂಜಾಕ್ರಮವನ್ನು ಹೇಳಿದ್ದಾರೆ. ಮತ್ತು ಭಜಗೋವಿಂದಂ ಮೂಢಮತೇ ಎಂತ ಭಗವಂತನ ಭಜನಮಾಡಬೇಕು ಎಂತ ಹೇಳಿದ್ದಾರೆ. ಆದ್ದರಿಂದ ಮಿಥ್ಯಾವಾದಿಯು ಅಪಕ್ವಕಾಲದಲ್ಲಿ ಭಗವದುಪಾಸನೆ ಮಾಡ ತಾನೆ. ಇವನಕಿಂತಲೂ ಉತ್ತಮ, ನಿತ್ಯಸಂಸಾರಿ. ಆದ್ದರಿಂದ ಇವನೂನೂ ಭಗವ ದುಪಾಸನ ಮಾಡತಾನೆ ಎಂಬುದು ಅರ್ಥಾತ್ ಸಿದ್ಧವು. ಆದ್ದರಿಂದ ಮುಕ್ತಿಯೋಗ್ಯರು ಭೇದಸಿದ್ಧಿಗೋಸ್ಕರ ಗುರುದ್ವಾರಾ ಶ್ರವಣಮನನಾದಿಗಳ ಮಾಡಿ ಭಗವದುಪಾಸನಮಾಡಿ, ಮಾನಸಪೂಜಾ ಮಾಡಿ ಭಗವದಪರೋಕ್ಷಿಕರಿಸಿಕೊಳ್ಳುತ್ತಾರೆ. ಆ ಭಗವದುಪಾಸನ ಅವರವರ ಯೋಗ್ಯತಾನುಸಾರ ತೇಜಃಪುಂಜವಾಗಿ ಸಾಕಾರದಿಂದ ಪ್ರಕಾಶಮಾನವಾಗಿ ಕಾಣಿಸುತ್ತಾ, ಕ್ರಮೇಣ ಸ್ಥೂಲ, ಅನಿರುದ್ಧ, ಲಿಂಗ, ಸ್ವರೂಪದೇಹಗತ ಅಪರೋಕ್ಷಗಳ ಸಾಧನಿ ಪೂರ್ತಿ ಆಧಾಂಗೆಲ್ಲಾ ಆಯಾ ದೇಹಗಳಲ್ಲಿ ಭಗವದಪರೋಕ್ಷವಾಗುತ್ತಾ, ಸ್ಪಷ್ಟ ವಾದ ತೇಜಸ್ಸು ಅಭಿವೃದ್ಧಿಯಾಗುತ್ತಾ, ಸಾಕಾರರೂಪ ದರ್ಶನಮಾಡುತ್ತಾ, ಜೀವಾಂತ ರ್ಗತ ಅಪರೋಕ್ಷ ಎಂಬುದು, ಯೋಗ್ಯತಾಕ್ಕೆ ಪೂರ್ಣವಾದ ಭಗವಂತನ ಸಂದರ್ಶನವೂ, ಯೋಗ್ಯತಾಕ್ಕೆ ಪೂರ್ಣವಾದ ಭಗವಂತನ ದೇಹಪ್ರಕಾಶವೂ, ಸ್ಪಷ್ಟವಾಗಿ ಕಾಣೋ

ವಾಗತವೆ. ಜೀವಾಂತರ್ಗತನ ಅಪರೋಕ್ಷಾತ್ಪೂರ್ವದಲ್ಲಿ ಆಗತಕ್ಕ ಅಪರೋಕ್ಷಗಳಿಂದ ಆಗಾಮಿ, ಸಂಚಿತಗಳು, ಪ್ರಾರಬ್ಧ, ಭೋಗದಿಂದ ನಾಶವಾದ ಮ್ಯಾಲೆ ಜೀವಾಂತರ್ಗತನ ಅಪರೋಕ್ಷವಾಯಿತೆಂದರೆ, ಆಗ್ಗೆ ಸ್ವರೂಪಯೋಗ್ಯತಾನುಸಾರ ಸಂಪೂರ್ಣ ಭೇದಜ್ಞಾನ ಸಿದ್ಧಿಯು. ತತ್ಪೂರ್ವದಲ್ಲಿ ಪ್ರಾಕೃತಕರ್ಮಶೇಷ ಇರೋಣದರಿಂದ ಭೇದಜ್ಞಾನ ಎಂಬುದು ಪ್ರಾಚುರ್ಯವಿಶೇಷದಿಂದ ಇರುತ್ತದೇ ಹೊರತು, ಸಂಪೂರ್ಣ ಪ್ರಾಚುರ್ಯ ಇರೋದಿಲ್ಲ.

ತದ್ವತ್, ಆದಿಯಲ್ಲಿ ಎಂದರೆ ಅಪಕ್ವಕಾಲದಲ್ಲಿ, ದೈತ್ಯನು ಅಭೇದಜ್ಞಾನಸಿದ್ಧಿ ಇಲ್ಲದೇ ಅಭೇದ ಎಂತ ಬಾಯಿಂದ ಉಚ್ಚಾರಣೆಮಾಡತಾ, ಭೇದಾನುಷ್ಠಾನ ಮಾಡುತ್ತಾ ಇರುತ್ತಾನೆ. ಭೇದಜ್ಞಾನಿಗಳೋಪಾದಿಯಲ್ಲಿ ದೇವತಾರಾಧನೆಗಳ ಮಾಡತಾ, ಸುಖ ದುಃಖಗಳ ಭೋಗಮಾಡತಾ, ತತ್ಪರಿಹಾರಾರ್ಥ ಭಗವಂತನ ಆರಾಧನೆ ಮಾಡತಾನೆ. ಇದು ಪ್ರತ್ಯಕ್ಷ ಸಿದ್ಧ. ಆದ್ದರಿಂದ ಆ ದೈತ್ಯನಿಗೆ ಐಕ್ಯ ಸಿದ್ಧಿಸಬೇಕಾದರೆ ಶಂಕರರು ಹೇಳಿದ ಪ್ರಕಾರ ಮಾನಸದಲ್ಲಿ ಭಗವದುಪಾಸನ ಮಾಡತಾನೆ. ಏನಂತ ಅಂದರೆ :– ಅವಿದ್ಯಾಧಿಷ್ಠಿತ ನಾಗದೆ ಇರತಕ್ಕ ಬ್ರಹ್ಮನ ಉಪಾಸನೆ ಮಾಡಿ ಅವನ್ನ ಪ್ರತ್ಯಕ್ಷೀಕರಿಸಿಕೊಂಡು ಅವನಲ್ಲಿ ಐಕ್ಯಹೊಂದೋ ನಿಮಿತ್ತವನ್ನ ಮನಸಾ ಇಟ್ಟುಕೊಂಡು ಮಾನಸಪೂಜಾ ಮಾಡತಾನೆ. ಭೇದಜ್ಞಾನ ಪರಿಹಾರವಾಗಿ ಐಕ್ಯಜ್ಞಾನ ಸಿದ್ಧಿಸೋ ನಿಮಿತ್ತ, ಶಂಕರೋಕ್ತ ಮಾನಸ ಪೂಜಾ ಪ್ರಕಾರ ಮಾನಸಪೂಜಾ ಮಾಡತಾನಾದ್ದರಿಂದ ಭಗವದ್ದರ್ಶನವಾಗತದೆ. ದರುಶನ ಎಂಬುದು ಎಂಥಾದ್ದೆಂದರೆ :– ಮಹಾ ಅಂಧಕಾರದಲ್ಲಿ ಅಂಧಕಾರಕ್ಕೆ ಸದೃಶವಾದ ವರ್ಣೋಪೇತವಾದ ಪುರುಷನೇತ್ರಕ್ಕೆ ಗೋಚರವಾಪಂತೆ ವಾಸನಾರೂಪದ ದರುಶನವಾಗ ತದೆ. ಅದರಂತೆ ಉಪಾಸನಾಮಾಡತಾ ಬರತಾನೆ. ತದನಂತರ ಸಾಕ್ಷಾತ್ ಭಗವದಪ ರೋಕ್ಷವಾಗುತ್ತದೆ. ಆ ಅಪರೋಕ್ಷ ಎಂಥಾದ್ದೆಂದರೆ, ಸಾಕ್ಷಾತ್ ಪರಮಾತ್ಮನೇ ಪೂರ್ವ ದಲ್ಲಿ ಕತ್ತಲಲ್ಲಿ ಮನುಷ್ಯ ಇದ್ದವ ನೋಡಿದಂತೆ, ಅಪರೋಕ್ಷವಾದ ವಾಸನಾಪರೋಕ್ಷ ಮರೆಮಾಡಿ, ಬರೀ ಕತ್ತಲು ರೂಪದಿಂದಲೂ, ಅದರಲ್ಲಿ ನಾನಾ ವಿಕಾರದಿಂದಲೂ ಕಾಣ ತಾನೆ. ಕತ್ತಲು ವಿನಃ ಇನ್ನೇನೂ ಕಾಣೋದಿಲ್ಲ. ಬಯಲು, ಬಯಲೊಳಗೆ ಕತ್ತಲು, ಅದರಲ್ಲಿ ನಾನಾ ವಿಕಾರಗಳು, ಇವು ಮಾತ್ರ ಕಾಣತವೆ. ಯಾಕೆ ಹೀಂಗೆ ಆಗಬೇಕೆಂದರೆ, ಇವನ ಜ್ಞಾನವೂ ಕತ್ತಲೆ, ಇವನ ಬಿಂಬವೂ ಕಪ್ಪು. ಆದ್ದರಿಂದ ಈ ರೀತ್ಯಾ ಕಾಣತಾನೆ. ಇಂಥಾ ಅಪರೋಕ್ಷವಾಗೋಣವೇ ಅದ್ವೈತಜ್ಞಾನ ಪಕ್ವವಾಗಿ ಆಗ್ಗೆ ಮಿಥ್ಯಾನುಷ್ಠಾನ ಮಾಡತಾನೆ. ಈ ಅಪರೋಕ್ಷದಿಂದ ತಮೋಯೋಗ್ಯನ ಆಗಾಮಿ ಸಂಚಿತಗಳು ನಾಶ ವಾಗಿ, ಪ್ರಾರಬ್ಧ ಅನುಭವಿಸೋದಕ್ಕೆ ಆರಂಭಮಾಡತಾನೆ. ಈ ಪ್ರಾರಬ್ಧಭೋಗಕಾಲಕ್ಕೆ ಸಂಪೂರ್ಣ ಅಭೇದಸಿದ್ಧಿ ಇಲ್ಲದೆ ಕಿಂಚಿತ್ ಕೊರತೆಯಾಗಿ ಇರುತ್ತದೆ. ಲಿಂಗದೇಹ ಭಂಗ ವಾಗೋವರಿಗೂ ತ್ರಿಗುಣಜನ್ಯ ಕರ್ಮ ಇದ್ದೇ ಇರುತ್ತದೆ. ಎಷ್ಟುಮಾತ್ರ ಕರ್ಮ ಅವಶಿಷ್ಟ ಇರತದೋ ತದನುಗುಣವಾಗಿ ಅಭೇದಸಿದ್ಧಿ ಸಂಪೂರ್ಣವಾಗದೆ ಕೊಂಚ ಕೊರತೆಯಾಗಿ ಇರುತ್ತದೆ. ಅಷ್ಟುಪರಿಯಂತವೂ ಅಭೇದಸಿದ್ಧಿ ಎಷ್ಟುಮಾತ್ರ ಕೊರತೆ

ಯಾಗಿರುತ್ತದೋ, ತಾವನ್ಮಾತ್ರ ಭಗವದುಪಾಸನಾ ಇರುತ್ತದೆ. ಎಂದರೆ, ಅಂಧಕಾರ ನೋಡಿದರೆ ಮನುಷ್ಯ ಇದ್ಧಾಂಗೂನೂ, ಇನ್ನೂ ಅನೇಕ ವಿಧವಾಗಿನ್ನೂ ಮನುಷ್ಯರ ಕಣ್ಣಿಗೆ ಕಾಣಿಸುತ್ತಾ, ಅಂಧಕಾರದಲ್ಲಿ ಪ್ರವೇಶಮಾಡಿ ನೋಡಿದರೆ ಏನೂ ಇರೋದಿಲ್ಲ. ತದನಂತರ ಏನೋ ಇದ್ಧಾಂಗೆ ತೋರತದೇ ಹೊರತು ಕಾಣಿಸೋದಿಲ್ಲ. ಅಪದ್ಧ ಎಂತ ಹ್ಯಾಂಗೆ ತಿಳಿಯತಾನೋ, ತದ್ವತ್, ಲಿಂಗಭಂಗವಾಗೋವರಿಗೂ ಪೂರ್ವೋಕ್ತ ಪ್ರಕಾರ ಭಗವಂತನ ಸಾಕ್ಷಾತ್ ಅಪರೋಕ್ಷವಾಗತದೆ. ತತ್ ಜ್ಞಾನ ದೈತ್ಯರಿಗೆ ಇರೋದಿಲ್ಲ. ಇಂಥಾ ಅಪರೋಕ್ಷವಾಗತದೆ. ಅದರಲ್ಲಿ ತಾರತಮ್ಯ ಉಂಟು. ಮೊದಲು ಅಪರೋಕ್ಷದ ಕಿಂತಲೂ ಎರಡನೇ ಸಾರಿ ಆಗತಕ್ಕ ಅಪರೋಕ್ಷ ಕಡಿಮೆ. ಈ ಪ್ರಕಾರ ಲಿಂಗಾಪರೋಕ್ಷ ಕಾಲಕ್ಕೆ ಕತ್ತಲಲ್ಲಿ ವಿಕಾರ ವಿಕಾರವಾಗಿ ತೋರತದೆ. ಅಪರೋಕ್ಷವಾಗಿ ವಿವರಿಸೋ ಕಾಲಕ್ಕೆ ಏನೂ ಇಲ್ಲದಂತಾಗುತ್ತದೆ. ತದನಂತರ ಲಿಂಗಭಂಗವಾಗಿ ತನ್ನೊಳು ತಾ ನೋಡತಾನೆ. ಆ ಕಾಲಕ್ಕೆ ಹಿಂದೆ ಕಂಡ ಅಂಧಕಾರಸದೃಶ ಪರಮಾತ್ಮನ ರೂಪ, ತನ್ನೊಳಗೆ ತಾನು ಪ್ರವೇಶಮಾಡತದೆ. ತನ್ನೊಳಗೆ ತಾನು ನೋಡಿಕೊಂಡ ಕಾಲದಲ್ಲಿ ಅನ್ಯವಸ್ತು ಕಾಣದೆ ತಾನೊಬ್ಬನೇ ತನ್ನ ಕಣ್ಣಿಗೆ ಕಾಣತಾನೆ. ತಾನು ಕತ್ತಲೆ, ತನ್ನ ಬಿಂಬನೂ ಕತ್ತಲು ರೂಪದಿಂದ ಇದ್ದು, ಪ್ರತ್ಯೇಕವಾಗಿ ಕಾಣೋದಿಲ್ಲ. ಆಗ್ಗೆ ಸಂಪೂರ್ಣವಾದ ಐಕ್ಯಜ್ಞಾನ ಸಿದ್ಧಿ, ಅಹಂ ಬ್ರಹ್ಮ ಎಂಬುದೂ ಸಿದ್ಧಿ, ಸ್ವರೂಪಯೋಗ್ಯತಾನುಸಾರ ಆಗತದೆ. ಇಂಥಾ ಅಪರೋಕ್ಷದಿಂದ ಆಗಾಮಿ ಸಂಚಿತಗಳು ನಾಶ ಆಗತವೆ. ಆದ್ದರಿಂದ ಅಪರೋಕ್ಷಜ್ಞಾನ ದಿಂದಲೇ ಸಂಚಿತಾಗಾಮಿಗಳ ನಾಶ. ತದನ್ಯವಿಧದಿಂದ ಆಗೋದಿಲ್ಲ. ಅಪರೋಕ್ಷ ಎಂಬುದು ದೈತ್ಯರಿಗೆ ಇಂಥಾದ್ದು ಎಂತ ತಿಳಿಯಬೇಕು.

ಇದರಲ್ಲಿ ಇನ್ನೂ ಬಹಳ ವಿವರ ಉಂಟು. ಮುಕ್ತಿಯೋಗ್ಯರಿಗೆ ಅಪಕ್ವಕಾಲದಲ್ಲಿ ದುಃಖಬಾಹುಳ್ಯ, ತಮೋಯೋಗ್ಯರಿಗೆ ಪಕ್ವಕಾಲಕ್ಕೆ ದುಃಖಬಾಹುಳ್ಯ ಎಂತ ತಿಳಿಯ ಬೇಕು. ನಿತ್ಯಸಂಸಾರಿಗಳಿಗೆ ಯಾವತ್ತೂ ಉಪಾಸನ ಪೂರ್ವೋಕ್ತ ಪ್ರಕಾರವೇ ಮಾಡಿ ಅಪರೋಕ್ಷವಾಗತದೆ. ಅವರ ಅಪರೋಕ್ಷ ಎಂಥಾದ್ದೆಂದರೆ, ರಸವಿಲ್ಲದ ದರ್ಪಣ ಗಳಲ್ಲಿ ಮುಖ ಪ್ರತಿಫಲಿಸಿದಂತೆ ತಿರೋಧಾನವಿಲ್ಲದೆ ಅವಯವಸಹಿತವಾದ ಭಗವದ್ದರ್ಶನ ಉಂಟು. ಈ ನಿತ್ಯಸಂಸಾರಿಗಳಿಗೆ ಲಿಂಗಭಂಗ ಉಂಟು ಎಂತ ಕೆಲವರು ಹೇಳತಾರೆ, ಇಲ್ಲ ಎಂತ ಕೆಲವರು ಹೇಳತಾರೆ. ಪ್ರಕಾಶಸಂಹಿತಾದಿ ಗ್ರಂಥಗಳಲ್ಲಿ ಲಿಂಗಭಂಗ ಉಂಟು ಎಂತ ಉಕ್ತವಾಗಿದೆ. ವಾಯುಸ್ತುತಿಯಲ್ಲಿ "ತ್ರಿವಿಧನಿರಯಭೂಗೋಚರಾನ್ನಿತ್ಯಬದ್ಧಾನ್" ಎಂತ ಉಕ್ತವಾಗಿದೆ. ಇನ್ನೂ ಕೆಲವು ಭಾಗಗಳಲ್ಲಿ "ಭೂಸ್ವರ್ಗನಿರಯಾದಿಷು ಭ್ರಮಂತಿ" ಎಂತ ಉಕ್ತವಾಗಿದೆ. ಇನ್ನೂ ಕೆಲವು ಭಾಗಗಳಲ್ಲಿ ನಿತ್ಯಸಂಸಾರಿಗಳಿಗೆ ಆವರ್ತನ ಉಂಟು ಎಂತ ಹೇಳತದೆ. ಈ ಪ್ರಮಾಣಬಲಗಳಿಂದ ನಿತ್ಯಸಂಸಾರಿಗಳಿಗೆ ಲಿಂಗಭಂಗವಿಲ್ಲ ಎಂತಲೂ, ಪ್ರತಿ ಪ್ರತೀ ಬ್ರಹ್ಮಕಲ್ಪಕ್ಕೂ ಸ್ಥೂಲದೇಹದಿಂದ ಆವರ್ತನರಾಗಿ ಸೃಷ್ಟರಾಗಿ, ಸ್ವರ್ಗ, ನರಕ, ಭೂಮಿಗಳಲ್ಲಿ ಸಂಚಾರಮಾಡತಾ ಇರುತ್ತಾರೆ ಎಂತಲೂ ಹೇಳತಾರೆ. ಪ್ರತ್ಯಕ್ಷ

ಲಿಂಗಭಂಗ ಉಂಟು ಎಂತ ಹೇಳತಕ್ಕ ಪ್ರಮಾಣದಿಂದ ಪುನಶ್ಚ ನಿತ್ಯಸಂಸಾರಿಗಳು ಸ್ಥೂಲ ದೇಹಗಳ ಧರಿಸೋದಿಲ್ಲ ಎಂಬುದು ಅರ್ಥಾತ್ ಸಿದ್ಧಿ ಆಗುತ್ತದೆ. ಲಿಂಗಭಂಗ ಉಂಟು ಎಂತ ಹೇಳತಕ್ಕ ಪ್ರಮಾಣ ನಿರವಕಾಶವಾಗಿ ಇದೆ. ಲಿಂಗಭಂಗ ಇಲ್ಲ ಎಂತ ಅರ್ಥಮಾಡ ತಕ್ಕ ವಚನಗಳಲ್ಲಿ ಲಿಂಗಭಂಗ ಇಲ್ಲ. ಪ್ರತಿ ಪ್ರತೀ ಬ್ರಹ್ಮಕಲ್ಪಕ್ಕೂ ಸ್ಥೂಲದೇಹಗಳ ಧರಿಸಿ ಆವರ್ತನರಾಗಿ, ಸ್ವರ್ಗ, ನರಕ, ಭೂಮಿಗಳಲ್ಲಿ ಆವರ್ತನ ಆಗುತಾ ಇರುತ್ತಾರೆ ಎಂತ ಕಂಠೋಕ್ತಿಯಾಗಿ ಹೇಳಲಿಲ್ಲ. ಹೇಳದಿದ್ದ ಕಾಲಕ್ಕೂ ಅರ್ಥವೇನೋ ಪೂರ್ವೋಕ್ತಪ್ರಕಾರ ಅಧ್ಯಾಹಾರ ಮಾಡಿಕೊಂಡು ಅರ್ಥಮಾಡತಾರೆ. ಆದ್ದರಿಂದ ಲಿಂಗಭಂಗ ಉಂಟು ಎಂತ ಹೇಳತಕ್ಕ ಪ್ರಮಾಣಮಾಡತಕ್ಕ, ಅರ್ಥ ಸಾವಕಾಶವಾಗದೆ ನಿರವಕಾಶವಾಯಿತು. ತದನ್ಯಪ್ರಮಾಣಗಳಿಗೆ ಮಾಡತಕ್ಕ ಅರ್ಥ ಸಾವಕಾಶವಾಯಿತು. ಆದ್ದರಿಂದ ನಿರವಕಾಶ ಪ್ರಮಾಣ, ಅದರರ್ಥದಿಂದ ಸಾವಕಾಶಪ್ರಮಾಣ ಅರ್ಥಬಾಧಿತವಾಗಿ ನಿರವಕಾಶವೇ ಶ್ರೇಷ್ಠವಾಗೋದಾಯಿತು. ಅರ್ಥಮಾಡಿದ್ದು ಸಾವಕಾಶಾರ್ಥ ಎಂತ ತಾತ್ಪರ್ಯ. ಆದ್ದ ರಿಂದ ಲಿಂಗಭಂಗ ಉಂಟು ಎಂಬುದೇ ಅಂಗೀಕರಿಸಬೇಕಾಗಿ ಇದೆ.

ಇನ್ನು ಆವರ್ತನ ಶಬ್ದಕ್ಕೆ ಅರ್ಥವೇನು ಎಂತ ಕೇಳಬೇಕು. ಸಮಾಧಾನ :— ಆವರ್ತನ ಎಂದರೆ ಬರುತ್ತಾ ಇರೋಣ, ಹೋಗುತ್ತಾ ಇರೋಣ, ಇದೆಂಬುದೇ ಆವರ್ತನ ಅಂತ ಕರೆಸುತದೆ. ಇಂಥಾ ಆವರ್ತನ ಎಂಬುದು ನಿತ್ಯಸಂಸಾರಿಗಳಿಗೆ ಉಂಟೇ ಹೊರತು, ತಮೋಯೋಗ್ಯ, ಮುಕ್ತಿಯೋಗ್ಯ ಇವರಿಗೆ ಇಲ್ಲ. ಅದು ಹ್ಯಾಂಗೆಂದರೆ, ಸ್ಥಿತಿಕಾಲದಲ್ಲಿ ತ್ರಿವಿಧರಾದ ಜೀವರಿಗೆ ಸ್ವರ್ಗ, ಭೂ, ನರಕಗಳಲ್ಲಿ ಸಂಚಾರ ಉಂಟು. ಮುಕ್ತಿಯೋಗ್ಯರು ಪಕ್ವಾಧಿಕಾರಿಗಳಾದರೆ ಮಹರಾದಿ ಲೋಕಗಳಲ್ಲಿ ಇರುತ್ತಾರೆ. ಆವರ್ತನ ಲೋಕಗಳಿಗೆ ಬರೋದಿಲ್ಲ. ತಮೋಯೋಗ್ಯರು ಪಕ್ವಾಧಿಕಾರಿಗಳಾದರೂ ತಮ್ಮ ದ್ವಾರದಲ್ಲಿ ಪಾತಾಳ ಲೋಕದಲ್ಲಿ ಇರುತ್ತಾರೆ. ಇವರು ಪುನಃ ಆವರ್ತನಲೋಕಗಳಿಗೆ ಬರೋದಿಲ್ಲ. ನಿತ್ಯ ಸಂಸಾರಿಗಳಿಗೆ ಪಕ್ವಾಧಿಕಾರ ಪ್ರಾಪ್ತವಾಯಿತೆಂದರೆ, ಸ್ವರ್ಗಪ್ರಚುರರು ಸ್ವರ್ಗದಲ್ಲೇನು, ಭೂಪ್ರಚುರರು ಭೂಲೋಕದಲ್ಲೇನು, ನಿರಯಪ್ರಚುರರು ನಿರಯಲೋಕದಲ್ಲೇನು ಇರು ತ್ತಾರೆ. ಇವರಿಗೆ ಸ್ಥಿತಿಕಾಲದಲ್ಲೇನು, ಜೀವನ್ಮುಕ್ತದಶಾದಲ್ಲೇನು, ಉಭಯದಶಾದಲ್ಲೇನು ಆವರ್ತನಲೋಕಗಳಾದ ಭೂ, ಸ್ವರ್ಗ, ನರಕಾದಿ ಲೋಕಗಳಲ್ಲಿಯೇ ಇರುತ್ತಾರೆ. ಇಂಥಾದ್ದು ಕಡಿಮೆ. ಉಭಯರಿಗಿಲ್ಲವಾದಕಡಿಯಿಂದ "ಆವರ್ತನ ಏವ" ಎಂದರೆ "ಆವರ್ತನ ಲೋಕ ಏವ ಅವಸ್ಥಾನಮ್ " ಎಂತ ತಾತ್ಪರ್ಯವೇ ಹೊರತು, ಆವರ್ತನ ಶಬ್ದದಿಂದ ಲಿಂಗಭಂಗವಿಲ್ಲದೆ ಸ್ಥೂಲದೇಹಗಳ ಹೊಂದತಾ ಇರತಾರೆ ಎಂತ ತಾತ್ಪರ್ಯವಲ್ಲ. ಮತ್ತು ಆವರ್ತನ ಎಂದರೆ ತ್ರಿವಿಧ ಜೀವರು ಸ್ಥಿತಿಕಾಲದಲ್ಲಿ, ಸುಖದುಃಖಾದಿಗಳಲ್ಲಿ ಆವರ್ತಿತ ರಾಗುತ್ತಾ ಇರುತ್ತಾರೆ. ಲಿಂಗಭಂಗವಾಯಿತೆಂದರೆ, ಉಭಯಜೀವರಿಗೆ ಸ್ಥಿತಿಕಾಲದಲ್ಲಿಪ್ಪಂತೆ ಸುಖ, ದುಃಖ ಆವರ್ತನವಾಗದೆ, ಮುಕ್ತಿಯೋಗ್ಯರು ಸುಖದಿಂದಲೂ, ತಮೋ ಯೋಗ್ಯರು ದುಃಖದಿಂದಲೂ ಇರುತ್ತಾರೇ ಹೊರತು, ಎರಡೂ ಆವರ್ತನವಾಗೋದಿಲ್ಲ. ನಿತ್ಯಸಂಸಾರಿಗಳಿಗೆ ಲಿಂಗಭಂಗಾನಂತರ ಸುಖದುಃಖಾದಿಗಳು ಉಭಯಜೀವರೋಪಾದಿ

ಯಲ್ಲಿ ಆವರ್ತನ ಇಲ್ಲಧಾಂಗೆ, ಸುಖವೋ, ದುಃಖವೋ ದಾವದೋ ಒಂದರಿಂದ ವಿಶಿಷ್ಟ ರಾಗಿರುತ್ತಾರೊ ? ಎಂದರೆ ಇಲ್ಲ. ಉಭಯರೂ ಮಿಶ್ರರಾಗಿ ಇರುತ್ತಾರಾ ಎಂಬ ಶಂಕಾ ಬಂದರೆ, ಲಿಂಗಭಂಗಾತ್ಪೂರ್ವದಲ್ಲೇನು, ನಂತರದಲ್ಲೇನು, ಉಭಯಕಾಲದಲ್ಲಿ ಎರಡೂ ಯುಕ್ತವಾಗೇ ಇದ್ದು ಪರಮಾತ್ಮನ ಉದರಪ್ರವೇಶ ಮಾಡೋಣ, ಪುನಃ ಹೊರಕ್ಕೆ ಬರೋಣ, ಈ ಕಾಲಗಳಲ್ಲಿ ಸುಖದುಃಖಗಳಲ್ಲಿ ಆವರ್ತಿತರಾಗೇ ಇರುತ್ತಾರೆ. ಇಂಥಾದ್ದು ಅನ್ಯ, ಉಭಯರಿಗೆ ಇಲ್ಲವಾದ್ದರಿಂದ ಆವರ್ತನಶಬ್ದ ಪ್ರಯೋಗವು ಮತ್ತು ಲಿಂಗಭಂಗಾ ನಂತರದಲ್ಲಿ ಸ್ಥಿತಿಕಾಲದಲ್ಲಿ ದಾವ ಆವರ್ತನಲೋಕಗಳಲ್ಲಿ ಆವರ್ತಿತರಾಗುತ್ತಾ ಇದ್ದಾರೋ, ನಂತರದಲ್ಲಿ, ಅದೇ ಲೋಕದಲ್ಲಿ ಆವರ್ತಿತರಾಗುತ್ತಾ ಇರ್ತಾರೆ. ಆದ್ದರಿಂದ, ಆವರ್ತನ ಶಬ್ದವು "ತ್ರಿದಿವನಿರಯಭೂ" ಎಂಬ ಉಕ್ತಿಯು. ಈ ಕಾರಣದಿಂದ ನಿತ್ಯಸಂಸಾರಿಗಳಲ್ಲಿ ಮಾತ್ರ ಪ್ರಯೋಗ ಮಾಡೋದಕ್ಕೆ ಕಾರಣವೆಂದು ತಿಳಿಯಬೇಕೇ ಹೊರತು, ಲಿಂಗಭಂಗ ಇಲ್ಲ ಎಂತ ತಿಳಿಯಬಾರದು. ಹೀಂಗೆ ಅರ್ಥಮಾಡೋಣದರಿಂದ ಉಭಯಪ್ರಮಾಣಕ್ಕೂ ಬಾಧಕ ಬರಲಿಲ್ಲ. ಇವರ ಅಪರೋಕ್ಷಬಿಂಬ ಹಸ್ತಗತವಾಗತದಾ ಎಂದರೆ, ಆ ಭಗವ ದ್ರೂಪ ಹಸ್ತಗತವಾಗೋದಿಲ್ಲ. ಕಾಣತಾ ಇರುತ್ತದೆ. ಅಬದ್ಧ ಎಂತ ಹೇಳಲೂ ಲಾರ. ಪ್ರಕಾಶ ಎಂಬುದು ಎಂಥಾದ್ದೆಂದರೆ ರಸರಹಿತ ದರ್ಪಣಗತ ತೇಜಸ್ಸು ಎಷ್ಟು ಮಾತ್ರ ಪ್ರಕಾಶದಿಂದ ಯುಕ್ತವೋ, ಅಷ್ಟು ಮಾತ್ರ ಪ್ರಕಾಶದಲ್ಲಿ ಅಷ್ಟೇ ಪ್ರಕಾಶ ಉಳ್ಳ ಪರಮಾತ್ಮನ ಸಂದರ್ಶನ. ಜೀವಾಂತರ್ಗತನಾದ ಬಿಂಬದರುಶನ ನಿತ್ಯ ಸಂಸಾರಿಗೆ ಆಗತದೆ. ಇದರಲ್ಲಿ ತಾರತಮ್ಯಾನುಸಾರ ಪುರಂಜನ ಆರಂಭ ಮಾಡಿ ತೃಣಾಂತದವರಿಗೂ ನಿತ್ಯಸಂಸಾರಿ ಎಂತ ತಿಳಿಯಬೇಕು. ಕಲಿ ಆರಂಭ ಮಾಡಿ ತೃಣಾಂತದವರಿಗೂ ತಮೋ ಯೋಗ್ಯರು ಎಂತ ತಿಳಿಯಬೇಕು. ಮುಕ್ತಿಯೋಗ್ಯರ ಅಪರೋಕ್ಷ ಶಾಸ್ತ್ರತಃ ಪ್ರಸಿದ್ಧವೇ ಸರಿ. ಅದರನ್ನ ವಿವರ ಮಾಡಬೇಕಾದುದೇ ಅವಶ್ಯಕವಿಲ್ಲ. ದಿಕ್ಪ್ರದರ್ಶನದಿಂದ ಲೋಪಾ ಲೋಪಗಳು ಸವರಿಸಿಕೋಬೇಕು. ವಿಸ್ತಾರ ಮಾಡಬೇಕಾದರೆ ಗ್ರಂಥಬಾಹುಳ್ಯ ಭೀತಿ ಯಿಂದ ಸಂಕೋಚ ಮಾಡಲ್ಪಟ್ಟಿದೆ. ನಿತ್ಯ ಸಂಸಾರಿಗೂ ಪೂರ್ವೋಕ್ತ ಪ್ರಕಾರ ಅಪರೋಕ್ಷವಾಗೇ ಸಂಚಿತಾಗಾಮಿಗಳು ನಾಶ, ಎಂತ ತಿಳಿಯಬೇಕು.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ನಾಡೀಪ್ರಕರಣಸಂಧಿವ್ಯಾಖ್ಯಾನಂ ಸಂಪೂರ್ಣಂ**

|| ಶ್ರೀ ಕೃಷ್ಣಾರ್ಪಣಮಸ್ತು ||

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಹದಿಮೂರನೆಯ ಸಂಧಿ

## ನಾಮಸ್ಮರಣ ಸಂಧಿ

**ಹರಿಕಥಾಮೃತಸಾರ ಗುರುಗಳ ।**
**ಕರುಣದಿಂದಾಪನಿತು ಪೇಳುವೆ ।**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು || ಪ ||**

**ಮೂಲ :**

**ಮಕ್ಕಳಾಡಿಸುವಾಗ ಮಡದಿಯೊ ।**
**ಳಕ್ಕರದಿ ನಲಿವಾಗ ಹಯ ಪ ।**
**ಲ್ಲಕ್ಕಿ ಗಜ ಮೊದಲಾದ ವಾಹನಗಳೇರಿ ಮೆರೆವಾಗ ||**
**ಬಿಕ್ಕುವಾಗ ಆಕಳಿಸುತಲಿ ದೇ ।**
**ವಕ್ಕಿತನಯನ ನೆನೆವುತಿಹ ನರ ।**
**ಸಿಕ್ಕನು ಯಮದೂತರಿಗೆ ಆವಾವಲ್ಲಿ ನೋಡಿದರು || ೧ ||**

**ಟೀಕಾ :**

ಭಗವನ್ನಾಮಸ್ಮರಣೆ ಮಾಡತಕ್ಕವ, ಯಮದೂತರಿಗೆ ಸಿಕ್ಕೋದಿಲ್ಲ ಎಂತ ಹೇಳ ತಾರೆ.

ಹಿಂದೆ, ಕರುಣಾಸಂಧಿಯಲ್ಲಿ "ಶ್ರೀ ಮುಕುಂದನ ಪರಮ ಮಂಗಳನಾಮ ನರಕ ಸ್ಥರನ ಸಲಹಿತು, ಪಾಮರರ ಪಂಡಿತರೆನಿಸಿ ಪುರುಷಾರ್ಥ ಕೊಡುತಿಹುದು" ಇತ್ಯಾದಿ ಎಂತ ಹರಿನಾಮೋಚ್ಚಾರಣೆಯಿಂದ ಅಧಿಕಾರಿಗಳು ಮಹಾ ಪುರುಷಾರ್ಥವನ್ನು ಹೊಂದ ತಾರೆ ಎಂತ ನಿರೂಪಿಸಿದ ವಿಚಾರವನ್ನು ಈ ಸಂಧಿಯಲ್ಲಿ ವಿವರ ಮಾಡುತ್ತಾ, ಇನ್ನೂ ಸತ್ಸಾಧನಿಗೆ ಅನುಕೂಲವಾದ ಭಗವದ್ಭಕ್ತರ ಮಹಿಮಾ ತಿಳಿಯುವ ವಿಚಾರವೂ, ಪುಣ್ಯ ಪಾಪಗಳ ತಿಳಿಯುವ ವಿಚಾರವೂ, ಪಂಚಭೂತಗಳಿಂದ ನಿರ್ಮಿತವಾದ ಜೀವರ ಭೋಜ ನೋಪಯೋಗವಾದ ಪದಾರ್ಥಗಳಲ್ಲಿ ಅನುಸಂಧಾನ ಪ್ರಕಾರವೂ, ಶ್ರೀ ಪರಮಾತ್ಮನ ವ್ಯಾಪ್ತಿಪ್ರಕಾರವೂ ಈ ಸಂಧಿಯಲ್ಲಿ ಹೇಳತಾರೆ.

ಮಡದಿ–ಹೆಂಡತಿ, ಜೀವಸಾಂಕೇತನಾದ ಪುರುಷಗೆ ಸುಬುದ್ಧಿ, ದುರ್ಬುದ್ಧಿ ಎನತಕ್ಕ ಇಬ್ಬರು ಹೆಂಡಿರು. ೦ಳು–ಇಂಥಾ ಇಬ್ಬರ ಹೆಂಡಿರ ಕೂಡಿಕೊಂಡು, ಅವ ರಲ್ಲಿ, ಅಕ್ಕರದಿ–ಅತಿ ಆಸಕ್ತಿಯಿಂದ, ನಲಿವಾಗ–ಸಂಭೋಗಸಾಂಕೇತವಾದ ಅವರ

ಸಂಗಡ ಕೂಡಿಕೊಂಡು, ಆಟಗಳ ಆಡೋ ಕಾಲದಲ್ಲಿ (ಉತ್ಪನ್ನರಾದ), ಮಕ್ಕಳ–ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ, ಅಂತಃಕರಣವೆಂಬ ವೃತ್ತಿಗಳು ಐದು. ಇವು ಐದು ಪುತ್ರರು. ಇಂಥಾ ಪುತ್ರರ, ಆಡಿಸುವಾಗ–ದಶೇಂದ್ರಿಯಗಳೆಂಬೋವೇ ಮನಿಗಳು. ಈ ಮನಿಗಳಲ್ಲಿ ಆಡಿಸೊ ಕಾಲದಲ್ಲಿ ಎಂದರೆ, ಪಂಚ ಮನೋವೃತ್ತಿಗಳ, ದಶೇಂದ್ರಿಯಗಳಲ್ಲಿಟ್ಟು ತದ್ದ್ವಾರಾ ಮಾಡತಕ್ಕ ಸುಬುದ್ಧಿಪುತ್ರರಾದ ಸುವೃತ್ತಿ ದ್ವಾರಾ, ದುರ್ಬುದ್ಧಿ ಪುತ್ರರಾದ ದುರ್ವೃತ್ತಿ ದ್ವಾರಾ, ಮಾಡತಕ್ಕ ಅನೇಕ ಸುಕರ್ಮ ದುಷ್ಕರ್ಮಗಳೆಂಬೋವೇ, ಆಡಿಸೋಣ. ಇಂಥಾ ಕರ್ಮರೂಪವಾದ ಆಟಗಳ ಆಡೋ ಕಾಲದಲ್ಲಿ, ಮಡದಿಸಾಂಕೇತರಾದ ಸುಬುದ್ಧಿ, ದುರ್ಬುದ್ಧಿ ಸಂಗಡ ಏಕಾಂತದಲ್ಲಿ ರಮಿಸೋದಕ್ಕೆ ಸದೃಶವಾದ, ಸಮಿಾಚೀನಗಳಾದ, ಆಲೋಚನಾ ಕಾಲದಲ್ಲಿ, ಆ ಆಲೋಚನಿಯಲ್ಲಿ ಉಭಯ ಮಡದಿಯರಲ್ಲಿ, ಇಂದ್ರಿಯಾಖ್ಯ ಮನಿಗಳಲ್ಲಿ, ಆ ಮನಿಗಳಲ್ಲಿ ಆಡಿಸತಕ್ಕ ವೃತ್ತಿ ರೂಪವಾದ ಪುತ್ರರಲ್ಲಿ, ಪುತ್ರರ ಆಡಿಸೋದಕ್ಕೆ ಸದೃಶವಾದ ದೇಹೇಂದ್ರಿಯಾದಿಗಳಿಂದ ಮಾಡತಕ್ಕ ಕರ್ಮಗಳಲ್ಲಿ, ಹಯ–ಕುದುರೆ, ಕಾಮವ್ಯೆಂಬೋ ಕುದುರೆ, ಪಲ್ಲಕ್ಕಿ–ಕ್ರೋಧವೆಂಬೋ ಆಂದೋಳಿಕ, ಗಜ–ಅಷ್ಟಮದಗಳೆಂಬೋವೆ ಎಂಟು ಆನೆಗಳು, ಮೊದಲಾದ–ಇವೇ ಮೊದಲಾದ ಅಂದರೆ, ಕಾಮ ಕ್ರೋಧಾದಿ ಅರಿಷಡ್ವರ್ಗಗಳು ತಮೋ ಮೋಹಾದಿ ಐದು ಅವಿದ್ಯೆಗಳು, ಸಾತ್ತ್ವಿಕಾದಿ ಗುಣಗಳು ಮೂರು, ಅಹಂ ಮಮತಾದಿಗಳು ಎರಡು, ಇವೇ ಮೊದಲಾದ ಅನೇಕ ವಿಧಗಳಾದ, ವಾಹನಗಳ–ಏರಿ ಸಂಚಾರ ಮಾಡತಕ್ಕ ವಾಹನಗಳ, ಇವುಗಳಲ್ಲಿ ದುಷ್ಟ ವಾಹನಗಳು, ಛಲೋ ವಾಹನಗಳು ಎಂದು ಉಭಯ ವಿಧ. ಏರಿ ಮೆರೆವಾಗ–ಏರೋಣಕ್ಕೆ ಸದೃಶವಾದ ಕರ್ಮ ವ್ಯಾಪಾರಗಳಿಂದ ಸಂಚಾರ ಮಾಡುವಾಗ ಆಯಾ ವಾಹನಗಳಲ್ಲಿ, ಬಿಕ್ಕುವಾಗ–ಅಕಸ್ಮಾತ್ತಾಗಿ ಬರೋದು ಬಿಕ್ಕು, ತತ್ಸದೃಶ ಅಕಸ್ಮಾತ್ತಾಗಿ ಬರುವ ಲಾಭಾಲಾಭಗಳಲ್ಲಿ ಸುಖದುಃಖಾದಿಗಳಲ್ಲಿ, ಆಕಳಿಸುತಲಿ–ನಿದ್ರಾಕ್ಕೆ ಸೂಚನೆ ಆಕಳಿಕೆ. ನಿದ್ರಾ, ಬಾಹ್ಯಜ್ಞಾನ ಶೂನ್ಯ ಮಾಡತಕ್ಕದ್ದು. ತಲ್ಲಕ್ಷಣಯಾ, ಬಾಹ್ಯ ಜ್ಞಾನದಿಂದ ಕ್ರಮ ಕ್ರಮವಾಗಿ ಶೂನ್ಯವಾಗುತ್ತಲಿ, ಪೂರ್ವೋಕ್ತ ಅಧಿಷ್ಠಾನಗಳಲ್ಲಿ, ತದನ್ಯ ಅಧಿಷ್ಠಾನಗಳಲ್ಲಿ, ಆವಲ್ಲಿ ನೋಡಿದರೂ–ನೇತ್ರಗಳು ದಾವ ಕಡೆ ನೋಡಿದರೂ, ಕರ್ಣಗಳು ದಾವ ಕಡೆ ಶಬ್ದ ಕೇಳಿದರೂ, ತ್ವಕ್ ದಾವ ಸ್ಪರ್ಶ ಮಾಡಿದರೂ, ಮನಸ್ಸು ದಾವದರಲ್ಲಿ ಸಂಚರಿಸಿದರೂ, ಇತ್ಯಾದಿ ಬಹು ವಿಧವಾದ ಅಧಿಷ್ಠಾನಗಳಲ್ಲಿ ಅಹಂ ಮಮತಾದಿಗಳಿಂದ ರಹಿತನಾಗಿ ಅಂತರ್ಗತದಲ್ಲಿ, ದೇವಕ್ಕಿತನಯನ–ದೇವಕೀದೇವೇರ ಪುತ್ರನಾದ ಶ್ರೀ ಕೃಷ್ಣನ, ನೆನೆವುತಿಹ–ಧ್ಯಾನ ರೂಪದಿಂದ ನೆನೆಯುತ್ತ, ಬಿಂಬ ಕ್ರಿಯಾ, ಪ್ರತಿಬಿಂಬ ಕ್ರಿಯಾ ಅನುಸಂಧಾನ ಮಾಡುತ್ತಾ ಇರತಕ್ಕ, ತದ್ದ್ವಾರಾ ನಾಮ ಸ್ಮರಣ ಮಾಡತಕ್ಕ, ಅವ–ಆ ಪುರುಷ, ಆವಲ್ಲಿ ನೋಡಿದರೂ–ದಾವ ಕಡೆ ನೋಡಿದ ಕಾಲಕ್ಕೂ, ಅಂತರ್ಗತನಾದ ಪರಮಾತ್ಮನನ್ನೇ ನೋಡಿದವನಾದ್ದರಿಂದ, ನರ–ಇಂಥಾ ಮನುಷ್ಯ, ಯಮದೂತರಿಗೆ–ಪಾಪಿಗಳಿಗೆ ಬರತಕ್ಕವರು ಯಮದೂತರು. ಇಂಥಾ ಜ್ಞಾನಿ, ಪಾಪಿ ಅಲ್ಲ, ಆದ್ದರಿಂದ ಯಮದೂತರಿಗೆ, ಸಿಕ್ಕನು–ಅವರಿಗೆ ವಶನಾಗಿ ಅವರ

ಕೈಲಿ ಸಿಕ್ಕೋದಿಲ್ಲ. ವಿಷ್ಣುದೂತರಿಗೆ ಸಿಕ್ಕುತ್ತಾನೆಂತ ತಾತ್ಪರ್ಯ. ಪರಾಧೀನ ಅಸ್ವತಂತ್ರನಾದ ಜೀವನ ಮಾಡು ಎಂತ ಸಂಬೋಧನ ಹ್ಯಾಂಗೆ ಕೂಡತದೆ ಅಂದರೆ, ಆಕ್ಷೇಪ ಸಮಾಧಾನ :– ವೇದ ಶಾಸ್ತ್ರಾದಿಗಳು ಜೀವನ್ನ ಸಂಬೋಧನ ಮಾಡಿ ಪಾಪ ಕರ್ಮ ಮಾಡಕೂಡದು, ಪುಣ್ಯಕರ್ಮ ಮಾಡು ಎಂತ ಹೇಳತವೆ. ಮತ್ತು ಜೀವ ಅಸ್ವತಂತ್ರನಾದ್ದರಿಂದ ಪರಮಾತ್ಮನ ವ್ಯತಿರಿಕ್ತ ದಾವ ಕಾರ್ಯ ಮಾಡೋದಕ್ಕೂ ಸ್ವಾತಂತ್ರ್ಯ ಸಾಲದೆಂದು ಹೇಳತವೆ. ಸ್ವತಂತ್ರಗೆ ಸಂಬೋಧನವೇ ಹೊರತು ಅಸ್ವತಂತ್ರಗೆ ಸಂಬೋಧನ ಕೂಡದು. ಜೀವ ಅಸ್ವತಂತ್ರ, ಪರಮಾತ್ಮ ಸ್ವತಂತ್ರ ಎಂಬುದು ಪ್ರತ್ಯಕ್ಷ ಅನುಮಾನಗಳಿಂದ ಸಿದ್ಧವು. ಅನಾದಿ ಕರ್ಮದಿಂದಲೂ ತ್ರಿಗುಣಬದ್ಧನಾದವನು ಜೀವ. ಇಂಥಾ ಬಂಧಕಪರಿಹಾರಕ್ಕೆ ಜೀವಗೆ (ನ) ವಿವಕ್ಷಾದಿಂದ ಹೇಳತದೆ ಹೊರತು ಪರಮಾತ್ಮಗೆ ಹೇಳೋದಿಲ್ಲ. ಆದಕಡಿಯಿಂದ ವೇದಾದಿಗಳು ಜೀವಗೆ ಸಂಬೋಧನ ಮಾಡತವೆ. ಮತ್ತು ಜೀವ ತ್ರಿಗುಣಾದಿಗಳಿಂದ ಬದ್ಧನಾದ ಕಡಿಯಿಂದ, ವೇದೋಕ್ತ ಕರ್ಮಗಳ ಮಾಡೇ ತೀರಬೇಕು. ಈ ಸಂಬೋಧನಾ ವಾಕ್ಯಗಳು ಅಸೃಜ್ಯ ದಶಾದಲ್ಲಿ ಪ್ರಯೋಜನವಿಲ್ಲ. ಸ್ಥಿತಿ ಕಾಲದಲ್ಲಿ ಪ್ರಯೋಜನವು. ಕಾರ್ಯ ಎಂದರೆ, ಬಿಂಬನಾದ ಪರಮಾತ್ಮ ಪ್ರತಿಬಿಂಬನಾದ ನನ್ನಿಂದ ಮಾಡಿಸಿದ ಕರ್ಮಗಳ, ಪ್ರೇರಣಯಾ ಮಾಡತೇನೆ ಎಂತ, ತಿಳಿದಿರಬೇಕು. ಈ ಪ್ರಕಾರ ತಿಳಿಯೋಣ, ಅನುಸಂಧಾನ ಜ್ಞಾನವೂ, ಈಶ್ವರಾಧೀನವೂ ಆದ ಪ್ರಯುಕ್ತ, ಈಶ್ವರ ಜೀವರ ಸ್ಥೂಲ ದೇಹದಿಂದ ಸೃಷ್ಟಿಗೆ ತಂದಾರಭ್ಯ ನಿದ್ರಾಕಾಲ ವ್ಯತಿರಿಕ್ತ, ತದನ್ಯ ಸರ್ವ ಕಾಲಗಳಲ್ಲಿ ಕ್ಷಣಲವಕಾಲವಾದರೂ ಬಿಡದೆ ಪುಣ್ಯ ಪಾಪಗಳ, ಇನ್ನೂ ಅನೇಕ ಜೀವರು ಮಾಡತಕ್ಕ ಕಾರ್ಯಗಳ ಜೀವಗೆ ಸರ್ವದಾ ತಿಳಿಸುತ್ತಾ ಇರ್ತಾನೆ. ಇದರನ್ನ ಜೀವ ತಿಳಿಯುತ್ತಾ ಇರ್ತಾನೆ. ಈ ಪ್ರಕಾರ ಪರಮಾತ್ಮ ಜೀವಗೆ ತಿಳಿಸೋದಕ್ಕೆ ಶ್ರಾಂತಿಯೇ ಇಲ್ಲ. ಜೀವ ತ್ರಿಗುಣಬದ್ಧನಾದ್ದರಿಂದ ಅದನ್ನನುಸರಿಸಿ ಆಚರಣೆ ವ್ಯತ್ಯಾಸ ಮಾಡುತ್ತಾ ಇರ್ತಾನೆ. ಅದರಂತೆ ಫಲ ಕೊಡುತ್ತಾ ಇರ್ತಾನೆ, ರಾಜಭೃತ್ಯನ್ಯಾಯವಾದ್ದರಿಂದ ಭೃತ್ಯ, ರಾಜಾಜ್ಞೆ ಮೀರಕೂಡದು. ಸ್ವರೂಪ ಅಸ್ವತಂತ್ರ. "ತೇನ ವಿನಾ ತೃಣಮಪಿ ನ ಚಲತಿ" ಎಂಬ ಪ್ರಮಾಣಾನುಸಾರ, ಈಶ್ವರ ಪ್ರೇರಣೆಯೇ ಸರ್ವ ಕರ್ಮಕ್ಕೂ ಕಾರಣ ವೆಂದು ತಾತ್ಪರ್ಯ.

**ಸರಿತುಪ್ರವಹಗಳಲ್ಲಿ ದಿವ್ಯಾಂ ।**
**ಬರದಿ ಪುತ್ರಾದಿಯಲಿ ಹರ್ಷಾ ।**
**ಮರ್ಷ ವಿಸ್ಮೃತಿಯಿಂದಲಾಗಲಿ ಒಮ್ಮೆ ಬಾಯ್ದೆರೆದು ॥**
**ಹರಿ ಹರೀ ಹರಿಯೆಂಬ ಎರಡ ।**
**ಕ್ಷರ ನುಡಿದಮಾತ್ರದಲಿ ದುರಿತಗ ।**
**ಳಿರದೆ ಪೋಪುವು ತೂಲರಾಶಿಯೊಳನಲ ಪೊಕ್ಕಂತೆ ॥ ೨ ॥**

ಶ್ರೀಪರಮಾತ್ಮನ ನಾಮಸ್ಮರಣೆಯಿಂದ ಮಹಾಪಾಪಗಳು ನಾಶವಾಗತಕ್ಕ ಕ್ರಮ ಹೇಳತಾರೆ.

ಅಂಬರದಿ–ಹೃದಯಾಕಾಶದಲ್ಲಿ ವಿದ್ಯಮಾನನಾದ, ದಿವ್ಯ–ಮನೋಹರನಾದ, ಹರಿ–ಹರಿಶಬ್ದವಾಚ್ಯ ನಾರಾಯಣದೇವರ, ಸರಿತುಪ್ರವಹಗಳಲ್ಲಿ–ದೇಹಗತ ನಾಡೀಸ್ಥ ನದೀ ಪ್ರವಾಹಗಳಲ್ಲಿ, ರೋಮಕೂಪಗತ ತೀರ್ಥಾದಿಗಳಲ್ಲಿ, ಹಾಂಗೇ ಬಾಹ್ಯನದೀ ತೀರ್ಥಾದಿಗಳಲ್ಲಿ ಸ್ನಾನವೇನು, ಪುತ್ರಾದಿಯಲಿ–ಪೂರ್ವೋಕ್ತ ಮನೋಬುದ್ಧ್ಯಾದಿಗಳೆಂಬ ಪುತ್ರಾದಿಗಳಲ್ಲಿ, ತಥಾ ಬಾಹ್ಯರಾದ ಪುತ್ರಾದಿಗಳಲ್ಲಿ, ಹರೀ–ಬಿಂಬರೂಪ ಹರಿನಾಮಕ ಪರಮಾತ್ಮನ ಐಕ್ಯಚಿಂತನ ಮಾಡಿ, ಆ ಪುತ್ರನ ಸಂಗಡ ಆಟಗಳ ಆಡೋಣವೇನು, ಅಮರ್ಷ–ದ್ವೇಷ, ಕೋಪ, ದುಃಖಾದಿಗಳು, ಅಹಂಮಮತಾ ಇವುಗಳಲ್ಲಿ ಸಂಪೂರ್ಣ ದ್ವೇಷಯುಕ್ತನಾಗಿ, ಇವುಗಳನ್ನ ಮನಃಸಮೀಪದಲ್ಲಿ ಸೇರಿಸಧಾಂಗೆ ದೂರಮಾಡಿ, ಹರ್ಷ–ಸರ್ವಾಧಿಷ್ಠಾನಗಳಲ್ಲಿ ಅಂತರ್ಗತ ಪರಮಾತ್ಮನ್ನ ಚಿಂತಿಸುತ್ತ, ಸಂತೋಷದಿಂದ ಯುಕ್ತನಾಗಿ, ವಿಸ್ಮೃತಿಯಿಂದ–ದೇವರನ್ನ ಹೃದಯಾಕಾಶದಲ್ಲೂ, ಬಹಿಃ ಸರ್ವತ್ರದಲ್ಲೂ ನೋಡುತ್ತಾ ಧ್ಯಾನಮಾಡುತ್ತಾ ಆನಂದೋದ್ರಿಕ್ತನಾಗಿ, ದೇಹದಲ್ಲಿ ಸ್ಮೃತಿರಹಿತನಾಗಿ, "ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ" ಎಂಬ ಪ್ರಮಾಣಾನುಸಾರ ಕೇವಲ ಭಕ್ತಿ ಎಂಬ ಸ್ನೇಹದಿಂದ, ಹರಿ ಎಂಬ–"ಬುದ್ಧ್ಯಾಬುದ್ಧ್ಯಾವದಂಶ್ಚೈವ ಹರಿರಿತ್ಯಕ್ಷರ ದ್ವಯಂ | ಸ್ಮರಣಾತ್ ಕೀರ್ತನಾದ್ವಾಪಿ ನ ಪುನರ್ಜಾಯತೇ ಕ್ವಚಿತ್ ||" ಇನ್ನೂ "ಇಡೋಪಹೂತಂ ಗೇಹೇಷು ಹರೇಃ ಭಾಗಂ ಕ್ರತುಷ್ವಹಂ | ವರ್ಣೋ ಮೇ ಹರಿತಃ ಶ್ರೇಷ್ಠಸ್ತಸ್ಮಾದ್ಧರಿರಿತಿ ಸ್ಮೃತಃ ||" ಇತಿ ಮೋಕ್ಷಧರ್ಮೇ. ಗೀತಾಭಾಷ್ಯ ೧೧ನೇ ಅಧ್ಯಾಯ ೯ನೇ ಶ್ಲೋಕೋಕ್ತ ಪ್ರಕಾರವೂ, ದುರಿತಪರಿಹಾರ ಮಾಡುವಂಥಾ ಶ್ರೀಹರಿ ಎಂತ ಅನತಕ್ಕ, ಎರಡಕ್ಷರ–ಏತಾದೃಶ ಮಹಾಮಾಹಾತ್ಮ್ಯ ಉಳ್ಳ ಶ್ರೀಹರಿ ಎಂಬ ಎರಡು ವರ್ಣಗಳು, ಆಗಲಿ–ದಾವ ಕಾಲ, ದಾವ ದೇಶದಲ್ಲಿ ಇದ್ದ ಕಾಲಕ್ಕೂ, ಒಮ್ಮೆ–ಕೇವಲ ದೀನನಾಗಿ ಒಂದಾವರ್ತಿ, ಬಾಯ್ದೆರೆದು–ಮುಖವನ್ನೇ ತೆಗೆದು ಘರ್ಜನೆಯಿಂದ, ನುಡಿದ ಮಾತ್ರದಲಿ–ಉಚ್ಚಾರಮಾಡೋ ಮಾತ್ರದಿಂದ, ದುರಿತಗಳಿರದೆ–ಪಾಪಗಳು ಇರದೆ, ಪೋಪುವು–ಹೋಗೋವಾಗತವೆ. ಜ್ಞಾನಕ್ಕೆ ಪ್ರತಿಬಂಧಕವಾದ ಅಜ್ಞಾನಾಖ್ಯ ಪಾಪಗಳು ಪರಿಹಾರವಾಗತವೆ. ಅಜ್ಞಾನದಿಂದ ಕೃತ ಪಾಪಗಳೂನೂ ಹ್ಯಾಂಗೆ ನಾಶ ವಾಗತವೆ ಎಂದರೆ, ತೂಲರಾಶಿಯೊಳು–ಹತ್ತಿರಾಶಿ ಒಳಗೆ, ಅನಳ–ಅಗ್ನಿಯು, ಪೊಕ್ಕಂತೆ–ಪ್ರವೇಶಮಾಡಿದರೆ ಹ್ಯಾಂಗೆ ಸುಟ್ಟುಹೋಗೋದೋ, ಹಾಂಗೆ ಭಸ್ಮವಾಗತದೆ ಎಂತ ತಾತ್ಪರ್ಯ. ಇಂಥಾ ಮಾಹಾತ್ಮ್ಯ ಸುದೃಢ ಸ್ನೇಹದಿಂದ ಮಾಡಿದ ನಾಮಸ್ಮರಣೆಯಿಂದ ಭಗವದಪರೋಕ್ಷವಾಗಿ, ಸಂಚಿತಕರ್ಮಸಾಂಕೇತವಾದ ಹತ್ತಿರಾಶಿ ಭಸ್ಮವಾಗಿಹೋಗತದೆ. ಆಗಾಮಿಕರ್ಮ ನಿರ್ಲೇಪವಾಗೋದಾಗತದೆ. ನಂತರ ಪ್ರಾಂತಕ್ಕೆ ಲಿಂಗಭಂಗವಾಗಿ ಸ್ವರೂಪಾನಂದವನ್ನು ಭೋಜನಮಾಡೋವನಾಗತಾನೆ. ಆದಕಡಿಯಿಂದ ಭಗವನ್ನಾಮ ಸ್ಮರಣೆ ಇಂಥಾ ಮಾಹಾತ್ಮ್ಯ ಉಳ್ಳದ್ದು ಎಂತ ತಾತ್ಪರ್ಯ.

**ವಿಶೇಷಾರ್ಥ :–** ಶ್ರೀ ವಿಜಯದಾಸರಾಯರು ನಾಮಸ್ಮರಣೆ ಮಾಹಾತ್ಮ್ಯ ತಾವು ಮಾಡಿದ ಹರಿನಾಮಸುಳಾದಿಯಲ್ಲಿಯೂ, ಹರಿಚರಿತೆ ಸುಳಾದಿಯಲ್ಲಿಯೂ ನಿರೂಪಿಸಿದ್ದಾರೆ. ವಿಸ್ತಾರವಾಗಿ ಹೇಳಲಿಕ್ಕೆ ಗ್ರಂಥಗಹನಭೀತಿಯಿಂದ ಸ್ವಲ್ಪಮಟ್ಟಿಗೆ ಹೇಳಲ್ಪಡುತ್ತದೆ.

**ಹರಿನಾಮ ಸುಳಾದಿ**

ಹರಿನಾಮ ಲಕ್ಷ್ಮೀ ಕಾಣೋ ದಾರಿದ್ರ್ಯ ಜನರಿಗೆ
ಹರಿನಾಮ ಬ್ರಹ್ಮ ಕಾಣೋ ಅಲ್ಪಾಯು ಉಳ್ಳ ಜನಕೆ
ಹರಿಪಾದ ಪಾಶ ಕಾಣೋ ದುರಿತಘನಾವಳಿಗೆ (ಪಾಪ ಸಮೂಹಗೆ)
ಹರಿ ಗರುಡ ಕಾಣೋ ಕಾಲಾಖ್ಯ ಸರ್ಪಗಳಿಗೆ
ಹರಿ ಶೇಷ ಕಾಣೋ ಜ್ಞಾನಧನ ಪಾಲಿಪದಕೆ
ಹರಿ ರುದ್ರ ಕಾಣೋ ಭವವೆಂಬೋ ಮೃತ್ಯುವಿಗೆ
ಹರಿ ಇಂದ್ರ ಕಾಣೋ ದುಷ್ಕರ್ಮ ಪರ್ವತಕ್ಕೆ
ಹರಿ ಸೂರ್ಯ ಕಾಣೋ ಅಜ್ಞಾನ ಕತ್ತಲಿಗೆ
ಹರಿ ಚಂದ್ರ ಕಾಣೋ ಹೃತ್ತಾಪ ನಿರ್ಮೂಲಕ್ಕೆ
ಹರಿ ವರುಣ ಕಾಣೋ ತುಷ್ಟಿಯ ಕೊಡುವಾದಕ್ಕೆ
ಹರಿ ಅಗ್ನಿ ಕಾಣೋ ದುರಿತ ಕಾನನಕ್ಕೆ
ಹರಿ ಬಡಬಾನಲವೋ ಬಹು ದುಃಖ ಸಾಗರಕ್ಕೆ
ಹರಿ ಸಂಜೀವನವೋ ಮೃತ್ಯು ಪ್ರಾಯ ಜೀವಿಗಳಿಗೆ
ಹರಿ ವೈದ್ಯ ಕಾಣೋ ಭವರೋಗ ಕಳಿಯೋದಕ್ಕೆ
ಹರಿ ಗಂಗೆ ಕಾಣೋ ಮನಮಲವ ಕಳಿಯೋದಕ್ಕೆ
ಹರಿ ಕಲ್ಕಿಯೇ ಕಾಣೋ ಅನಾಚಾರ ಬಿಡಿಸೋದಕ್ಕೆ
ಹರಿ ಪ್ರಾಣ ಕಾಣೋ ಇಂದ್ರಿಯಂಗಳ ಬಲಕ್ಕೆ
ಹರಿ ವ್ಯಾಘ್ರ ಕಾಣೋ ಆಪತ್ತು ಮೃಗಂಗಳಿಗೆ
ಹರಿ ಸಿಂಹ ಕಾಣೋ ಕೋಪವೆಂಬ ಗಜಕ್ಕೆ
ಹರಿ ಗಜ ಕಾಣೋ ಆನೆ ಎಂಬೋ ಕದಳೀಗೆ
ಹರಿ ಶಸ್ತ್ರ ಕಾಣೋ ಕಾಮಬಲ ಖಂಡ್ರಿಪೊದಕ್ಕೆ
ಹರಿ ವಿತ್ತ ಕಾಣೋ ಸತ್ಕರ್ಮ ಕೊಂಬುವೋದಕ್ಕೆ
ಹರಿ ಆಭರಣ ಕಾಣೋ ಶರೀರಾಲಂಕಾರಕ್ಕೆ
ಹರಿ ಅಂಬರ ಕಾಣೊ, ಭಯವೆಂಬೋ ಶೀತಕ್ಕೆ
ಹರಿ ವಜ್ರಪಂಜರ ಕಾಣೋ ಶರಣಾರ ಕುಲಕೋಟಿಗೆ
ಹರಿ ನೆನೆದವರ ಅಶುಭವೇ ಓಡಿಸೂವಾದು

ಹರಿ ನಂಬಿದರೇ ಸರ್ವಾದೃಷ್ಟಿ ಗೋಚರ
ಹರಿ ಆವಾವಾಪೇಕ್ಷಿತ ಕೊಡುವಾದು
ಹರಿ ಮಾರುತೀ ನಮ್ಮ ವಿಜಯ ವಿಠ್ಠಲರೇಯ
ಹರಿಯಿಂದ ಮನುಜಗೆ ಹರುಷ ಪ್ರವಹವೆನ್ನೋ ||

**ಹರಿಚರಿತ ಸುಳಾದಿ**

ಹರಿಚರಿತಶ್ರವಣ ದುರಿತದುಚ್ಚಾಟನ
ಹರಿನಾಮ ಕೀರ್ತನೇ ಭವರೋಗಕೆ ಸಿದ್ಧೌಷಧ
ಹರಿಚರಣಸ್ಮರಣ ಮುಕ್ತರೊಳಗರ್ಪಣ (ಮುಕ್ತ್ಯಾಂಗನೆಗಾಕರ್ಷಣ)
ಇಂತು ಹರಿಸೇವೆ ಅನಂತ ಫಲಸಾಧನ
ಇಂತೆಂಬೋದೊಂದು ಪೇರ್ಮೆಗೆ ಹರಿಸೇವೆ ಫಲರೂಪ
ಶ್ರವಣವೇ ಶುಭದ ಬೆಳಕು ಕೀರ್ತನೆಯೇ ಲೇಸಿನ ಹೆಚ್ಚಿಗೆ
ಸ್ಮರಣವಚ್ಚಸುಖದೊಳು ಎಂಬದನುಭವಸಿದ್ಧ
ಸಿರಿಕೃಷ್ಣನ ಪಾದಸೇವೆಯಲ್ಲದಿಲ್ಲ (ಪಾದಸೇವೆ ಮುಕ್ತಿಕನ್ಯಾ ಸೇರುವೆ)

ಇನ್ನೂ ದಾಸರಾಯರುಗಳು ಲೋಕೋದ್ಧಾರಾರ್ಥವಾಗಿ ಮಾಡಿರುವ ದೇವರಪದಗಳೂ ಇವೆ.

**ಮಲಗುವಾಗಲಿ ಏಳುವಾಗಲಿ ।**
**ಕುಳಿತು ಮಾತಾಡುತಲಿ ಮನೆಯೊಳು ।**
**ಕೆಲಸಗಳ ಮಾಡುತಲಿ ಮೈದೊಳೆವಾಗ ಮೆಲುವಾಗ ॥**
**ಕಲುಷದೂರನ ಸಕಲಶಾವಿಲಿ ।**
**ತಿಳಿಯೆ ತತ್ತನ್ನಾಮರೂಪವ ।**
**ಬಳಿಯಲಿಪ್ಪನು ಒಂದರಕ್ಷಣ ಬಿಟ್ಟಗಲನವರ ॥ ೩ ॥**

ಇನ್ನೂ ಹರಿನಾಮಸ್ಮರಣೆ ಮಾಹಾತ್ಮ್ಯೆಯನ್ನು ಹೇಳತಾರೆ.

ಮಲಗುವಾಗಲಿ–ನಿದ್ರಾಪ್ರಾಪ್ತವಾದ ಕಾಲದಲ್ಲಿ ಮಲಗಿಕೊಂಬೋ ಕಾಲದಲ್ಲಿ, ಇಂದ್ರಿಯಗಳು ಯಾವತ್ತೂ ಬಾಹ್ಯವಿಷಯಗಳಲ್ಲಿ ಹೋಗದೆ ಏಕತ್ರ ನಿಂದಿರೋವಾಗತವೆ. ತದ್ವತ್ ಜ್ಞಾನ, ಭಕ್ತಿ, ವೈರಾಗ್ಯಗಳಿಂದ ಬಾಹ್ಯವಿಷಯಗಳಲ್ಲಿ ಹೇಯತಾ ಬುದ್ಧಿಮಾಡಿ ಅಹಂಮಮತಾದಿಗಳ ಬಿಟ್ಟು ಮಲಗಿದ ಕಾಲದಲ್ಲಿ, ಏಳುವಾಗಲಿ–ಏಳೋ ಕಾಲದಲ್ಲಿ, ಮನೋಇಂದ್ರಿಯ ಛಂದಾಗಿ ನಿಂತಿದ್ದ ಕಾಲದಲ್ಲಿ, ಕುಳಿತು–ಧ್ಯಾನೋಪಾಸನೆಯಿಂದ ಪರಮಾತ್ಮನಲ್ಲಿ ಮನಸ್ಸು ಸ್ಥಿರವಾಗಿ ನಿಂದರಿಸಿ, ಮಾತಾಡುತಲಿ–ತನ್ನ ಉಪಾಸನಾ ಮೂರ್ತಿಯ ಕೂಡ ಮಾತಾಡುತ್ತಲೇ, ತಥಾ ಪ್ರಾಕೃತವಿಷಯ ಮಾತಾಡುವಾಗಲೂ,

ದೇವರಲ್ಲಿ ಸ್ಮೃತಿ ಇರಬೇಕೆಂದು ತಾತ್ಪರ್ಯ. ಮನೆಯೊಳು ಕೆಲಸಗಳ ಮಾಡುತಲಿ– ತನ್ನ ದೇಹಾಖ್ಯ ಮನೆಯಲ್ಲಿ ಕಾರ್ಯರೂಪವಾದ ಇಂದ್ರಿಯಜನ್ಯ ವ್ಯಾಪಾರದ ಪ್ರತಿ ಕರ್ಮಗಳಲ್ಲಿ ಬಿಂಬನ್ನ ಐಕ್ಯಚಿಂತನಾ ಮಾಡಿ, ಆ ಕರ್ಮಗಳ, ಕರ್ಮಾಂತರ್ಗತ ಪರ ಮಾತ್ಮಗೆ ಸಮರ್ಪಿಸಿ, ಬಿಂಬಕ್ರಿಯಾ ದ್ವಾರಾ ಪ್ರತಿಬಿಂಬನ ಕ್ರಿಯಾ ಎಂತ ತಿಳಿದು, ಬಹಿಃ ಮನೆಯಲ್ಲಿ ತಾನು ಏನು ಕಾರ್ಯಗಳು ಮಾಡೋ ಕಾಲದಲ್ಲೂನೂ ಪರಮಾತ್ಮನ ನಾಮೋಚ್ಚಾರಣ ಮಾಡತಾ, ಮೈದೊಳೆವಾಗ–ಶುಚಿ ಆಗೋ ನಿಮಿತ್ತ ತಾನು ಸ್ನಾನ ಮಾಡುವಾಗ, ಮೈಲಿಗೆ ರೂಪವಾದ ಅರಿಷಡ್ವರ್ಗಗಳನ್ನು ವೈರಾಗ್ಯವೆಂಬ ಉದಕದಲ್ಲಿ ಸ್ನಾನರೂಪವಾದ ಶುಚಿರ್ಭೂತನಾಗೋ ಕಾಲದಲ್ಲಿ, ಮೆಲುವಾಗ–ಪೂರ್ವೋಕ್ತ ಕರ್ಮ ಗಳನುಸರಿಸಿ ಪ್ರಾಪ್ತವಾದ ಸುಖದುಃಖಾದಿಗಳ ಅನುಭವರೂಪವಾದ ಭೋಜನಕಾಲದಲ್ಲಿ ಮತ್ತು ಭಗವದ್ಧ್ಯಾನದಿಂದ ಆನಂದವಾಗಿ ಇರೋ ಕಾಲದಲ್ಲಿ, ಕಲುಷದೂರನ–ಲೇಶ ವಾದರೂ ಕಲ್ಮಷರಹಿತನಾದ ಶ್ರೀಪರಮಾತ್ಮನ, ಸಕಲ ಠಾವಿಲಿ–ಅಂತರ್ಬಹಿಃ, ಸರ್ವದೇಶ ಕಾಲಗಳಲ್ಲಿ, ತತ್ತನ್ನಾಮರೂಪನ–ಸರ್ವಸ್ಥಳದಲ್ಲಿ ತದಾಕಾರ ತದ್ರೂಪ ತದ್ಭಿನ್ನನಾಗಿರುವ ಶ್ರೀ ದೇವರ, ತಿಳಿಯೆ–ಉಪಾಸನಾರೂಪವಾದ ಚಿಂತನಮಾಡಿದರೆ, ಬಳಿಯಲಿಪ್ಪನು– ಸಮೀಪಸ್ಥ ಪದಾರ್ಥದೋಪಾದಿಯಲ್ಲಿ ಕಣ್ಣುಗಳಿಗೆ ಕಾಣತಾ ಇರತಾನೆ. ಮನಸ್ಸಿಗೆ ಹೃದಯಾಕಾಶದಲ್ಲಿ ಅಪರೋಕ್ಷದಿಂದ ತೋರತಾನೆ, ವಾಸನಾಮಯ ಬಿಂಬಾಪರೋಕ್ಷ ವಾಗತದೆ ಎಂತ ತಾತ್ಪರ್ಯ. ಈ ಪ್ರಕಾರ ಮಾಹಾತ್ಮ್ಯಜ್ಞಾನ ಸುದೃಢ ಸ್ನೇಹಪೂರ್ವಕ ಹರಿನಾಮೋಚ್ಚಾರಣೆ ಮಾಡುವಂಥ, ಅವರ–ಇಂಥಾ ಭಗವದ್ಭಕ್ತರನ್ನ, ಒಂದರಕ್ಷಣ– ಒಂದು ಕ್ಷಣಲವಕಾಲವಾದರೂ, ಬಿಟ್ಟಗಲನು–ಬಿಟ್ಟು ಇರೋದಿಲ್ಲ ಎಂತ ತಾತ್ಪರ್ಯ.

**ತಾ||** ಸರ್ವಪ್ರಕಾರದಲ್ಲೂ ಪರಮಾತ್ಮನ ನಾಮೋಚ್ಚಾರಣ ಸದಾ ಮಾಡಬೇಕು, ಇದರಿಂದ ಹೃದಯಾಕಾಶಗತ ಬಿಂಬಾಪರೋಕ್ಷವಾಗತದೆ ಎಂತ ತಾತ್ಪರ್ಯ.

**ವಿಶೇಷಾರ್ಥ :–** ಪ್ರಮಾಣ. "ಹರಿರ್ಯಾತಿ ಹರಿರ್ಯಾತಿ ದಸ್ಯುವ್ಯಾಜೇನ ಯೋ ವದೇತ್ | ಸೋಪಿ ಸದ್ಗತಿಮಾಪ್ನೋತಿ ಗತಿಂ ಸುಕೃತಿನೋ ಯಥಾ ||"

**ಆವಕುಲದವನಾದರೇನಿ |**
**ನ್ನಾವ ದೇಶದೊಳಿದ್ದರೇನಿ |**
**ನ್ನಾವ ಕರ್ಮವ ಮಾಡಲೇನಿನ್ನಾವ ಕಾಲದಲಿ ||**
**ಶ್ರೀವರನ ಸರ್ವತ್ರದಲಿ ಸಂ |**
**ಭಾವಿಸುತ ಪೂಜಿಸುತ ಮೋದಿಪ |**
**ಕೋವಿದರಿಗುಂಟೇನೊ ಭಯದುಃಖಾದಿದ್ವಂದ್ವಗಳು || ೪ ||**

ಪೂರ್ವೋಕ್ತರಾದಂಥ ಭಗವದ್ಭಕ್ತರಿಗೆ ದಾವ ಭಯವೂ ಇಲ್ಲ ಎಂತಲೂ, ಸರ್ವರೂ ಭಗವನ್ನಾಮ ಉಚ್ಚಾರ ಮಾಡಬಹುದೆಂದೂ ಹೇಳತಾರೆ.

ಆವ ಕುಲದವನಾದರೇನು–ಪೂರ್ವೋಕ್ತ ಅಧಿಕಾರಿ ದಾವ ವರ್ಣದವನಾದರೂ ಸರಿಯೆ, ಉಕ್ತಂ ಚ ಆಗ್ನೇಯೇ :– "ನ ವಿದ್ಯಾ ನ ಕುಲಂ ರೂಪಂ ನ ಧನಂ ಚ ಬಹುಶ್ರುತಂ । ನ ಹರೇಃ ಪ್ರೀಯಮಾಣಸ್ಯ ಭಕ್ತಿಮಾತ್ರಪ್ರಿಯೋ ಹರಿಃ ॥" ಇತಿ. ಇನ್ನಾವ ದೇಶದೊಳಿದ್ದರೇನು– ಮತ್ತು ದಾವ ಪ್ರದೇಶದಲ್ಲಿ ಇದ್ದ ಕಾಲಕ್ಕೂ ಸರಿಯೆ, ಇನ್ನಾವ ಕರ್ಮವ ಮಾಡಲೇನು–ಮತ್ತು ದ್ವಂದ್ವಕರ್ಮಗಳೊಳಗೆ ದಾವ ಕರ್ಮವ ಮಾಡಿದರೂ ಸರಿಯೆ, ಇನ್ನಾವ ಕಾಲದಲಿ–ಮತ್ತು ಸರ್ವಕಾಲಗಳಲ್ಲೂ, ಶ್ರೀವರನ–ಶ್ರೀ ಲಕ್ಷ್ಮೀದೇವಿಯರ ಪತಿಯಾದ ನಾರಾಯಣದೇವರ, ಸರ್ವತ್ರದಲಿ–ಪೂರ್ವೋಕ್ತ ಸರ್ವಾಧಿಷ್ಠಾನಗಳಲ್ಲಿ, ಸಂಭಾವಿಸುತ–ಛಂದಾಗಿ ಅನುಸಂಧಾನದಿಂದ ಧ್ಯಾನಮಾಡಿ, ಪೂಜಿಸುತ–ಭಗವದ್ರೂಪಗಳಿಂದ ಭಗವದ್ರೂಪಗಳಿಗೆ ಐಕ್ಯ ಚಿಂತಿಸುತ ಅಂದರೆ, ಐಕ್ಯಚಿಂತನಾ ರೂಪವಾದ ಪೂಜಾಮಾಡತಾ, ಮೋದಿಪ-ಭಗವದ್ವಿಷಯಕವಾದ ಜ್ಞಾನಾನಂದಾದಿಗಳಿಂದ ಸಂತೋಷಪಡತಕ್ಕ, ಕೋವಿದರಿಗೆ–ಜ್ಞಾನಿಗಳಿಗೆ, ಭಯ–ಯಮಲೋಕದ ಭಯವೇನು, ನರಕ ಭಯ, ಐಹಿಕಸಂಬಂಧವಾದ ವಿಷಯಾದಿಗಳ, ದುಃಖ ಆದಿ–ಇವೇ ಮೊದಲಾದ ಅನೇಕ ವಿಧ ತಾಪತ್ರಯಗಳು, ದುಃಖಗಳು, ದ್ವಂದ್ವಗಳು–ಇನ್ನೂ ಲಾಭಾಲಾಭ ಜಯಾಪಜಯಗಳು ಇವ್ರಗಳು, ಉಂಟೇನೊ–ಉಂಟಾ ಅಂದರೆ, ಲೇಪ ಇಲ್ಲ ಎಂತ ಸಂಬೋಧನದಿಂದ ಹೇಳಿದ್ದಾರೆಂದು ತಾತ್ಪರ್ಯ.

**ವಾಸುದೇವನ ಗುಣಸಮುದ್ರದೊ ।**
**ಳೀಸಬಲ್ಲವ ಭವಸಮುದ್ರಾ ।**
**ಯಾಸವಿಲ್ಲದೆ ದಾಟುವನು ಶೀಘ್ರದಲಿ ಜಗದೊಳಗೆ ॥**
**ಬೇಸರದೆ ದುರ್ವಿಷಯಗಳ ಅಭಿ ।**
**ಲಾಷೆಯಲಿ ಬಳಲುವವ ನಾನಾ ।**
**ಕ್ಲೇಶಗಳನನುಭವಿಪ ಭಕ್ತಿಸುಮಾರ್ಗ ಕಾಣದಲೆ ॥ ೫ ॥**

ಸಂಸಾರವೆಂಬ ಸಮುದ್ರ ದಾಟತಕ್ಕವನು ಎಂಥಾವನೆಂದರೆ ಹೇಳತಾರೆ. ದುಃಖಾನುಭವ ಮಾಡತಕ್ಕವನ ವಿಚಾರವನ್ನೂ ಹೇಳತಾರೆ.

ವಾಸುದೇವನ ಗುಣಸಮುದ್ರದೊಳು–ಶ್ರೀ ವಾಸುದೇವರೂಪನಾದ ಪರಮಾತ್ಮನ ಕಲ್ಯಾಣಗುಣಗಳೆಂಬ ಸಮುದ್ರೋದಕದಲ್ಲಿ, ಈಸಬಲ್ಲವ-ಧ್ಯಾನೋಪಾಸನೆಗಳೆಂಬ ಚಿಂತನೆಯಿಂದ ಈಸತಕ್ಕವ, ಭವಸಮುದ್ರ–ಸಂಸಾರವೆಂಬ ಸಮುದ್ರವನ್ನು, ಆಯಾಸವಿಲ್ಲದೆ–ಏನೇನೂ ಆಯಾಸಪಡಧಾಂಗೆ, ಶೀಘ್ರದಲಿ–ಬಹು ತೀವ್ರದಿಂದ, ದಾಟುವನು–ದಾಟೋವನಾಗತಾನೆ. ಪರಮಾತ್ಮನ ಗುಣಗಳು ಅಪರಿಚ್ಛಿನ್ನವಾದವು. ಅದರಲ್ಲಿ ಈಸಿದವಗೆ, ಭವಾಖ್ಯ ಸಮುದ್ರ ದಾಟೋಣ ಆಶ್ಚರ್ಯವಲ್ಲ. ಪರಮಾತ್ಮನ ಗುಣೋಪಾಸನ ಮಾಡತಕ್ಕವ ಬ್ಯಾಗಲೇ ಅಪರೋಕ್ಷ ಹೊಂದಿ 'ನ ಚ ಪುನರಾವರ್ತತೆ' ಲೋಕವನ್ನು ಹೊಂದತಾನೆ. ಜಗದೊಳಗೆ–ಈ ಲೋಕದಲ್ಲಿ ಜನ್ಮವೆತ್ತಿ ಎಂದರೆ ಮನುಷ್ಯಜನ್ಮ ಹೊಂದಿ,

ಬೇಸರದೆ—ಬ್ಯಾಸರಿಕೆ ಇಲ್ಲದೆ, ದುರ್ವಿಷಯಗಳ—ಅನಿತ್ಯವಾದ ಪದಾರ್ಥಗಳಲ್ಲಿ, ಅಂದರೆ, ದಾರಾಪುತ್ರಾದಿಗಳಲ್ಲಿ ಮಮತಾಯುಕ್ತನಾಗಿ ನಿಸ್ಪೃಹನಾಗದೆ ಇದ್ದವ, ದುರ್ವಿಷಯಗಳಲ್ಲಿ, ಅಭಿಲಾಷೆಯಲಿ—ಆಸಕ್ತಿ ಉಳ್ಳಂಥಾವನಾಗಿ ದೇಹತ್ಯಾಗ ಮಾಡತಾ, ಬಳಲುವವ—ಪುನಶ್ಚ ಜನ್ಮ ಧರಿಸಿ ಅದೇ ವಿಷಯಗಳಲ್ಲಿ ಬಿದ್ದು, ನಾನಾ ಕ್ಲೇಶಗಳನನುಭವಿಸ—ದುಃಖಗಳ ಅನುಭವ ಮಾಡತಾ ಇರತಾನೆ. ಯಾತರಿಂದ ಅಂದರೆ, ಭಕ್ತಿ—ಶ್ರೀ ಪರಮಾತ್ಮನಲ್ಲಿ ಸದ್ಭಕ್ತಿ ಮಾಡಿ ಸದ್ಗತಿ ಐದೋದಕ್ಕೆ, ಸುಮಾರ್ಗ—ಸಮೀಚೀನವಾದ ಮಾರ್ಗವನ್ನ, ಕಾಣದಲೆ—ತಿಳಕೊಳ್ಳದೆ ದುಃಖಾದಿಗಳನ್ನ ಭೋಜನ ಮಾಡತಾ ಇರತಾನೆ. ಅಂದರೆ, ಸಂಗತದಿಂದ ಭಗವನ್ಮಾಹಾತ್ಮ್ಯ ತಿಳಿಯಬೇಕು ಎಂತ ತಾತ್ಪರ್ಯ.

**ಸ್ನಾನ ಜಪ ದೇವಾರ್ಚನೆಯು ವ್ಯಾ ।**
**ಖ್ಯಾನ ಭಾರತಮುಖ ಮಹೋಪಪು ।**
**ರಾಣ ಕಥೆಗಳ ಪೇಳಿ ಕೇಳಿದರೇನು ದಿನದಿನದಿ ॥**
**ಜ್ಞಾನಕರ್ಮೇಂದ್ರಿಯಗಳಿಂದೇ ।**
**ನೇನು ಮಾಡುವ ಕರ್ಮಗಳು ಲ ।**
**ಕ್ಷ್ಮೀನಿವಾಸನ ಪೂಜೆಯೆಂದರ್ಪಿಸದ ಮಾನವನು ॥ ೬ ॥**

ಶ್ರೀ ಭಗವತ್ಸಂಬಂಧವಾದ ಜ್ಞಾನದಿಂದ ರಹಿತನಾಗಿರುವ ಪಂಡಿತನು ಏನು ಸತ್ಕರ್ಮ ಮಾಡಿದರೂ ಪ್ರಯೋಜನವಿಲ್ಲ, ನಿಷ್ಫಲ ಎಂತ ಹೇಳತಾರೆ.

ಸ್ನಾನ—ಗಂಗಾದಿ ತೀರ್ಥಗಳಲ್ಲಿ ಸ್ನಾನಮಾಡೋ ಕಾಲದಲ್ಲಿ ತನ್ನ ದೇಹಾಂತರ್ಗತ ಪರಮಾತ್ಮನ್ನ ತೀರ್ಥಾಂತರ್ಗತ ಪರಮಾತ್ಮನಲ್ಲಿ ಐಕ್ಯಚಿಂತನಾ ಮಾಡಿ, ದೇವರು ಸರ್ವತ್ರವ್ಯಾಪ್ತನೆಂದು ತಿಳಿದು, ತೀರ್ಥಮಾಹಾತ್ಮ್ಯಗಳ ತಿಳಿದು, ಸ್ನಾನವೇನು, ಜಪ—ತಂತ್ರಸಾರೋಕ್ತ ಮಹಾಮಂತ್ರಗಳೇನು, ದೇವತಾರ್ಚನೆಯು— ತಂತ್ರಸಾರೋಕ್ತ ಭಗವತ್ಪೂಜಾ ಏನು, ವ್ಯಾಖ್ಯಾನ—ಸಚ್ಛಾಸ್ತ್ರ, ಮೂಲ ಟೀಕಾ ಪಾಠಪ್ರವಚನವೇನು, ಭಾರತ—ಶ್ರೀ ಮಹಾಭಾರತ, ಭಾಗವತ ಮೊದಲಾದ, ಮುಖ ಮಹಾ ಉಪಪುರಾಣಕಥೆಗಳ—ಇನ್ನೂ ಅನೇಕವಾದ ಪುರಾಣಗಳ, ಮಹಾ ಉಪಪುರಾಣಗಳ, ವೇದಾಧ್ಯಯನಾದಿಗಳ, ಭಗವತ್ಕಥಾದಿಗಳ, ಪೇಳಿ ಕೇಳಿವರೇನು—ತಾನು ಹೇಳೋಣ, ಅನ್ಯರಿಂದ ತಾನು ಕೇಳೋಣವೇನು, ಇವು ಯಾವತ್ತೂ, ಸತ್ಕ್ರಿಯಗಳಾಗಿ ಇದ್ದಾಗ್ಯೂ ಅನುಸಂಧಾನವಿಲ್ಲದಿದ್ದರೆ ಏನೂ ಪ್ರಯೋಜನವಿಲ್ಲ ಎಂತ ತಾತ್ಪರ್ಯ. ಅನುಸಂಧಾನ ಎಂಬುದು ಎಂಥಾದ್ದೆಂದರೆ, ಜ್ಞಾನಕರ್ಮೇಂದ್ರಿಯಗಳಿಂದ—ಅಹಂಮಮತಾ ತ್ಯಾಗಪೂರ್ವಕ ಏಕಾದಶೇಂದ್ರಿಯಗಳಲ್ಲಿ ನಿಯಾಮಕನಾದ ಪರಮಾತ್ಮನ್ನ ಚಿಂತನಾ ಮಾಡಿ, ಸರ್ವ ಕರ್ಮಗಳಲ್ಲಿ, ಏನೇನು ಮಾಡುವ ಕರ್ಮಗಳು—ತನ್ನ ಈ ಉಭಯವಿಧ ಕರ್ಮಗಳು, ಇಂದ್ರಿಯನಿಯಾಮಕ ಪರಮಾತ್ಮನ ದ್ವಾರಾ ನಡೆಯುತ್ತವೆ ಎಂತ ತಿಳಿದು, ಕರ್ಮಾಂತರ್ಗತ ಪರಮಾತ್ಮನ್ನ ಕ್ಷಣಲವಕಾಲದಲ್ಲಿ ವಿಸ್ಮೃತಿ ಬಾರದಂತೆ, ಯಾವತ್ತೂ ಕರ್ಮಗಳು,

ಲಕ್ಷ್ಮೀನಿವಾಸನ–ಲಕ್ಷ್ಮೀಪತಿಯಾದ ಶ್ರೀ ನಾರಾಯಣದೇವರ, ಪೂಜೆಯೆಂದು–ಸಕಲ ಕರ್ಮಗಳ ಪರಮಾತ್ಮಗೆ ಅರ್ಪಿಸಿದರೆ ಇದೇ ಪೂಜಾ ಎಂತ ಕರಿಸುತ್ತದೆ, ಇದೇನೇ ಪರಮಾತ್ಮನ ಪೂಜಾ ಎಂತ ತಿಳಿದು, ಕರ್ಮಾಂತರ್ಗತ ದೇಹಾಂತರ್ಗತ ರೂಪಗಳಿಗೆ ಐಕ್ಯ ಚಿಂತನೆಯೇ ಪೂಜಾತ್ವೇನ ಅನುಸಂಧಾನದಿಂದ, ಅರ್ಪಿಸಿದ ಮಾನವನು–ಅರ್ಪಿಸೋವನಾಗಬೇಕು ಎಂತ ತಾತ್ಪರ್ಯ, ಈ ಪ್ರಕಾರ ಮಾಡದೇ ಇರತಕ್ಕ ಮನುಷ್ಯ, ದಿನದಿನದಿ–ಪ್ರತಿದಿನದಲ್ಲಿ ಮಾಡಿದ ಸತ್ಕರ್ಮಗಳು ಪ್ರಯೋಜನರಹಿತವಾಗಿ ಪರಮಾತ್ಮಗೆ ಪ್ರೀತಿ ಇಲ್ಲದೇ ಹೋಗತವೆ ಎಂತ ತಾತ್ಪರ್ಯ.

**ವಿಶೇಷಾರ್ಥ :–** "ತಪಸ್ವಿನೋ ದಾನಪರಾ ಯಶಸ್ವಿನೋ ಮನಸ್ವಿನೋ ಮಂತ್ರವಿದಸ್ಸುಮಂಗಳಾಃ | ಕ್ಷೇಮಂ ನ ವಿಂದಂತಿ ವಿನಾ ಯದರ್ಪಣಂ ತಸ್ಮೈ ಸುಭದ್ರ ಶ್ರವಸೇ ನಮೋ ನಮಃ ||" ಎಂತ ಭಾಗವತ ದ್ವಿತೀಯಸ್ಕಂಧೇ.

**ದೇವಗಂಗೆಯೊಳುಳ್ಳವಗೆ ದುರಿ |**
**ತಾವಳಿಗಳುಂಟೇ ವಿಚಾರಿಸೆ |**
**ಪಾವುಗಳ ಭಯವುಂಟೆ ವಿಹಗಾಧಿಪನ ಮಂದಿರದಿ ||**
**ಜೀವಕರ್ತೃತ್ವವನು ಮರೆದು ಪ |**
**ರಾವರೇಶನೆ ಕರ್ತೃ ಎಂದರಿ |**
**ದಾವ ಕರ್ಮವ ಮಾಡಿದರು ಲೇಪಿಸವು ಕರ್ಮಗಳು || ೭ ||**

ಭಗವದ್ಭಕ್ತಗೆ ಕರ್ಮ ಸಮೂಹಗಳ ಲೇಪನವಾಗೋದಿಲ್ಲ ಎಂತ ಹೇಳತಾರೆ.

ದೇವಗಂಗೆಯೊಳುಳ್ಳವಗೆ – ಕ್ರೀಡಾದಿಗುಣವಿಶಿಷ್ಟನಾದ ವಾಸುದೇವನಿಂದ ಜನ್ಯವಾದ, ಬೆವರೋದಕವೆಂಬ ಲಕ್ಷ್ಮ್ಯಾತ್ಮಕವಾದ ಗಂಗಾ ಸಾಂಕೇತವಾದ ಉದಕದೊಳು ವಾಸವಾಗಿರತಕ್ಕವಗೆ, ದುರಿತಾವಳಿಗಳುಂಟೆ–ಜನನ ಮರಣಕ್ಕೆ ಕಾರಣವಾದ ಸುಕರ್ಮ ದುಷ್ಕರ್ಮಗಳೆಂಬ ಉಭಯ ವಿಧ ಪಾಪ ಸಮೂಹಗಳು ಇಲ್ಲ ಎಂತ ಅರ್ಥ. ಅಹಂ ಮಮತಾ ಎಂಬುದರನ್ನ ವಹಿಸಿ ಮಾಡುವ ಪುಣ್ಯಕರ್ಮ, ಪಾಪಕರ್ಮ ಇವುಗಳು ಜನ್ಮಕ್ಕೆ ಕಾರಣವಾಗತವೆ. ಪುಣ್ಯಕರ್ಮ, ಪಾಪವೇ ಆಗತದೆ. ಕ್ಷೀರದಲ್ಲಿ ವಿಷ ಮಿಶ್ರಮಾಡಿ ಪಾನ ಮಾಡಿದರೂ ಒಂದೇ, ಬರೀ ವಿಷ ಪಾನ ಮಾಡಿದರೂ ಒಂದೇ, ಅಂತೂ ಎರಡು ವಿಧದಿಂದಲೂ ಮೃತಿ ಐದಿಸತಕ್ಕ ದೋಷರೂಪಗಳೇ. ಸತ್ಕರ್ಮಾನುಷ್ಠಾನ ಮಾಡುವಗೆ ಅಹಂಮಮತಾ ಎಂಬುದು ಇರಬಾರದು. ಸಾಮಾನ್ಯ ವಿಷದಲ್ಲಿ ಕಾಳಕೂಟ ಮೇಳನ ಮಾಡಿದಂತಾಗುತ್ತದೆ. ಮತ್ತು ವಿಹಗಾಧಿಪನ–ಪಕ್ಷಿಶ್ರೇಷ್ಠನಾದ ಗರುಡದೇವರ, ಮಂದಿರದಿ–ಮನೆ ಒಳಗೆ ಆವಾಸವಾಗಿ ಗರುಡದೇವರ ಆಶ್ರಯ ಮಾಡಿದವಗೆ ಹಾವುಗಳ ಭಯವು ಉಂಟೇ, ಪಾವುಗಳ ಭಯವುಂಟೆ–ಅಲ್ಪವಾದ ಸರ್ಪಗಳ ಭಯ ಇಲ್ಲ ಎಂತ ತಾತ್ಪರ್ಯ. ವಿಚಾರಿಸೆ–ವಿಚಾರ ಮಾಡೋದರಲ್ಲಿ ಗಂಗಾ, ಗರುಡ ಇವರ ಆಶ್ರಯ

ಮಾಡಿದವರಿಗೆ ದಾವ ಪಾಪಗಳ ಭಯವೂ, ವಿಷದ ಭಯವೂ ಇಲ್ಲ. ತದ್ವತ್ ಜೀವ-ಅಸ್ವತಂತ್ರನಾದ, ಪರಾಧೀನಕರ್ತನಾದ, ಅನಾದಿಯಿಂದ ಸ್ವರೂಪವನ್ನನುಸರಿಸಿ ಇರುವ ಸ್ವರೂಪಭೂತ ಸ್ವಾತಂತ್ರ್ಯರೂಪವಾದ, ಕರ್ತೃತ್ವವನು ಮರೆದು-ಮರೆತವನಾಗಿ, ತನ್ನ ಕರ್ತೃತ್ವ, ಈಶಾಧೀನಕರ್ತೃತ್ವ ಎಂತ ಸ್ಮೃತಿಯುಕ್ತನಾಗಿ, ಪರಾವರೇಶನೆ- ಪರಾ-ಜೀವೋತ್ತಮರಾದ ವಾಯುದೇವರು, ಪರ-ಇವರಕ್ಕಿಂತಲೂ ಉತ್ತಮರಾದ ರಮಾದೇವಿಯರಿಗೆ, ಈಶ-ಸ್ವಾಮಿಯಾದ ಪರಮಾತ್ಮನೇ, (ಮತ್ತು ಶ್ರೇಷ್ಠ, ನಿಕೃಷ್ಠ ಎಲ್ಲಾದಕ್ಕೂ ಸ್ವಾಮಿಯಾದವ)

"ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ । ಸಾಧುರೇವ ಸ ಮಂತವ್ಯಸ್ಸಮ್ಯಗ್ವ್ಯವಸಿತೋ ಹಿ ಸಃ ॥ "ಇತಿ ಗೀತಾ.

ಕರ್ತೃ-ಪರಾಧೀನನಲ್ಲದ ಸ್ವತಂತ್ರ ಕರ್ತ, ಎಂದರಿದು-ಎಂತ ಗುರುಮುಖದಿಂದಲೂ, ಪ್ರತ್ಯಕ್ಷಾನುಮಾನಗಳಿಂದಲೂ ತಿಳದು, ಆವ ಕರ್ಮವ ಮಾಡಿದರು-ಬಿಂಬ ಕ್ರಿಯಾದಿಂದ ಪ್ರತಿಬಿಂಬ ಕ್ರಿಯಾ ಅಂತ ಅನುಸಂಧಾನದಿಂದ ಮಾಡಿದ ಯಾವತ್ತೂ ಕರ್ಮಗಳ ಮಾಡಿದಾಗ್ಯೂ (ಇಂಥಾ), ಕರ್ಮಗಳು-ಜನನ ಮರಣಕ್ಕೆ ಕಾರಣವಾದ ಪಾಪಪುಣ್ಯ ಕರ್ಮ ಸಮೂಹಗಳು, ಲೇಪಿಸವು-ಲೇಪವಾಗಿ ಜನನ ಮರಣಗಳ ಐದಿಸೋದಿಲ್ಲ. ಇಂಥಾ ಅನುಸಂಧಾನದಿಂದ ಭಗವದಪರೋಕ್ಷವಾಗತದೆ. ರಾಜಾಜ್ಞಾದಿಂದ ಮಾಡಿದ ಹತ್ಯಾದಿಗಳಿಗೆ ಭೃತ್ಯರು ಹ್ಯಾಂಗೆ ಶಿಕ್ಷಾರ್ಹರಲ್ಲವೋ ತದ್ವತ್, ಈಶಾಜ್ಞಾದಿಂದ ಮಾಡಿದ ಪಾಪಗಳು ಶಿಕ್ಷಾರ್ಹವಲ್ಲ ಎಂತ ತಾತ್ಪರ್ಯ.

**ಏನು ಮಾಡುವ ಪುಣ್ಯ ಪಾಪಗ ।**
**ಳಾನೆ ಮಾಡುವೆನೆಂಬುವಾಧಮ ।**
**ಹೀನಕರ್ಮಕೆ ಪಾತ್ರನಾ ಪುಣ್ಯಕ್ಕೆ ಹರಿಯೆಂಬ ॥**
**ಮಾನವನು ಮಧ್ಯಮನು ದ್ವಂದ್ವಕೆ ।**
**ಶ್ರೀನಿವಾಸನೆ ಕರ್ತೃವೆಂದು ಸ ।**
**ದಾನುರಾಗದಿ ನೆನೆದು ಸುಖಿಸುವರೇ ನರೋತ್ತಮರು ॥ ೮ ॥**

ತ್ರಿವಿಧಜೀವರಿಗೆ ಸ್ವರೂಪಭೂತಕರ್ತೃತ್ವ ಈಶಾಧೀನದಿಂದ ಅದೆ. ಆ ಕರ್ತೃತ್ವದ ಸ್ವಭಾವಗಳ, ಅವನ್ನನುಸರಿಸಿದ ಯೋಗ್ಯತಾಭೇದಗಳ ಹೇಳತಾರೆ.

ಏನು ಮಾಡುವ-ತಮೋಯೋಗ್ಯನ ಸ್ವರೂಪಗತ ಅನಾದಿಭೂತವಾದ, ಈಶಾಧೀನವಾದ ಸ್ವಾತಂತ್ರ್ಯಸ್ವಭಾವ ಎಂಥಾದ್ದೆಂದರೆ, ದೇಹೇಂದ್ರಿಯಾದಿಗಳಿಂದ ಏನೇನು ಮಾಡತಕ್ಕ, ಪುಣ್ಯಪಾಪಗಳ-ಪುಣ್ಯಪಾಪ ಕರ್ಮಗಳ, ಆನೆ ಮಾಡುವನೆಂಬುವ-ಸ್ವತಂತ್ರಕರ್ತನಾನೇ ಹೊರತು ಈಶನಲ್ಲ, ದೇವರು ಕರ್ತನಲ್ಲ, 'ಅಹಂ ಬ್ರಹ್ಮ' ಎನತಕ್ಕವ, ಅಧಮ-ಮುಕ್ತಿಯೋಗ್ಯ, ನಿತ್ಯಸಂಸಾರಿಗಳಿಗಿಂತಲೂ ಅಧಮ, ಇವ ಭಗವದ್ದ್ವೇಷಿ, ತಮೋ

ಯೋಗ್ಯ. ಇವನ ಅನಾದಿಸ್ವರೂಪಭೂತಕರ್ತೃತ್ವ ಇಂಥಾದ್ದೆ. ಇದು ಈಶ್ವರನಿಂದ ರಚಿತವಲ್ಲ. ತದ್ಗತ ಪರಮಾತ್ಮ ಅದರಂತೆ ಅಭಿವ್ಯಕ್ತಿಮಾಡತಾನೆ. ಈಶ್ವರಾಧೀನವೇ ಇವನ ಕರ್ತೃತ್ವವೂ, ಹೀನ ಕರ್ಮಕೆ–ಪಾಪಕರ್ಮಗಳ ಮಾಡೋದಕ್ಕೆ, ಪಾತ್ರ ನಾ–ಪಾತ್ರ ನಾನು ಎಂದರೆ, ಈಶ ವ್ಯತಿರಿಕ್ತ ತಾನೇ ಮಾಡೋದಕ್ಕೆ ಸ್ವಾತಂತ್ರ್ಯ ಉಳ್ಳವ ಎಂತಲೂ, ಪುಣ್ಯಕ್ಕೆ–ಪುಣ್ಯಕರ್ಮ ಮಾಡೋದಕ್ಕೆ ಸ್ವತಂತ್ರ ನಾನಲ್ಲ, ಅಂಥಾ ಸ್ವಾತಂತ್ರ್ಯ ತನಗಿಲ್ಲ, ಇದಕ್ಕೆ ಈಶ ಸ್ವತಂತ್ರ ಎಂತಲೂ, ಈ ಪ್ರಕಾರ, ಪುಣ್ಯಕ್ಕೆ ಹರಿಯೆಂಬ–ಹರಿ ಸ್ವತಂತ್ರ ಎನತಕ್ಕ, ಮಾನವನು–ಮನುಷ್ಯನು, ಮಧ್ಯಮನು–ಮಧ್ಯಮಾಧಿಕಾರಿಯಾದ ನಿತ್ಯಸಂಸಾರಿ. ಇವನ ಅನಾದಿಸ್ವರೂಪ ಸ್ವಾತಂತ್ರ್ಯ ಇಂಥಾದ್ದೆ, ಇದೂನೂ ಈಶಾಧೀನವು. ತದ್ಗತ ಪರಮಾತ್ಮ ಅದರಂತೆ ಅಭಿವ್ಯಕ್ತಿ ಮಾಡತಾನೆ. ಇವನ ಸ್ವಾತಂತ್ರ್ಯವೂ ಈಶ್ವರನಿಂದ ರಚಿತವಲ್ಲ. ದ್ವಂದ್ವಕೆ–ದೇಹೇಂದ್ರಿಯಾದಿಗಳಿಂದ ಮಾಡತಕ್ಕ ಪುಣ್ಯಪಾಪ ಕರ್ಮಗಳ ಮಾಡೋದರಲ್ಲಿ, ಶ್ರೀನಿವಾಸನೆ–ಶ್ರೀ ಲಕ್ಷ್ಮೀಪತಿಯಾದ ಪರಮಾತ್ಮನೆ, ಕರ್ತೃವು–ಮಾಡಸತಾನೆಂದು ತಿಳಿದು ದ್ವಂದ್ವಕರ್ಮಗಳ ಮಾಡೋ ವಿಷಯದಲ್ಲಿ ನಾನು ಅಸ್ವತಂತ್ರ ಕರ್ತೃವೆಂದು, ಎಂದು ಸದಾನುರಾಗದಿ–ತಿಳಿದು ನಿರಂತರ ಅತಿ ಸ್ನೇಹದಿಂದ, ನೆನೆದು–ಶ್ರೀ ಪರಮಾತ್ಮನ ಸದಾ ಧ್ಯಾನೋಪಾಸನ ಮಾಡಿ, ಸುಖಿಸುವರೇ–ಸುಖಪಡತಕ್ಕವರು, ಎಂದರೆ ಲಿಂಗಭಂಗಾನಂತರ ಸುಖಪಡತಕ್ಕವರು, ನರೋತ್ತಮರು–ಇಂಥಾವರೇ ಮನುಷ್ಯರಲ್ಲಿ ಭಗವದನುಗ್ರಹಕ್ಕೆ ಪಾತ್ರರಾಗಿ ಸದ್ಗತಿ ಐದತಕ್ಕವರು. ಇವರ ಸ್ವರೂಪಭೂತ ಸ್ವಾತಂತ್ರ್ಯಕರ್ತೃತ್ವ ಇಂಥಾದ್ದೇ, ಇದೂ ಈಶನಿಂದ ರಚಿತವಲ್ಲ. ತದ್ಗತ ಪರಮಾತ್ಮ ಅದರಂತೆ ಪ್ರವರ್ತನಮಾಡತಾ ಇರತಾನೆ. ತ್ರಿವಿಧ ಜೀವರ ಸ್ವರೂಪಭೂತ ಸ್ವಾತಂತ್ರ್ಯಕ್ಕೂ, ಆ ಜೀವರಿಗೂ ಅಭೇದ, ತದ್ಗತ ಪರಮಾತ್ಮಗೂ, ಆಯಾ ಜೀವರ ಸ್ವಾತಂತ್ರ್ಯಕ್ಕೂ ಭೇದ, ಈ ರೀತ್ಯಾ ಇರೋಣದರಿಂದ ದ್ವಂದ್ವಕರ್ಮ ಅರ್ಪಣವಿಷಯದಲ್ಲಿ, ಅಧಿಕಾರಿಗಳಿಗೆ ವ್ಯತ್ಯಸ್ತವಾಗಿ ಜ್ಞಾನ ಇರೋದಾಗತದೆ. ಇದಕ್ಕೆ ಇದೇ ಕಾರಣವು ಎಂತ ತಾತ್ಪರ್ಯ.

**ಈ ಉಪಾಸನೆಗೈವರಿಳೆಯೊಳು ।**
**ದೇವತೆಗಳಲ್ಲದಲೆ ನರರ ।**
**ಲ್ಲಾವಬಗೆಯಿಂದಾದರಿವರರ್ಚನೆಯು ಹರಿಪೂಜೆ ॥**
**ಕೇವಲ ಪ್ರತಿಮೆಗಳೆನಿಪರು ರ ।**
**ಮಾವಿನೋದಗೆ ಇವರನುಗ್ರಹ**
**ವೇವರಾನುಗ್ರಹವೆನಿಸುವುದು ಮುಕುತಿಯೋಗ್ಯರಿಗೆ ॥ ೯ ॥**

ದ್ವಂದ್ವಕರ್ಮಕ್ಕೆ ಕರ್ತೃಗಳೆನತಕ್ಕ ಅಧಿಕಾರಿಗಳ ವಿಚಾರ ಹೇಳತಾರೆ.

ಈ ಉಪಾಸನೆ–ದ್ವಂದ್ವಕರ್ಮಗಳ ಮಾಡತಕ್ಕ ಅಧಿಕಾರಿಯಾದವ, ಶ್ರೀ ಪರಮಾತ್ಮ ಸರ್ವಕರ್ತನೆಂದು ಈ ರೀತ್ಯಾ ಉಪಾಸನ, ಗೈವರಿಳೆಯೊಳು–ಮಾಡತಕ್ಕವರು,

ಈ ಭೂಮಿಯಲ್ಲಿ, ದೇವತೆಗಳಲ್ಲದಲೆ–ದೇವಾಂಶರೇ ಹೊರತು ಅನ್ಯರಾದ, ನರರಲ್ಲ–ನಿತ್ಯ ಸಂಸಾರಿ, ತಮೋ ಯೋಗ್ಯರಲ್ಲ. ದೇವಶಬ್ದದಿಂದ ಬ್ರಹ್ಮಾದಿ ದೇವತೆಗಳೆಂದು ತಾತ್ಪರ್ಯ ವಲ್ಲ, ಭೂದೇವತೆಗಳೆಂತಲೂ, ಬ್ರಹ್ಮಜ್ಞಾನಿಗಳು ಎಂತ ತಾತ್ಪರ್ಯ. ಆವ ಬಗೆ ಯಿಂದಾದರು–ಸರ್ವಪ್ರಕಾರದಿಂದಲೂ, ಇವರರ್ಚನೆಯು–ಇವರ ಅಂತರ್ಗತ ಪರಮಾತ್ಮನ ತಿಳದು ಆ ದೇವರಿಗೆ ಪೂಜಾ ಎಂದು ಅನುಸಂಧಾನದಿಂದ ಇಂಥಾ ಭಗವದ್ಭಕ್ತರ ಪೂಜಾನೇ, ಹರಿಪೂಜೆ–ಪರಮಾತ್ಮನ ಪೂಜಾ ಎಂತ ಕರಿಸೋದಾಗತದೆ. ರಮಾ ವಿನೋದಗೆ–ರಮಾದೇವಿಯರಿಗೆ ಸಂತೋಷ ಕೊಡತಕ್ಕ ಪರಮಾತ್ಮಗೆ, ಕೇವಲ–ಅತ್ಯಂತ ಶ್ರೇಷ್ಠವಾದ, ಪೂಜಾರ್ಹರಾದ, ಪ್ರತಿಮೆಗಳೆನಿಸರು–ಅಧಿಷ್ಠಾನಭೂತರಾದವರೆಂತ ಕರಿ ಸೋವರಾಗತಾರೆ. ತದನ್ಯರು, ಇಂಥಾ ಪೂಜಾಕ್ಕೆ ಅರ್ಹರಲ್ಲ. ಅಧಿಕಾರಿಯಾದವ, ತನಗೆ ನೀಚಾಧಿಷ್ಠಾನದಲ್ಲಿ ಬಾಹ್ಯ ಪೂಜಾದಿಗಳು ಮಾಡಕೂಡದು. ಉತ್ತಮರಲ್ಲಿ ವಿಭೂತಿರೂಪ ಚಿಂತನೆಯಿಂದ ಪೂಜಾ ವಿಶೇಷವೇ ಹೊರತು ಅನ್ಯವಾದದ್ದು ಅಲ್ಲ. ನೀಚಾಧಿಷ್ಠಾನದಲ್ಲಿ ಮನಸಾ ಪರಮಾತ್ಮನ ವ್ಯಾಪ್ತಿ ತಿಳದು ಪೂಜಾ ಮಾಡಬೇಕು, ಬಾಹ್ಯ ಪೂಜಾದಿಂದ ವಿಷಮ ಫಲಪ್ರಾಪ್ತಿ. ಆದಕಡಿಯಿಂದ ಇಂಥಾ ಚಲಪ್ರತಿಮೆಗಳು ಎಂತ ಕರಿಸತಕ್ಕ, ಮುಕುತಿಯೋಗ್ಯರಿಗೆ–ಮುಕ್ತಿಯೋಗ್ಯರಾದ ಭಗವದ್ಭಕ್ತರಿಗೆ, ಇವರನು ಗ್ರಹವೇ–ಇಂಥಾವರ ಅನುಗ್ರಹವೇ, ಪರಾನುಗ್ರಹವು–ಉತ್ತಮವಾದ ಅನುಗ್ರಹ ಎಂತ, ಎನಿಸುವುದು – ಎನಿಸೋದಾಗತದೆ. ಸರ್ವಪ್ರಯತ್ನದಿಂದ ಭಗವದ್ಭಕ್ತರ ಅನುಗ್ರಹ ಸಂಪಾದನ ಮಾಡಬೇಕೆಂತ ತಾತ್ಪರ್ಯ.

**ತನುವೆ ನಾನೆಂಬುವನು ಸತಿಸುತ ।**
**ಮನೆಧನಾದಿಗಳೆನ್ನದೆಂಬುವ ।**
**ದ್ಯುನದಿ ಮೊದಲಾದುದಕಗಳೆ ಸತ್ತೀರ್ಥವೆಂಬುವನು ॥**
**ಅನಲಲೋಹಾದಿಪ್ರತೀಕಾ ।**
**ರ್ಚನವೆ ದೇವರಪೂಜೆ ಸುಜನರೆ ।**
**ಮನುಜರಹುದೆಂಬುವನು ಗೋಖರನೆನಿಪ ಬುಧರಿಂದ ॥ ೧೦ ॥**

ಅಂತರ್ಗತ ಪರಮಾತ್ಮನ ತಿಳಿಯದೆ, ಬಾಹ್ಯ ಅಧಿಷ್ಠಾನಗಳನ್ನು ಶ್ಲಾಘನ ಮಾಡ ತಕ್ಕವ ಎಂಥಾವನೆಂದರೆ, ಅವನ ವಿಚಾರ ಹೇಳತಾರೆ.

ತನುವೆ ನಾನು ಎಂಬುವನು–ಈ ಪಾಂಚಭೌತಿಕ ಶರೀರವನ್ನ ಕಂಡು ನನ್ನ ಶರೀರವೇ ನಾನು, ಎಂದು ಅನತಕ್ಕದ್ದು ಜೀವನ ಚಿದ್ದೇಹಕ್ಕೇ ಕೂಡತದೆ, ಸ್ಥೂಲದೇಹಕ್ಕೆ ಕೂಡೋ ದಿಲ್ಲ. ಅಚೇತನ ಸ್ಥೂಲ ದೇಹವನ್ನು ಕಂಡು, ಅಹಂಜ್ಞಾನ ವಿಶಿಷ್ಟನಾಗಿ ಸ್ವತಂತ್ರಾ ರೋಪಿತ ಬುದ್ಧಿಯಿಂದ, ಸತಿಸುತ ಮನೆ ಧನಾದಿಗಳು–ಹೆಂಡತಿ, ಪುತ್ರರು, ಮನೆ, ದ್ರವ್ಯಾದಿಗಳು, ಎನ್ನದೆಂಬುವ–ನನ್ನದೆಂದು ಅನತಕ್ಕವ, ದ್ಯುನದಿ ಮೊದಲಾದುದಕಗಳೆ– ಭಾಗೀರಥೀ ಮೊದಲಾದ ನದ್ಯಸ್ಥ ಜಡೋದಕಗಳೇ, ಸತ್ತೀರ್ಥವು–ಸಮೀಚೀನವಾಗಿ

ಪವಿತ್ರ ಮಾಡತಕ್ಕ ತೀರ್ಥಗಳು ಎಂಬುವನು ಎಂದರೆ, ಜಲರೂಪವಾದ ತೀರ್ಥಾಭಿಮಾನಿ ದೇವತೆಗಳು, ಅವರ ಅಂತರ್ಗತನಾಗಿ ಪರಮಾತ್ಮ ಇದ್ದು ಪವಿತ್ರ ಮಾಡತಾನೆ ಎಂತ ತಿಳಿಯದೆ, ಜಡೋದಕಗಳೇ ಪವಿತ್ರಮಾಡತಕ್ಕ ತೀರ್ಥ ಎಂತ, ಎಂಬುವನು–ಅನತಕ್ಕವನು, ಮತ್ತು, ಅನಲ–ಪರಿದೃಶ್ಯಮಾನ ಅಗ್ನಿ ತಥಾ ಯೋಗಾಗ್ನಿ, ಲೋಹಾದಿ–ಸ್ವರ್ಣ, ತಾಮ್ರ, ಶಿಲಾದಿಗಳಿಂದ ನಿರ್ಮಿತವಾದ, ಪ್ರತೀಕಾರ್ಚನವೆ–ವಿಷ್ಣು, ವಾಯು, ಲಿಂಗಾಕಾರದಿಂದ ಸಹಿತವಾದ ಪ್ರತಿಮಾಗಳ ಪೂಜೆಯೇ ಅಂದರೆ, ಅಂತರ್ಗತ ಪರಮಾತ್ಮನ್ನ ಪ್ರತೀಕದಲ್ಲಿ ತಿಳಿಯದೆ, ಪರಿದೃಶ್ಯಮಾನ ಪ್ರತಿಮೆಗಳೇ ಸಾಕ್ಷಾತ್ ಪರಮಾತ್ಮನೆಂದು ಪೂಜೆ ಮಾಡೋಣವೂ, ಇಂಥಾ, ದೇವರ ಪೂಜೆ–ಪೂಜೆಯು, ಸುಜನರೆ–ಭಗವದ್ಭಕ್ತರಾಗಿರುವ ಜ್ಞಾನಿಗಳನ್ನು, ಮನುಜರಹುದೆಂಬುವನು–ಸಾಧಾರಣವಾಗಿ ತನ್ನಂತೆ ಅವರೂನೂ ಮನುಷ್ಯರೆಂಬುವನು, ಇಂಥಾವನ್ನ, ಬುಧರಿಂದ–ಜ್ಞಾನಿಗಳಾದವರು ಏನೆಂತಾರೆಂದರೆ, ಗೋಖರ–ಭೂಮಿಯಲ್ಲಿ ಕತ್ತೆ ಜನಿಸಿದೋಪಾದಿಯಲ್ಲಿ ಹುಟ್ಟಿ, ಜ್ಞಾನಶೂನ್ಯನಾಗಿ ದ್ವಿಪಾದಯುಕ್ತ ಪಶು ಎಂತ, ನೆನಿಪ–ಕರಿಸಿಕೊಂಬೋವನಾಗತಾನೆ. ಮುಖ್ಯವಾಗಿ ನೀಚನೆಂದು ತಾತ್ಪರ್ಯ.

**ತಾ||** ಪ್ರಮಾಣ. "ಯಸ್ಯಾತ್ಮಬುದ್ಧಿಃ ಕುಣಪೇ ತ್ರಿಧಾತುಕೇ ಸ್ವಧೀಃ ಕಳತ್ರಾದಿಷು ಭೌಮ ಇಜ್ಯಧೀಃ | ಯತ್ತೀರ್ಥಬುದ್ಧಿಶ್ಚ ಜಲೇ ನ ಕರ್ಹಿಚಿಜ್ಜನೇಷ್ವಭಿಜ್ಞೇಷು ಸ ಏವ ಗೋಖರಃ ||" ಎಂತ ಭಾಗವತೋಕ್ತಿ ಪ್ರಮಾಣ ಇರುವುದರಿಂದ ಅಂತರ್ಗತ ಪರಮಾತ್ಮನ ಉಪಾಸನ ಮಾಡಬೇಕೆಂತ ತಾತ್ಪರ್ಯ.

**ಅನಲಸೋಮಾರ್ಕೇಂದು ತಾರಾ |**
**ವನಿ ಸುರಾಪಗ ಮುಖ್ಯತೀರ್ಥಗ |**
**ಳನಿಲ ಗಗನಮನಾದಿ ಇಂದ್ರಿಯಗಳಿಗೆ ಅಭಿಮಾನಿ ||**
**ಎನಿಪ ಸುರರ ವಿಪಶ್ಚಿತರ ಸ |**
**ನ್ಮನದಿ ಭಜಿಸದಲಿಪ್ಪವರ ಪಾ |**
**ವನವ ಮಾಡರು ತಮ್ಮ ಪೂಜೆಯ ಮಾಡಿದರು ಸರಿಯೆ || ೧೧ ||**

ಶ್ರೀ ಪರಮಾತ್ಮನ ಪೂಜಾ ಸಹಿತ, ಭಗವದ್ಭಕ್ತರ ಪೂಜಾ ಮಾಡಬೇಕೆಂದು ಹೇಳತಾರೆ.

ಅನಲ–ಅಗ್ನಿ, ಸೋಮ–"ಉಮಯಾ ಸಹ ವರ್ತತೇ ಇತಿ ಸೋಮಃ" ಅಂದರೆ, ರುದ್ರದೇವರು, ಅರ್ಕ–ಸೂರ್ಯನು, ಇಂದು–ಚಂದ್ರನು, ತಾರಾ–ಅಶ್ವಿನ್ಯಾದಿ ನಕ್ಷತ್ರಗಳು, ಅಂಗಾರಕಾದಿ ಗ್ರಹಗಳು, ಅವನಿ–ಭೂ ಅಭಿಮಾನಿಗಳು ಅಂದರೆ ಭೂದೇವತಾ, ಸುರಾಪಗ–ದೇವತಾ ಉದಕವಾದ ಭಾಗೀರಥೀ ನದ್ಯಸ್ಥ ಅಭಿಮಾನಿ ದೇವತಾ, ಮುಖ್ಯ ತೀರ್ಥಗಳು–ಸಮೀಚೀನಗಳಾದ, ಶ್ರೇಷ್ಠಗಳಾದ ಅನೇಕ ತೀರ್ಥಗಳು, ಅನಿಲ–ವಾಯು,

ಗಗನ–ಆಕಾಶ ಉಪಲಕ್ಷಣಯಾ ಪಂಚಭೂತಗಳು, ಪಂಚತನ್ಮಾತ್ರ್ರಗಳು, ಮನಾದಿ– ಮನೋ ಇಂದ್ರಿಯವೇ ಮೊದಲಾಗಿ ಉಳ್ಳ, ಇಂದ್ರಿಯಗಳಿಗೆ–ಏಕಾದಶೇಂದ್ರಿಯಗಳಿಗೆ, ಅಭಿಮಾನಿ ಎನಿಪ–ಅಭಿಮಾನಿಗಳಾದ, ಸುರರ–ದೇವತೆಗಳ, ವಿಪಶ್ಚಿತರ–ಇನ್ನೂ ಅನೇಕ ಭಗವದ್ಭಕ್ತರ, ಸನ್ಮನದಿ–ಶಮದಮಾದಿ ಸಂಪತ್ತಿನಿಂದ ಸಹಿತವಾದ ಮನಸ್ಸಿನಿಂದ, ಭಜಿಸದಲಿಪ್ಪವರ–ಅಂತರ್ಗತ ಪರಮಾತ್ಮನ್ನ ತಿಳದು, ತಾರತಮ್ಯಗಳ ತಿಳದು, ದೇವತೆಗಳ ಭಜನೆಯ ಮಾಡದೇ ಇರತಕ್ಕ ಅಧಿಕಾರಿಗಳನ್ನ, ಪಾವನವ ಮಾಡರು–ಪವಿತ್ರರನ್ನಾಗಿ ಮಾಡೋದಿಲ್ಲ. ಯಾಕೆಂದರೆ, ದೇವತೆಗಳು ಭಗವದ್ಭಕ್ತರು. ಇವರು ಪರಮಾತ್ಮಗೆ ಮುಖ್ಯ ಅಧಿಷ್ಠಾನಭೂತರಾದವರು, ಇನ್ನು ಇಂದ್ರಿಯಾಭಿಮಾನಿಗಳೂ ಆಗಿರುವದ್ದರಿಂದ ಅವರನ್ನು ದುರ್ವಿಷಯಾದಿಗಳಲ್ಲಿ ಪ್ರವೃತ್ತಿ ಬುದ್ಧಿ ಇಲ್ಲದಂತೆ, ಪ್ರಾರ್ಥನ ಮಾಡಿ ಪೂಜಿಸ ಬೇಕಾದ್ದರಿಂದ ಅಧಿಷ್ಠಾನಭೂತರಾದರು. ಈ ರೀತ್ಯಾ ದೇವತಾ ಪೂಜೆ ಅವಶ್ಯವಾದದ್ದು, ಅಂತರ್ಗತನ್ನ ತಿಳದು ಪೂಜಾದಿಗಳ ಮಾಡಬೇಕು. ಅನ್ಯದೇವತಾ ಪೂಜಾವಿಧಿ ಇದು, ತದ್ವ್ಯತಿರಿಕ್ತ ನಿಷಿದ್ಧವು. ತಮ್ಮ ಪೂಜೆಯ ಮಾಡಿದರು ಸರಿಯೆ–ರುದ್ರಾದಿ ದೇವತೆ ಗಳು ಅನ್ಯ ದೇವತೆಗಳೆಂದು ವಚನಗಳಿಗೆ ವಿಪರೀತಾರ್ಥವನ್ನು ಮಾಡಿ, ದೇವತೆಗಳ ಬಿಟ್ಟು ಪ್ರತ್ಯೇಕವಾಗಿ ಪರಮಾತ್ಮನ್ನ ನೂತನ ನೂತನವಾಗಿ ಪೂಜಾ ಮಾಡಿದರೂ ಸರಿಯೆ, ಅಂತರ್ಗತನ್ನ ತಿಳಿಯದೆ ದೇವತೆಗಳನ್ನ ಮಾತ್ರ ಪೂಜಾದಿಗಳು ಮಾಡಿದರೂ ಸರಿಯೇ, ಪರಮಾತ್ಮನೂನೂ, ದೇವತೆಗಳೂನೂ ಅಧಿಕಾರಿಗೆ ಒಂದು ಪುರುಷಾರ್ಥವನ್ನೂ ಕೊಡ ಲಾರರು ಎಂತ ತಾತ್ಪರ್ಯ.

**ಕೆಂಡ ಕಾಣದೆ ಮುಟ್ಟಿದರು ಸರಿ ।**
**ಕಂಡು ಮುಟ್ಟಲು ದಹಿಸದಿಪ್ಪುದೆ ।**
**ಪುಂಡರೀಕದಳಾಯತಾಕ್ಷನ ವಿಮಲಪದಪದ್ಮ ॥**
**ಬಂಡುಣಿಗಳೆಂದೆನಿಪ ಭಕ್ತರ ।**
**ಹಿಂಡುನೋಡಿದ ಮಾತ್ರದಲಿ ತನು ।**
**ದಿಂಡು ಗೆಡಹಿದ ನರನ ಪಾವನಮಾಳ್ಪರಾಕ್ಷಣದಿ ॥ ೧೨ ॥**

ಅಧಿಕಾರಿಯ ಉದ್ಧಾರ ಮಾಡಬೇಕಾದರೆ ಭಗವದ್ಭಕ್ತರು ಹೊರ್ತು ಅನ್ಯರು ದಾರೂ ಪವಿತ್ರ ಮಾಡಿ ಉದ್ಧಾರ ಮಾಡಲಾರರು ಎಂದು ಹೇಳತಾರೆ.

ಕೆಂಡ–ಅಗ್ನಿಯನ್ನು, ಮನುಷ್ಯರಾದವರು ತಥಾ ಪ್ರಾಣಿಗಳಾದವರು, ಕಾಣದೆ– ಬೆಂಕಿ ಎಂತ ಮನಸ್ಸಿನಿಂದ ತಿಳಿಯದೆ, ಮುಟ್ಟಿದರು ಸರಿ–ಹಸ್ತದಿಂದ ಸ್ಪರ್ಶಮಾಡಿದರೂ ಸರಿಯೆ, ಸುಡೋದಾಗತದೆ. ಕಂಡು ಮುಟ್ಟಲು–ಅಗ್ನಿ ಎಂತ ತಿಳಿದು ಮುಟ್ಟಿದಾಗ್ಯೂ ಸರಿಯೆ, ದಹಿಸದಿಪ್ಪುದೆ–ಸುಡದೆ ಇರೋದೆ ಎಂದರೆ ಸ್ಪರ್ಶಮಾತ್ರದಿಂದ ಸುಡತದೆ ಹ್ಯಾಂಗೋ ತದ್ವತ್, "ಹರಿರ್ಹರತಿ ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ । ಅವಶಾದೇವ

ಸಂಸ್ಪೃಷ್ಟೋ ದಹತ್ಯೇವ ಹಿ ಪಾವಕಃ ||" ಎಂಬ ವಚನಾನುಸಾರ, ಪುಂಡರೀಕದಳಾಯತಾಕ್ಷನ–ಕಮಲದಳಗಳೋಪಾದಿಯಲ್ಲಿ ವಿಶಾಲವಾದ ನೇತ್ರಗಳುಳ್ಳ ಪರಮಾತ್ಮನ, ವಿಮಲ ಪದಪದ್ಮ––ನಿರ್ದೋಷಗಳಾದ ಪಾದಗಳೆಂಬೋ ಪದ್ಮಗಳಲ್ಲಿ, ಬಂಡುಣಿಗಳೆಂದೆನಿಪ–ಕಮಲಗತ ಮಕರಂದ ಪಾನಮಾಡತಕ್ಕ ಭ್ರಮರದೋಪಾದಿಯಲ್ಲಿ, ಪರಮಾತ್ಮನ ಪಾದ ಕಮಲಗತ ಮಾಹಾತ್ಮ್ಯ ಎಂಬ ಮಕರಂದ ಪಾನಮಾಡತಕ್ಕ ಭ್ರಮರಸಾಂಕೇತದಿಂದ ಕರಿಸತಕ್ಕ, ಭಕ್ತರ–ಭಗವದ್ಭಕ್ತರ ಮಾಹಾತ್ಮ್ಯಾದಿಗಳ ತಿಳಿಯದೆ ಸಾಧಾರಣವಾಗಿ ಲೋಕರೀತ್ಯಾ ಅವರ ಸಂಗ ಮಾಡಿದರೆ, ಅಗ್ನಿ ಎಂತ ತಿಳಿಯದೇನ್ನೇ ಮುಟ್ಟಿದ ಅಗ್ನಿ ಹ್ಯಾಂಗೆ ಸುಡತದೋ, ತದ್ವತ್, ಸಂಗದಿಂದ ಐಹಿಕ ವಿಷಯಗಳು ನಶ್ವರ ಎಂತ ತಿಳಿಸಿ, ಭಗವತ್ತತ್ತ್ವವಾಕ್ಯ ಉಚ್ಚಾರಣದಿಂದ ಅಧಿಕಾರಿಯ ಮನಸ್ಸನ್ನ ತತ್ತ್ವಯುಕ್ತನ್ನಾಗಿ ಮಾಡಿ ಭಗವದನುಗ್ರಹ ಸಂಪಾದಿಸಿಕೊಟ್ಟು ಉದ್ಧಾರಮಾಡುವಂಥಾ ಭಕ್ತರ, ಹಿಂಡು ನೋಡಿದ ಮಾತ್ರದಲಿ–ಇನ್ನು ಅಗ್ನಿ ಎಂತ ತಿಳದು ಮುಟ್ಟಿದವಗೆ ಹ್ಯಾಂಗೆ ಸುಡತದೋ ತದ್ವತ್, ಭಕ್ತರಲ್ಲಿ ಇರತಕ್ಕ ಮಹಾಮಾಹಾತ್ಮ್ಯ ತಿಳದು ಭಕ್ತರ ಆಶ್ರಯ ಮಾಡಿ ಅಗ್ನಿಯನ್ನ ಕರಸ್ಪರ್ಶ ಮಾಡಿದಂತೆ, ಭಕ್ತರೆಂಬ ಅಗ್ನಿಯನ್ನ ಮನಸ್ಸಾಂಕೇತವಾದ ಸ್ಪರ್ಶಮಾಡಿ ಇಂಥಾ ಭಕ್ತರ ಸಮೂಹ ನೋಡಿದ ಮಾತ್ರಕ್ಕೆ ತನುದಿಂಡುಗೆಡಹಿದ–ಶರಣಾಗತನಾಗಿ ದೇಹಾಖ್ಯ ದಂಡವನ್ನ ಸಾಷ್ಟಾಂಗ ನಮಸ್ಕಾರದಿಂದ ಅವರ ಪಾದದ ಮ್ಯಾಲೆ ಕೆಡಹಿದ, ನರನ–ಆ ಮನುಷ್ಯನ್ನ ಸ್ವೀಕರಿಸಿ, ಪಾವನ–ಪವಿತ್ರನನ್ನಾಗಿ, ಆ ಕ್ಷಣದಿ–ಅದೇ ಕ್ಷಣದಲ್ಲಿ, ಮಾಳ್ಪರು–ಮಾಡತಾರೆ.

**ವಿಶೇಷಾರ್ಥ :–** "ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ | ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ ||" ಎಂಬ ಭಾಗವತ ದಶಮಸ್ಕಂಧೋಕ್ತಿ ರೀತ್ಯಾ ಭಕ್ತರ ಸಂಗ ಅವಶ್ಯ ಮಾಡಬೇಕೆಂತ ತಾತ್ಪರ್ಯ.

**ಈ ನಿಮಿತ್ತ ಪುನಃಪುನಃ ಸು |**
**ಜ್ಞಾನಿಗಳ ಸಹವಾಸ ಮಾಡು ಕು |**
**ಮಾನವರ ಕೂಡಾಡದಿರು ಲೌಕಿಕಕೆ ಮರುಳಾಗಿ ||**
**ವೈನತೇಯಾಂಸಗನ ಸರ್ವ |**
**ಸ್ಥಾನದಲಿ ತನ್ನಾಮರೂಪವ |**
**ಧೇನಿಸುತ ಸಂಚರಿಸು ಇತರಾಲೋಚನೆಯ ಬಿಟ್ಟು || ೧೩ ||**

ದುರ್ಜನರ ಸಹವಾಸ ಮಾಡಕೂಡದೆಂತಲೂ, ಸಜ್ಜನರ ಸಹವಾಸ ಮಾಡಿ ಪರಮಾತ್ಮನ ಸದಾ ಭಜನೆಮಾಡಿ ನಿರ್ಲಿಪ್ತನಾಗಿರು ಎಂತಲೂ ಹೇಳತಾರೆ.

ಈ ನಿಮಿತ್ತ–ಗುರೂಪದೇಶಾನಂತರ ಭಗವತ್ತತ್ತ್ವಗಳನ್ನು ಅತಿಶಯವಾಗಿ ತಿಳಿದು ವಿಸ್ಮೃತಿ ಬಾರದೆ ಇರುವಂಥಾ ನಿಮಿತ್ತದಿಂದ, ಪುನಃ ಪುನಃ–ಮತ್ತೂ ಮತ್ತೂ ಗುರುಗಳ

ಸಂಗವೇನು, ಭಗವದ್ಭಕ್ತರ ಸಹವಾಸವೇನು, ಸುಜ್ಞಾನಿಗಳ–ಭಗವತ್ತತ್ತ್ವಗಳನ್ನು ಛಂದಾಗಿ ತಿಳಿದಂಥಾ ಜ್ಞಾನಿಗಳ, ಸಹವಾಸಮಾಡು – ಸಂಗ ಮಾಡು. ಎಂದರೆ "ಅಥೋ ಸದಾಂಘ್ರಿಸ್ತವಕೀರ್ತಿತೀರ್ಥಯೋರಂತರ್ಬಹಿಃಸ್ನಾನವಿಧೂತಪಾಪ್ಮನಾಂ । ಭೂತೇಷ್ವನುಕ್ರೋಶಸುತತ್ವಶಾಲಿನಾಂ ಸ್ಯಾತ್ಸಂಗಮೋಽನುಗ್ರಹ ಏಷ ನಸ್ತವ ॥" ಎಂತ ಭಾಗವತೋಕ್ತಿ ಇರುವದ್ದರಿಂದ ಸತ್ಸಹವಾಸವೇ ಶ್ರೇಷ್ಠ ಎಂತ ತಿಳದು, ಲೌಕಿಕಕೆ ಮರುಳಾಗಿ–ಲೋಕಸಂಬಂಧವಾದ ವಿಷಯಾದಿಗಳಲ್ಲಿ ಮಮತಾರಹಿತನಾಗಿ ಭಗವತ್ತತ್ತ್ವ ವಿಚಾರಕ್ಕೆ ವಿರುದ್ಧವಾದ, ಕುಮಾನವರ–ಭಗವದ್ದ್ವೇಷಿಗಳಾದ, ವಿಷಯಾಸಕ್ತರಾದ ದುರ್ಜನರ, ಕೂಡಾಡದಿರು–ಎಂದಿಗಾದರೂ ಸಹವಾಸ ಮಾಡಬ್ಯಾಡ ಎಂತ ತಾತ್ಪರ್ಯ. "ಮಹತ್ಸೇವಾಂ ದ್ವಾರಮಾಹುರ್ವಿಮುಕ್ತೇಸ್ತಮೋದ್ವಾರಂ ಯೋಷಿತಾಂ ಸಂಗಿಸಂಗಂ । ಮಹಾಂತಸ್ತೇ ಸಮಚಿತ್ತಾಃ ಪ್ರಶಾಂತಾಃ ವಿಮನ್ಯವಃ ಸುಹೃದಃ ಸಾಧವೋ ಯೇ ॥" ಎಂತ ಭಾಗವತೋಕ್ತಿ ಇರುವದ್ದರಿಂದ ದುರ್ಜನರ ಸಹವಾಸ ಮಾಡಬ್ಯಾಡ ಎಂತಲೂ, ಸತ್ಸಹವಾಸ ಮಾಡಬೇಕೆಂತಲೂ, ಇನ್ನೂ ಹ್ಯಾಂಗೆ ಇರಬೇಕೆಂದರೆ, ವೈನತೇಯಾಂಸಗನ–ಗರುಡದೇವರ ಭುಜದಲ್ಲಿ ವಿದ್ಯಮಾನನಾದ ಶ್ರೀಪರಮಾತ್ಮನ್ನ, ಸರ್ವಸ್ಥಾನದಲಿ–ಚರಾಚರ ಸರ್ವಸ್ಥಳಗಳಲ್ಲಿ, ತನ್ನಾಮರೂಪವ–ಆ, ಆ ಪದಾರ್ಥದಲ್ಲಿ, ಆ, ಆ ನಾಮದಿಂದ "ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ ॥" ಇತಿ ಭಾಲ್ಲವೇಯಶ್ರುತಿ ಇರುವದ್ದರಿಂದ ಸರ್ವ ನಾಮವೂ ಪರಮಾತ್ಮನ ನಾಮ ಎಂತಲೂ, ಸರ್ವಾಧಿಷ್ಠಾನದಲ್ಲೂ ಪರಮಾತ್ಮ ವ್ಯಾಪ್ತನೆಂತಲೂ ತಿಳಿದು, ಇತರಾಲೋಚನೆಯ ಬಿಟ್ಟು–ಭಗವತ್ತತ್ತ್ವವಿಚಾರರೂಪವಾದ ಆಲೋಚನೆ ವ್ಯತಿರಿಕ್ತ, ತದನ್ಯವಾದ ವಿಷಯಾದಿ ಆಲೋಚನೆಯನ್ನ ಬಿಟ್ಟವನಾಗಿ, ಧೇನಿಸುತ–ಸರ್ವತ್ರ ಪರಮಾತ್ಮನ ಚಿಂತನಮಾಡುತ್ತ, ಸಂಚರಿಸು–ನಿರ್ಲಿಪ್ತನಾಗಿ ಸಂಚಾರಮಾಡುತ್ತಾ ಇರು ಎಂತ ತಾತ್ಪರ್ಯ.

**ವಿಶೇಷಾರ್ಥ :—**

ಸಂಗವಾಗಲಿ । ಸಾಧು ಸಂಗವಾಗಲಿ ॥ ಪ ॥
ಸಂಗದಿಂದ ಲಿಂಗದೇಹ ಭಂಗವಾಗಲಿ ॥ ಅ.ಪ. ॥ ಎಂಬ ಪದದ ಅರ್ಥ.

**ಈ ನಳಿನಜಾಂಡದೊಳು ಸರ್ವ ।**
**ಪ್ರಾಣಿಗಳೊಳಿದ್ದನವರತ ವಿ ।**
**ಜ್ಞಾನಮಯ ವ್ಯಾಪಾರಗಳ ಮಾಡುವನು ತಿಳಿಸದಲೆ ॥**
**ಏನು ಕಾಣದೆ ಸಕಲ ಕರ್ಮಗ ।**
**ಳಾನೆ ಮಾಡುವೆನೆಂಬ ನರನು ಕು ।**
**ಯೋನಿ ಐದುವ ಕರ್ತೃ ಹರಿ ಎಂದವನೆ ಮುಕ್ತನಹ ॥ ೧೪ ॥**

ದುರ್ಯೋನಿಗಳಲ್ಲಿ ಬರತಕ್ಕವನ ವಿಚಾರವೂ, ಮುಕ್ತನಾಗತಕ್ಕವನ ವಿಚಾರವೂ ಹೇಳತಾರೆ.

ಈ ನಳಿನಜಾಂಡದೊಳು–ಈ ವಿದ್ಯಮಾನವಾದ ಬ್ರಹ್ಮಾಂಡದಲ್ಲಿ, ಸರ್ವಪ್ರಾಣಿಗಳೊಳು–ಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರಲ್ಲಿ, ವಿಜ್ಞಾನಮಯ–ವಿಶೇಷಾಕಾರನಾಗಿ ಜ್ಞಾನಪ್ರಚುರನಾದ ಪರಮಾತ್ಮ, ಅನವರತ–ನಿರಂತರ ಅವಿಯೋಗನಾಗಿ, ಇದ್ದು–ಬಿಂಬನಾಗಿದ್ದು, ವ್ಯಾಪಾರಗಳ–ಸ್ಥೂಲದೇಹದ್ವಾರಾ, ಅವರವರ ಸ್ವರೂಪಯೋಗ್ಯತಾ ಅನುಸರಿಸಿನ್ನೂ, ಅನಾದಿಕರ್ಮ ಅನುಸರಿಸಿನ್ನೂ, ಕರ್ಮರೂಪವಾದ ವ್ಯಾಪಾರಗಳ, ತಿಳಿಸದಲೆ–ಜೀವರಿಗೆ ತಿಳಸಧಾಂಗೆ, ಮಾಡುವನು–ಬಿಂಬನಾದ ಪರಮಾತ್ಮ ಪ್ರಥಮತಃ ತಾನು ಸಂಕಲ್ಪ ಮಾಡುವನು, ಆಗ್ಯೆ ಪರಮಾತ್ಮ ಒಬ್ಬನೇ ಬಲ್ಲನೇ ಹೊರತು ರಮಾ ಬ್ರಹ್ಮಾದಿಗಳಿಗೂ ಇದು ತಿಳಿಯದು. ನಂತರ, ತನ್ನ ಸಂಕಲ್ಪ, ಅನ್ಯರಾದ ರಮಾಬ್ರಹ್ಮಾದಿಗಳಿಗೆ ದಾವಾಗ ತಿಳಿಸುತ್ತಾನೆ, ಆಗ್ಗೆ ಅವರಿಗೆ ತಿಳಿಯತದೆ. ಈ ರೀತ್ಯಾ ಪರಮಾತ್ಮನ ಮಹಾತ್ಮೆ ಎಂದು ತಿಳಿಯದೆ, ಏನು ಕಾಣದೆ–ಇನ್ನೂ ಬಿಂಬಕ್ರಿಯಾ ದ್ವಾರಾ ಪ್ರತಿಬಿಂಬ ಕ್ರಿಯಾ ಎಂತ ತಿಳಿಯದೆ, ಜೀವರು ಅಸ್ವತಂತ್ರರು ಎಂತ ಪ್ರತ್ಯಕ್ಷಾನುಮಾನಗಳಿಂದ ಎಂತ ತಿಳಿಯದೆ, ಸಕಲ ಕರ್ಮಗಳ–ದೇಹೇಂದ್ರಿಯಾದಿಗಳಿಂದ ಮಾಡಿದ ಸರ್ವವ್ಯಾಪಾರಗಳ, ಆನೆ ಮಾಡುವೆನೆಂಬ ನರನು–ನಾನೇ ಸ್ವಾತಂತ್ರ್ಯದಿಂದ ಮಾಡಿದೆ ಎಂತ ಅನತಕ್ಕ ಮನುಷ್ಯ, ಕುಂಯೋನಿ ಐದುವ–ನೀಚವಾದ ಜನ್ಮಗಳ ಧರಿಸಿ ದುಃಖಪಡುವನು. ಕರ್ತೃ ಹರಿ ಎಂದವನೆ–ಶ್ರೀ ಪರಮಾತ್ಮ ಸೃಷ್ಟ್ಯ್ಯದ್ಯಷ್ಟಕರ್ತೃತ್ವ ಉಳ್ಳವನೆಂದು ತಿಳದು, ಬಿಂಬಕ್ರಿಯಾದ್ವಾರಾ ಪ್ರತಿಬಿಂಬಕ್ರಿಯಾ ಎಂತ ನಿಶ್ಚಯವಾಗಿ ತಿಳಿದವನೇ ಮುಕ್ತನಹ–'ನ ಚ ಪುನರಾವರ್ತತೇ' ಲೋಕವನ್ನು ಐದಿ ಸುಖಪಡತಾನೆ ಎಂತ ತಾತ್ಪರ್ಯ.

**ಕಲಿಮಲಾಪಹಳೆನಿಸುತಿಹ ಬಾಂ ।**
**ಬೊಳೆಯೊಳಗೆ ಸಂಚರಿಸಿ ಬದುಕುವ ।**
**ಜಲಚರಪ್ರಾಣಿಗಳು ಬಲ್ಲವೆ ತೀರ್ಥಮಹಿಮೆಯನು ॥**
**ಹಲವು ಬಗೆಯಲಿ ಹರಿಯ ಕರುಣಾ ।**
**ಬಲದಿ ಬಲ್ಲಿದರಾದ ಬ್ರಹ್ಮಾ ।**
**ನಿಲವಿಷೇಶಾದ್ಯಮರರರಿಯರನಂತನಮಲಗುಣ ॥ ೧೫ ॥**

ಶ್ರೀ ಪರಮಾತ್ಮನ ಸಾಕಲ್ಯೇನ ದಾರೂ ಅರಿಯರೆಂದು ಹೇಳತಾರೆ.

ಕಲಿಮಲಾಪಹಳೆನಿಸುತಿಹ–ಪಾಪಗಳನ್ನ ತನ್ನ ಯೋಗ್ಯತಾನುಸಾರ ಪರಿಹಾರಕಳೆನಿಪ, ಬಾಂಬೊಳೆಯೊಳಗೆ–ದೇವನದಿಯಾದ ಭಾಗೀರಥಿಯಲ್ಲಿ ಪರಮಾತ್ಮನ ವಿಭೂತಿ ರೂಪ ಅಧಿಕವೆಂದು ತಿಳಿದು, ಅಂತರ್ಗತನಾದ ಪರಮಾತ್ಮನ ಪ್ರಾರ್ಥನಾರೂಪ, ಇನ್ನೂ ಅನೇಕ ಪ್ರಕಾರವಾದ ಅನುಸಂಧಾನದಿಂದ ಸ್ನಾನಮಾಡಿದರೆ, ಮಹಾಸ್ನಾನಫಲ ಬರತದೆ. ಇಂಥಾ ಜ್ಞಾನಾನುಸಂಧಾನದಿಂದ ಸ್ನಾನಮಾಡಿದವಗೆ ಮಾತ್ರ ಮಹಾಫಲ ಪ್ರದಳು, ಎಂತ ಎನಿಸತಕ್ಕ ಗಂಗಾನದಿ ಒಳಗೆ, ಸಂಚರಿಸಿ–ಜನಿಸಿ, ಸರ್ವದಾ ಅದೇ ಉದಕದಲ್ಲಿ ಆಮರಣಾಂತ ವಾಸವಾಗಿ ಇದ್ದು ಸಂಚಾರಮಾಡುತಲಿ, ಬದುಕುವ–ಜೀವಿಸಿ

ಇರುವ, ಜಲಚರಪ್ರಾಣಿಗಳು—ಮಚ್ಛ ಮೊದಲಾದ ಅನೇಕ ಜೀವಿಗಳು, ಪೂರ್ವೋಕ್ತ ಜೀವಿಗಳು ಗಂಗಾಸ್ನಾನ ಸರ್ವದಾ ಮಾಡುತ್ತಲೇ ಇರುತ್ತವೆ. ಆದರೂ ಸ್ನಾನಫಲವೇನು ? ಸ್ನಾನದಿಂದ ಹೊಂದತಕ್ಕ ಪಾಪಪರಿಹಾರರೂಪವಾದ ಫಲಗಳೇನೂ ಹೊಂದಲಿಲ್ಲ. ಯಾತ ರಿಂದ ಹೊಂದಲಿಲ್ಲ ಎಂದರೆ, ತೀರ್ಥಮಹಿಮೆಯನು—ಭಾಗೀರಥೀ ಮಹಿಮಾ, ಸ್ನಾನ ಮಾಡತಕ್ಕ ಅನುಸಂಧಾನ, ಬಲ್ಲವೆ—ಅರಿಯೋವೇ ? ಅಂದರೆ, ಶುದ್ಧವಾಗಿ ತಿಳಿಯವು ಎಂತ ತಾತ್ಪರ್ಯ. ತದ್ವತ್, ಅಜ್ಞಾನಿಗೂ ಭಾಗೀರಥೀ ಸ್ನಾನದಿಂದ ಬರುವ ಫಲವೂ ಇಷ್ಟೇ ಎಂತ ತಿಳಿಯಬೇಕು. ಇದೇ ಪ್ರಕಾರ ಅನುಸಂಧಾನರಹಿತನಾಗಿ ಸತ್ಕರ್ಮಾನು ಷ್ಠಾನ ಮಾಡಿದಾಗ್ಯೂ ಫಲವಿಲ್ಲದೆಹೋಗಿ, ಅಂತ್ಯದಲ್ಲಿ ಈ ಸತ್ಕರ್ಮಗಳು ಪಾಪಕರ್ಮ ಗಳಾಗಿ ದುಃಖಫಲ ಕೊಡತವೆ ಎಂತ ಭಾವವು. ಹರಿಯ—ಗುಣಪೂರ್ಣನಾದ ಪರ ಮಾತ್ಮನ, ಕರುಣಾಬಲದಿ—ಅಂತಃಕರಣವೆಂಬ ಬಲದಿಂದ, ಹಲವು ಬಗೆಯಲಿ—ನಾನಾ ಪ್ರಕಾರವಾಗಿ, ಬಲ್ಲಿದರಾದ—ತಮ್ಮ ತಮ್ಮ ಯೋಗ್ಯತಾನುಸಾರ ತಿಳಿದಂಥಾ, ಬ್ರಹ್ಮಾನಿಲ ವಿಪೇಶ—ಬ್ರಹ್ಮ, ವಾಯು, ಗರುಡ, ರುದ್ರ, ಆದಿ—ಮೊದಲಾದ, ಅಮರರು—ದೇವತೆ ಗಳು, ಅನಂತನ—ಪೂರ್ವೋಕ್ತ ಆದಿಮಧ್ಯಾಂತರಹಿತನಾದ ಪರಮಾತ್ಮನ, ಅಮಲಗುಣ— ನಿರ್ದೋಷಗಳಾದ ಗುಣಗಳನ್ನ ಸಾಕಲ್ಯೇನ, ಅರಿಯರು—ಅವರವರ ಯೋಗ್ಯತಾನುಸಾರ ತಿಳಿದವರೇ ಹೊರತು, ದೇವರ ಅನಂತಗುಣಗಳ ತಿಳಿದವರಲ್ಲ.

" ನಾಂತಂ ವಿದಾಮ್ಯಹಮಮೀ ಮುನಯಃ ಪ್ರಜೇಶಾಃ ಮಾಯಾಬಲಸ್ಯ ಪುರುಷಸ್ಯ ಕುತಃ ಪರೇ ಯೇ | ಗಾಯನ್ ಗುಣಾನ್ ದಶಶತಾನನ ಆದಿದೇವಃ ಶೇಷೋऽ- ಧುನಾಪಿ ವಯಸ್ಯತಿ ನಾಸ್ಯ ಪಾರಂ || " ಎಂತ ಉಕ್ತಿ ಇರುವದ್ದರಿಂದ ಪರಮಾತ್ಮನ ಗುಣಗಳು ಸಾಕಲ್ಯೇನ ತಿಳಿಯರು ಎಂತ ಭಾವ.

**ಶ್ರೀ ಲಕುಮಿವಲ್ಲಭನು ಹೃತ್ಕೀ |**
**ಲಾಲಜದೊಳಿದ್ದಖಿಳಚೇತನ |**
**ಜಾಲವನು ಮೋಹಿಸುವ ತ್ರಿಗುಣದಿ ಬದ್ಧರನು ಮಾಡಿ ||**
**ಸ್ಥೂಲಕರ್ಮದಿ ರತರ ಮಾಡಿ ಸು |**
**ಲೀಲೆಗಳ ತಿಳಿಸದಲೆ ಭವದಿ ಕು |**
**ಲಾಲಚಕ್ರದ ತೆರದಿ ತಿರುಗಿಸುತಿಹನು ತಿಳಿಸದಲೆ || ೧೬ ||**

ಸ್ಥೂಲದೇಹಗತ ಬಿಂಬ ಮಾಡುವ ವ್ಯಾಪಾರಗಳ ಹೇಳತಾರೆ.

ಶ್ರೀಲಕುಮಿವಲ್ಲಭನು—ಕಾಂತಿಸಂಪನ್ನನಾದ, ಸ್ವಾಖ್ಯ ಐಶ್ವರ್ಯದಿಂದ ಸ್ವರಮಣ ನಾದ, ಲಕ್ಷ್ಮೀದೇವಿಯರಿಂದ ಸಹಿತನಾದ ಶ್ರೀಪರಮಾತ್ಮನು, ಹೃತ್ಕೀಲಾಲಜದೊಳಿದ್ದು— ಉದಕದಲ್ಲಿ ಉತ್ಪನ್ನವಾದ ಜೀವನ ಸ್ವರೂಪಗತ ಹೃದಯ ಕಮಲದಲ್ಲಿ, ರಮಾ ಸಹಿತ ನಾಗಿದ್ದು, ಅಖಿಳಚೇತನಜಾಲವನು—ಸಮಸ್ತವಾದ ತ್ರಿವಿಧರಾದ ಜೀವನ ಸಮೂಹ ವನ್ನು, ತ್ರಿಗುಣದಿ—ಅನಾದಿಯಾದ ತ್ರಿಗುಣಾತ್ಮಕವಾದ, ಲಿಂಗದೇಹದಿಂದ, ಬದ್ಧರನು

ಮಾಡಿ–ಒಣಗಿದ ಗಜ್ಜುಗದೋಪಾದಿಯಲ್ಲಿ, ಇರುವ ಬೀಜದೋಪಾದಿಯಲ್ಲಿ ಸಾವಕಾಶದಿಂದ ಇರತಕ್ಕ ಲಿಂಗದೇಹವನ್ನ ಸೃಷ್ಟಿ ಪ್ರಾರಂಭದಲ್ಲಿ ನಿರವಕಾಶದಿಂದ ಸಂಬಂಧರೂಪವಾದ ಬದ್ಧರನ್ನಾಗಿ ಮಾಡಿ, ಮೋಹಿಸುವ–ಸ್ವರೂಪ ಜ್ಞಾನಕ್ಕೆ ಅನ್ಯಥಾವಾದ, ಮೋಹಯುಕ್ತವಾದ, ಜ್ಞಾನಯುಕ್ತರನ್ನಾಗಿ ಮಾಡುವ ಜೀವನೇನು, ಜೀವನ ಜ್ಞಾನವೇನು, ಸ್ಫಟಿಕದೋಪಾದಿಯಲ್ಲಿ ಶುಭ್ರವಾದರೂ, ಸ್ಫಟಿಕವನ್ನ ರಕ್ತವರ್ಣ ವಿಶಿಷ್ಟವಾದ ಜಪಾಕುಸುಮ ಮಧ್ಯದಲ್ಲಿ ಇಟ್ಟರೆ ರಕ್ತವರ್ಣದಿಂದ ವಿಕಾರ ಐದತದೆ, ಆ ಪುಷ್ಪ, ಸ್ಫಟಿಕದ ನೈಜವಾದ ಶುಭ್ರವನ್ನು ಹೋಗಲಾಡಿಸಲಾರದು. ತದ್ವತ್, ಲಿಂಗದೇಹ ಸ್ವಚ್ಛವಾದ ಜ್ಞಾನವನ್ನೂ, ಅವನ ಸ್ವರೂಪವನ್ನೂ ವಿಕಾರ ಐದಿಸಿತದೇ ಹೊರತು, ಜೀವನ ಅನಾದಿ ಸ್ವರೂಪವನ್ನು ಕೆಡಿಸಲಾರದು. ಈ ರೀತ್ಯಾ ಉಪಾಧಿವಶಾತ್, ಪರಮಾತ್ಮ ಜೀವನ ಸ್ವರೂಪ ಜ್ಞಾನಕ್ಕೆ ಅನ್ಯಥಾವಾಗಿ, ಮೋಹಯುಕ್ತನನ್ನಾಗಿ ಮಾಡುವ—ಇದು ಲಿಂಗ ಭಂಗದವರಿಗೂ—ನಂತರ ಅವರವರ ಸ್ವರೂಪಕ್ಕೆ ಯೋಗ್ಯವಾದ ಗತಿಯನ್ನು ಕೊಡ ತಾನೆ. ಈ ಪ್ರಕಾರ ಲಿಂಗದೇಹ ಸಂಬಂಧ ಮಾಡಿ, ಈ ನಿಮಿತ್ತ ಕಾರಣದಿಂದ "ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ || ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ||" ಎಂತ ಗೀತಾ, ಸ್ಥೂಲ–ಅನ್ಯವಾದ ಮೂಲಜಡ ಪ್ರಕೃತಿಯಿಂದ ಸ್ಥೂಲದೇಹ ನಿರ್ಮಾಣ ಮಾಡಿ, ಕರ್ಮಾದಿ ರತರ ಮಾಡಿ–ಲಿಂಗಗತ ಅನಾದಿ ಕರ್ಮವನ್ನ ಸ್ಥೂಲದೇಹದಿಂದ ಭೋಗ ಮಾಡೋ ವಿಷಯದಲ್ಲಿ, ಸ್ಥೂಲದೇಹದಿಂದ ಕರ್ಮ ಮಾಡೋ ವಿಷಯದಲ್ಲಿ ಅನಾದಿ ಕರ್ಮಾನುಸಾರ, ಆಸಕ್ತರನ್ನಾಗಿ ಮಾಡಿ, ಸುಲೀಲೆಗಳ ತಿಳಿಸದಲೆ–ಸಮೀಚೀನವಾದ ತನ್ನ ಕ್ರಿಯಾರೂಪವಾದ, ಆಟಗಳಿಂದ ಕರ್ಮಗಳ ಮಾಡಿಸುತ್ತ, ತಾನು ಮಾಡತಕ್ಕ ಲೀಲೆಗಳ, ಜೀವರಿಗೆ ತಿಳಿಸದೆ, ದಾವ ಕರ್ಮ, ಭೋಗಕ್ಕೆ ತರಬೇಕೋ ಅಂಥಾ ಜ್ಞಾನವೆ, ವ್ಯಕ್ತಮಾಡಿಕೊಡತಾ ಇರ್ತಾನೆ. ಭವದಿ – ಸಂಸಾರದಲ್ಲಿ ಕರ್ಮಾನುಸಾರ ಜನ್ಮಗಳ ಕೊಟ್ಟು, ಆಯಾ ಜನ್ಮದಲ್ಲಿ ಸಂಸಾರಸಾಂಕೇತವಾದ ಪ್ರಾಕೃತವನಿತಾದಿ ವಿಷಯಗಳಲ್ಲಿ, ಕುಲಾಲಚಕ್ರದ ತೆರದಿ–ಕುಂಬಾರನ ಚಕ್ರ, ವೇಗದಿಂದ ತಿರುಗುವ ಪ್ರಕಾರ, ತಿಳಸದಲೆ–ಕರ್ಮಸ್ವಭಾವವನುಸರಿಸಿ ಹೇಯಾಹೇಯ, ಯುಕ್ತಾಯುಕ್ತ ಜ್ಞಾನ ತಿಳಿಸದಲೆ, ತಿರುಗಿಸುತ– ಮನಸ್ಸನ್ನು ಸಂಚಾರ ಮಾಡಿಸುತ್ತ, ಇಹನು–ದೇಹದಲ್ಲಿ ಇದ್ದಾನೆ. ಲೋಕದಲ್ಲಿ ಪ್ರಾಣಿಗಳು ಜ್ಞಾನಾಜ್ಞಾನ, ಪಾಪಪುಣ್ಯದಲ್ಲಿ ನಾನಾ ಪ್ರಕಾರವಾಗಿ ಇರೋದಕ್ಕೆ, ಇದು ಕಾರಣ. ಇದರನ್ನ ಶ್ರೀ ಪರಮಾತ್ಮ ಅನುತಾಪಯುಕ್ತನಾಗಿ ಉದ್ಧಾರ ಮಾಡತಾನಾದ ಕಡಿಯಿಂದ ದೇವರನ್ನ ಪ್ರಾರ್ಥನಾ ಮಾಡಬೇಕು, ಮಿಥ್ಯಾಜ್ಞಾನಿಗಳಾದ ಭಗವದ್ದ್ವೇಷಿಗಳ ವ್ಯತಿರಿಕ್ತ, ಎಂತ ತಾತ್ಪರ್ಯ.

**ವೇದ ಶಾಸ್ತ್ರವಿಚಾರಗೈದು ನಿ ।**
**ಷೇಧಕರ್ಮವ ತೊರೆದು ನಿತ್ಯದಿ ।**
**ಸಾಧುಕರ್ಮವ ಮಾಳ್ಪರಿಗೆ ಸ್ವರ್ಗಾದಿಸುಖವೀವ ||**

**ಐದಿಸುವ ಪಾಪಿಗಳ ನಿರಯುವ ।**
**ಖೇದವೋದ ಮನುಷ್ಯರಿಗೆ ದು ।**
**ರ್ಮಾದಿಗಳಿಗಂಧಂತಮದಿ ಮಹದುಃಖಗಳನುಣಿಪ ॥ ೧೭ ॥**

ಅನುಸಂಧಾನ ರಹಿತರಾಗಿ, ಸತ್ಕರ್ಮಾನುಷ್ಠಾನ ಮಾಡತಕ್ಕ ತ್ರಿವಿಧ ಜೀವರ ವಿಚಾರ ಹೇಳತಾರೆ.

ವೇದಶಾಸ್ತ್ರ ವಿಚಾರಗೈದು–ಮುಕ್ತಿ ಯೋಗ್ಯರಾದ ಜೀವರು, ವೇದಶಾಸ್ತ್ರ ವಿಚಾರ ಮಾಡಿ, ನಿಷೇಧಕರ್ಮವ ತೊರೆದು–ತ್ಯಾಗರೂಪವಾದ ಕರ್ಮ ಎಂತ ಹೇಳಿದ್ದರನ್ನ ಬಿಡೋವರಾಗಿ, ನಿತ್ಯದಿ–ಪ್ರತಿದಿನದಲ್ಲೂ, ಸಾಧುಕರ್ಮವ–ಅಹಂಮಮತಾದಿಂದ ಸಹಿತ ರಾಗಿ ಸಕಾಮರಾಗಿ ಸತ್ಕರ್ಮಗಳ, ಮಾಳ್ಪರಿಗೆ–ಮಾಡತಕ್ಕ ಮುಕ್ತಿಯೋಗ್ಯರಿಗೆ, ಸ್ವರ್ಗಾದಿ–ಸ್ವರ್ಗಲೋಕವೇ ಮೊದಲಾದ ಭೂಲೋಕ ಪರಿಯಂತ ಲೋಕಗಳಲ್ಲಿ, ಸುಖವೀವ–ಇಟ್ಟು ಸಂತೋಷ ರೂಪವಾದ ಸುಖವನ್ನ ಕೊಡತಾನೆ. ಸ್ವರ್ಗಕ್ಕೆ ಮ್ಯಾಲೆ ಹೋಗೋದಿಲ್ಲ. ಪಾಪಿಗಳ–ವೇದಶಾಸ್ತ್ರಗಳಿಂದ ನಿಷೇಧ ಮಾಡಿದ, ಪಾಪಕರ್ಮ ಆಚರಿಸಿದ ಪಾಪಯುಕ್ತರಾದ ಮುಕ್ತಿಯೋಗ್ಯರನ್ನ, ನಿರಯುವ ಐದಿಸುವ–ನರಕಾದಿ ಲೋಕಗಳಲ್ಲಿ ಇಟ್ಟು ಅಹಂಮಮತಾದಿಂದಲೂ, ಸಕಾಮದಿಂದಲೂ ಮಾಡಿದ ಪಾಪ ರೂಪವಾದ ದುಃಖಗಳ ಅನುಭವಾನಂತರ, ಸ್ವರೂಪ ಸುಖವನ್ನ ಕೊಡತಾನೆ. ಯಾಕೆ ಎಂದರೆ, ಇವರು ಸಕಾಮರಾಗಿ ಮಾಡಿದ ಕಡಿಯಿಂದ, ಇವರಿಗೆ ಇಂಥಾ ಫಲ ಕೊಡತಾನೆ. ಇವರ ಸ್ವರೂಪ ಅಂಥಾದ್ದೇ ಆದ್ದರಿಂದ, ಇಂಥಾದ್ದೇ ಮುಕ್ತಿ. ಇದಕ್ಕೆ ಉದಾಹರಣೆ ಮುಂದಿನ ಶ್ಲೋಕದಲ್ಲಿ ವಿವರಣೆ ಮಾಡಲ್ಪಡತದೆ. ಮನುಷ್ಯರಿಗೆ–ನಿತ್ಯಸಂಸಾರಿಜೀವ ರಿಗೆ, ಲಿಂಗಭಂಗಾನಂತರ, ಖೇದವೋದ–ಸುಖದುಃಖಮಿಶ್ರವಾದ ಮುಕ್ತಿಯನ್ನ ಕೊಡೋವನಾಗತಾನೆ. ದುರ್ಮಾದಿಗಳಿಗೆ–'ಅಹಂಬ್ರಹ್ಮ', ಪರಮಾತ್ಮ 'ನಿರ್ಗುಣ', 'ನಿರಾಕಾರ', 'ಶೂನ್ಯ' ಎಂತ ಅನತಕ್ಕ ತಮೋಯೋಗ್ಯರಿಗೆ, ಅಂಧಂತಮದಿ – ಲಿಂಗಭಂಗಾನಂತರ ಅಂಧಂತಮಸ್ಸಿನಲ್ಲಿ, ಮಹದುಃಖಗಳನ–ಅಪಾರವಾದ ಸದಾ ದುಃಖ ಗಳನ್ನ, ಉಣಿಪ–ಬಡಸತಾ ಇರತಾನೆ, ಅವರವರ ಸ್ವರೂಪ ಯೋಗ್ಯತಾ ಅನುಸರಿಸಿ, ಎಂತ ತಾತ್ಪರ್ಯ.

**ವಿಶೇಷಾರ್ಥ :–** ನಿತ್ಯಸಂಸಾರಿಗಳು ಇರತಕ್ಕ ಲೋಕ, ಸಾಂತಾನಿಕ ಲೋಕ. ಈ ಲೋಕಕ್ಕೆ ಸಾಂತಾನಿಕ ಎಂತಲೂ, ಸಾಂಕೇತಿಕ ಎಂತಲೂ ನಾಮ. ಈ ಲೋಕ, ಲೋಕಾಲೋಕ ಪರ್ವತಕ್ಕೆ ಆಚೇಲ್ಲಿ ಇರತಕ್ಕ, ತಮಸ್ಸಿಗೆ ಮೇಲ್ಭಾಗದಲ್ಲಿ, ಸ್ವರ್ಗ ಲೋಕಕ್ಕೆ ಅಧೋಭಾಗದಲ್ಲಿ, ಈ ಮಧ್ಯದಲ್ಲಿ ನಿತ್ಯಸಂಸಾರಿ ಲೋಕ ಅದೆ. ಈ ವಿಚಾರ 'ಸತ್ಯತೀರ್ಥೀಯ' ಎಂಬ ಗ್ರಂಥದಲ್ಲಿ ವಿವರ ಮಾಡಲ್ಪಟ್ಟಿದೆ. ಇವರಲ್ಲಿ ಸ್ವರ್ಗಪ್ರಚು ರರು, ನಿರಯ ಪ್ರಚುರರು, ಭೂಪ್ರಚುರರು ಎಂತ ತ್ರಿವಿಧ ಪ್ರಕಾರ ಭೇದ ಉಳ್ಳವರು. ಲಿಂಗಭಂಗಾನಂತರ ಆಯಾ ಪ್ರದೇಶದಲ್ಲೇ ಅವರವರ ಆವಾಸ ಎಂತ ವಿವರವದೆ.

**ನಿರ್ಗುಣೋಪಾಸಕಗೆ ಗುಣಸಂ ।**
**ಸರ್ಗದೋಷಗಳೀಯದಲೆ ಅಪ ।**
**ವರ್ಗದಲಿ ಸುಖವಿತ್ತು ಪಾಲಿಸುವನು ಕೃಪಾಸಾಂದ್ರ ॥**
**ದುರ್ಗಮನು ಎಂದೆನಿಪ ತ್ರೈವಿ ।**
**ಧ್ಯರ್ಗೆ ತ್ರಿಗುಣಾತೀತ ಸಂತತ ।**
**ಸ್ವರ್ಗಭೂನರಕದಲಿ ಸಂಚಾರವನೆ ಮಾಡಿಸುವ ॥ ೧೮ ॥**

ಪೂರ್ವೋಕ್ತವಿಚಾರವೇ ಹೇಳತಾರೆ.

ನಿರ್ಗುಣೋಪಾಸಕಗೆ–ಪೂರ್ವೋಕ್ತ ಪ್ರಕಾರ ಅಹಂ ಮಮತಾ ಗುಣವಿಶಿಷ್ಟನಾಗಿ ಸಕಾಮನಾಗಿಯೂ, ಪುಣ್ಯಪಾಪಕರ್ಮಗಳ ಮಾಡಿದ ಮುಕ್ತಿಯೋಗ್ಯ ಪಕ್ವಕಾಲಕ್ಕೆ, ಪ್ರಾಕೃತ ಸತ್ತ್ವರಜಸ್ತಮೋಗುಣಶೂನ್ಯನಾದ ಶ್ರೀಪರಮಾತ್ಮನ ಉಪಾಸನಮಾಡುವಂಥ ಮುಕ್ತಿಯೋಗ್ಯನಾದವಗೆ, ಗುಣಸಂಸರ್ಗ–ಸತ್ತ್ವಾದಿ ಗುಣಗಳಿಂದ ಛಂದಾಗಿ ಉತ್ಪನ್ನ ಗಳಾಗತಕ್ಕ ಅಹಂಮಮತಾ ಎನತಕ್ಕ ಸಕಾಮ ಎನತಕ್ಕ, ದೋಷಗಳೀಯದಲೆ–ದೋಷಗಳ ಉತ್ಪತ್ತಿ ಮಾಡಿಕೊಡಧಾಂಗೆ ಸಾಧನಿ ಪೂರ್ತಿ ಮಾಡಿಸಿ, ತನ್ನ ಅಪರೋಕ್ಷ ಕೊಟ್ಟು, ಅಪವರ್ಗದಲಿ–ಲಿಂಗಭಂಗ ಐದಿಸಿ ಮೋಕ್ಷದಲ್ಲಿ, ಸುಖವಿತ್ತು–ಸ್ವರೂಪಸುಖ ಅಭಿವ್ಯಕ್ತಿಮಾಡಿಕೊಟ್ಟು, ಪಾಲಿಸುವನು–ಸಂರಕ್ಷಣೆ ಮಾಡತಾನೆ. ಕೃಪಾಸಾಂದ್ರ–ತನ್ನ ಭಕ್ತರಲ್ಲಿ ವಾಂಛಲ್ಯವುಳ್ಳ ಪರಮಾತ್ಮ, ದುರ್ಗಮನು–ತದನ್ಯರಾದ, ದೋಷಿಗಳಾದ ತಮೋಯೋಗ್ಯರಿಗೆ, ಉದಾಸೀನಜ್ಞಾನಿಗಳಾದ ನಿತ್ಯಸಂಸಾರಿಗಳಿಗೆ ಅಸಾಧ್ಯನೆಂದರೆ, ಇವರಿವರ ಸಾಧನಿ ಪೂರ್ತಿಮಾಡಿಸಿ ದರ್ಪಣಗತ ಪ್ರತಿಬಿಂಬವತ್ ಅಪರೋಕ್ಷ, ನಿತ್ಯ ಸಂಸಾರಿಗಳಿಗೂ, ಅಂಧಕಾರದಲ್ಲಿ ಅಂಧಕಾರವತ್ ಅಪರೋಕ್ಷ, ತಮೋಯೋಗ್ಯರಿಗೂ ಕೊಟ್ಟು, ಅವರವರ ಲೋಕಗಳಲ್ಲಿ ದುಃಖಬಡಿಸೋವನಾಗತಾನೆ. ಎಂದೆನಿಪ–ಎಂತ ಅನಿಸಿಕೋತಕ್ಕ ಪರಮಾತ್ಮ, ತ್ರೈವಿಧ್ಯರ್ಗೆ–ತ್ರಿವಿಧಪ್ರಕಾರರಾದ ಮುಕ್ತಿಯೋಗ್ಯ, ತಮೋ ಯೋಗ್ಯ, ನಿತ್ಯಸಂಸಾರಿಗಳಿಗೆ, ತ್ರಿಗುಣಾತೀತ–ಪ್ರಾಕೃತ ಗುಣತ್ರಯಗಳಿಂದ ಶೂನ್ಯ ನಾದ, ಸಂತತ–ಅನಾದ್ಯನಂತಕಾಲಕ್ಕೂ ಬಿಂಬನಾಗಿ ಇರತಕ್ಕ ಪರಮಾತ್ಮ, ಸ್ವರ್ಗ–ತ್ರಿವಿಧ ಜೀವರೂನೂ ಅಪಕ್ವದಶಾದಲ್ಲಿ ಅನಾದಿಕರ್ಮವನನುಸರಿಸಿನ್ನು, ತ್ರಿಗುಣಕರ್ಮವ ನನುಸರಿಸೀನೂ, ದ್ವಂದ್ವಕರ್ಮಗಳ ಮಾಡತಾರೆ, ತತ್ಫಲ ಭೋಗವನ್ನ ಸ್ವರ್ಗಲೋಕ ದಲ್ಲೇನು, ಭೂ–ಭೂಲೋಕದಲ್ಲೇನು, ನರಕದಲಿ–ನರಕಲೋಕದಲ್ಲಿ, ಈ ಸ್ಥಾನತ್ರಯ ಗಳಲ್ಲಿ ಭೋಗಮಾಡೋದಕ್ಕೋಸ್ಕರ, ಸಂಚಾರವನೆ ಮಾಡಿಸುವ–ತಿರಗಸತಾ ಇರತಾನೆ. ಇದು ಸ್ಥಿತಿಕಾಲದಲ್ಲಿ ಎಂತ ತಾತ್ಪರ್ಯ. ತ್ರಿವಿಧಜೀವರು ತ್ರಿಗುಣಸಂಬಂಧದಿಂದ ಅನಾದಿ ಕರ್ಮಾನುಸಾರ ಪಾಪಪುಣ್ಯಗಳು ಮಾಡತಾ ಇರತಾರೆ. ಈ ಕರ್ಮಗಳಿಗೆ ಭೋಗ ಸ್ಥಾನ "ತ್ರಿದಿವನಿರಯಭೂ" ಎಂತ ಪ್ರದೇಶಗಳು. ಪರ್ಯವಸಾನಕ್ಕೆ, ತ್ರಿವಿಧರ ಯೋಗ್ಯ ತಾನುಸಾರ ಸ್ಥಾನಭೇದಗಳು ಬ್ಯಾರೆ ಬ್ಯಾರೆ ಎಂತ ತಾತ್ಪರ್ಯ.

**ಮೂವರೊಳಗಿದ್ದರು ಸರಿಯೆ ಸುಖ ।**
**ನೋವುಗಳು ಸಂಬಂಧವಾಗವು ।**
**ಪಾವನಕೆ ಪಾವನ ಪರಾತ್ಪರ ಪೂರ್ಣಸುಖವನಧಿ ॥**
**ಈ ವನರುಹಭವಾಂಡದೊಳು ಸ್ವಕ ।**
**ಳೇವರ ತದಾಕಾರಮಾಡಿ ಪ ।**
**ರಾವರೇಶ ಚರಾಚರಾತ್ಮಕ ಲೋಕಗಳ ಪೊರೆವ ॥ ೧೯ ॥**

ಶ್ರೀ ಪರಮಾತ್ಮ ತ್ರಿವಿಧರಲ್ಲಿ ವ್ಯಾಪ್ತನಾಗಿದ್ದರೂ ನಿರ್ಲಿಪ್ತನಾಗಿದ್ದು ಲೋಗರ ರಕ್ಷಿಸುತ್ತಾನೆಂತ ಹೇಳತಾರೆ.

ಮೂವರೊಳಗಿದ್ದರು–ಲಿಂಗಭಂಗಾನಂತರ ಸುಖದುಃಖಮಿಶ್ರ ಅನುಭವಮಾಡತಕ್ಕ ಜೀವರಿಗೆ ಬಿಂಬನಾಗಿದ್ದ ಕಾಲಕ್ಕೂ, ಸರಿಯೆ–ಅವರವರ ಸ್ವರೂಪಕ್ಕೆ ಸರಿಯಾಗಿ ಬಿಂಬ ನಾಗಿ ಇದ್ದಾನೆ, ವಿಷಮವಾಗಿ ಅಲ್ಲ ಎಂತ ಅರ್ಥ. ಸುಖ–ಮುಕ್ತಿಯೋಗ್ಯರು ತಮ್ಮ ಸ್ವರೂಪಯೋಗ್ಯತಾನುಸಾರವಾಗಿ ಭೋಗಿಸತಕ್ಕ ಸುಖವೇನು, ನೋವು–ತಮೋ ಯೋಗ್ಯರು ತಮ್ಮ ಸ್ವರೂಪಯೋಗ್ಯತಾನುಸಾರ ಭೋಗಿಸತಕ್ಕ ದುಃಖವೇನು, ಹಾಂಗೆ ಮಿಶ್ರದುಃಖಸುಖ ಅನುಭವಿಸತಕ್ಕ ನಿತ್ಯಸಂಸಾರಿಗಳ ಭೋಗವೇನು, ಗಳು–ಲಿಂಗಭಂಗಾ ನಂತರ ಜೀವರು ಭೋಗಮಾಡತಕ್ಕ ಈ ಮೂರು ಗುಣಗಳು, ಸಂಬಂಧವಾಗವು–ಅವ ರವರಿಗೆ ಬಿಂಬನಾದ ಪರಮಾತ್ಮಗೆ ಸಂಬಂಧವಾಗೋದಿಲ್ಲ. ಕಾರಣವೇನೆಂದರೆ, ಪಾವನಕೆ ಪಾವನ–ಪಾವನ ಎಂದರೆ ಅನಾದಿಯಿಂದ ತ್ರಿಗುಣಸಂಬಂಧವಿಲ್ಲದೆ ಪಾವನರಾಗಿರತಕ್ಕವರು ರಮಾದೇವಿಯರು. ಇಂಥಾ ಪಾವನ ವಸ್ತುವಿನಕಿಂತಲೂ ಪಾವನನಾದ ಪರಮಾತ್ಮ, ಪಾವನರಾದ ರಮಾದೇವಿಯರಿಗೆ ಬಿಂಬನಾಗಿ ಇದ್ದಕಾಲಕ್ಕೂ, ಆ ರಮಾದೇವಿಯರ ಸುಖ ಕೂಡಾ ತದಂತರ್ಗತನಾದ ಪರಮಾತ್ಮಗೆ ಸಂಬಂಧವಾಗೋದಿಲ್ಲ. ರಮಾ ಸುಖಾಪೇ ಕ್ಷಯಾ ಪವಿತ್ರಕರವಾದ ಸ್ವಾಖ್ಯ ಸುಖವುಳ್ಳವ. ಇಂಥಾ ಸ್ವಾಖ್ಯವಾದ ಪಾವನಸುಖಕ್ಕೆ ಸಂಬಂಧಪಟ್ಟ ಪರಮಾತ್ಮ, ಪರಾತ್ಪರ–ಜೀವೋತ್ತಮರಾದ ಬ್ರಹ್ಮವಾಯುಗಳಿಂದ ಉತ್ತಮರಾದ ರಮಾದೇವಿಯರ ದೆಶೆಯಿಂದ ಉತ್ತಮವಾದ ಆನಂದ ಉಳ್ಳವ, ವನಧಿ–ಪ್ರಳಯೋದಕ ಸಮುದ್ರದೋಪಾದಿಯಲ್ಲಿ ಆದ್ಯಂತಶೂನ್ಯಗಳಾದ, ಪೂರ್ಣಸುಖ–ಅಪರಿ ಚ್ಛಿನ್ನವಾದ ಸುಖವುಳ್ಳವ. ಇಂಥಾ ಪರಮಾತ್ಮ, ಈ ವನರುಹ ಭವಾಂಡದೊಳು–ನಾಭೀಕಮಲದಲ್ಲಿ ಉತ್ಪನ್ನವಾದ ಬ್ರಹ್ಮಾಭಿಮನ್ಯವಾದ ಬ್ರಹ್ಮಾಂಡದೊಳು, ತದ್ಗತ ಜೀವರ ಸ್ಥೂಲದೇಹದ ಒಳಗೆ, ಪರಾವರೇಶ–ಬ್ರಹ್ಮವಾಯುಗಳಿಗಿಂತಲೂ ಉತ್ತಮರಾದ ರಮಾದೇವಿಯರಿಗೂ, ಅಚರವಾದ ಸಮಸ್ತಪದಾರ್ಥಗಳಿಗೂ ಸ್ವಾಮಿಯಾದ ಶ್ರೀ ಪರ ಮಾತ್ಮ, ಸ್ವಕಳೇವರ–ತನ್ನ ಸ್ವಕೀಯವಾದ, ಅಭಿನ್ನವಾದ ದೇಹವನ್ನ, ತದಾಕಾರ ಮಾಡಿ–ಜೀವನ ಸ್ಥೂಲದೇಹಾಕಾರದಂತೆಯೂ, ಬ್ರಹ್ಮಾಂಡಾಕಾರದಂತೆಯೂ, ಈ ಬ್ರಹ್ಮಾಂಡಸ್ಥ ಅಧಿಷ್ಠಾನಭೂತವಾದ ಸಕಲಪದಾರ್ಥಗಳ ಆಕಾರದಂತೆಯೂ ಮಾಡಿ,

ಆ ಅಧಿಷ್ಠಾನಾಂತರ್ಗತನಾಗಿ, ಆತ್ಮಕ–ತದಾತ್ಮಕನಾಗಿ ಎಂದರೆ ತದಾಕಾರ, ತನ್ನಾಮ ದಿಂದ ಇದ್ದು, ಚರಾಚರ–ಸ್ಥಾವರ ಜಂಗಮ ಜೀವರನ್ನು, ಹಾಂಗೆ ಶುದ್ಧಜಡಗಳು, ಲೋಕಗಳ–ಏತಾದೃಶವಾದ ಪ್ರಾಣಿಗಳ, ಪೊರೆವ–ಸಂರಕ್ಷಣ ಮಾಡತಾನೇ ಇದ್ದಕಾಲಕ್ಕೂ, ಜೀವಭೋಗ್ಯವಾದ ಸುಖದುಃಖಾದಿಗಳಿಗೆ ತಾನು ಸಂಬಂಧಪಡದೆ ಅಗ್ನಿವತ್ ಶುದ್ಧನಾಗಿ ಇರತಾನೆ ಎಂತ ತಾತ್ಪರ್ಯ.

**ಅನಿಮಿತ್ತ ನಿರಂತರ ಸ್ವಾ ।**
**ಧೀನಕರ್ತೃತ್ವವನು ಮರೆದೇ ।**
**ನೇನು ಮಾಡುವದೆಲ್ಲ ಹರಿ ಒಳಹೊರಗೆ ನೆಲೆಸಿದ್ದು ॥**
**ತಾನೆ ಮಾಡುವನೆಂದರಿದು ಮ ।**
**ದ್ದಾನೆಯಂದದಿ ಸಂಚರಿಸು ಪವ ।**
**ಮಾನವಂದಿತ ಒಂದರೆಕ್ಷಣ ಬಿಟ್ಟಗಲ ನಿನ್ನ ॥ ೨೦ ॥**

ಪರಾಧೀನಕರ್ತನೆಂದು ತಿಳದು ಸರ್ವಕರ್ಮವ ಮಾಡಿದರೆ ಪರಮಾತ್ಮ ಸಂರಕ್ಷಣ ಮಾಡತಾನೆಂತ ಹೇಳತಾರೆ.

ಸ್ವಾಧೀನಕರ್ತೃತ್ವವನು–ಪರಮಾತ್ಮ ಸ್ವತಂತ್ರ, ಸರ್ವಕರ್ತ, ಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರು ಪರಾಧೀನಕರ್ತೃತ್ವ ಉಳ್ಳವರು ಎಂದು ತಿಳದು ಮತ್ತು ಅಹಂಕರ್ತಾ ಎಂಬುದನ್ನ ಮರೆತು, ಅನಿಮಿತ್ತ–ಐಹಿಕ ಫಲಾಪೇಕ್ಷೆ ಇಲ್ಲದೆ ದಾವ ಕರ್ಮವೂ ಈಶಪ್ರೀತಿ ಪೂರ್ವಕವಾಗಿ, ನಿರಂತರ- ಪ್ರತಿದಿನದಲ್ಲೂ ಪ್ರತಿಕ್ಷಣಲವಕಾಲದಲ್ಲೂ, ಮರೆದು–ಮಾಡತಾ ಬರಬೇಕೆಂತಲೂ, ಸ್ವಾಧೀನಕರ್ತೃತ್ವವನ್ನ ಮರೆತವನಾಗಿ, ಏನೇನು ಮಾಡುವದೆಲ್ಲ– ದೇಹೇಂದ್ರಿಯಗಳಿಂದ ಮಾಡತಕ್ಕ ಸಕಲ ಸತ್ಕರ್ಮಗಳು ತಥಾ ದುಷ್ಕರ್ಮಗಳು, ಹರಿ– ಬಿಂಬರೂಪನಾದ ಪರಮಾತ್ಮ, ಒಳಹೊರಗೆ ನೆಲಸಿದ್ದು–ಜೀವಾಂತರ್ಗತನಾಗಿಯೂ, ಸ್ಥೂಲದೇಹಾಂತರ್ಗತನಾಗಿಯೂ ಇದ್ದವನಾಗಿ, ತಾನೆ ಮಾಡುವನು–ಜೀವನ ಸ್ವರೂಪ ದಲ್ಲಿ ರಮಾಸಮೇತನಾಗಿ ಇದ್ದು, ಅಲ್ಲಿ ಇಚ್ಛಾರೂಪವಾದ ಪ್ರೇರಣ ಮಾಡಿ, ನಂತರ ಸ್ಥೂಲದೇಹದಲ್ಲಿ ತತ್ತ್ವದೇವತೆಗಳಿಗೆ ಅದರನ್ನ ಪ್ರೇರಿಸಿ, ತದ್ದ್ವಾರಾ ಸ್ಥೂಲಕಾರ್ಯ ಗಳ ಮಾಡಿಸತಾನೆ ಎಂತ, ಎಂದರಿದು–ತಿಳಿಯೋವನಾಗಿ, ಈ ಪ್ರಕಾರ ಅನುಸಂಧಾನ ಮಾಡತಾ, ಮದ್ದಾನೆಯಂದದಿ–ಮದಗಜದೋಪಾದಿಯಲ್ಲಿ ಸಂದೇಹಪಡದೆ ನಿರ್ಭೀತ ನಾಗಿ, ಸಂಚರಿಸು–ದ್ವಂದ್ವಸಹಿಷ್ಣುವಾಗಿ ಸಂಚಾರಮಾಡು. ಹೀಂಗೆ ಇದ್ದರೆ, ಪವಮಾನ ವಂದಿತ–ನಿನ್ನ ಉದ್ಧಾರಮಾಡೋ ವಿಷಯದಲ್ಲಿ ತತ್ತ್ವಾಭಿಮಾನಿಗಳಾದ ಬ್ರಹ್ಮವಾಯು ಗಳಿಂದ ವಂದಿತನಾಗಿರುವ ಶ್ರೀಪರಮಾತ್ಮ, ನಿನ್ನ–ಅಧಿಕಾರಿಯಾದ ನಿನ್ನ, ಒಂದರೆಕ್ಷಣ– ಕ್ಷಣಲವಕಾಲವಾದರೂ, ಬಿಟ್ಟಗಲ–ಅವಿಯೋಗನಾಗಿ ಇರತಾನೆ. ಪರಮಾತ್ಮನ ಸಂದರ್ಶನರೂಪವಾದ ಅಪರೋಕ್ಷವಾಗತದೆ ಎಂತ ತಾತ್ಪರ್ಯ.

**ಹಲವು ಕರ್ಮವ ಮಾಡಿ ದೇಹವ ।**
**ಬಳಲಿಸದೆ ದಿನದಿನದಿ ಹೃದಯಾ ।**
**ಮಲಸದನದಿ ವಿರಾಜಿಸುವ ಹರಿಮೂರ್ತಿಯನೆ ಭಜಿಸು ॥**
**ತಿಳಿವದೀ ಪೂಜಾಪ್ರಕರಣವ ।**
**ಫಲಸುಪುಷ್ಪಾಗ್ರ್ಯೋದಕ ಶ್ರೀ ।**
**ತುಲಸಿದಳವರ್ಪಿಸಲು ಒಪ್ಪೋನು ವಾಸುದೇವ ಸದಾ ॥ ೨೧ ॥**

ಮುಖ್ಯವಾಗಿ ಮಾಡತಕ್ಕ ಕರ್ಮವನ್ನ ಹೇಳತಾರೆ. ಸರ್ವಕರ್ಮವೂ ಪರಮಾತ್ಮನ ಪೂಜಾ ಎಂತ ಹೇಳತಾರೆ.

ಹಲವು ಕರ್ಮವ ಮಾಡಿ–ಅಹಂಮಮತಾ ಯುಕ್ತನಾಗಿ, ಸಕಾಮನಾಗಿ, ಫಲಾಪೇಕ್ಷೆಯಿಂದ ಸಹಿತನಾಗಿ ಅನೇಕ ಪುಣ್ಯಕರ್ಮಗಳ ಮಾಡಿ, ದೇಹವ ಬಳಲಿಸದೆ–ದೇಹಕ್ಕೆ ಆಯಾಸ ತಂದುಕೋಬ್ಯಾಡ ಎಂತ ತಾತ್ಪರ್ಯ. ಆದರೆ ಎಂಥಾ ಕರ್ಮ ಮಾಡಬೇಕೆಂದರೆ, ವೇದೋಕ್ತಾನುಸಾರ ಸಕಲ ಕರ್ಮಗಳ ನಿಷ್ಕಾಮನದಿಂದ ಮಾಡಿ, ಹೃದಯ–ಹೃದಯಾಕಾಶದಲ್ಲಿ, ಸದನದಿ–ವಿದ್ಯಮಾನವಾದ, ಅಷ್ಟದಳ ಕಮಲವೆಂಬ ಮನೆಯಲ್ಲಿ, ವಿರಾಜಿಸುವ – ಪ್ರಕಾಶಮಾನನಾಗಿರುವ, ಅಮಲ – ನಿರ್ಮಲನಾದ, ನಿರ್ದೋಷಿಯಾದ, ಹರಿಮೂರ್ತಿಯನೆ–ಬಿಂಬ ಮೂರ್ತಿಯಾದ ಶ್ರೀ ಪರಮಾತ್ಮನ್ನ ಅಪರೋಕ್ಷಕ್ಕಾಗಿ, ದಿನದಿನದಿ–ಪ್ರತಿಪ್ರತೀ ದಿನದಲ್ಲೂ, ಭಜಿಸು–ಪ್ರಾರ್ಥನಾ ಮಾಡೋವನಾಗು, ಕೀರ್ತನ ಮಾಡೋವನಾಗು. ಈ ಪೂಜಾ ಪ್ರಕರಣವ–ಶ್ರೀ ಪರಮಾತ್ಮನ ಪೂಜಾ ಮಾಡತಕ್ಕ ವಿಧಿಯನ್ನ, ತಿಳಿವದು–ತಾನು ಸಚ್ಛಾಸ್ತ್ರೋಪದೇಶಕ ಗುರುಗಳ ದ್ವಾರಾ, ತಂತ್ರಸಾರದಲ್ಲಿ ಉಕ್ತವಾದ ಪ್ರಕಾರ, ಪ್ರಥಮತಃ ಸುಲಕ್ಷಣವಾದ ಜಡರೂಪವಾದ ವಿಷ್ಣುಪ್ರತೀಕವನ್ನ, ಪೂರ್ವೋಕ್ತ ಗುರುಗಳ ದ್ವಾರಾ ಅನುಗ್ರಹಪೂರ್ವಕ ಸಂಪಾದಿಸಿ, ಆ ಪ್ರತಿಮಾದಲ್ಲಿ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀ ನಾರಾಯಣ ದೇವರನ್ನ ಚಿಂತನಮಾಡಿ, ಪೀಠಾವರಣ ದೇವತೆಗಳ ಸಹ ತಿಳದು, ಫಲ–ಸುರಸೋಪೇತವಾದ ನೈವೇದ್ಯಕ್ಕೆ ಯೋಗ್ಯವಾದ ಫಲಾದಿಗಳ, ಸುಪುಷ್ಪ–ಸುಗಂಧೋಪೇತವಾದ, ಸಮೀಚೀನವಾದ ಪುಷ್ಪಗಳ, ಅಗ್ರ್ಯೋದಕ–ನಿರ್ಮಲವಾದ ಸರ್ವತೀರ್ಥವಾಹನವಾದ ಉದಕ, ಶ್ರೀತುಳಸಿದಳವ–ಲಕ್ಷ್ಮ್ಯಭಿಮನ್ಯಮಾನವಾದ ಶ್ರೀತುಳಸೀದಳಗಳನ್ನು ಅರ್ಪಿಸಲು–ಇವುಗಳಿಂದ ಪೂಜಾ ಮಾಡಿದರೆ, ಅಂದರೆ ಪೂಜಾದ್ರವ್ಯಾಂತರ್ಗತ ಪರಮಾತ್ಮಗ್ಗೂ, ಪ್ರತಿಮಾಂತರ್ಗತ ಪರಮಾತ್ಮಗ್ಗೂ ಅಭೇದಚಿಂತನರೂಪವಾದ ಪೂಜಾ ಅರ್ಪಿಸಿದರೆ, ವಾಸುದೇವ–ಪರಿದೃಶ್ಯಮಾನ ಪ್ರತಿಮಾಸಾಲಿಗ್ರಾಮಾಭಿಮಾನಿಯಾದ ಶ್ರೀವಾಸುದೇವಾಭಿನ್ನನಾದ ಪರಮಾತ್ಮ, ಸದಾ–ಸರ್ವಕಾಲದಲ್ಲೂ, ಒಪ್ಪೋನು–ಸ್ವೀಕಾರಮಾಡತಾನೆಂತ ತಾತ್ಪರ್ಯ.

**ತಾ||** ಮೇಲೆ ಹೇಳಿದ ಪ್ರಕಾರವೇ ಹೃದಯಾಕಾಶದಲ್ಲಿ ಇದೇ ಪ್ರತಿಮಾವನ್ನ ನಿರ್ಮಾಣಮಾಡಿ, ಪೂರ್ವೋಕ್ತ ಪದಾರ್ಥಗಳಿಂದ ಮಾನಸಪೂಜಾ ಮಾಡಬೇಕು. ಮಾನಸಪೂಜಾ, ಬಹಿಃಪೂಜಾ ಏಕಕಾಲಾವಚ್ಛೇದೇನ ಮಾಡಿದರೇನೇ ಪೂಜಾವೇ ಹೊರತು, ಅನ್ಯಥಾ ಪೂಜಾ, ದೇವರು ಗ್ರಾಹ್ಯಮಾಡೋದಿಲ್ಲ. ಈ ಪ್ರಕಾರ ಪೂಜಾನು ಸಂಧಾನದಿಂದ ವಾಸನಾಪರೋಕ್ಷಾನಂತರ, ಪ್ರತಿಮಾಕಾರ, ಚಿದಾನಂದ, ಅಪರೋಕ್ಷಾ ನಂತರ ಜೀವಾಕಾರ ಸ್ಥೂಲದೇಹಗತ ಅಗ್ರೇಶನಾಮಕ ಬಿಂಬಾಪರೋಕ್ಷ, ಈ ಪ್ರಕಾರ ಪೂಜಾಮಾಡತಾ ಇದ್ದರೇ, ಲಿಂಗಭಂಗಾನಂತರ ತನ್ನ ಸ್ವರೂಪಭೂತ ಬಿಂಬಾಪರೋಕ್ಷ ವಾಗತದೆ. ಆದಕಡಿಯಿಂದ ಮುಖ್ಯವಾದ ಅನೇಕ ಸತ್ಕರ್ಮಗಳ ನಿಷ್ಕಾಮನಾಗಿ ಈಶಪ್ರೀತಿಪೂರ್ವಕ ಮಾಡತಾ ಬರಬೇಕೆಂತ ತಾತ್ಪರ್ಯ.

**ಧರಣಿ ನಾರಾಯಣನು ಉದಕದಿ ।**
**ತುರಿಯನಾಮಕ ಅಗ್ನಿಯೊಳು ಸಂ ।**
**ಕರುಷಣಾಹ್ವಯ ವಾಯುಗ ಪ್ರದ್ಯುಮ್ನನನಿರುದ್ಧ ॥**
**ಇರುತಿಹನು ಆಕಾಶದೊಳು ಮೂ ।**
**ರೆರಡು ರೂಪವ ಧರಿಸಿ ಭೂತಗ ।**
**ಕರೆಸುವನು ತನ್ನಾಮರೂಪದಿ ಪ್ರಜರ ಸಂತೈಪ ॥ ೨೨ ॥**

ಜೀವರು ಭೋಜನಮಾಡತಕ್ಕ ಸರ್ವಪದಾರ್ಥಗಳು ಪಂಚಭೂತಾತ್ಮಕವಾದ ಪದಾರ್ಥಗಳು. ಆದಕಡಿಯಿಂದ ಈ ಪಂಚಭೂತಾಂತರ್ಗತ ಶ್ರೀಪರಮಾತ್ಮನ ಉಪಾಸನಾ ಕ್ರಮ ಹೇಳತಾರೆ.

ಧರಣಿ ನಾರಾಯಣನು – ಸರ್ವ ಪ್ರಾಣಿಗಳು ಪಂಚಭೂತಗಳಿಂದ ಜೀವಿತರು. ಅದರಲ್ಲಿ ಪೃಥ್ವೀಸಾಂಕೇತವಾದ ಅನ್ನದಿಂದ, ಜಲಸಾಂಕೇತವಾದ ಉದಕದಿಂದ ಮುಖ್ಯ ವಾಗಿ ಜೀವಿತರಾಗಿ ಇದ್ದಾರೆ. ಈ ಪಂಚಭೂತವಾದ ಭೂಮಿಯು, ಎಂದರೆ ಪ್ರಥಮದಲ್ಲಿ ಭೂಮಿಯಲ್ಲಿ ನಾರಾಯಣದೇವರು, ಉದಕದಿ ತುರಿಯನಾಮಕನು– ಅಪ್ಪುಸಾಂಕೇತ ವಾದ ಜಲದಲ್ಲಿ ವಾಸುದೇವನು, ಅಗ್ನಿಯೊಳು ಸಂಕರುಷಣಾಹ್ವಯ–ತೇಜೋರೂಪ ವಾದ ಅಗ್ನಿಯಲ್ಲಿ ಸಂಕರ್ಷಣನು, ವಾಯುಗ ಪ್ರದ್ಯುಮ್ನನು–ವಾಯುವಿನಲ್ಲಿ ಪ್ರದ್ಯುಮ್ನ ನಾಮಕನು, ಅನಿರುದ್ಧ ಆಕಾಶದೊಳು–ಆಕಾಶದಲ್ಲಿ ಅನಿರುದ್ಧನಾಮಕನು, ಈ ಪ್ರಕಾರ, ಮೂರೆರಡು ರೂಪವ ಧರಿಸಿ–ಪಂಚರೂಪನಾದ ಪರಮಾತ್ಮ, ಇರುತಿಹನು–ಇರೋವನಾಗಿ ಇದ್ದಾನೆ. ಭೂತಗ–ಪಂಚಭೂತಾಂತರ್ಗತನಾಗಿ ಐದು ರೂಪಗಳಿಂದ ಇದ್ದು, ತನ್ನಾಮ ರೂಪದಿ–ಆಯಾ ಪಂಚಭೂತಗಳ ರೂಪದಿಂದ, ಆಯಾ ನಾಮದಿಂದ, ಕರೆಸುವನು– ಕರಿಸೋವನಾಗತಾನೆ. ಈ ಪ್ರಕಾರ ಇದ್ದು, ಪ್ರಜರ–ಸ್ಥಾವರಜಂಗಮರೂಪರಾದ ಪ್ರಾಣಿ ಗಳ, ಸಂತೈಪ–ರಕ್ಷಿಸುತ್ತಾನೆಂದು ತಾತ್ಪರ್ಯ.

**ವಿಶೇಷಾರ್ಥ :–** ಪ್ರಮಾಣ. "ಪೃಥಿವೀ ಹಿಂಕಾರೋಂತರಿಕ್ಷಂ ಪ್ರಸ್ತಾವೋ ದ್ಯೌರುದ್ಗೀಥಃ ದಿಶಃ ಪ್ರತಿಹಾರಃ ಸಮುದ್ರೋ ನಿಧನಮೇತಾಶ್ಶಕ್ವರ್ಯೋ ಲೋಕೇಷು ಪ್ರೋತಾಃ। ಸ ಏವಮೇತಾಶ್ಶಕ್ವರ್ಯೋ ಲೋಕೇಷು ಪ್ರೋತಾ ವೇದ ಲೋಕೀ ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ ಕೀರಾ ಲೋಕಾನ್ನ ನಿಂದೇತ್ ತದ್ವ್ರತಂ।

ನಾರಾಯಣಾಖ್ಯ ಉದ್ಗೀಥಃ ಉದ್ಗೇಯಃ ಪ್ರಣವೇನ ಯತ್। ಉದ್ಗಚ್ಛಂತಿ ಯತೋಽಸ್ಮಾದ್ವಾ ವಾಸುದೇವಾದಿಮೂರ್ತಯಃ ಪ್ರಥಮಾವತಾರರೂಪತ್ವಾದ್ವಾಸುದೇವಃ ಪರಃ ಪುಮಾನ್। ಪ್ರಸ್ತಾವೋ ನಿಧನಂ ಚಾಪಿ ಸಂಕರ್ಷಣ ಉದಾಹೃತಃ। ಸಂಕರ್ಷಣೋ ಹಿ ಸಂಹರ್ತಾ ಪ್ರದ್ಯುಮ್ನಃ ಪರಮೇಶ್ವರಃ। ಹಿಂಕಾರ ಇತಿ ಸಂಪ್ರೋಕ್ತೋ ಹೀತಿ ಸೃಷ್ಟಿರುದೀರ್ಯತೇ। ಪ್ರಸಿದ್ಧತಾ ಹಿ ಸೃಷ್ಟಿಃ ಸ್ಯಾದನಿರುದ್ಧಃ ಪರೋ ವಿಭುಃ। ಪ್ರತಿಹಾರ ಇತಿ ಪ್ರೋಕ್ತಃ ಸ ಹಿ ಕಾರ್ಯೇಷ್ವಿದಂ ಜಗತ್। ಪ್ರತಿ ಪ್ರತಿ ಹರೇರ್ನಿತ್ಯಂ ಮೂರ್ತಿ ಪ್ರತಿಹೃತೇಸ್ತಥಾ। ತೇ ಪೃಥಿವ್ಯಾದಿಷು ಸದಾ ತನ್ನಾಮಾನಃ ಪ್ರತಿಷ್ಠಿತಾಃ। ಪೃಥಿವೀತ್ಯಾದಿಶಬ್ದಾರ್ಥಾಃ ತೇ ಹಿ ಮುಖ್ಯತ ಈರಿತಾಃ। ತತ್ಸಂಬಂಧಾತ್ತದರ್ಥತ್ವಂ ಪೃಥಿವ್ಯಾದೇರಮುಖ್ಯತಃ ॥" ಇತಿ ಛಾಂದೋಗ್ಯೋಪನಿಷದ್ಭಾಷ್ಯೇ.

**ಘನಗತನು ತಾನಾಗಿ ನಾರಾ।**
**ಯಣನು ತನ್ನಾಮದಲಿ ಕರೆಸುವ।**
**ವನದ ಗರ್ಭೋದಕದಿ ನೆಲೆಸಿಹ ವಾಸುದೇವ ಸದಾ ॥**
**ಧ್ವನಿಸಿಡಿಲು ಸಂಕರ್ಷಣನು ಮಿಂ।**
**ಚಿನೊಳು ಶ್ರೀಪ್ರದ್ಯುಮ್ನ ವೃಷ್ಟಿಯ।**
**ಹನಿಗಳೊಳಗನಿರುದ್ಧನಿಪ್ಪನು ವರುಷವೆಂದೆನಿಸಿ ॥ ೨೩ ॥**

ಸರ್ವಜೀವರು ಭೋಜನಮಾಡತಕ್ಕ ಪದಾರ್ಥಗಳು ವೃಷ್ಟಿದ್ವಾರಾ ಉತ್ಪತ್ತಿ. ಆದಕಾರಣ, ಆ ವೃಷ್ಟಿಯಲ್ಲಿ ಪರಮಾತ್ಮನ ಉಪಾಸನಾವಿಧಿಯನ್ನ ಹೇಳತಾರೆ.

ಘನಗತನು ತಾನಾಗಿ–ಮಳಿ ಸುರಿಸುವಂಥಾ ಮೇಘದಲ್ಲಿ ಪರಮಾತ್ಮನಾದ ತಾನು, ನಾರಾಯಣನು–ಮೂಲರೂಪನಾದ ನಾರಾಯಣ ಎಂತ ನಾಮದಿಂದ, ತನ್ನಾಮದಲಿ ಕರೆಸುವ–ಮೇಘಾಂತರ್ಗತನಾಗಿ ಮೇಘನಾಮದಿಂದ ಕರಿಸತಾನೆ. ವನದ ಗರ್ಭೋದಕದಿ– ಈ ಮೇಘಗರ್ಭಾಂತರ್ಗತ ಉದಕದಲ್ಲಿ, ಸದಾ–ನಿರಂತರ, ವಾಸುದೇವ–ವಾಸುದೇವ ರೂಪದಿಂದ, ನೆಲೆಸಿಹ–ಆವಾಸನಾಗಿದ್ದಾನೆ. ಧ್ವನಿ–ಮೇಘಗರ್ಜನೆಯಲ್ಲಿ, ಸಿಡಿಲು– ಮೇಘದಿಂದ ಬೀಳತಕ್ಕ ಪಿಡುಗಿನಲ್ಲಿ, ಈ ಎರಡರಲ್ಲಿ, ಸಂಕರ್ಷಣನು–ಸಂಕರ್ಷಣನು, ಮಿಂಚಿನೊಳು–ಮೇಘಗತ ಮಿಂಚಿನೊಳು, ಶ್ರೀಪ್ರದ್ಯುಮ್ನ– ಕಾಂತಿಸಂಪನ್ನನಾದ ಪ್ರದ್ಯುಮ್ನದೇವರು, ವೃಷ್ಟಿಯ ಹನಿಗಳೊಳಗೆ–ಮಳೆ ಸುರಿಯತಕ್ಕ ಪ್ರತಿ ಹನಿಬಿಂದು

ಗಳೊಳಗೆ, ಅನಿರುದ್ಧನು–ಅನಿರುದ್ಧನಾಮಕನು, ವರುಷವೆಂದೆನಿಸಿ–ಮಳೆ ಎಂತ ನಾಮದಿಂದ ಕರಿಸಿ, ಇಪ್ಪನು–ಇರೋವನಾಗಿದ್ದಾನೆ.

**ತಾ||** ಮೇಲೆ ಹೇಳಿದ ಪ್ರಕಾರ ನಾರಾಯಣಾದಿ ಪಂಚರೂಪದಿಂದ ಪರಮಾತ್ಮ ವೃಷ್ಟಿದ್ವಾರಾ ಧಾನ್ಯಾದಿಗಳ ಉತ್ಪತ್ತಿಮಾಡಿ ತದಂತರ್ಗತನಾಗಿ ಇದ್ದು, ಜೀವರ ಸಂರಕ್ಷಿಸುತ್ತಾನೆಂದು ತಾತ್ಪರ್ಯ.

**ವಿಶೇಷಾರ್ಥ** :– "ಅಭ್ರಾಣಿ ಸಂಪ್ಲವಂತೇ ಸ ಹಿಂಕಾರಃ | ಮೇಘೋ ಜಾಯತೇ ಸ ಪ್ರಸ್ತಾವೋ ವರ್ಷತಿ ಸ ಉದ್ಗೀಥೋ ವಿದ್ಯೋತತೇ ಸ್ತನಯತಿ ಸ ಪ್ರತಿಹಾರಃ, ಉದ್ಗೃಹ್ಣಾತಿ ತನ್ನಿಧನಂ | ಏತದ್ವೈ ರೂಪಂ ಪರ್ಜನ್ಯೇ ಪ್ರೋತಂ ಸ ಯ ಏವಮೇವ ತದ್ವೈ ರೂಪಂ ಪರ್ಜನ್ಯೇ ಪ್ರೋತಂ ವೇದ ವಿರೂಪಾನ್ ಸರೂಪಾಂಶ್ಚ ಪಶೂನವರುಂಧೇ | ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ ಕೀರ್ತ್ಯಾ ವರ್ಷಂ ತಂ ನ ನಿಂದೇತ್ ತದ್ವ್ರತಂ || " ಛಾಂದೋಗ್ಯ.

"ಪಂಚರೂಪಂ ಚ ಯೇ ವಿಷ್ಣುಂ ಪುರೋ ವಾತಾದಿಷು ಸ್ಥಿತಂ | ಉಪಾಸ್ತೇ ವೃಷ್ಟಿರಸ್ಮೈ ಸ್ಯಾದ್ವರ್ಷಯತ್ಯಸ್ಯ ಮುಕ್ತಿಗಾನ್ | ಸರ್ವಭೋಗಾಂಶ್ಚ ಭಗವಾನ್ ಪಂಚರೂಪೀ ಜನಾರ್ದನಃ || ಇತಿ ಛಾಂದೋಗ್ಯೋಪನಿಷದ್ಭಾಷ್ಯೇ.

**ಗೃಹ ಕುಟುಂಬ ಧನಾದಿಗಳ ಸ |**
**ನ್ನಹಗಳುಳ್ಳವರಾಗಿ ವಿಹಿತಾ |**
**ವಿಹಿತಧರ್ಮ ಸುಕರ್ಮಗಳ ತಿಳಿಯದಲೆ ನಿತ್ಯದಲಿ ||**
**ಅಹರ ಮೈಥುನ ನಿದ್ರೆಗೊಳಗಾ |**
**ಗಿಹರು ಸರ್ವಪ್ರಾಣಿಗಳು ಹೃ |**
**ದ್ಗುಹನಿವಾಸಿಯನರಿಯದಲೆ ಭವದೊಳಗೆ ತೊಳಲುವರು || ೨೪ ||**

ಜನರು ಸದ್ಗತಿ ಐದತಕ್ಕ ಕರ್ಮ ದಾವದೋ ಅದರನ್ನ ಅರಿಯದೆ, ಸತ್ಕರ್ಮಗಳ ಆಚರಿಸುತ್ತೇವೆ ಎಂದು ಕರ್ಮಗಳ ಮಾಡಿ ಶ್ರಮಿಸುತ್ತಾರೆಂದು ಹೇಳತಾರೆ.

ನಿತ್ಯದಲಿ–ಪ್ರತಿದಿನದಲ್ಲೂ (ಜನರುಗಳು), ವಿಹಿತ–ಪರಮಾತ್ಮಗೆ ಪ್ರೀತಿಕರವಾದ, ವೇದೋಕ್ತವಾದ ಸದ್ಗತಿ ಐದತಕ್ಕ ವಿಹಿತಕರ್ಮಗಳೇನು, ಅವಿಹಿತ–ಪರಮಾತ್ಮಗೆ ಪ್ರೀತಿಕರವಲ್ಲದ ಕರ್ಮಗಳೇನು, ಧರ್ಮ–ಲೋಕೋಪಕಾರಕವಾದ ಧರ್ಮಗಳೇನು, ಸುಕರ್ಮ ಸಮೀಚೀನವಾದ ವ್ರತೋಪಾಸನಾದಿಗಳೇನು, ಗಳ ತಿಳಿಯದಲೆ–ಇತ್ಯಾದಿ ಪುಣ್ಯಾಪುಣ್ಯ–ಕರ್ಮಗಳ ಸ್ವಾಧೀನಕರ್ತೃತ್ವವನ್ನು ಆರೋಪಣೆ ಮಾಡಿಕೊಂಡು, ತಿಳಿಯದೇ ಅನೇಕ ಸತ್ಕರ್ಮಗಳ ಮಾಡೋಣದರಿಂದ, ಪುಣ್ಯಕರ್ಮಗಳು ಬಂಧನಕ್ಕೆ ಕಾರಣವಾಗಿ ದುಃಖಕ್ಕೆ ಗುರಿಮಾಡತವೆ ಎಂತ ತಿಳಿಯದೆ, ಭಾಗವತ ಪ್ರಮಾಣ :–" ಸರ್ವೇಷಾಮಪಿ ಜಂತೂನಾಂ ಸತತಂ ದೇಹಪೋಷಣೇ | ಅಸ್ತಿ ಪ್ರಜ್ಞಾ ನಿಜಾಯತ್ತಾ ಕೋ ವಿಶೇಷಸ್ತಯಾ ನೃಣಾಂ || ".

ಗೃಹ_ಅನಿತ್ಯವಾದ, ದಾರುಪಾಷಾಣದಿಂದ ನಿರ್ಮಿತವಾದ ಮನೆ, ಕುಟುಂಬ_ದಾರಾ ಪುತ್ರಾದಿಗಳ, ಧನಾದಿಗಳ_ದ್ರವ್ಯ ಮೊದಲಾದ, ಸನ್ನಹಗಳುಳ್ಳವರಾಗಿ-ತಾವು ಅಲ್ಪಾಯು ಎಂತ ದೃಢ ಉಳ್ಳವರಾಗಿ, ಅನೇಕವಾದ ಶಾಶ್ವತವಾದ ಪ್ರಯತ್ನಾದಿಗಳಿಂದ ಯುಕ್ತರಾಗಿ ಭಗವಂತನ್ನ ಮರೆತು, ಆಹರ_ಉದರಪೂರ್ತಿಗಾಗಿ ವಿಧಿನಿಷೇಧಗಳಿಲ್ಲದಲೆ, ನಾನಾ ಪದಾರ್ಥಗಳ ಭೋಜನವೇನು, ಮೈಥುನ_ವಿಧಿನಿಷೇಧಗಳಿಲ್ಲದೆ ಸ್ತ್ರೀಸಂಭೋಗಾದಿ ಗಳೇನು, ನಿದ್ರೆಗೆ_ಅಹೋರಾತ್ರಿಶ್ಚ ನಿದ್ರಾಯುಕ್ತರಾಗೋದೇನು (ಇವುಗಳಿಗೆ), ಸರ್ವ ಪ್ರಾಣಿಗಳು_ಸಮಸ್ತ ಜನರೂ, ಒಳಗಾಗಿಹರು_ಇದರಲ್ಲೇ ಮಗ್ನರಾಗಿ, ಮೃತಿ, ಜನ್ಮ ಹೊಂದತಾ, ಸದ್ಗತಿ ಐದತಕ್ಕ ಜ್ಞಾನಮಾರ್ಗ ತಿಳಿಯದೆ, ಜ್ಞಾನಶೂನ್ಯರಾಗಿ ಇದ್ದಾರೆ. (ಇನ್ನೂ ಹ್ಯಾಂಗೆ ಇದ್ದಾರೆಂದರೆ), ಹೃದ್ಗುಹನಿವಾಸಿಯನು_ಹೃದಯಾಕಾಶದಲ್ಲಿ ಆವಾಸ ನಾಗಿ ಇರತಕ್ಕ ಪರಮಾತ್ಮನ್ನ, ಅರಿಯದಲೆ_ತಿಳಿಯದೆ (ಅಪರೋಕ್ಷಕ್ಕಾಗಿ ಸತ್ಸಾಧನೆ ಮಾಡದೆ), ಭವದೊಳಗೆ_ಜಡವಾದ ಪದಾರ್ಥಗಳಲ್ಲಿ ಕೇವಲ ಅಭಿಮಾನಯುಕ್ತರಾಗಿ, ತೊಳಲುವರು_ಸಂಸಾರದಲ್ಲಿ ಶ್ರಮಪಡುತ್ತಾ ಜನನಮರಣಕ್ಕೆ ಕಾರಣವಾದ ಸಾಧನಗಳ ಮಾಡುತ್ತಾ, ಈ ಐಹಿಕವೇ ಶಾಶ್ವತ ಎಂದು ತಿಳಕೊಂಡು ಇರೋವರಾಗಿ ಇದ್ದಾರೆ. ಈ ಪ್ರಕಾರ ಇರಕೂಡದು ಎಂತ ಮುಖ್ಯ ತಾತ್ಪರ್ಯ.

**ಜಡಜಸಂಭವ ಖಗ ಫಣಿಪ ಕೆಂ ।**
**ಜೆಡೆಯರಿಂದೊಡಗೂಡಿ ರಾಜಿಸು ।**
**ತಡವಿಯೊಳಗಿಪ್ಪನು ಸದಾ ಗೋಜಾದ್ರಿಜನು ಎನಿಸಿ ॥**
**ಉಡುಪನಿಂದಭಿವೃದ್ಧಿಗಳ ತಾ ।**
**ಕೊಡುತ ಪಕ್ಷಿಮೃಗಾಹಿಗಳ ಕಾ ।**
**ರೊಡಲ ಕಾವನು ತತ್ತದಾಹ್ವಯನಾಗಿ ಜೀವರನ ॥ ೨೫ ॥**

ಅಡವಿಯಲ್ಲಿ ಇರುವಂಥಾ ಜೀವರನ್ನ ಶ್ರೀಪರಮಾತ್ಮ ಸಂರಕ್ಷಿಸುತ್ತಾನೆ ಎಂತ ಹೇಳತಾರೆ.

ಜಡಜಸಂಭವ_ಕಮಲೋದ್ಭವನಾದ ಬ್ರಹ್ಮದೇವರು, ಖಗ_ಪಕ್ಷಿಶ್ರೇಷ್ಠನಾದ ಗರುಡದೇವರು, ಫಣಿಪ_ಸರ್ಪಗಳಲ್ಲಿ ಶ್ರೇಷ್ಠನಾದ ಶೇಷದೇವರು, ಕೆಂಜೆಡೆಯ_ರಕ್ತವರ್ಣ ವಿಶಿಷ್ಟವಾದ ಜಡೆಗಳು ಉಳ್ಳ ರುದ್ರದೇವರು, ರಿಂದೊಡಗೂಡಿ_ಈ ದೇವತೆಗಳ ಸಹ, ರಾಜಿಸುತ_ಶ್ರೀಪರಮಾತ್ಮ ಪ್ರಕಾಶಮಾನನಾಗುತ್ತ, ಗೋಜಾದ್ರಿಜನು ಎನಿಸಿ_ಪರ್ವತ ಗಳಲ್ಲಿ ಜನಿತರಾದ ಸ್ಥಾವರಜಂಗಮಜೀವರನ್ನ ಅದ್ರಿಜನಾಮಕ ಪರಮಾತ್ಮನು, ಚಂದ್ರಾಂತ ರ್ಗತನಾಗಿ, ಚಂದ್ರಕಿರಣಗಳಿಂದ ಅಡವಿಯಲ್ಲಿ ಇದ್ದು, ಗೋಜನಾಮಕ ಪರಮಾತ್ಮನು, ಈ ಪ್ರಕಾರ ಅಲ್ಲಲ್ಲಿ ಇದ್ದವನಾಗಿ, ಅಡವಿಯೊಳಗಿಪ್ಪನು_ಅಡವಿಯಲ್ಲಿರುವ ಮೃಗವೃಕ್ಷಾದಿ ಜೀವರನ್ನ ಗೋಜನಾಮಕ ಪರಮಾತ್ಮ ರಕ್ಷಕನಾಗಿನ್ನೂ, ಉಡುಪನಿಂದ_ಅಶ್ವಿನ್ಯಾದಿ ನಕ್ಷತ್ರಗಳ ಪಾಲನಮಾಡುವ, ಚಂದ್ರಾಂತರ್ಗತನಾಗಿ ಇದ್ದು ಚಂದ್ರಕಿರಣಗಳಿಂದ, ಅಭಿ

ವೃದ್ಧಿಗಳ–ಛಂದಾಗಿ ವೃದ್ಧಿರೂಪವಾದ ಸಂರಕ್ಷಣೆಯನ್ನು, ತಾ ಕೊಡುತಾ–ಮಾಡುತ್ತಾ, ಮತ್ತು ಸ್ಥಿತಿಕರ್ತನಾದ, ಕಾರೊಡಲ–ನೀಲಮೇಘವರ್ಣಯುಕ್ತನಾದ ಶ್ರೀಕೃಷ್ಣ ಅರಣ್ಯಗತ ಜೀವರಿಗೆ ಅನ್ನಾದಿಗಳ ಕೊಟ್ಟು (ರಕ್ಷಿಸುತ್ತಾ), ಪಕ್ಷಿಮೃಗ ಅಹಿಗಳ–ಗೋಜನಾಮಕ ಪರಮಾತ್ಮನು ಪಕ್ಷಿ, ಮೃಗ, ಸರ್ಪ ಮೊದಲಾದ ಜೀವರನ್ನ, ಸದಾ–ಸರ್ವಕಾಲದಲ್ಲೂ, ಕಾವನು–ರಕ್ಷಿಸುತ್ತಾ ಇರುವನು. ತತ್ತದಾಹ್ವಯನಾಗಿ–ಗೋಜ, ಅದ್ರಿಜ ನಾಮಕ ಪರಮಾತ್ಮನು, ಆಯಾ ಜೀವರಲ್ಲಿ, ಆಯಾ ಜೀವನಾಮಗಳಿಂದ ಇದ್ದವನಾಗಿ, ಜೀವರನ–ಜೀವನಪ್ರದನಾಗತಾನೆಂದು ತಾತ್ಪರ್ಯ.

**ತಾ||** ಅದ್ರಿಜನಾಮಕ ಪರಮಾತ್ಮನು ಪರ್ವತದಲ್ಲಿರುವ ವೃಕ್ಷಾದಿಗಳ, ಮೃಗಾದಿಗಳ ಸಂರಕ್ಷಕನೆಂದು ತಾತ್ಪರ್ಯ.

**ಅಪರಿಮಿತಸನ್ಮಹಿಮ ನರಹರಿ ।**
**ವಿಪಿನದೊಳು ಸಂತೈಸುವನು ಕಾ ।**
**ಶ್ಯಪಿಯನಳೆದವ ಸ್ಥಳಗಳಲಿ ಸರ್ವತ್ರ ಕೇಶವನು ॥**
**ಖಪತಿ ಗಗನದಿ ಜಲಗಳಲಿ ಮಹ ।**
**ಶಫರನಾಮಕ ಭಕ್ತರನ ನಿ ।**
**ಷ್ಕಪಟದಿಂದಲಿ ಸಲಹುವನು ಕರುಣಾಳು ದಿನದಿನದಿ ॥ ೨೬ ॥**

ಶ್ರೀ ಪರಮಾತ್ಮ ಭಕ್ತರನ್ನ ಸಂರಕ್ಷಿಸತಕ್ಕ ಸ್ಥಳಾಂತರಭಗವದ್ರೂಪಗಳ ಹೇಳತಾರೆ.

ಅಪರಿಮಿತ–ಪ್ರಳಯೋದಕದೋಷಾದಿಯಲ್ಲಿ ಅಪರಿಚ್ಛಿನ್ನವಾದ, ಸನ್ಮಹಿಮ–ನಿರ್ದುಷ್ಟವಾದ ಮಹಾಮಹಿಮಾ ಉಳ್ಳ, ನರಹರಿ–ಶ್ರೀನರಸಿಂಹದೇವರು, ವಿಪಿನದೊಳು–ಅರಣ್ಯದೊಳು, "ಅಟವ್ಯಾಂ ನಾರಸಿಂಹಶ್ಚ" ಎಂತ ಪ್ರಮಾಣ ಇರುವುದರಿಂದ ಅಡವಿಯಲ್ಲಿ ಸಂರಕ್ಷಣ ಮಾಡತಕ್ಕವನು, ಶ್ರೀ ನರಸಿಂಹರೂಪಿ ಪರಮಾತ್ಮನು. ಜೀವರು ಸಂಸಾರಾಖ್ಯ ಅರಣ್ಯದಲ್ಲಿರುವುದರಿಂದ, ಇಂಥಾ ಅಡವಿಯಲ್ಲಿ ರಕ್ಷಕನು ಶ್ರೀ ನೃಸಿಂಹನು, ಸಂತೈಸುವನು–ಇಂಥಾ ನೃಸಿಂಹದೇವರ ಉಪಾಸನಾದಿಂದ ಸಂಸಾರಾಖ್ಯ ಅಡವಿ ದಾಟಿಸಿ ಮುಕ್ತರನ್ನಾಗಿ ಮಾಡುವನು. ಸ್ಥಳಗಳಲಿ–ಗ್ರಾಮ, ಪಟ್ಟಣ ಮೊದಲಾದ ಪ್ರದೇಶದಲ್ಲಿ "ಸ್ಥಳೇ ರಕ್ಷತು ವಾಮನಃ" ಎಂತಲೂ, "ಸ್ಥಳೇ ಚ ಮಾಯಾವಟುವಾಮನೋಽವ್ಯಾತ್ತ್ರಿವಿಕ್ರಮಃ" ಎಂತ ಭಾಗವತ ಷಷ್ಠಸ್ಕಂಧದಲ್ಲಿ ಉಕ್ತಪ್ರಕಾರ ವಾಮನರೂಪಿ ಪರಮಾತ್ಮ ರಕ್ಷಕನು. ಕಾಶ್ಯಪಿಯನಳೆದವ–ಈ ವಾಮನನು ಎಂಥಾವನೆಂದರೆ, ಕಶ್ಯಪಋಷಿಯ ಮಗಳಾದ ಭೂಮಿದೇವಿಯನ್ನ ತನ್ನ ಪಾದದಿಂದ ಅಳೆದವನು, ಸರ್ವತ್ರ–"ಸರ್ವತಃ ಪಾತು" ಸರ್ವತ್ರದಲ್ಲೂ ಸಂರಕ್ಷಣ ಮಾಡುವನು. ಕೇಶವನು–ಎಂದರೆ "ಹಿರಣ್ಯಗರ್ಭಕಃ ಪ್ರೋಕ್ತಃ ಈಶಃ ಶಂಕರ ಏವ ಚ । ಸೃಷ್ಟ್ಯಾದಿನಾ ವರ್ತಯತಿ ತೌ ಯತಃ ಕೇಶವೋ ಭವಾನ್ ॥" ಎಂತ ಹರಿವಂಶೋಕ್ತಿ ಇರುವದ್ದರಿಂದಲೂ, "ಕಶ್ಚ ಈಶಶ್ಚ ಕೇಶೌ ಬ್ರಹ್ಮರುದ್ರೌ ವಾತಿ

ವರ್ತಯತಿ ಇತಿ ಕೇಶವಃ" ಎಂತ ಇರುವದ್ದರಿಂದಲೂ, "ಸ ಏವ ಸೂರ್ಯಸಂಸ್ಥಃ ಸಂನೂ ಲೋಕಂ ತಪತಿ ಕೇಶವಃ" ಎಂತ ಐತರೇಯ ಭಾಷ್ಯದಲ್ಲಿರುವದ್ದರಿಂದಲೂ, ಸರ್ವತ್ರದಲ್ಲೂ ಕಾಪಾಡತಕ್ಕವನು ಕೇಶವನಾಮಕ ಪರಮಾತ್ಮನು. ಇನ್ನೂ ಎಂಥಾವನೆಂದರೆ, ಖಪತಿ– (ಖಾನಾಂ ಇಂದ್ರಿಯಾಣಾಂ ಪತಿಃ ಪ್ರೇರಕಃ ಎಂತ ಅರ್ಥ.) ಹೃಷಿಕೇಶ ಎಂತ ಅರ್ಥ. ಮಾತೃಕಾನ್ಯಾಸದಲ್ಲಿ "ಖಂ ಖಪತಯೇ ನಮಃ" ಎಂತ ಪ್ರಯೋಗವದೆ. ಗಗನದಿ– ಈ ಪರಮಾತ್ಮ ಆಕಾಶದಲ್ಲಿ ಸಂಚಾರಮಾಡುವ ಜೀವರನ್ನ ಸಂರಕ್ಷಣ ಮಾಡತಾನೆಂತ ತಾತ್ಪರ್ಯ. ಇನ್ನೂ, ಜಲಗಳಲಿ–ಉದಕದಲ್ಲಿ ಸಂಚಾರಮಾಡುವ ಜೀವರನ್ನ, ಮಹ ಶಫರನಾಮಕ– "ಜಲೇಷು ಮಾಂ ರಕ್ಷತಿ ಮತ್ಸ್ಯಮೂರ್ತಿಃ ಯಾದೋಗಣೇಭ್ಯೋ ವರುಣಸ್ಯ ಪಾಶಾತ್" ಎಂತ ಇರುವದ್ದರಿಂದ ಶ್ರೀ ಮಚ್ಛರೂಪಿ ಪರಮಾತ್ಮ ರಕ್ಷಕನು. ಭಕ್ತರನ–ಸರ್ವತ್ರದಲ್ಲಿ ತನ್ನ ಭಕ್ತರನ್ನ, ನಿಷ್ಕಪಟದಿಂದಲಿ–ಭಕ್ತರ ಸ್ವರೂಪಸ್ವಭಾವ ವನುಸರಿಸಿ ತಾನು ನಿಷ್ಕಾಪಟ್ಯದಿಂದ ಯುಕ್ತನಾಗಿ, ಕರುಣಾಳು–ಕೇವಲ ಅಂತಃಕರಣ ದಿಂದ, ದಿನದಿನದಿ–ದಿನಪ್ರತಿದಿನದಲ್ಲೂ, ಸಲಹುವನು–ಬಾಹ್ಯರೂಪವಾದ ವಿಪತ್ತುಗಳನ್ನು ಪರಿಹಾರಮಾಡಿಯೂ, ಅಂತರದಲ್ಲಿ ಇರುವ ದ್ವೇಷಿಗಳಾದ ಸತ್ಸಾಧನಿಗೆ ವಿರುದ್ಧರಾದ ದೇಹಗತ ದೈತ್ಯರನ್ನ ನಿಗ್ರಹಮಾಡಿ ಸಂರಕ್ಷಣಮಾಡತಾನೆಂತ ತಾತ್ಪರ್ಯ.

**ಕಾರಣಾಂತರ್ಯಾಮಿ ಸ್ಥೂಲವ ।**
**ತಾರ ವ್ಯಾಪ್ತಾಂಶಾದಿರೂಪಕ ।**
**ಸಾರ ಶುಭಪ್ರವಿವಿಕ್ತನಂದ ಸ್ಥೂಲ ನಿಸ್ಸಾರ ॥**
**ಆರು ರಸಗಳನರ್ಪಿಸಲ್ಪರಿ ।**
**ಗೀ ರಹಸ್ಯವ ಪೇಳದೆ ಸದಾ ।**
**ಪಾರಮಹಿಮನ ರೂಪಗುಣಗಳ ನೆನೆದು ಸುಖಿಸುತಿರು ॥ ೨೭ ॥**

ಪ್ರಾಕೃತ ಆರು ರಸಗಳ ಪರಮಾತ್ಮ ಸ್ವೀಕಾರಮಾಡೋದಿಲ್ಲ ಎಂತ ಹೇಳತಾರೆ.

ಕಾರಣ–ಜೀವರು ಸ್ಥೂಲದೇಹದಿಂದ ಸಹಿತರಾಗಿ ಸೃಷ್ಟಿಗೆ ಬರಬೇಕಾದರೆ ಕಾರಣ ದಾವದೆಂದರೆ, ಅನಾದಿಲಿಂಗಶರೀರಗತ ಅನಾದಿ ಜಡಕರ್ಮ ಕಾರಣ, ಈ ಕಾರಣದಿಂದ ಸೃಷ್ಟಿಯು. ಇದರಿಂದ ಪ್ರಾಣಿಗಳಿಗೆ ಇರುವ ಲಿಂಗಶರೀರ ಭಂಗಮಾಡಿಸಿ, ಅವರವರ ಸ್ವರೂಪ ಸುಖದುಃಖ ಕೊಡೋಣವೇ ಪ್ರಯೋಜನ ಹೊರತು, ಇದರಿಂದ ಪರಮಾತ್ಮಗೆ ಏನೂ ಪ್ರಯೋಜನವಿಲ್ಲ. ಜೀವರ ಪ್ರಯೋಜನಾರ್ಥವೇ, ಸೃಷ್ಟಿ. ದೇವರು ಪೂರ್ಣ ಜ್ಞಾನಾನಂದಸ್ವರೂಪನಾದವ. ಸ್ಥೂಲ–ಈ ಕಾರಣದಿಂದಲೇ ಜೀವರಿಗೆ ಸ್ಥೂಲದೇಹ ಕೊಡ ತಾನೆ. ಆದಿರೂಪಕ–ಸೃಷ್ಟಿಗೆ ಆದಿರೂಪನಾದ ಅಂಶಿಸಾಂಕೇತನಾದ ನಾರಾಯಣದೇವರು, ಅಂಶ–ಅಂಶವಿಶೇಷಗಳಿಂದ, ಅವತಾರ–ಆಯಾ ಜೀವಾಕಾರದಂತೆ ಅವತಾರಗಳ ಮಾಡಿ, ವ್ಯಾಪ್ತ–ಆಯಾ ಜೀವರ ಸ್ವರೂಪದಲ್ಲಿ ಪ್ರವೇಶಮಾಡಿ, ಜೀವಗೆ ಬಿಂಬನಾಗಿ, ಜೀವನಲ್ಲಿ

ವ್ಯಾಪ್ತನಾಗಿ ಇದ್ದಾನೆ. ಅಂಶರೂಪದಿಂದ ಸ್ಥೂಲದೇಹದಲ್ಲೂ ವ್ಯಾಪ್ತನಾಗಿ ಇದ್ದಾನೆ. ಅಂತರ್ಯಾಮಿ–ಈ ಪ್ರಕಾರ ಅಂತರ್ಯಾಮಿಯಾಗಿದ್ದು, ಪ್ರವಿವಿಕ್ತನಂದ–ಈ ಅಂತರ್ಗತನಾದ ಪರಮಾತ್ಮ ದಾವದಕ್ಕೂ ಸಂಬಂಧಪಡದೆ ಪ್ರಕರ್ಷೇಣ ಪ್ರತ್ಯೇಕನಾದ, ಅಸದೃಶವಾದ, ಪೂರ್ಣವಾದ ಆನಂದ ಉಳ್ಳವ. ಶುಭ–ಇಂಥಾ ಪರಮಾತ್ಮ ಸ್ವೀಕಾರಮಾಡತಕ್ಕ ಮಂಗಳಕರವಾದ, 'ಸಾರ'ರಸವೆಂಬೋದು ಜೀವಭುಕ್ತ ಪದಾರ್ಥಗತ ತದಾಕಾರ ರಸರೂಪಗಳಾದ ತನ್ನ ಸ್ವಾಖ್ಯಗಳು ದಾವದವೆ, ಇವೇನೇ, ಸಾರರಸ ; ಇದೇ ಪರಮಾತ್ಮ ಸ್ವೀಕಾರಮಾಡೋದು. ಸ್ಥೂಲ ನಿಸ್ಸಾರ–ತದನ್ಯವಾದ, ಜೀವರು ಭುಂಜಿಸತಕ್ಕ ಜಡರಸಗಳು ಪರಮಾತ್ಮಗೆ ನಿಸ್ಸಾರವೆಂತ ಕರಿಸುತವೆ. ಆರುರಸಗಳನರ್ಪಿಸಲು–ಜಡವಾದ ಷಡ್ರಸಗಳ ಪರಮಾತ್ಮ ಸ್ವೀಕಾರ ಮಾಡೋದಿಲ್ಲ ಎಂತಲೂ, ಅಪ್ರಾಕೃತವಾದ ಸ್ವಾಖ್ಯರಸಗಳ ಅರ್ಪಣೆ ಮಾಡೆಂತಲೂ, ಎರಡು ಪ್ರಕಾರ ಅನುಸಂಧಾನವಿರಬೇಕು ಎಂತ ತಾತ್ಪರ್ಯ. ಪ್ರಕಾರಾಂತರ ಅನುಸಂಧಾನಕ್ರಮ :—ಪ್ರಕಾಶಾದಿಗಳಿಗೆ ಕಾರಣವಾದ ದೀಪಗತ ರೂಪಗಳಿಗೆ ಸಾರವೆಂಬ ತೈಲಾದಿಗತ ಸ್ವರಸ ಒಂದು, ಸ್ವದೇಹದಲ್ಲಿ ಅಂತರ್ಯಾಮಿ ರೂಪಕ್ಕೆ ಶುಭವೆಂಬ ಜಾತಿವಿಹಿತ ಭೋಜನಪದಾರ್ಥಗತ ಸ್ವರಸ ಎರಡು, ಸ್ಥೂಲದೇಹಸ್ಥರೂಪಕ್ಕೆ ವಿವಿಕ್ತ ಎಂದರೆ, ಜಗದ್ವಿಲಕ್ಷಣ ತದಾಶ್ರಯ ರಸರೂಪ ಮೂರು, ಅವತಾರವೆಂಬ ರಾಮಕೃಷ್ಣಾದಿ ರೂಪಕ್ಕೆ ಸ್ಥೂಲಾನ್ನಗತ ಆನಂದವೆಂಬ ಸ್ವರೂಪ ರಸರೂಪ ನಾಲ್ಕು, ವ್ಯಾಪ್ಯನೆಂಬ ಜಗದಾವರಕ ಅಂತರ್ಬಹಿಸ್ಥಿತ ರೂಪಕ್ಕೆ, ತದ್ಗತ ಸ್ಥೂಲವಸ್ತುಸ್ಥಿತಿ ಸ್ವರಸರೂಪ ಐದು, ಅಂಶವೆಂಬ ಮಾನುಷ ಪಶ್ವಾದಿ ರೂಪಕ್ಕೆ ಅಸಾರವೆಂಬ ತೃಣಾದಿಗತ ಸ್ವರಸರೂಪ ಆರು. ಈ ಪ್ರಕಾರ ಷಡ್ರಸಗಳ ಸಮರ್ಪಣಮಾಡುತಿರು. ಅಲ್ಪರಿಗೆ–ಇದರನ್ನ ಅಯೋಗ್ಯರಾದವರಿಗೆ, ಈ ರಹಸ್ಯವ–ಗೋಪ್ಯವಾದ ಈ ವಿಷಯಗಳನ್ನ, ಪೇಳದೆ–ತಿಳಿಸದೆ, ಸದಾ–ನಿರಂತರದಲ್ಲಿ, ಹೃದ್ಗತನಾದ ಸರ್ವಾಂತರ್ಯಾಮಿಯಾದ, ಅಪಾರಮಹಿಮನ–ಆದ್ಯಂತ ಶೂನ್ಯವಾದ ಮಹಿಮಾ ಉಳ್ಳ ಪರಮಾತ್ಮನ, ರೂಪಗುಣಗಳ–ಧ್ಯಾನಾದಿಗಳಿಂದ ರೂಪ, ವೇದಶಾಸ್ತ್ರಾನುಸಾರ ಗುಣಗಳ, ನೆನೆದು ಸುಖಿಸುತಿರು–ಸ್ಮರಣೆಮಾಡುತ್ತಾ ಸುಖದಿಂದ ಇರೋವನಾಗು ಎಂತ ತಾತ್ಪರ್ಯ.

**ಜಲಗತೋಡುಪನಮಲ ಬಿಂಬವ ।**
**ನೆಲುವೆನೆಂಬತಿಹರುಷದಿಂದಲಿ ।**
**ಜಲಚರಪ್ರಾಣಿಗಳು ನಿತ್ಯದಿ ಯತ್ನಗೈವಂತೆ ॥**
**ಹಲಧರಾನುಜ ಭೋಗ್ಯರಸಗಳ ।**
**ನೆಲೆಯನರಿಯದೆ ಪೂಜಿಸುತ ಹಂ ।**
**ಬಲಿಸುವರು ಪುರುಷಾರ್ಥಗಳ ಸತ್ಕುಲಜರಾವೆಂದು ॥ ೨೮ ॥**

ಜ್ಞಾನಶೂನ್ಯರಾಗಿ ಸತ್ಕರ್ಮ ಮಾಡಿದವರಿಗೆ ಭಗವದನುಗ್ರಹವಾಗೋದಿಲ್ಲ ಎಂತ ಹೇಳತಾರೆ.

ಜಲಗತ–ಸಮುದ್ರಜಲದಲ್ಲಿ ಅಥವಾ ತಟಾಕ ವೊದಲಾದ ಜಲಪ್ರದೇಶಗಳಲ್ಲಿ ಪ್ರತಿಫಲಿಸಿದ, ಉಡುಪನ–ನಕ್ಷತ್ರಗಳ ಪಾಲನಮಾಡತಕ್ಕ ಚಂದ್ರನ, ಅಮಲಬಿಂಬವ–ಎಂಥಾ ಚಂದ್ರನ ಎಂದರೆ, ಸ್ವಚ್ಛವಾದ ಪ್ರತಿಬಿಂಬವನ್ನ, ಜಲಚರಪ್ರಾಣಿಗಳು–ಜಲಚರ ಜೀವರು, ಮೆಲುವೆವೆಂಬ–ಭಕ್ಷಣಮಾಡಬೇಕು ಎಂತ ಇಚ್ಛಾ ಮಾಡತವೆ. ಅವರನ್ನ, ಅತಿಹರುಷದಿಂದಲಿ–ಅತ್ಯಂತ ಸಂತೋಷದಿಂದ, ಯತ್ನಗೈವಂತೆ–ಉದಕದಲ್ಲಿ ಅಧೋಭಾಗ ಗತ ಮನ ಉಳ್ಳವಾಗಿ, ಆ ಚಂದ್ರನ ಪ್ರತಿಬಿಂಬನ ಐದಬೇಕೆಂದು, ನಿತ್ಯದಿ–ಸತತವಾಗಿ ಯತ್ನಮಾಡೋವಾಗತವೆ. ಈ ಜಲಚರಗಳಿಗೆ ಚಂದ್ರನು ಹ್ಯಾಂಗೆ ಅಸಾಧ್ಯನೋ, ಹಾಂಗೆ, ಹಲಧರಾನುಜ–ಬಲರಾಮದೇವರಿಗೆ ತಮ್ಮನಾದ ಶ್ರೀಕೃಷ್ಣನ ಐದಬೇಕೆಂದು ಇಚ್ಛಾ ಉಳ್ಳ ಮನುಷ್ಯರು, ಭೋಗ್ಯರಸಗಳ–ಪರಮಾತ್ಮ ಸ್ವೀಕಾರಮಾಡುವ ಅಪ್ರಾಕೃತ ರಸಗಳ, ನೆಲೆಯನರಿಯದೆ–ಅಂತವನರಿಯದೆ, ಅಂದರೆ ಸರ್ವಪದಾರ್ಥದಲ್ಲೂ ಪರಮಾತ್ಮಗೆ ಅಭಿನ್ನವಾದ ರಸವದೆ ಅಂತ ತಿಳಿಯದೆ, ಪರಿದೃಶ್ಯಮಾನ ಜಡಪದಾರ್ಥಗಳಿಂದ, ಪೂಜಿಸುತ–ಪೂಜೆಮಾಡುತ್ತಾ, ದೇಹಪ್ರಯಾಸಯುಕ್ತರಾಗಿ ಜಲಚರ ಜೀವರಂತೆ ಯತ್ನ ಉಳ್ಳವರಾಗಿ, ಸತ್ಕುಲಜರು–ಸಮೀಚೀನವಾದ ಕುಲದಲ್ಲಿ ಹುಟ್ಟಿದವರೆಂದು, ಅಲ್ಲದೇ ಆವೆಂದು–ಪರಮಾತ್ಮನ ಪೂಜಾ ಸರಿಯಾಗಿ ನಾವು ಮಾಡಿದ್ದೇವು ಎಂದು ಅಹಂಯುಕ್ತ ರಾಗಿ, ಪುರುಷ–ಕ್ಷರಾಕ್ಷರವಿಲಕ್ಷಣನಾದ ಸರ್ವೋತ್ತಮನಾದ, ಪುರುಷಸಾಂಕೇತನಾದ ಶ್ರೀಪರಮಾತ್ಮನ, ಅರ್ಥಗಳ–ಅಪರೋಕ್ಷವೇನು, ಅನುಗ್ರಹವೇನು, ಇದಕ್ಕೆ ಅನುಸರಿಸಿದ ಇತರವಾದ ಅನೇಕ ಸುಖಗಳ, ಹಂಬಲಿಸುವರು–ಬೇಡೋವರಾಗತಾರೆ.

**ತಾ||** ಚಂದ್ರಬಿಂಬವನ್ನು ಐದಿ ಸುಖಪಡಬೇಕು ಎಂತ ಇಚ್ಛಾ ಉಳ್ಳ ಜಲಚರ ಜೀವರು ಶ್ರಾಂತರಾಗಿ ತಮ್ಮ ಮನೋಭೀಷ್ಟ ಹೊಂದದೆ ಹ್ಯಾಂಗೆ ಸಂಚಾರ ಮಾಡತಾ ಇರತಾರೋ, ಹಾಂಗೆ ಜ್ಞಾನಹೀನರಾಗಿ ಮಾಡಿದ ಸರ್ವಕರ್ಮಗಳನ್ನೂ ನಷ್ಟಹೊಂದಿ ಶ್ರಮಪಡತಾ, ಜನನಮರಣದಿಂದ ಸಂಚಾರರೂಪ ದುಃಖವನ್ನ ಅನುಭವ ಮಾಡತಾ ಇರತಾರೆ. ಇಂಥಾವರಿಗೆ ಭಗವದಪರೋಕ್ಷವೇನು, ಭಗವದನುಗ್ರಹವೇನು, ಇವು ಏನೂ ಆಗೋದಿಲ್ಲ ಎಂತ ತಾತ್ಪರ್ಯ.

**ದೇವ ಋಷಿ ಗಂಧರ್ವ ಪಿತೃ ನರ |**
**ದೇವಮಾನವ ದನುಜ ಗೋಜ ಖ |**
**ರಾವಿ ಮೊದಲಾದಖಿಳಚೇತನಭೋಗ್ಯರಸಗಳನು ||**
**ಯಾವದವಯವಗಳೊಳಗಿದ್ದು ರ |**
**ಮಾವರನು ಸ್ವೀಕರಿಪ ಯಾವ |**
**ಜ್ಜೀವಗಣಕೆ ಸ್ವಯೋಗ್ಯರಸಗಳನೀವನೆಂದೆಂದು || ೨೯ ||**

ಸಮಸ್ತ ಜೀವರು ಭೋಜನ ಮಾಡತಕ್ಕ ಪದಾರ್ಥಗಳಲ್ಲಿ ಪರಮಾತ್ಮ ಇದ್ದವನಾಗಿ ಅವರವರ ರಸ ಆವರವರಿಗೆ ಉಣಿಸಿ, ತನ್ನ ಸ್ವಾಖ್ಯರಸ ತಾನು ಸ್ವೀಕರಿಸುತ್ತಾ ಇರ್ತಾನೆ ಎಂತ ಹೇಳತಾರೆ.

ದೇವ_ಬ್ರಹ್ಮದೇವರಾರಭ್ಯ ಶತಸ್ಥರ ಪರಿಯಂತ ದೇವತೆಗಳು, ಋಷಿ_ಋಷಿ ಶಬ್ದದಿಂದ ಪುಷ್ಕರಾಂತ ಕರ್ಮಜ ದೇವತೆಗಳು, ಪಿತೃ_ಪಿತೃ ಶಬ್ದದಿಂದ ಚಿರಪಿತೃಗಳು, ಹಾಂಗೇ ದೇವಗಂಧರ್ವಾಂತ ಆಜಾನಜ ದೇವತೆಗಳು, ಗಂಧರ್ವ_ಮಾನುಷ ಗಂಧರ್ವರು, ನರದೇವ_ಮಾನುಷಚಕ್ರವರ್ತಿಗಳು, ಮಾನವ_ಮನುಷ್ಯೋತ್ತಮರು, ಗೋ_ಆಕಳು, ಎತ್ತುಗಳು, ಅಜ_ಮೇಕೆ, ಖರ_ಕತ್ತೆ, ಅವಿ_ಕುರಿಗಳು, ದನುಜ_ರಾಕ್ಷಸರು, ಮೊದಲಾದ_ಇವರೇ ಮೊದಲಾದ, ಅಖಿಳ ಚೇತನ_ಸಮಸ್ತರಾದ ತ್ರಿವಿಧ ಜೀವರುಗಳ, ಭೋಗ್ಯರಸಗಳನು_ಭೋಜನಯೋಗ್ಯವಾದ ಯಾವತ್ತೂ ರಸಗಳನ್ನು, ರಮಾವರನು_ಲಕ್ಷ್ಮೀದೇವಿಯರಿಗೆ ಪತಿಯಾದ ನಾರಾಯಣದೇವರು, ಯಾವದವಯವಗಳೊಳಗೆ ಇದ್ದು_ಆಯಾ ಪ್ರಾಣಿಗಳ ಕರಚರಣಾದಿ ಅವಯವಗಳೊಳಗೆ ತದಾಕಾರ ತದ್ಭಿನ್ನನಾಗಿದ್ದು, ಸ್ವೀಕರಿಪ_ತನ್ನ ಸ್ವಾಖ್ಯವಾದ ರಸರೂಪಭಿನ್ನವಾದ ರೂಪಗಳಿಂದ ಐಕ್ಯ ಐದಿ, ಜಡರಸಗಳ ಜೀವರಿಗೆ ಉಣಿಸ ತಾನೆ. ಆ ಉಣಿಸುವ ಬಗೆ ಹ್ಯಾಂಗೆಂದರೆ, ಯಾವಜ್ಜೀವಗಣಗೆ_ಸಮಸ್ತರಾದ ತ್ರಿವಿಧ ಜೀವರ ಸಮೂಹಕ್ಕೆ, ಸ್ವಯೋಗ್ಯರಸಗಳನು_ಯೋಗ್ಯವಾದ ಭೋಜನೋಪಯುಕ್ತವಾದ, ಅವರವರ ಸ್ವಕೀಯ ಸ್ಥೂಲದೇಹಕ್ಕೆ ಉಪಚಯವಾಗತಕ್ಕ ಪದಾರ್ಥಗಳ, ಈವನು_ಈ ಪದಾರ್ಥಗಳಲ್ಲಿ ಜಡರಸ ಇಟ್ಟವನಾಗಿ ಜೀವರಿಗೆ ಬಿಂಬಕ್ರಿಯಾ ದ್ವಾರಾ, ಪ್ರತಿಬಿಂಬ ಕ್ರಿಯಾದಿಂದ ಉಣಿಸಿ, ಸ್ಥೂಲದೇಹಕ್ಕೆ ಉಪಚಯ ಮಾಡಿಕೊಡತಾನೆಂದು ತಿಳಿದು, ಎಂದೆಂದು_ಅನಾದ್ಯನಂತಕಾಲಕ್ಕೂ ಜೀವಭೋಜ್ಯ ಈಶಗಿಲ್ಲ, ಈಶಭುಕ್ತ ಜೀವಗಿಲ್ಲ ಎಂತ ತಿಳಿಯಬೇಕು. ಸರ್ವಜೀವರು ಭೋಜನಮಾಡುವ ಪದಾರ್ಥದಲ್ಲಿ ಪರಮಾತ್ಮ ಇರತಾನೆ. ಆದರೆ, ನಿಷಿದ್ಧವಾದ ಪದಾರ್ಥಗಳಲ್ಲಿ ಪರಮಾತ್ಮನ ಚಿಂತನೆಯೇ ಹೊರತು, ಅಲ್ಲಿ ವಂದನಾದಿಗಳು ಕೂಡದು ಎಂತಲೂ, ಅನಿಷಿದ್ಧವಾದ ಪದಾರ್ಥಗಳ ಸೇವನಪೂರ್ವಕ ಪದಾರ್ಥಾಂತರ್ಗತ ಭಗವಂತನ ಪೂಜಾ ಮಾಡಬಹುದೆಂತಲೂ ತಾತ್ಪರ್ಯ.

**ಒರಟುಬುದ್ಧಿಯ ಬಿಟ್ಟು ಲೌಕಿಕ ।**
**ಹರಟೆಗಳನೀಡಾಡಿ ಕಾಂಚನ ।**
**ಪರಟಿಲೋಷ್ಟಾದಿಗಳು ಸಮನೆಂದರಿದು ನಿತ್ಯದಲಿ ॥**
**ಪುರುಟಗರ್ಭಾಂಡೋದರನು ಸ ।**
**ತ್ಪುರುಟನೆಂದೆನಿಸೆಲ್ಲರೊಳಗಿ ।**
**ದ್ದುರುಟಕರ್ಮವಮಾಳ್ಪನೆಂದಡಿಗಡಿಗೆ ನೆನೆವುತಿರು ॥ ೩೦ ॥**

ಸಮಚಿತ್ತನಾಗಿ ಕರ್ಮಗಳ ಮಾಡು ಎಂತ ಹೇಳತಾರೆ.

ನಿತ್ಯದಲಿ_ಪ್ರತಿನಿತ್ಯದಲ್ಲೂ, ಒರಟುಬುದ್ಧಿಯ ಬಿಟ್ಟು – ಅಹಂಮಮತಾ ಎಂಬ ಮೂರ್ಖಬುದ್ಧಿಯನ್ನು ತ್ಯಾಗಮಾಡಿ, ಲೌಕಿಕ ಹರಟೆಗಳನು_ಲೋಕಸಂಬಂಧವಾದ ವಿಷಯಾದಿಗಳಲ್ಲಿ ಮೋಹ ಹುಟ್ಟಿಸತಕ್ಕ ಮಾತುಗಳ ನೀನು ಆಡದೆ (ಇಂಥಾ ಮಾತುಗಳ ಆಡತಕ್ಕವರ), ಈಡಾಡಿ_ದೂರಮಾಡಿ, ಆ ಮಾತುಗಳಿಗೆ ಅಂಥಾವರ ಸಾಂಗತ್ಯಕ್ಕೆ

ಸಂಬಂಧಪಡದೆ, ಕಾಂಚನ–ಭಂಗಾರ, ಈ ಭಂಗಾರದಿಂದ ನಿರ್ಮಿತ ಆಭರಣಗಳು, ಪರಟಿ–ಚಿಪ್ಪು, ಲೋಷ್ಟ–ಕಬ್ಬಿಣ, ಆದಿಗಳು–ಇವೇ ಮೊಲಾದ ದ್ರವ್ಯಗಳು, ಸಮವೆಂದರಿತು–ಕಬ್ಬಿಣ, ಚಿಪ್ಪು, ಓಡು (ಹೆಂಚು) ಇವುಗಳಲ್ಲಿರುವ ಅನಾದರ, ಸ್ವರ್ಣರಚಿತ ಆಭರಣಗಳಲ್ಲಿ ಇರಬೇಕೆಂದು ತಾತ್ಪರ್ಯ. (ಇಂಥಾ ಸಮಾನಬುದ್ಧಿಯಿಂದ), ಪುರುಟಗರ್ಭಾಂಡೋದರನು–ಹಿರಣ್ಯಗರ್ಭನಾದ ಚತುರ್ಮುಖ ಬ್ರಹ್ಮನಿಗೆ ತಂದೆಯಾದ ಅನಂತಾನಂತ ಬ್ರಹ್ಮಾಂಡಗಳನ್ನು ಉದರದಲ್ಲಿ ಉಳ್ಳ ಪರಮಾತ್ಮನು, ಸತ್ಪುರುಷನೆಂದು–ನಿರ್ದುಷ್ಟವಾದ ಲೋಕವಿವಕ್ಷಯಾ ಭಂಗಾರ, ನವರತ್ನಗಳು ಹ್ಯಾಂಗೆ ಸರ್ವಶ್ರೇಷ್ಠವೋ, ತದ್ವತ್ ಚರಾಚರಗಳಿಂದ ಉತ್ತಮನಾದವ ಶ್ರೀಪರಮಾತ್ಮನೆಂದು, ಎನಿಸಿ–ಕರಸಿದವನಾಗಿ, ಎಲ್ಲರೊಳಗಿದ್ದು–ಸರ್ವಪ್ರಾಣಿಗಳೊಳಗೆ ಬಿಂಬನಾಗಿದ್ದು, ಉರುಟ–ಸರ್ವೋತ್ಕೃಷ್ಟನಾದ ಶ್ರೀಪರಮಾತ್ಮ, ಕರ್ಮವ ಮಾಳ್ಪನು–ಅನಾದಿಕರ್ಮವನ್ನನುಸರಿಸಿ ಆಯಾ ಜನ್ಮಗಳಲ್ಲಿ ಕ್ಷಣಲವಾದಿ ಕಾಲಗಳಲ್ಲಿ ಭೋಗಮಾಡುವ ಕರ್ಮಫಲಗಳ, ಹಾಂಗೆ ಮಾಡತಕ್ಕ ಕರ್ಮಗಳ ವ್ಯಕ್ತಮಾಡತಾ ಇರತಾನೆ. ಎಂದಡಿಗಡಿಗೆ ನೆನೆವುತಿರು–ಎಂತ ಪದೇ ಪದೇ ಮರಿಯದೆ ಪರಮಾತ್ಮನ ಸ್ಮರಣೆಮಾಡುತ್ತಾ ಇರೋವನಾಗು. ಇವೇ ಮಹಾಸಾಧನಿ ಎಂತಲೂ, ಮೋಕ್ಷಮಾರ್ಗಕ್ಕೆ ಸೋಪಾನ ಎಂತಲೂ ತಿಳಿಯಬೇಕು ಎಂತ ತಾತ್ಪರ್ಯ.

**ಭೂತಳದಿ ಜನರುಗಳು ಮರ್ಮಕ ।**
**ಮಾತುಗಳನಾಡಿದರೆ ಸಹಿಸದೆ ।**
**ಘಾತಿಸುವರತಿಕೋಪದಿಂದಲಿ ಎಚ್ಚರಿಪ ತೆರದಿ ॥**
**ಮಾತುಳಾಂತಕ ಜಾರ ಹೇ ನವ ।**
**ನೀತಚೋರನೆ ಎನಲು ತನ್ನ ನಿ ।**
**ಕೇತನದೊಳಿಟ್ಟವರ ಸಂತೈಸುವನು ಕರುಣಾಳು ॥ ೩೧ ॥**

ಶ್ರೀ ಪರಮಾತ್ಮನ್ನ ಹ್ಯಾಂಗೆ ಸ್ತೋತ್ರ ಮಾಡಿದರೆ ರಕ್ಷಿಸುತ್ತಾನೋ, ಅದರನ್ನ ಹೇಳತಾರೆ.

ಭೂತಳದಿ–ಭೂಮಿಯಲ್ಲಿ ವಿದ್ಯಮಾನರಾದ, ಜನರುಗಳು–ಮನುಷ್ಯರು, ದಾರಿಗೂ ತಿಳಿಯದಂತೆ ಮರ್ಮವಾಗಿ ಅನ್ಯರನ, ವಿಷಾದಿ ಪ್ರಯೋಗಗಳಿಂದ ಸಂಹಾರ ಮಾಡೋಣ, ಜಾರತನ ಮಾಡೋಣ, ಚೌರ್ಯ ಮಾಡೋಣ, ಇತ್ಯಾದಿಗಳ ಮಾಡಿ ಬಾಹ್ಯದಲ್ಲಿ ಮಹಾ ಯೋಗ್ಯ ಎಂತ ಪ್ರದರ್ಶನ ಮಾಡಿ, ಯೋಗ್ಯ ಎಂತಾ ಕರಿಸುತಾ ಇರತಕ್ಕ ಮನುಷ್ಯರನ್ನ, ಮರ್ಮಕ–ಈ ಮರ್ಮಗಳು ತಿಳಿದವನೊಬ್ಬಾನೊಬ್ಬ ಮನುಷ್ಯ ಬಹಿರಂಗವಾಗಿ ಬಹುಜನ ಸಂಘದಲ್ಲಿ ಇವರು ಮಾಡಿದ ಮರ್ಮಕರವಾದ ಆ ಕೃತ್ಯವನ್ನ, ಮಾತುಗಳನಾಡಿದರೆ–ಮಾತುಗಳಿಂದ ಎತ್ಯಾಡಿದರೆ ಆ ಮಾತುಗಳು ಕೇಳೋಣ, ಸಹಿಸದೆ–ಆ ಅಕೃತ್ಯ ಮಾಡಿದ ಮನುಷ್ಯರು ಸಹಿಸಲಾರದೆ, ಅತಿ ಕೋಪದಿಂದಲಿ–ಬಹಳವಾದ ಕೋಪದಿಂದ, ಘಾತಿಸುವರು–ಬಡಿಯೋವರಾಗುತ್ತಾರೆ. ಇನ್ನು, ಎಚ್ಚರಿಪ ತೆರದಿ–

ಇಂಥಾ ಮಾತುಗಳು ಪುನಃ ಆಡದ ಹಾಂಗೆ ಇರುವದಾಗಿ ದೃಢ ಮಾಡುತಾರೆ. ಈ ಪ್ರಜರ, ಜಾರ, ಚೋರನೆಂದು ಉಚ್ಚರಿಸಿದೋಪಾದಿಯಲ್ಲಿ, ಮಾತುಳಾಂತಕ–ಸೋದರ ಮಾವನ ಕೊಂದವನೇ ಎಂತಲೂ, ಜಾರ–ಅನ್ಯರಾದ ಗೋಪಸ್ತ್ರೀಯರ ಜಾರತನದಲ್ಲಿ ಕೆಡಿಸಿದವನೇ ಎಂತಲೂ, ಹೇ ನವನೀತ ಚೋರ–ಗೋಪ ಸ್ತ್ರೀಯರುಗಳ ಮನೆಯಲ್ಲಿ ಬೆಣ್ಣೆ ಕದ್ದವನೇ ಎಂತಲೂ, ರಾಮಾವತಾರದಲ್ಲಿ ಅಗ್ನಿಪುತ್ರರಾದ ಋಷಿಗಳಿಗೆ ವರ ಕೊಟ್ಟು, ಆ ಋಷಿಗಳು ಗೋಪಸ್ತ್ರೀಯರಾಗಿ ಜನಿಸಿದ ಕಾಲದಲ್ಲಿ, ನೀನು ಅವರಿಗೆ ಅಂಗಸಂಗ ಕೊಟ್ಟು ಅವರ ಅಭೀಷ್ಟ ಪೂರ್ಣ ಮಾಡಿದವನೇ, (ನವ–ನವ ಸಂಖ್ಯಾಕವಾದ, ನೀತ–ನೀತವಾಗಿ ನಿನ್ನಲ್ಲಿ ಭಕ್ತಿ ಮಾಡತಕ್ಕ, ಭಕ್ತರ ಪಾಪಗಳ, ಚೋರನೇ–ಅಪಹಾರ ಮಾಡತಕ್ಕವನೇ), ಎನಲು–ಎಂತ ಭಕ್ತಿಪೂರ್ವಕ ಉಚ್ಚಾರ ಮಾಡಲು, ಕರುಣಾಳು–ಇಂಥಾ ಭಕ್ತರಲ್ಲಿ ವಾಂಛಲ್ಯ ಉಳ್ಳ ಪರಮಾತ್ಮ, ಅವರ–ಈ ಪ್ರಕಾರ ಸ್ತೋತ್ರ ಮಾಡಿದವರನ್ನ, ತನ್ನ ನಿಕೇತನದೊಳಿಟ್ಟು–ತನ್ನ ವೈಕುಂಠ ಲೋಕದಲ್ಲಿ ಇಟ್ಟು, ಸಂತೈಸುವನು–ಆನಂದಪಡಿಸುವನು. ಇಂಥಾ ಭಕ್ತ, ಮುಕ್ತಿ ಯೋಗ್ಯನೇ ಹೊರತು ಅನ್ಯನಾದವನಲ್ಲ. ಇಂಥಾ ಮುಕ್ತಿಯೋಗ್ಯನಾದವನನ್ನೇ ದೇವರು ರಕ್ಷಿಸುವನು) ಎಂದು ಭಾವ. ಇತರರಾದವರಿಗೆ ಇಂಥಾ ಭಕುತಿ ಇರೋದಿಲ್ಲ. ಇಂಥಾ ಸುಖವೂ ಅವರಿಗಿಲ್ಲ ಎಂದು ತಾತ್ಪರ್ಯ.

**ಹರಿಕಥಾಮೃತಸಾರವಿದು ಸಂ ।**
**ತರು ಸದಾ ಚಿತ್ತೈಸುವದು ನಿ ।**
**ಷ್ಠುರಿಗಳಿಗೆ ಪಿಶುನರಿಗಯೋಗ್ಯರಿಗಿದನು ಪೇಳದಲೆ ॥**
**ನಿರುತ ಸದ್ಭಕ್ತಿಯಲಿ ಭಗವ ।**
**ಚ್ಚರಿತಗಳ ಕೊಂಡಾಡಿ ಹಿಗ್ಗುವ ।**
**ಪರಮ ಭಗವದ್ದಾಸರಿಗೆ ತಿಳಿಸುವುದು ಈ ರಹಸ್ಯ ॥ ೩೨ ॥**

"ಅನಾರ್ಯಕಾಯ ಋಜವೇ ಶಠಾಯ ಮಾಸ್ಮದ್ ಬ್ರೂಯಾದ್ರಜವೇ ಬ್ರೂಹಿ ನಿತ್ಯಂ ॥" ಎಂಬ ಶ್ರುತ್ಯರ್ಥವನ್ನು ಅನುಸರಿಸಿ ಈ ಹರಿಕಥಾಮೃತಸಾರವನ್ನು ಭಗವದ್ಭಕ್ತರಿಗೆ ತಿಳಿಸುವುದೆಂತಲೂ, ಅಯೋಗ್ಯರಿಗೆ ತಿಳಿಸಬ್ಯಾಡಾ ಎಂತಲೂ ಹೇಳತಾರೆ.

ಹರಿ–ಪಾಪ ಪರಿಹಾರಕನಾದ ಜೀವಾಂತರ್ಗತನಾದ ಬಿಂಬ ಮೂರ್ತಿಯ, ಕಥಾ–ವ್ಯಾಪಾರ ರೂಪವಾದ ಕಥಾದಲ್ಲಿ ಮುಖ್ಯವಾಗಿ ತೆಗಿಯಲ್ಪಟ್ಟು, ಅಮೃತ–ಅಮೃತ ರೂಪವಾದ, ಸಾರವು–ರಸ ಎಂತ ಎನತಕ್ಕ, ಇದು–ಈ ಗ್ರಂಥವು, ಸದಾ–ನಿರಂತರದಲ್ಲೂ, ಸಂತರು–ನಿಶ್ಚಯವಾಗಿ ಭಗವದನುಗ್ರಹ ಪಡಿಯಬೇಕೆಂದು ಅಪೇಕ್ಷೆ ಉಳ್ಳ ಭಗವದ್ಭಕ್ತರು, ಚಿತ್ತೈಸುವದು–ಈ ಗ್ರಂಥವನ್ನ ಅವಲೋಕನ ಮಾಡಬಹುದು. ತದನ್ಯರಾದ, ನಿಷ್ಠುರಿಗಳಿಗೆ–ಈ ಗ್ರಂಥದಲ್ಲಿರುವ ವಾಕ್ಯಗಳ ನಿರಾಕರಿಸಿ ಶಬ್ದಸ್ವಷ್ಟತ್ವ ಇಲ್ಲ ಎಂತ ದುಷ್ಟ ಮಾತುಗಳ ಆಡತಕ್ಕವರಿಗೆ, ಪಿಶುನರಿಗೆ–ಈ ಗ್ರಂಥದಲ್ಲಿ ಇಲ್ಲದ ದೋಷಗಳನ್ನು ಹುಡುಕಿ

ವಿಶ್ವಾಸ ಹುಟ್ಟದಂತೆ ಮಾಡಿ, ಭಗವದ್ಭಕ್ತರಲ್ಲಿ ಛಾಡೀ ಮಾತುಗಳು ಆಡತಕ್ಕವರಿಗೆ, ಅಯೋಗ್ಯರಿಗೆ—ಸದಾ ವಿಷಯಾಸಕ್ತರಾಗಿ ಐಹಿಕ ಸುಖವೇ ಶಾಶ್ವತವೆಂದು, ಪರಮಾತ್ಮನ ವಿಸ್ಮೃತಿ ಪೂರ್ವಕ ಈ ಗ್ರಂಥದಲ್ಲಿ ಅನಾದರ ಉಳ್ಳ ಅಯೋಗ್ಯರಿಗೆ, ಇದನು ಪೇಳದಲೇ— ಈ ಗ್ರಂಥಾಂತರ್ಗತ ರಹಸ್ಯಾರ್ಥಗಳೇನು, ಇವನ್ನ ಶ್ರವಣ ಮಾಡೆಂದು ಹೇಳೋಣವೇನು, ಈ ಪ್ರಕಾರ ಹೇಳಧಾಂಗೆ ಇರಬೇಕು. ಇನ್ನು, ಎಂಥಾವರಿಗೆ ಹೇಳಬೇಕೆಂದರೆ, ನಿರುತ ಸದ್ಭಕ್ತಿಯಲಿ—ಸದಾ ಶ್ರೀ ಪರಮಾತ್ಮನಲ್ಲಿ ಸಮೀಚೀನವಾದ ತಾರತಮ್ಯ, ಪಂಚಭೇದ ಸತ್ಯವೆಂದು ತಿಳದು ಇರುವ ಭಗವದ್ಭಕ್ತರಾದವರಿಗೆ, ಭಗವಚ್ಚರಿತೆಗಳ—ಶ್ರೀಪರಮಾತ್ಮ ಮಾಡಿದ ಲೀಲಾಗಳನ್ನ ಕೊಂಡಾಡಿ ಮಾಹಾತ್ಮ್ಯ ಸುದೃಢ ಸ್ನೇಹಪೂರ್ವಕವಾಗಿ ಪರಮಾತ್ಮನ ಮಹಿಮಾಗಳ, ಕೊಂಡಾಡಿ—ಕಾಯೇನ ಮನಸಾ, ಉಚ್ಚಾರ ಮಾಡಿ, ಹಿಗ್ಗುವ—ಆನಂದೋದ್ರೇಕದಿಂದ ದೇಹದಲ್ಲಿ ಸ್ಮೃತಿರಹಿತರಾಗಿ ಇರುವ ಭಗವದ್ಭಕ್ತರಿಗೇನು, ಪರಮ ಭಗವದ್ದಾಸರಿಗೆ—ಉತ್ತಮರಾದ ಭಗವದ್ದಾಸರಿಗೇನು, ಈ ರಹಸ್ಯ—ಈ ಗ್ರಂಥಗತ ಅನುಸಂಧಾನ ರೂಪವಾದ, ಮರ್ಮಗಳಾದ ರಹಸ್ಯಗಳನ್ನು, ತಿಳಿಸುವುದು— ತಿಳಿಸೋವನಾಗಬೇಕು ಎಂತ ತಾತ್ಪರ್ಯ. ಈ ಗ್ರಂಥ ಮಹಾ ಗೋಪ್ಯವಾದ ಅರ್ಥಗಳಿಂದ ಯುಕ್ತವಾದದ್ದು ಎಂತಲೂ, ಅನ್ಯರು ಇದಕ್ಕೆ ಅರ್ಹರಲ್ಲ ಎಂತಲೂ ಭಾವವು.

**ಸತ್ಯಸಂಕಲ್ಪನು ಸದಾ ಏ ।**
**ನಿತ್ತುದೇ ಪುರುಷಾರ್ಥವೆಂದರಿ ।**
**ದತ್ಯಧಿಕ ಸಂತೋಷದಲಿ ನೆನೆವುತ್ತ ಭುಂಜಿಪುದು ॥**
**ನಿತ್ಯಸುಖಸಂಪೂರ್ಣ ಪರಮ ಸು ।**
**ಹೃತ್ತಮ ಜಗನ್ನಾಥವಿಠ್ಠಲ ।**
**ಬತ್ತಿಸಿ ಭವಾಂಬುಧಿಯ ಚಿತ್ಸುಖವ್ಯಕ್ತಿ ಕೊಡುತಿಪ್ಪ ॥ ೩೩ ॥**

ಶ್ರೀ ಪರಮಾತ್ಮ ದಾವ ದಾವ ಕಾಲದಲ್ಲಿ ಏನೇನು ಕೊಡತಾನೋ ಅದರಿಂದ ತೃಪ್ತನಾಗಿರಬೇಕೆಂದು ಹೇಳತಾರೆ.

ಸತ್ಯಸಂಕಲ್ಪನು—ಪ್ರಾಣಿಗಳು ಜನನಾದಾರಭ್ಯ, ಮುಕ್ತರಾಗೋವರಿಗೂ, ಎತ್ತತಕ್ಕ ಜನ್ಮಗಳೇನು, ಆಯಾ ಜನ್ಮಗಳಲ್ಲಿ, ಕ್ಷಣಲವಾದಿ ಕಾಲಗಳಲ್ಲಿ ಮಾಡತಕ್ಕ ಕರ್ಮಗಳೇನು, ಭೋಗ ಮಾಡತಕ್ಕ ಸುಖದುಃಖಾದಿ ಫಲಗಳೇನು, ಅನಾದಿಯಿಂದ ಲಿಂಗ ದೇಹದ ಮೂರನೇ ಪರಿಚ್ಛೇದವಾದ ತಮಃ ಪರಿಚ್ಛೇದದಲ್ಲಿ ವಿದ್ಯಮಾನಗಳಾಗಿ ಅವೆ. ಇವು ಈಶ್ವರನಿಂದ ರಚಿತವಲ್ಲ. “ ಆದರಂತೆ ಭೋಗಗಳ ಕೊಡತೇನೆ ” ಎಂತ ಪರಮಾತ್ಮ ನಿಶ್ಚಯವಾದ ಸಂಕಲ್ಪ ಮಾಡಿದ್ದಾನೆ, ಆದಕಡಿಯಿಂದ ಇಂಥಾ ಪರಮಾತ್ಮನು, ಸದಾ— ಮುಕ್ತನಾಗೋವರಿಗೂ, ನಿರಂತರದಲ್ಲೂ, ಜೀವಗೆ ಆಯಾ ಕರ್ಮಗಳ ವ್ಯಕ್ತ ಮಾಡಿ ನಡಸತಾ ಇರತಾನೆ. ಈ ಕರ್ಮಾನುಗುಣ್ಯವಾಗಿ, ಬಾಹ್ಯ ರೂಪಗಳಿಂದ ಭೋಗ ಯೋಗ್ಯಗಳ ಅನುಕೂಲ ಮಾಡತಾ ಇರತಾನೆ. ಅನ್ಯಥಾ ಮಾಡೋದಿಲ್ಲ. ಈ ಅನು

ಸಂಧಾನ ಸರ್ವದಾ ಮನಸ್ಸಿನಲ್ಲಿ ಇಟ್ಟವನಾಗಿ, ಏನಿತ್ತುದೇ–ತನ್ನ ಯೋಗ್ಯತಾನುಸಾರ ದೇವರು ಏನು ಕೊಡತಾನೋ ಅದೇ ಮಹಾ ಪ್ರಸಾದವೆಂದು ತಿಳಿದಿರಬೇಕು. ಇದಕ್ಕೆ ಅನ್ಯಥಾ ಬಯಸಿದರೆ ಪರಮಾತ್ಮನ ಸಂಕಲ್ಪಕ್ಕೆ ಅನ್ಯಥಾ ನಡಿಸಿದಂತಾಗುತ್ತದೆ. ಮಹಾ ದೋಷ ಪ್ರಾಪ್ತವಾಗತದೆ ಎಂತ "ಅಯಾಚಿತೇನ ಲಬ್ಧೇನ ಅಲ್ಪಯತ್ನೇನ ವಾ ಪುನಃ" ಎಂಬ ವಿಷ್ಣುರಹಸ್ಯ ರೀತ್ಯಾ, "ಯಸ್ಯ ಯದ್ದೇವವಿಹಿತಂ ಸ ತೇನ ಸುಖದುಃಖಯೋಃ | ಆತ್ಮಾ ಸಂತೋಷಯನ್ ದೇಹೀ ತಮಸಃ ಪಾರಮಿಚ್ಛತಿ" ಪ್ರಮಾಣ ರೀತ್ಯಾ, ಅರಿದು–ತಿಳಿದವನಾಗಿ, ಅತ್ಯಧಿಕ ಸಂತೋಷದಲಿ–ದೇವರು ಮಹಾಮಹಿಮನೆಂದು ಅತ್ಯಂತ ಸಂತೋಷದಿಂದ, ನೆನೆವುತ್ತ–ಹೃದಯಾಕಾಶದಲ್ಲಿ ಉಪಾಸ್ಯ ಮೂರ್ತಿಯನ್ನ ಪೂಜಾದಿಗಳಿಂದ ಸ್ಮರಣ ಮಾಡುತ್ತ, ನಿತ್ಯ–ಪ್ರತಿದಿನದಲ್ಲೂ, ಭುಂಜಿಪುದು–ಲಾಭಾಲಾಭ, ಜಯಾಪಜಯಗಳು, ಸುಖದುಃಖಾದಿಗಳು ಅನುಭವಿಸುವದು, ಪುರುಷಾರ್ಥವೆಂದು–ಮನುಷ್ಯರಿಗೆ ಇವು ಸದ್ಗತಿಯಾಗತಕ್ಕದ್ದೆಂದು ತಿಳಿದು (ಇರುವ), ಪರಮ–ಅಧಿಕರಿಗೆ ಶ್ರೇಷ್ಠನಾದ, ಸುಹೃತ್ತಮ–ಅತ್ಯಂತ ಸ್ನೇಹಿತನಾದ, ಸುಖಸಂಪೂರ್ಣ–ಆನಂದದಿಂದ ಸಂಪೂರ್ಣನಾದ, ಜಗನ್ನಾಥವಿಠ್ಠಲ–ಜಗತ್ತಿಗೆ ಸ್ವಾಮಿಯಾದ ಶ್ರೀ ಪರಮಾತ್ಮ, ಭವಾಂಬುಧಿಯ–ಸಂಸಾರಾಖ್ಯ ಸಮುದ್ರವನ್ನ, ಬತ್ತಿಸಿ–ಶೋಷಣ ಮಾಡಿ ಜೀವನ್ಮುಕ್ತರನ್ನಾಗಿ ಮಾಡಿ ಮಹರಾದಿ ಲೋಕಗಳಲ್ಲಿ ಇಟ್ಟಿದ್ದು, ಬ್ರಹ್ಮನ ಸಹ ಲಿಂಗಭಂಗ ಐದಿಸಿ, ಚಿತ್ಸುಖ–ಜೀವನ ಸ್ವರೂಪ ಯೋಗ್ಯತಾ ಸುಖವನ್ನ, ವ್ಯಕ್ತಿ–ಪ್ರಕಾಶ ರೂಪದಿಂದ ವ್ಯಕ್ತ ಮಾಡಿ, ಕೊಡುತಿಪ್ಪ–ವೈಕುಂಠಾದಿ ಸ್ಥಳಗಳಲ್ಲಿ ಕ್ಲ್ಪಪ್ತವಾದ ಸುಖಗಳ ಕೊಡತಾ ಇರುತ್ತಾನೆ. ಅಸ್ವತಂತ್ರನಾದವ ಜೀವ. ಈಶಾಧೀನನಾದವ, ದೇವರ ಹೊರತು ದಾವ ಕಾರ್ಯ ಮಾಡಲಿಕ್ಕೂ ಶಕ್ತನಲ್ಲ. ಕರ್ಮ ವೈಚಿತ್ರ್ಯದಿಂದ ಜ್ಞಾನಾಜ್ಞಾನಗಳ ಜೀವರ ಕರ್ಮಾನುಸಾರ ಕೊಡತಾ ಕಲ್ಪಾಂತಕ್ಕೆ ಸರ್ವಕರ್ಮಗಳು ಭೋಗದಿಂದ ನಾಶ, ಕೆಲವಕ್ಕೆ ತನ್ನ ಅಪರೋಕ್ಷದಿಂದ ನಾಶ. ಈ ಪ್ರಕಾರ ಮಾಡಿ ಜೀವರನ್ನ ಉದ್ಧಾರ ಮಾಡತಾನೆ. ಈ ಕಾರಣದಿಂದ ಜೀವಗೆ ಸಂಬೋಧನಿಯೇ ಹೊರತು, ಸ್ವತಃ ಪ್ರವೃತ್ತಿ ಜೀವಗೆ ಉಂಟು, ಆದ್ದರಿಂದ ಸ್ವತಃ ಪ್ರವರ್ತಿಸಬೇಕೆಂಬ ತಾತ್ಪರ್ಯದಿಂದ ಸಂಬೋಧನವಲ್ಲವೆಂದು ತಾತ್ಪರ್ಯ.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ನಾಮಸ್ಮರಣಸಂಧಿವ್ಯಾಖ್ಯಾನಂ ಸಂಪೂರ್ಣಂ.**

|| ಶ್ರೀ ಕೃಷ್ಣಾರ್ಪಣಮಸ್ತು ||

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಹದಿನಾಲ್ಕನೆಯ ಸಂಧಿ

## ಪಿತೃಗಣ ಸಂಧಿ

**ಹರಿಕಥಾಮೃತಸಾರ ಗುರುಗಳ |**
**ಕರುಣದಿಂದಾಪನಿತು ಪೇಳುವೆ |**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು || ಪ ||**

**ಮೂಲ :**

**ಕೃತಿರಮಣ ಪ್ರದ್ಯುಮ್ನ ವಸುದೇ |**
**ವತೆಗಳಾಹಂಕಾರತ್ರಯದೊಳು |**
**ಚತುರವಿಂಶತಿ ರೂಪದಿಂದಲಿ ಭೋಜ್ಯನೆನಿಸುವನು ||**
**ಹುತವಹಾಕ್ಷಾಂತರ್ಗತ ಜಯಾ |**
**ಪತಿಯು ತಾನೇ ಮೂರಧಿಕ ತ್ರಿಂ |**
**ಶತಿ ಸುರೂಪದಿ ಭೋಕ್ತೃ ಎನಿಸುವ ಭೋಕ್ತೃಗಳೊಳಿದ್ದು || ೧ ||**

**ಟೀಕಾ :**

ಹಿಂದೆ ನಾಲ್ಕನೇ ಸಂಧಿಯಾದ ಭೋಜನರಸವಿಭಾಗಸಂಧಿಯಲ್ಲಿ, ಷಣ್ಣವತಿಶ್ರಾದ್ಧ ವಿಚಾರ ಸ್ವಲ್ಪ ವಿವರ ಮಾಡಿ, ಪ್ರತಿ ಸಾಂವತ್ಸರಿಕಶ್ರಾದ್ಧ ವಿಚಾರ ಸಂಧ್ಯಂತರದಲ್ಲಿ ಹೇಳಲ್ಪಡುತ್ತದೆ ಎಂತ ಸೂಚಿಸಿರುವ ಪ್ರಕಾರ, ಅಧಿಕಾರಿಗಳು ತಮ್ಮ ಪಿತ್ರಂತರ್ಗತ ಭಗವದುಪಾಸನಾವಿಚಾರವಾದ ಪಿತೃಯಜ್ಞಕ್ರಮುವನ್ನು ಈ ಸಂಧಿಯಲ್ಲಿ ನಿರೂಪಣಾ ಮಾಡತಾ, ಸಪ್ತಾನ್ನಪ್ರಕರಣ, ಅಂಶಾಂಶಿ ವಿಚಾರ, ಜೀವರ ಸ್ಪೃಜ್ಯಾಸ್ಪೃಜ್ಯವಿಚಾರ, ಪಂಚಭೇದಲಕ್ಷಣ ಮೊದಲಾದ ವಿಚಾರ ಹೇಳತಾರೆ.

ಭೋಕ್ತೃ–ಪಿತೃಕಾರ್ಯಗಳಲ್ಲಿ ಭೋಕ್ತೃಗಳಾದ ನಿಮಂತ್ರಿತ ಬ್ರಾಹ್ಮಣರು ಮೂರು ಮಂದಿ. ಪಿತೃಸ್ಥಾನಕ್ಕೆ ಒಬ್ಬ, ಪಿತಾಮಹಸ್ಥಾನಕ್ಕೆ ಒಬ್ಬ, ಪ್ರಪಿತಾಮಹಸ್ಥಾನಕ್ಕೆ ಒಬ್ಬ, ಅಂತು ಮೂರು ಮಂದಿ. ಈ ಮೂರು ಮಂದಿ ಭೋಕ್ತೃಗಳೊಳಗೆ, ವಸುದೇವತೆಗಳು–ಪಿತನ ಉದ್ದಿಶ್ಯ ಮಾಡಿದ ಭೋಕ್ತೃಬ್ರಾಹ್ಮಣನಲ್ಲಿ, ಅಷ್ಟವಸುಸಾಂಕೇತರಾದ ದೇವತೆಗಳಲ್ಲಿ ಎಂಟುಮಂದಿಯಲ್ಲಿ, ಕೃತಿರಮಣ ಪ್ರದ್ಯುಮ್ನ–ಕೃತೀ ಎಂತ ನಾಮ ಪಡೆದ ಲಕ್ಷ್ಮೀದೇವಿಯರಿಗೆ ಪತಿಯಾದ ಪ್ರದ್ಯುಮ್ನರೂಪಿ ಶ್ರೀಪರಮಾತ್ಮ, ಹುತವಹಾಕ್ಷ–ಪಿತಾಮಹನ ಉದ್ದಿಶ್ಯ ಮಾಡಿದ ಭೋಕ್ತೃಬ್ರಾಹ್ಮಣನಲ್ಲಿ, ಅಗ್ನಿಸದೃಶವಾದ, ದಹಿಸತಕ್ಕ ಮೂರನೇ ನೇತ್ರವುಳ್ಳ ರುದ್ರದೇವರೇ ಆದಿಯಾಗಿ ಏಕಾದಶರುದ್ರರು, ಅಂತರ್ಗತ–ಈ ಏಕಾದಶ ರುದ್ರಾಂತರ್ಗತ

ನಾಗಿ, ಜಯಾಪತಿಯು-ಜಯಾನಾಮಕ ಲಕ್ಷ್ಮೀದೇವಿಯರ ಪತಿಯಾದ ಸಂಕರ್ಷಣ, ಅಹಂಕಾರತ್ರಯದೊಳು-(೮) ಅಷ್ಟವಸುಗಳು, (೧೧) ಏಕಾದಶರುದ್ರರು, ಇವರೊಳಗೆ ವಿದ್ಯಮಾನಗಳಾದ ವೈಕಾರಿಕ, ತೈಜಸ, ತಾಮಸ ಸಾಂಕೇತಗಳಾದ, ಅಹಂಕಾರತ್ರಯ ದೊಳು, ಚತುರವಿಂಶತಿ ರೂಪದಿಂದಲಿ-ಅಷ್ಟ ವಸುಗಳಲ್ಲಿ ಪ್ರತಿ ವಸುಗತ ಅಹಂಕಾರತ್ರಯ ಗಳಲ್ಲಿ, ಮೂರು ಮೂರು ರೂಪದ ಮ್ಯಾರಿಗೆ (ಎಂಟು ಮೂರುಗಳು) ಇಪ್ಪತ್ತುನಾಲ್ಕು ರೂಪಗಳು ಇವುಗಳಿಂದ ಪ್ರದ್ಯುಮ್ನರೂಪಿ ಪರಮಾತ್ಮನನ್ನೂ, ಮೂರಧಿಕ ತ್ರಿಂಶತಿ ಸುರೂಪದಿ-ಏಕಾದಶರುದ್ರರಲ್ಲಿ ಪ್ರತಿ ಒಬ್ಬ ರುದ್ರನಲ್ಲಿ ಅಹಂಕಾರತ್ರಯಗಳಲ್ಲಿ ಮೂರು ಮೂರು ರೂಪದ ಮ್ಯಾರಿಗೆ, (ಹನ್ನೊಂದು ಮೂರುಗಳು) ಮೂವತ್ತುಮೂರು ರೂಪದಿಂದ ಸಂಕರ್ಷಣರೂಪೀ ಪರಮಾತ್ಮನನ್ನೂ, ಈ ಪ್ರಕಾರ ಭೋಕ್ತೃಗಳಾದ ಪಿತನ ಉದ್ದೇಶಿತ ನಾದ ಬ್ರಾಹ್ಮಣನಲ್ಲೂ, ಪಿತಾಮಹನ ಉದ್ದೇಶಿತನಾದ ಬ್ರಾಹ್ಮಣನಲ್ಲೂ, ಗಳೊಳು- ಈ ಉಭಯವಿಧ ಬ್ರಾಹ್ಮಣರುಗಳೊಳಗೆ, ಇದ್ದು-ಮಂತ್ರದಿಂದ ಆವಾಹಿತನಾಗಿದ್ದು, ಭೋಕ್ತೃ ಎನಿಸುವ-ಶ್ರಾದ್ಧದಲ್ಲಿ ಭೋಜನ ಮಾಡತಕ್ಕವ ಎಂತ ಕರಿಸತಾನೆ. ಪಿತ್ರಂತ ರ್ಗತ ವಸುದೇವತೆಗಳಲ್ಲಿ ೨೪ ರೂಪದಿಂದ ಪ್ರದ್ಯುಮ್ನ, ಪಿತಾಮಹಾಂತರ್ಗತ ಏಕಾದಶ ರುದ್ರದೇವತೆಗಳಲ್ಲಿ ೩೩ ರೂಪದಿಂದ ಸಂಕರ್ಷಣ, ಭೋಜ್ಯನೆನಿಸುವನು-ಇದ್ದು ಭೋಜನ ಮಾಡತಕ್ಕವನೆಂದು ಕರಿಸತಾನೆ. ತಾನೇ-ಒಬ್ಬ ಪ್ರದ್ಯುಮ್ನನಾದ ತಾನೇ ೨೪ ರೂಪ ಗಳ ಧರಿಸಿನ್ನೂ, ಒಬ್ಬ ಸಂಕರ್ಷಣನಾದ ತಾನೇ ೩೩ ರೂಪಗಳ ಧರಿಸಿನ್ನೂ, ಈ ಪ್ರಕಾರ ಪರಮಾತ್ಮ ಇದ್ದಾನೆ. ಹಾಂಗೆ ಪಿತೃಗಳಿಗೋಸ್ಕರ ಉದ್ದೇಶಮಾಡಿ, ಭೋಜ್ಯಪದಾರ್ಥ ಗಳಲ್ಲೂ ಇದ್ದಾನೆ. ಏವಂ ಸಮ್ಮೇಳನವೇ ಪ್ರಥಮದಲ್ಲಿ ಬ್ರಾಹ್ಮಣರು, ಅವರ ಅಂತರ್ಗತ ಆವಾಹಿತರಾದ ತನ್ನ ಪಿತೃಗಳು, ಅವರಂತರ್ಗತ ವಸುರುದ್ರಾದಿ ದೇವತೆಗಳು, ಅವ ರಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನ, ಸಂಕರ್ಷಣ ಭಗವ ನ್ಮೂರ್ತಿಗಳು ಈ ರೀತ್ಯಾ ಅನುಸಂಧಾನ ಮಾಡಬೇಕೆಂತ ತಾತ್ಪರ್ಯ. ಅವಶಿಷ್ಟ ಪ್ರಪಿತಾಮಹನ ವಿಚಾರ ಮುಂದೆ ಹೇಳತಾರೆ.

**ಆರಧಿಕಮೂವತ್ತು ರೂಪದಿ ।**
**ವಾರಿಜಾಪ್ತನೊಳಿರುತಿಹನು ಮಾ ।**
**ಯಾರಮಣ ಶ್ರೀವಾಸುದೇವನು ಕಾಲನಾಮದಲಿ ॥**
**ಮೂರುವಿಧ ಪಿತೃಗಳೊಳು ವಸು ತ್ರಿಪು ।**
**ರಾರಿಯಾದಿತ್ಯಗನಿರುದ್ಧನು ।**
**ತೋರಿಕೊಳ್ಳದೆ ಕರ್ತೃಕರ್ಮ ಕ್ರಿಯನೆನಿಸಿಕೊಂಬ ॥ ೨ ॥**

ಅವಶಿಷ್ಟ ಪಿತೃಕರ್ಮಾನುಸಂಧಾನ ಹೇಳತಾರೆ.

ವಾರಿಜಾಪ್ತನೊಳು-ಪ್ರಪಿತಾಮಹನ ಉದ್ದಿಶ್ಯ ಮಾಡಿದ ಭೋಕ್ತೃಬ್ರಾಹ್ಮಣನಲ್ಲಿ ಆವಾಹನಮಾಡಿದ ಪ್ರಪಿತಾಮಹನೊಳು ವಿದ್ಯಮಾನನಾದ ಕಮಲಕ್ಕೆ ಆಪ್ತನಾದ

ಸೂರ್ಯ, ಈ ದ್ವಾದಶಾದಿತ್ಯರು, ಆರಧಿಕ ಮೂವತ್ತು ರೂಪದಿ–ಒಂದು ಸೂರ್ಯನ ಅಹಂಕಾರತ್ರಯದಲ್ಲಿ ಮೂರು ರೂಪದ ಮ್ಯಾರಿಗೆ, (ಹನ್ನೆರಡು ಮೂರುಗಳು) ಮೂವತ್ತಾರು ರೂಪದಿಂದ, ಮಾಯಾರಮಣ–ಮಾಯಾನಾಮಕ ಲಕ್ಷ್ಮೀಪತಿಯಾದ, ಶ್ರೀ ವಾಸುದೇವನು–ಕಾಂತಿಸಂಪನ್ನನಾದ ಶ್ರೀ ವಾಸುದೇವನು, ಇರುತಿಹನು–ಇರೋವನಾಗಿದ್ದಾನೆ. ಹ್ಯಾಂಗೆ ಇದ್ದಾನೆ ಎಂದರೆ, ಕಾಲನಾಮದಲಿ–ಇದೇ ವಾಸುದೇವ, ಶ್ರಾದ್ಧಕಾಲವೆಂಬ ವರುಷಕ್ಕೆ ಒಂದು ದಿನದಲ್ಲಿ ಮಾಡತಕ್ಕ ಶ್ರಾದ್ಧ, ದಾವ ಕಾಲದಲ್ಲಿ ಘಟಿಸತದೋ, ಆ ತಿಥ್ಯಂತರ್ಗತನಾಗಿ ಮತ್ತು ದಾವಾಗಾದರೆ ಪಿತೃಕರ್ಮ ಉಪಕ್ರಮಿಸತಾನೋ ಆ ಕಾಲಾಂತರ್ಗತನಾಗಿ ಇದ್ದು, ಕಾಲನಾಮದಿಂದಲೂ ದ್ವಾದಶಾದಿತ್ಯಾಂತರ್ಗತನಾಗಿ ಕರಿಸುತ್ತಾನೆ. ಇಲ್ಲಿಗೆ ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ರೂಪಗಳ ವಿಚಾರವಾಯಿತು. ಮೂರು ವಿಧ ಪಿತೃಗಳೊಳು– ಮೂರು ವಿಧ ಪಿತೃಗಳ ಉದ್ದಿಶ್ಯ ನಿಮಂತ್ರಣದಿಂದ ಏರ್ಪಡಿಸಿದ ಬ್ರಾಹ್ಮಣರು ಮೂವರಲ್ಲಿ ಆವಾಹನ ಮಾಡಿದ ಪಿತೃ, ಪಿತಾಮಹ, ಪ್ರಪಿತಾಮಹಾದಿ ಮೂರು ವಿಧ ಪಿತೃಗಳೊಳಗೆ, ವಸು–ಅಷ್ಟವಸುಗಳು, ತ್ರಿಪುರಾರಿಯು–ರುದ್ರದೇವರೇ ಮೊದಲಾದ ಏಕಾದಶ ರುದ್ರರು, ಆದಿತ್ಯಗನು–ಉರುಕ್ರಮನಾದ ಪರಮಾತ್ಮನೆಂಬೋ ಆದಿತ್ಯನ ಸಹಿತ ದ್ವಾದಶಾದಿತ್ಯರು, 'ಗ' ಎಂಬೋಣಪರಿಂದ ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ರೂಪದಿಂದ ಅಂತರ್ಗತನಾಗಿ ಇರತಕ್ಕವನೆಂದು ತಾತ್ಪರ್ಯ. ಇದರಲ್ಲಿ ಉರುಕ್ರಮನಾಮಕ ಸೂರ್ಯ ಸಾಕ್ಷಾತ್ ಪರಮಾತ್ಮನಾದ್ದರಿಂದ, ಅವನಂತರ್ಗತ ಅವನೇ ಆಗಿದ್ದಾನೆ ಎಂತಲೂ ತಾತ್ಪರ್ಯ. ಅನಿರುದ್ಧನು–ಅನಿರುದ್ಧನಾಮಕ ಪರಮಾತ್ಮ, ಕರ್ತೃ–ಪಿತೃಕಾರ್ಯ ಮಾಡತಕ್ಕ ಕರ್ತೃವಿನಲ್ಲಿ ಒಂದು ರೂಪದಿಂದ ಇದ್ದು ಕರ್ತೃ ಎಂತಲೂ, ಕರ್ಮ–ಪಿತೃ ಉದ್ದಿಶ್ಯ ಮಾಡತಕ್ಕ ಕರ್ಮದಲ್ಲಿ ಒಂದು ರೂಪದಿಂದ ಇದ್ದು ಕರ್ಮ ಎಂತಲೂ, ಕ್ರಿಯನು–ಬ್ರಾಹ್ಮಣರ ಪಾದ ಪ್ರಕ್ಷಾಲನ ಮೊದಲಾದ ಕ್ರಿಯೆಗಳಲ್ಲಿ ಒಂದು ರೂಪದಿಂದ ಇದ್ದು ಕ್ರಿಯ ಎಂತಲೂ, ಈ ಪ್ರಕಾರ ಕರ್ತೃ, ಕರ್ಮ, ಕ್ರಿಯೆಗಳಲ್ಲಿ ಅನಿರುದ್ಧನು ಮೂರು ರೂಪದಿಂದ ಇದ್ದು, ಎನಿಸಿಕೊಂಬ–ತನ್ನಾಮರೂಪ ಉಳ್ಳವನೆಂದು ಅನಿಸೋವನಾಗತಾನೆ. ತೋರಿಕೊಳ್ಳದೆ–ಪೂರ್ವೋಕ್ತ ಪ್ರಕಾರ ಅಧಿಕಾರಿಗಳಿಗೆ ತೋರಿಕೊಳ್ಳದೆ, ಪ್ರದ್ಯುಮ್ನಾದಿ ನಾಲ್ಕು ರೂಪದಿಂದ ಇರುತ್ತಾನೆ ಎಂತ ತಾತ್ಪರ್ಯ.

**ಸ್ವವಶ ನಾರಾಯಣನು ತಾ ಷ ।**
**ಣ್ಣವತಿನಾಮದಿ ಕರೆಸುತಲಿ ವಸು ।**
**ಶಿವ ದಿವಾಕರ ಕರ್ತೃ ಕರ್ಮ ಕ್ರಿಯೆಗಳೊಳಗಿದ್ದು ॥**
**ನೆವನವಿಲ್ಲದೆ ನಿತ್ಯದಲಿ ತ ।**
**ನ್ನವರು ಮಾಡುವ ಸೇವೆ ಕೈಕೊಂ ।**
**ಡವರ ಪಿತೃಗಳಿಗೀವನಂತಾನಂತ ಸುಖಗಳನು ॥ ೩ ॥**

*

ಪೂರ್ವೋಕ್ತ ರೂಪಗಳು ದಾರ ಅಂಶಗಳೆಂದರೆ, ಅದರನ್ನ ಹೇಳತಾರೆ.

ವಸು–೨೪, ವಸುಗಳು ಎಂಟರಲ್ಲಿ ಪ್ರದ್ಯುಮ್ನರೂಪಗಳು, ಶಿವ–೩೩, ಏಕಾದಶ ರುದ್ರರಲ್ಲಿ ಸಂಕರ್ಷಣ ರೂಪಗಳು, ದಿವಾಕರ–೩೬, ದ್ವಾದಶ ಆದಿತ್ಯರಲ್ಲಿ ವಾಸುದೇವ ರೂಪಗಳು, ಕರ್ತೃಕರ್ಮಕ್ರಿಯೆಗಳೊಳಗೆ–ಕರ್ತೃ, ಕರ್ಮ, ಕ್ರಿಯೆಗಳೊಳು ೩ ಅನಿರುದ್ಧ ರೂಪಗಳು, ಅಂತು ೯೬(೨೪+೩೩+೩೬+೩=೯೬) ರೂಪಗಳು, ಸ್ವವಶ ನಾರಾಯಣನು–ಪರಾಧೀನನಲ್ಲದೆ ತನ್ನ ವಶನಾಗಿ, ತಾನೇ ಎಂದರೆ ಸ್ವತಂತ್ರನಾದ ನಾರಾಯಣನು, ತಾ ಷಣ್ಣವತಿ ನಾಮದಿ–ತಾನು ಪೂರ್ವೋಕ್ತ ಪ್ರಕಾರ ಅನಿರುದ್ಧಾದಿ ಅಂಶರೂಪಗಳಿಂದ ಹೊರಟು ಮತ್ತೆ ಆಯಾ ರೂಪಗಳಿಂದ, ಒಂದೊಂದು ರೂಪದಿಂದ ತತ್ತನ್ನಾಮಗಳಿಂದ, ಪೂರ್ವೋಕ್ತ ಪ್ರಕಾರ ಅಂಶರೂಪಗಳಿಂದ ಹೊರಟು ತೊಂಭತ್ತಾರು ಎಂತ ಸಂಖ್ಯಾ ನಾಮದಿಂದ, ಕರೆಸುತಲಿ–ವಸುರುದ್ರಾದಿಗಳೊಳಗಿದ್ದು ತತ್ತನ್ನಾಮದಿಂದ ಕರೆಸುತ್ತಾ, ನೆವನವಿಲ್ಲದೆ–ಕರ್ತೃವಾದವ ಪಿತೃಕಾರ್ಯ ಮಾಡೋದೆಲ್ಲಾ ವಂಶಾಭಿವೃದ್ಧಿಗಾಗಿಯೋ ಐಶ್ವರ್ಯ ಬರಬೇಕೆಂಬ ನಿಮಿತ್ತದಿಂದಲೋ, ಇತ್ಯಾದಿ ಕಾಮನಾನಿಮಿತ್ತವಿಲ್ಲದೆ, ನಿತ್ಯದಲಿ–ಪಿತೃಗಳಿಗೆ ಮಾನುಷವರ್ಷ ಒಂದು ದಿನವೆಂದು ಕರಿಸಿ, ಪ್ರತಿವರ್ಷದಲ್ಲಿ ಮಾಡತಕ್ಕ ಶ್ರಾದ್ಧ, ಪಿತೃಗಳಿಗೆ ಪ್ರತಿದಿನದಲ್ಲೂ ಶ್ರಾದ್ಧರೂಪದಿಂದ ಅನ್ನಾದಿಗಳ ಕೊಟ್ಟವನೆಂದು ಕರಿಸ ತಾನೆ. ಈ ರೀತ್ಯಾ ಪ್ರತಿದಿನದಲ್ಲಿ, ತನ್ನವರು ಮಾಡುವ–ತನ್ನ ಭಕ್ತರು ಪೂರ್ವೋಕ್ತ ಪ್ರಕಾರ ಅಂತರ್ಗತನ ತಿಳಿದು ಭಕ್ತಿಪೂರ್ವಕವಾಗಿ ಪಿತ್ರಂತರ್ಗತ ಪರಮಾತ್ಮನ ಪ್ರೀತಿ ಗೋಸುಗ ಎಂತ ಮಾಡತಕ್ಕ, ಸೇವೆ ಕೈಕೊಂಡು–ಶ್ರಾದ್ಧಸಾಂಕೇತವಾದ ಸೇವಾ ಸ್ವೀಕಾರ ಮಾಡಿ, ಅನಂತಾನಂತ–ಅನಂತಾನಂತ ಗುಣ ಉಳ್ಳ ಪರಮಾತ್ಮ, ಅವರ ಪಿತೃಗಳಿಗೆ–ಪಿತೃಕಾರ್ಯ ಮಾಡುವವರ ಪಿತೃಗಳಿಗೆ, ಸುಖಗಳನು–ಶ್ರಾದ್ಧಕ್ರಿಯಾದಿಂದ ದಾವ ಸುಖವೋ ಆ ಸುಖವನ್ನು, ಈವನು–ಪಿತೃದೇವತೆಗಳಿಗೆ ಪ್ರದ್ಯುಮ್ನಾದಿ ರೂಪಗಳಿಂದ ಕೊಡೋವನಾಗತಾನೆಂದು ತಾತ್ಪರ್ಯ.

**ತಂತುಪಟದಂದದಲಿ ಲಕುಮಿಾ ।**
**ಕಾಂತ ಪಂಚಾತ್ಮಕನೆನಿಸಿ ವಸು ।**
**ಕಂತುಹರ ರವಿ ಕರ್ತೃಗಳೊಳಗಿದ್ದನವರತ ತನ್ನ ॥**
**ಚಿಂತಿಸುವ ಸಂತರನು ಗುರು ಮ ।**
**ಧ್ವಾಂತರಾತ್ಮಕ ಸಂತಯಿಸುವನು**
**ಸಂತತಖಿಳಾರ್ಥಗಳ ಪಾಲಿಸಿ ಇಹಪರಂಗಳಲಿ ॥ ೪ ॥**

ನಿಷ್ಕಾಮದಿಂದ ಪಿತೃಕರ್ಮ ನಡಿಸಿದವರಿಗೆ ಫಲ ಹೇಳತಾರೆ.

ತಂತುಪಟದಂದದಲಿ–ಅನೇಕ ದಾರಗಳಿಂದ ಯುಕ್ತವಾದದ್ದು ಒಂದು ವಸ್ತ್ರ. ಈ ವಸ್ತ್ರಗತ ಅನೇಕ ದಾರಗಳೋಪಾದಿಯಲ್ಲಿ, ಲಕುಮಿಾಕಾಂತ–ಲಕ್ಷ್ಮೀಪತಿಯಾದ

ನಾರಾಯಣದೇವರು, ಪಂಚಾತ್ಮಕನೆನಿಸಿ–ಅನಿರುದ್ಧಾದಿ ನಾಲ್ಕು ರೂಪಗಳು, ನಾರಾಯಣ ರೂಪವಾದ ತನ್ನ ರೂಪದಲ್ಲಿ ವಿದ್ಯಮಾನಗಳಾಗಿ, ಐದು ರೂಪಾತ್ಮಕನೆಂದು ನಾರಾಯಣ ದೇವರು ಕರಿಸೋವನಾಗಿದ್ದಾನೆ. ಈ ಐದು ರೂಪಗಳಿಂದ ಯುಕ್ತವಾದ ಒಂದು ರೂಪಕ್ಕೆ ಪಂಚಾತ್ಮಕ ಎಂತ ಸಾಂಕೇತವು. ಇಂಥಾ ಸಮಷ್ಟಿರೂಪಕ್ಕೆ ಅದೇ ನಾಮವು. ತದ್ವತ್ ವಾಸುದೇವಾದಿ ರೂಪಗಳಲ್ಲಿ ತಂತುಪಟದೋಪಾದಿಯಲ್ಲಿ ಪೂರ್ವೋಕ್ತಪ್ರಕಾರ ರೂಪ ಗಳು ಇರೋವಾಗಿ ಚತುರ್ವಿಂಶಾತ್ಮಕ, ತ್ರಯತ್ರಿಂಶಾತ್ಮಕ, ಷಟ್‌ತ್ರಿಂಶಾತ್ಮಕ ಎಂತ ಕರಿಸೋವಾಗತವೆ ಎಂತ ದಿಕ್ಪ್ರದರ್ಶನ. ಈ ರೀತ್ಯಾ ಅನ್ವಯವು. ಇಷ್ಟೇ ರೂಪಗಳೆಂದು ತಾತ್ಪರ್ಯವಲ್ಲ. ಅಪರಿಚ್ಛಿನ್ನ ಅನಂತಾನಂತ ರೂಪಗಳು, ಯಾವ ರೂಪವನ್ನ ವಿವಕ್ಷಾ ಮಾಡಿದರೂ ಆ ರೂಪಗಳಲ್ಲಿ ಅವೆ. ಅವು ಸಾಂತವಲ್ಲ. ಪೂರ್ವೋಕ್ತ ಪ್ರಕಾರ, ಚತುರವಿಂಶಾತ್ಮಕಾದಿ ರೂಪಗಳಿಂದ ಯುಕ್ತನಾದವ ಎಂತ ಎನಿಸಿ, ವಸು–ವಸುಗಳಲ್ಲಿ ಪ್ರದ್ಯುಮ್ನ, ಕಂತುಹರ–ಮನ್ಮಥನ್ನ ನೇತ್ರಾಗ್ನಿಯಿಂದ ಭಸ್ಮಮಾಡಿದ ರುದ್ರದೇವರಲ್ಲಿ ಸಂಕರ್ಷಣ, ರವಿ–ದ್ವಾದಶಾದಿತ್ಯರಲ್ಲಿ ವಾಸುದೇವ, ಕರ್ತೃಗಳೊಳಗೆ–ಕರ್ತೃ, ಕರ್ಮ, ಕ್ರಿಯಾಗಳೊಳು ಅನಿರುದ್ಧ, ಇದ್ದು–ತಾನು ಇದ್ದವನಾಗಿ, ತನ್ನ–ಪರಮಾತ್ಮನಾದ ತನ್ನ, ಅನವರತ–ಪೂರ್ವೋಕ್ತಪ್ರಕಾರ ಪಿತೃಸಾಂಕೇತವಾದ ಪ್ರತಿದಿನದಲ್ಲೂ ಮಾಡುವ ಶ್ರಾದ್ಧಾದಿ ಗಳಲ್ಲಿ, ಚಿಂತಿಸುವ–ಅನುಸಂಧಾನ ಮಾಡುವ, ಸಂತರನು–ಸಜ್ಜನರನ್ನ, ಗುರು ಮಧ್ವಾಂತ ರಾತ್ಮಕ–ಮತೋದ್ಧಾರಕ ಗುರುಗಳಾದ, ವಾಯ್ವಂಶಭೂತರಾದ ಮಧ್ವಾಚಾರ್ಯರ ದ್ವಾರಾ, ಸಂತತ–ನಿರಂತರದಲ್ಲೂ, ಇಹಪರಂಗಳಲಿ–ಈ ಲೋಕದಲ್ಲಿ ಅಹಂಮಮತಾದಿಗಳ ಬಿಡಿಸಿ ಭಕ್ತ್ಯಾದಿಗಳ ಕೊಟ್ಟು ಸುಖಪಡಿಸಿ, ಪರಲೋಕದಲ್ಲಿ ಸುಖಾದಿಗಳನ್ನ ಕೊಟ್ಟು ಈ ಪ್ರಕಾರ ಇಹಪರಗಳಲ್ಲಿ, ಅಖಿಳಾರ್ಥಗಳ–ಸಮಸ್ತ ಪ್ರಯೋಜನಗಳ, ಪಾಲಿಸಿ–ಕೊಟ್ಟವನಾಗಿ, ಸಂತಯಿಸುವನು–ಸಂರಕ್ಷಣ ಮಾಡುವನು.

**ತಂದೆತಾಯ್ಗಳ ಪ್ರೀತಿಗೋಸುಗ ।**
**ನಿಂದ್ಯಕರ್ಮವ ತೊರೆದು ವಿಹಿತಗ ।**
**ಳೊಂದು ಮೀರದೆ ಸಾಂಗಕರ್ಮಗಳಾಚರಿಸುವವರು ॥**
**ವಂದನೀಯರಾಗಿಳೆಯೊಳಗೆ ದೈ ।**
**ನಂದಿನದಿ ದೈಹಿಕ ದಹಿಕ ಸುಖ ।**
**ದಿಂದೆ ಬಾಳ್ವರು ಬಹು ದಿವಸದಲಿ ಕೀರ್ತಿಯುತರಾಗಿ ॥ ೫ ॥**

ಪಿತೃಕಾರ್ಯಗಳನ್ನು ದೋಷರಹಿತರಾಗಿ ಮಾಡಿದವರಿಗೆ ಫಲ ಹೇಳತಾರೆ.

ತಂದೆತಾಯ್ಗಳ–ಮೃತರಾದ ಮಾತಾಪಿತೃಗಳ, ಪ್ರೀತಿಗೋಸುಗ–ಪ್ರೀತಿ ಆಗೋ ನಿಮಿತ್ತ, ನಿಂದ್ಯಕರ್ಮವ ತೊರೆದು–ಪಿತೃಗಳ ತಿಥಿ ದಿನಕ್ಕೆ ಪೂರ್ವಾಪರದಿನಗಳಲ್ಲಿ, ತಿಥಿ ಮಾಡತಕ್ಕ ದಿನದಲ್ಲಿ, ಶಾಸ್ತ್ರೋಕ್ತಪ್ರಕಾರ ವಿಧಿಕರ್ಮ ಆಚರಿಸುತ್ತಾ, ತದ್ವಿರುದ್ಧವಾದ ನಿಂದ್ಯಕರ್ಮಗಳ ತೊರೆದು ಕರ್ಮ ಮಾಡಿದರೆ, ಶ್ರೀಹರಿಗೆ ಪ್ರೀತಿಯಾಗತದೆ ಎಂತ ತಿಳಿದು

ನಿಷ್ಕಾಮರಾಗಿ, ವಿಹಿತಗಳೊಂದು ಮೀರದೆ–ವಿಧಿಯಾದದ್ದು ಮೀರದೆ, ಸಾಂಗಕರ್ಮಗಳಾಚರಿಸುವರು ವಿಧ್ಯುಕ್ತಪ್ರಕಾರ ಪಿತೃಕಾರ್ಯ ಆಚರಿಸತಕ್ಕವರು ಮತ್ತು, ದೈನಂದಿನದಿ–ಪ್ರತಿದಿನದಲ್ಲೂ, ಇಳೆಯೊಳಗೆ–ಭೂಮಿಯಲ್ಲಿ ಸಾಧನೆಮಾಡತಕ್ಕ ಮನುಷ್ಯರು, ದೈಶಿಕ–ಪುಣ್ಯಕ್ಷೇತ್ರಗಳಲ್ಲಿ ಮಾಡತಕ್ಕ ಪುಣ್ಯಗಳೇನು, ದಹಿಕ–ಸ್ವದೇಹಸ್ಥ ಇಂದ್ರಿಯಾದಿಗಳಿಂದ ಮಾಡತಕ್ಕ ವಿಧ್ಯುಕ್ತವಾದ ನಿತ್ಯಕರ್ಮಗಳೇನು, ನಿಷ್ಕಾಮರಾಗಿ ಪರಮಾತ್ಮನ ಅನುಸಂಧಾನಪೂರ್ವಕ ಕರ್ಮಮಾಡತಕ್ಕವರು, ವಂದನೀಯರಾಗಿ–ವಂದನಾ ಮಾಡಿಸಿಕೊಂಡವರಾಗಿ ಎಂದರೆ, ತಮಗಿಂತ ಅವರರಿಂದ ವಂದನೀಯರು ಎಂತಲೂ, ತಮಗಿಂತ ಉತ್ತಮರಾದವರ ಕಡಿಯಿಂದ ಶ್ಲಾಘನಾರ್ಹರೆಂತಲೂ ತಾತ್ಪರ್ಯ. ('ಅವರರು' ಅಂದರೆ ತಮಗಿಂತಲೂ ತಾರತಮ್ಯದಲ್ಲಿ ಕಡಿಮೆ ಆದವರು) ಸ್ವೋತ್ತಮರಿಂದ ವಂದನ ಎಂದರೆ, ಅನಾಪರೋಕ್ಷ ದಶಾದಲ್ಲಿ ಸ್ವೋತ್ತಮರನ್ನು ತಿಳಿಯೋದಿಲ್ಲ. ಸಚ್ಛಾಸ್ತ್ರಾಭಿಜ್ಞರಾದವರ ಅನುಗ್ರಹ ಸಂಪಾದಿಸಿ ಇರತಕ್ಕವರು, ಕೀರ್ತಿಯುತರಾಗಿ–ಕೀರ್ತಿ ಪಡೆದವರಾಗಿ, ಬಹು ದಿವಸದಲಿ–ಆಯುರ್ವೃದ್ಧಿಯಾಗಿ ಚಿರಕಾಲ ಸತ್ಸಾಧನಗಳ ಮಾಡತಾ, ಸುಖದಿಂಪೆ–ಸಂತೋಷದಿಂದ ಭೂಮಿಯಲ್ಲಿ ನಿರಂತರ, ಪರಲೋಕದಲ್ಲಿ, ಬಾಳ್ವರು–ವಾಸವಾಗಿರುತ್ತಾರೆ.

**ಅಂಶಿ ಅಂಶಾಂತರ್ಗತತ್ರಯ ।**
**ಹಂಸವಾಹನ ಮುಖ್ಯದಿವಿಜರ ।**
**ಸಾಂಶದಲಿ ತಿಳಿದಂತರಾತ್ಮಕ ಶ್ರೀ ಜನಾರ್ದನನ ॥**
**ಸಂಸ್ಮರಣೆ ಪೂರ್ವಕದಿ ಷಡಧಿಕ ।**
**ತ್ರಿಂಶತಿತ್ರಯರೂಪವರಿತು ವಿ ।**
**ಪಾಂಸಗನ ಪೂಜಿಸುವರವರೆ ಕೃತಾರ್ಥರೆನಿಸುವರು ॥ ೬ ॥**

ಪಿತೃಕರ್ಮದಿಂದ ಕೃತಾರ್ಥನಾಗತಕ್ಕ ವಿಧವನ್ನ ಹೇಳತಾರೆ.

ಅಂಶಿ–ವಸುರುದ್ರಾದಿತ್ಯರ ಮೂಲರೂಪಗಳು ಅಂಶಿ ಎಂತ ಸಾಂಕೇತವು. ಅಂಶ–ಇವರ ಮೂಲರೂಪದಿಂದ ಪ್ರತ್ಯೇಕವಾಗಿ ಹೊರಟು ಪಿತೃಕರ್ಮದಲ್ಲಿ ಉದ್ದೇಶಿತರಾದ ಬ್ರಾಹ್ಮಣತ್ರಯರಲ್ಲಿ ಆವಾಹಿತರಾದ ಪಿತೃತ್ರಯರಲ್ಲಿ ವಸುರುದ್ರಾದಿತ್ಯರು ಆವಾಹಿತರಾಗಿದ್ದಾರೆ. ಅಂತರ್ಗತ–ಈ ವಸುರುದ್ರಾದಿತ್ಯರಲ್ಲಿ ಆವಾಹಿತರಾದ ಪ್ರದ್ಯುಮ್ನ, ಸಂಕರ್ಷಣ, ವಾಸುದೇವರೂಪಗಳು ಅಂಶಿಯಿಂದ ಅಂಶ ಹೊರಟು ಪ್ರವಿಷ್ಟರು ಎಂತ ಅರ್ಥ. ಇದೇ ಪ್ರಕಾರ, ಪಿತಾಮಹಾದಿ ಮೃತರಾದ ಪಿತೃಗಳು ಮೂರು ಮಂದಿ. ಅವರು ಎಲ್ಲಿ ಇದ್ದ ಕಾಲಕ್ಕೂ ಆವಾಹನಕಾಲಕ್ಕೆ ಆಯಾ ಪಿತ್ರಂತರ್ಗತ ಪರಮಾತ್ಮ, ಆಯಾ ಪಿತೃದೇವತೆಗಳ ದ್ವಾರಾ ಪಿತೃಗಳ ಅಂಶವಿಭಾಗ ಮಾಡಿ ತೆಗೆದು, ಆಯಾ ದೇವತೆಗಳ ಸಹಿತನಾಗಿ ಆವಾಹನಕಾಲಕ್ಕೆ ಬ್ರಾಹ್ಮಣರ ಶರೀರದಲ್ಲಿ ಪ್ರವಿಷ್ಟನಾಗತಾನೆ. ಈ ಅಂಶವಿಭಾಗ ಪಿತೃಗಳಿಗೆ ತಿಳಿಯೋದಿಲ್ಲ. ಪೂರ್ವೋಕ್ತ ಉಪಸಂಹಾರವೂನೂ. "ಅನಂಶಸ್ಯಾಪಿ ಜೀವಸ್ಯ ವಿಭಾಗಂ ಬಹುಧಾ ಹರಿಃ। ಕೃತ್ವಾ ಭೋಗಾನ್ ಪ್ರದಾಯೈವ ಚೈಕ್ಯಮಾಪದ್ಯತೇ

ಪುನಃ || ” ಎಂತ ಪ್ರಮಾಣಸಿದ್ಧ. ಇಲ್ಲಿ ಬಾಲ ಖಂಡಿಸಿದ ದೃಷ್ಟಾಂತ. ನಂತರ ಅಂಶ, ಅಂಶಿಯಲ್ಲಿ ಸೇರತದೆ. ಜೀವರು ಯದ್ಯಪಿ ನಿರಂಶರೇ ಆದರೂ, ಈ ರೀತ್ಯಾ ಅಂಶವಿಭಾಗ ಉಂಟು. ಬಾಲ ಖಂಡಿಸಿದರೂ ಹಲ್ಲೀಗೆ ಮಾತ್ರ ತಿಳಿಯೋದಿಲ್ಲ. ಈ ರೀತ್ಯಾ ಹತ್ತು ಮಂದಿ ಪುತ್ರರು ಹತ್ತು ಪ್ರದೇಶದಲ್ಲಿ ಪಿತೃಕಾರ್ಯ ಮಾಡೋದರಲ್ಲಿ ಬಹು ಪ್ರಕಾರ ವಿಭಾಗಮಾಡಿ, ಹುಟ್ಟುತ್ತಾ ಬಹು ರೂಪದಿಂದ ಇರುತ್ತಾರೆ. ತ್ರಯ–ಮೂರು ವಿಧ ಪಿತೃಗಳಲ್ಲಿ ಕರ್ತೃ, ಕರ್ಮ, ಕ್ರಿಯೆ ಈ ಮೂರರಲ್ಲಿ ಪೂರ್ವೋಕ್ತ ಪ್ರಕಾರ ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ಅನಿರುದ್ಧ ಈ ನಾಲ್ಕು ರೂಪಗಳ ಆಯಾ ಅಂತರ್ಗತದಲ್ಲಿ ಅನುಸಂಧಾನ ಮಾಡಬೇಕು. ಹಂಸವಾಹನ–ಬ್ರಹ್ಮದೇವರೇ ಮೊದಲಾದ, ಮುಖ್ಯ ದಿವಿಜರ–ಮುಖ್ಯರಾದ ತತ್ತ್ವಾಭಿಮಾನಿ ದೇವತೆಗಳ, ಸಾಂಶದಲಿ ತಿಳಿದು–ಆಯಾ ತ್ರಯ ಗಳಲ್ಲಿ, ಬ್ರಾಹ್ಮಣರ ದೇಹದಲ್ಲಿ ಒಂದೊಂದಂಶದಿಂದ ಪ್ರವಿಷ್ಟರಾಗಿದ್ದಾರೆಂದು ತಿಳಿಯೋವ ನಾಗಬೇಕು. ಈ ಪ್ರಕಾರ ತಿಳದು, ಇನ್ನೂ, ಅಂತರಾತ್ಮಕ–ಪೂರ್ವೋಕ್ತ ಅಧಿಷ್ಠಾನಗಳ ಅಂತರ್ಗತದಲ್ಲಿ ಪ್ರಚುರನಾದ, ಶ್ರೀ ಜನಾರ್ದನನ–ಶ್ರಾದ್ಧಸ್ವಾಮಿಯಾದ, ದುಷ್ಟಜನ ಮರ್ದಕ ಶ್ರೀ ಪರಮಾತ್ಮನಾದ ಜನಾರ್ದನದೇವರ, ಸಂಸ್ಮರಣೆಪೂರ್ವಕದಿ–ಛಂದಾಗಿ ಸ್ಮರಣೆಪೂರ್ವಕ, ಷಡಧಿಕ–ಆರು ಅಧಿಕವಾಗಿ ಉಳ್ಳ, ತ್ರಿಂಶತಿತ್ರಯ–(ಮೂವತ್ತುಮೂರಲ) ತೊಂಭತ್ತು, ರೂಪವರಿತು–೯೬ ಜನಾರ್ದನ ರೂಪಗಳು, ಇಷ್ಟೇ ಸಂಖ್ಯಾ ಉಳ್ಳ ಅನಿರುದ್ಧಾದಿ ರೂಪಗಳು. ಈ ಪ್ರಕಾರ ಅನುಸಂಧಾನದಿಂದ ಅರಿತು ಪಿತೃಕಾರ್ಯಗಳ ನಡಿಸಿ ಪರಿಯವಸಾನಕ್ಕೆ, ವಿಷಾಂಸಗನ–ಗರುಡವಾಹನನಾದ ಶ್ರೀಕೃಷ್ಣಗೆ ಅರ್ಪಿತವೆಂದು, ಪೂಜಿಸುವರವರೆ–ಉಭಯವಿಧವಾದ ೯೬ ಭಗವದ್ರೂಪಗಳ, ಪಿತೃಗಳ ವ್ಯಾಜದಿಂದ ಪೂಜಿಸತಕ್ಕವರು ದಾರೋ ಅವರೇ, ಕೃತಾರ್ಥರೆನಿಸುವರು–ಮಾಡಲ್ಪಟ್ಟ ಕರ್ಮದಿಂದ ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗಿ ಪ್ರಯೋಜನವನ್ನು ಹೊಂದಿದವರೆಂದು ಎನಿಸೋವ ರಾಗತಾರೆಂತ ತಾತ್ಪರ್ಯ.

**ಮೂರುವರೆಸಾವಿರದ ಮೇಲರೆ |**
**ನೂರೈದು ರೂಪದಿ ಜನಾರ್ದನ |**
**ಸೂರಿಗಳು ಮಾಡುವ ಸಮಾರಾಧನೆಗೆ ವಿಘ್ನಗಳು ||**
**ಬಾರದಂತೆ ಬಹುಪ್ರಕಾರ ಖ |**
**ರಾರಿ ಕಾಪಾಡುವನು ಸರ್ವ ಶ |**
**ರೀರಗಳೊಳಿದ್ದವರವರ ಪೆಸರಿಂದ ಕರೆಸುತಲಿ || ೭ ||**

ಶ್ರಾದ್ಧಸ್ವಾಮಿಯಾದ ಶ್ರೀ ಜನಾರ್ದನದೇವರು ಪಿತೃಕರ್ಮಕ್ಕೆ ಬಾಧಕ ಬಾರದಂತೆ ಕಾಪಾಡತಾನೆಂದು ಹೇಳತಾರೆ.

ಮೂರುವರೆ ಸಾವಿರದ ಮೇಲೆ–(೩೫೦೦) ಮೂರು ಸಾವಿರದ ಐನೂರು ಮ್ಯಾಲೆ, ಅರೆನೂರೈದು–ಐವತ್ತು ಐದು, ಅಂತು ೩೫೫೫ ಜನಾರ್ದನ ರೂಪಗಳು. ಹಿಂದೆ ಸಂಧ್ಯಂತರ

ದಲ್ಲಿ ಹೇಳಿದ್ದ ಪ್ರಕಾರ ವಾಮಾಂಕದಿಂದ ೫೫೫೩ ಆಗತದೆ. ಪ್ರಕೃತ ಸಮಗತಿ ಅನುಸರಿಸಿ ಹೇಳಿದ್ದಾರೆ.[1] ರೂಪದಿ–ಮೂರುಸಾವಿರದಐನೂರಐವತ್ತೈದು ರೂಪದಿಂದ, ಜನಾರ್ದನ–ಶ್ರಾದ್ಧಸ್ವಾಮಿಯಾದ ಶ್ರೀ ಜನಾರ್ದನದೇವರು, ಸೂರಿಗಳು ಮಾಡುವ–ಅನುಸಂಧಾನದಿಂದ ಜ್ಞಾನಿಗಳು ಮಾಡತಕ್ಕ, ಸಮಾರಾಧನೆಗೆ–ಸಮೀಚೀನವಾದ ಪಿತೃಗಳಂತರ್ಗತ ವಸು ರುದ್ರ ಇತ್ಯಾದಿ ದೇವತಾಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ರೂಪಗಳಾದ ಭಗವದ್ರೂಪಗಳ ಸಮೀಚೀನವಾದ ಆರಾಧನೆಗೆ, ವಿಘ್ನಗಳು ಬಾರದಂತೆ–ಆತಂಕಗಳು ಬಾರದಂತೆ ದಶದಿಕ್ಕಿನಲ್ಲಿ ವ್ಯಾಪ್ತನಾಗಿದ್ದು ಜನಾರ್ದನದೇವರು ಕಾಪಾಡತಾನೆ. ಇದರನ್ನ ತಿಳಿದು ದಶದಿಕ್ಕಿನಲ್ಲಿ ಜನಾರ್ದನ ದೇವರನ್ನ ಆವಾಹನೆ ಮಾಡಬೇಕು. ಮತ್ತು, ಅವರವರ ಪೆಸರಿಂದ–ಕರ್ತೃ, ಭೋಕ್ತೃ, ವಿಶ್ವೇದೇವರ ಸ್ಥಾನಕ್ಕೆ ನೇಮಿತ ಬ್ರಾಹ್ಮಣರು, ಶ್ರಾದ್ಧಪಾಕಕರ್ತೃಗಳು, ಶ್ರಾದ್ಧ ಮಾಡತಕ್ಕ ಮಂತ್ರಜ್ಞ, ಏತಾದೃಶರಾದವರಲ್ಲಿ, ಅವರವರ ಹೆಸರಿನಿಂದ, ಕರೆಸುತಲಿ–ಕರಿಸುತ್ತಾ, ಸರ್ವಶರೀರಗಳೊಳಿದ್ದು–ಪೂರ್ವೋಕ್ತರಾದ ಸರ್ವರ ಸ್ಥೂಲಶರೀರಗಳಲ್ಲಿದ್ದು, ಖರಾರಿ–ಖರಾಸುರಗೆ ಶತ್ರುವಾದ ಶ್ರೀಕೃಷ್ಣದೇವರು, ಬಹು ಪ್ರಕಾರ–ನಾನಾ ಪ್ರಕಾರ, ಕಾಪಾಡುವನು–ಅವರವರು ಮಾಡತಕ್ಕ ಪಿತೃಯಜ್ಞಕ್ಕೆ ಸಹಕಾರಿ ಕಾರ್ಯಗಳಿಗೆ ವಿಘ್ನಗಳು ಬಾರದಂತೆ ಕಾಪಾಡೋವನಾಗತಾನೆ. ಅವರವರ ದೇಹಗಳಲ್ಲಿ ಶ್ರಾದ್ಧಘಾತಕಗಳಾದ ನಾನಾ ವಿಕಾರಗಳು ಪ್ರಾಪ್ತವಾಗದಂತೆ ಶ್ರೀಕೃಷ್ಣ ಕಾಪಾಡತಾನೆ. ತನ್ನಿಮಿತ್ತ ಅನುಸಂಧಾನ ಮಾಡಿ, ಪೂರ್ವೋಕ್ತದಲ್ಲಿ ಶ್ರೀಕೃಷ್ಣನ್ನ ಆವಾಹನೆ ಮಾಡಬೇಕು. ಮತ್ತು, ಶ್ರೀ ಜನಾರ್ದನದೇವರು ಶ್ರಾದ್ಧಕರ್ಮಕ್ಕೆ ಫಲ ಕೊಡತಕ್ಕವನೆಂದು ತಾತ್ಪರ್ಯ.

**ಜಯ ಜಯ ಜಯಾಕಾಂತ ದತ್ತಾ ।**
**ತ್ರಿಯ ಕಪಿಲ ಮಹಿದಾಸ ಭಕ್ತ ।**
**ಪ್ರಿಯ ಪುರಾತನಪುರುಷ ಪೂರ್ಣಾನಂದ ಜ್ಞಾನಘನ ॥**
**ಹಯವದನ ಹರಿ ಹಂಸ ಲೋಕ ।**
**ತ್ರಯವಿಲಕ್ಷಣ ನಿಖಿಳಜಗದಾ ।**
**ಶ್ರಯ ನಿರಾಮಯ ದಯದಿ ಸಂತೈಸೆಂದು ಪ್ರಾರ್ಥಿಪುದು ॥ ೮ ॥**

ಪಿತೃಯಜ್ಞವನ್ನು ರಕ್ಷಿಸತಕ್ಕ ಶ್ರೀ ಜನಾರ್ದನದೇವರು, ಶ್ರೀ ಕೃಷ್ಣದೇವರು ಇವರುಗಳ ಪ್ರಾರ್ಥನೆ ಮಾಡಿ ಆವಾಹನ ಮಾಡಬೇಕೆಂತ ಹೇಳತಾರೆ.

---

1 ಅಕ್ಷರಸಾಂಕೇತ ರೂಪಗಳು :— ಜನಾರ್ದನ, ಜ + ನಾ + ರ್ + ದ + ನ, ಜ = ೩, ನಾ = ೫ ; ರ್ = ೨ + ದ = ೩ = ೫ ; ನ = ೫. ಒಟ್ಟು ಸೇರಿಸಿ ಬರೆದರೆ ೩೫೫೫ ರೂಪಗಳು. ಇದಕ್ಕೆ ವಾಮಗತಿ ೫೫೫೩ ಆಗಬೇಕು. ಆದರೆ ಈ ಸಂದರ್ಭದಲ್ಲಿ ಸಮಗತಿಯನ್ನೇ ಹೇಳಿರುತ್ತಾರೆ. ಆದ್ದರಿಂದ ೩೫೫೫ ರೂಪಗಳು.

ಜಯಾಕಾಂತ–ಜಯಾಸಾಂಕೇತರಾದ ಲಕ್ಷ್ಮೀದೇವಿಯರಿಗೆ ಪತಿಯಾದ ಸಂಕರ್ಷಣನೇ, ಚರಾಚರ ಪ್ರಾಣಿಗಳಿಂದ ಅಪಜಯ ಹೊಂದದವನೇ, ಜಯ–ಪಿತೃ ಕಾರ್ಯಕ್ಕೇನು, ಸತ್ಕರ್ಮಾನುಷ್ಠಾನಕ್ಕೇನು, ಭಕ್ತರನ್ನೇನು, ಇವರುಗಳಿಗೆ ವಿಘ್ನಗಳು ಮಾಡತಕ್ಕ, ಪೀಡಿಸತಕ್ಕ ಅಸುರರನ್ನೇನು, ಸಂಹಾರಕರ್ತನೇ, ತದ್ದ್ವಾರಾ ಪೀಡಾ ವಿಘ್ನಾದಿಗಳ ಪರಿಹಾರಕನೇ, ವಿಘ್ನಗಳ ಪರಿಹರಿಸು ಎಂತಲೂ, ಜಯ–ನಿನ್ನ ಭಕ್ತರಾದ ನಮಗೆ ಜಯವನ್ನ ಕೊಡೋವನಾಗು ಎಂತಲೂ, ಭಕ್ತಪ್ರಿಯ–ಭಕ್ತರಿಗೆ ಪ್ರಿಯಕರವಾದ, ಜ್ಞಾನ ಬೋಧ ಮಾಡತಕ್ಕ, ದತ್ತಾತ್ರೆಯ ಕಪಿಲ ಮಹಿದಾಸ–ಈ ಮೂರು ರೂಪಗಳಿಂದ ಜ್ಞಾನಾನುಸಂಧಾನ, ಸರಿಯಾಗಿ ಬುದ್ಧಿಯಲ್ಲಿ ಇದ್ದು ಪ್ರೇರಿಸುವನಾಗು ಎಂತಲೂ, ಹಯವದನ–ಹಯಗ್ರೀವ ರೂಪಿಯಾದ ಪರಮಾತ್ಮನೇ ಎಂತಲೂ, ದೇಹಗತ ಇಂದ್ರಿಯಾಭಿಮಾನಿಗಳಾದ ದುಷ್ಟ ದೈತ್ಯರ ವ್ಯಾಪಾರದಿಂದ ಇಂದ್ರಿಯಾದಿಗಳು ಚಲನವಾಗದಂತೆ ಅವರ ಸಂಹಾರ ಮಾಡು ಎಂತಲೂ, ಹರಿ–ಪಾಪ ಪರಿಹಾರಕನು, ಶ್ರಾದ್ಧ ಕರ್ಮಗಳಲ್ಲಿ ಪ್ರಾಪ್ತವಾದ ಲೋಪದೋಷಗಳ ಪರಿಹಾರ ಮಾಡು ಎಂತಲೂ, ಹಂಸ– " ಸಂಸಾರಬಂಧಂ ಹಂತೀತಿ ಹಂಸಃ " ಅಹಂಮಮತಾದಿ ಸಂಸಾರಬಂಧವನ್ನ ಪರಿಹಾರ ಮಾಡು ಎಂತಲೂ, ಪುರಾತನ ಪುರುಷ–ಅನಾದಿ ಕಾಲದಿಂದಲೂ ಸರ್ವೋತ್ತಮನಾದ ಪುರುಷ ಏಕ ಎಂತಲೂ, ಪೂರ್ಣಾನಂದ–ಆನಂದದಿಂದ ಪೂರ್ಣ ಎಂತಲೂ, ಜ್ಞಾನಘನ–ನಿಬಿಡೀಕೃತವಾದ ಅಪರಿಚ್ಛಿನ್ನವಾದ ಜ್ಞಾನ ಸ್ವರೂಪಿ ಎಂತಲೂ, ಲೋಕತ್ರಯವಿಲಕ್ಷಣ–ಲೋಕತ್ರಯಗಳ ಸ್ವರೂಪಗಳಕ್ಕಿಂತಲೂ ವಿಲಕ್ಷಣ ಸ್ವರೂಪ ಉಳ್ಳವ ಎಂದರೆ, ಇಂಥಾ ಆಕಾರವೇ ಎಂತ ನಿರ್ಧಾರ ಮಾಡೋದಕ್ಕೆ ಶಕ್ಯವಲ್ಲದ ಸ್ವರೂಪ ಉಳ್ಳವ ಎಂತಲೂ, ನಿಖಿಳಜಗದಾಶ್ರಯ–ಸಮಸ್ತ ಚರಾಚರಕ್ಕೆ ಆಶ್ರಯ ಎಂತಲೂ, ನಿರಾಮಯ–ದೋಷ ದೂರ, ರೋಗಾದ್ಯುಪದ್ರವಗಳಿಂದ ದೂರ ಎಂತಲೂ, ಇತ್ಯಾದಿ ಗುಣಗಳಿಂದ ಯುಕ್ತನಾದ ಸರ್ವೋತ್ತಮನಾದ ಶ್ರೀ ಪರಮಾತ್ಮನೇ, ದಯದಿ–ಕೇವಲ ಅಂತಃಕರಣದಿಂದ, ಸಂತೈಸೆಂದು–ಸಂರಕ್ಷಣ ಮಾಡೆಂದು, ಪ್ರಾರ್ಥಿಪುದು–ಪ್ರಾರ್ಥನಾ ಮಾಡೋವರಾಗಬೇಕು.

**ತಾ||** ಈ ಪ್ರಕಾರ ಪ್ರಾರ್ಥನಾ ಮಾಡಿ, ಶ್ರೀ ಜನಾರ್ದನ ರೂಪವನ್ನ ದಶದಿಕ್ಕಿನಲ್ಲೂ ಕೃಷ್ಣರೂಪವನ್ನ ಭೋಕ್ತೃ, ಪಾಕಕರ್ತೃಗಳು ಮೊದಲಾದವರಲ್ಲೀನೂ, ಆವಾಹನ ಮಾಡಬೇಕು ಎಂತ ತಾತ್ಪರ್ಯ.

**ಷಣ್ಣವತಿಯೆಂಬಕ್ಷರೇಢ್ಯನು ।**
**ಷಣ್ಣವತಿ ನಾಮದಲಿ ಕರೆಸುತ ।**
**ತನ್ನವರು ಸದ್ಭಕ್ತಿಪೂರ್ವಕದಿಂದೆ ಮಾಡುತಿಹ ॥**
**ಪುಣ್ಯ ಕರ್ಮವ ಸ್ವೀಕರಿಸಿ ಕಾ ।**
**ರುಣ್ಯಸಾಗರ ಸಲಹುವನು ಬ್ರ ।**
**ಹ್ಮಣ್ಯದೇವ ಭವಾಬ್ಧಿಪೋತ ಬಹುಪ್ರಕಾರದಲಿ ॥ ೯ ॥**

ಪೂರ್ವೋಕ್ತ ಪ್ರಕಾರ ಅನುಸಂಧಾನದಿಂದ ಮಾಡಿದ ಕರ್ಮ ಸ್ವೀಕರಿಸಿ ರಕ್ಷಿಸುತ್ತಾನೆಂದು ಹೇಳುತ್ತಾರೆ.

ಅಕ್ಷರೇಢ್ಯನು–ಅಕ್ಷರರಾದ ಲಕ್ಷ್ಮೀದೇವಿಯರಿಂದ ಸ್ತುತ್ಯನಾದ ನಾರಾಯಣ ದೇವರು, ಷಣ್ಣವತಿಯೆಂಬ–ಷಣ್ಣವತಿ ಎಂತ ನಾಮದಿಂದ ಕರಿಸಿದವನಾಗಿ ಪ್ರದ್ಯುಮ್ನಾದಿ ವಾಸುದೇವಾಂತ ನಾಲ್ಕು ರೂಪಗಳಿಂದ ಅಭಿವ್ಯಕ್ತನಾಗಿ, ಷಣ್ಣವತಿ ನಾಮದಲಿ–೨೪ ಪ್ರದ್ಯುಮ್ನ ರೂಪಗಳು, ೩೩ ಸಂಕರ್ಷಣ ರೂಪಗಳು, ೩೬ ವಾಸುದೇವ ರೂಪಗಳು, ३ ಅನಿರುದ್ಧ ರೂಪಗಳು, ಅಂತು ೯೬. ಈ ಪ್ರಕಾರ ತೊಂಬತ್ತಾರು ನಾಮದಿಂದ, ಕರೆಸುತ–ಆಯಾ ಅಧಿಷ್ಠಾನಗಳಲ್ಲಿ ಇದ್ದು ಕರಿಸುತ್ತಾ, ತನ್ನವರು–ತನ್ನ ಭಕ್ತರು, ಸದ್ಭಕ್ತಿ ಪೂರ್ವಕದಿಂದೆ–ಸಮೀಚೀನವಾದ ತಾರತಮ್ಯ ಪಂಚಭೇದ ಯುಕ್ತವಾದ ಜ್ಞಾನದಿಂದ ಅಂತರ್ಗತನಾದ ಪರಮಾತ್ಮನಲ್ಲಿ, ಭಕ್ತಿಪೂರ್ವಕವಾಗಿ, ಮಾಡುತಿಹ–ಮಾಡತಾ ಇರ ತಕ್ಕ ಪಿತೃಕರ್ಮ ದಾವದದೆ ಇದೇ, ಪುಣ್ಯಕರ್ಮವ–ಪಿತೃ ವಿಷಯಕವಾದ ಪುಣ್ಯ ಕರ್ಮ ಎಂತ ಎನಿಸೋದಾಗತದೆ, ಇಂಥಾ ಪುಣ್ಯ ಕರ್ಮವನ್ನ, ಕಾರುಣ್ಯಸಾಗರ–ಕರುಣಾ ಸಮುದ್ರನಾದ ಶ್ರೀ ಪರಮಾತ್ಮನು 'ಕೃಷ್ಣಾರ್ಪಣ' ಎಂದು ಕೊಟ್ಟಿದ್ದರನ್ನ, ಸ್ವೀಕರಿಸಿ–ತೆಗೆದುಕೊಂಡವನಾಗಿ, ಬ್ರಹ್ಮಣ್ಯದೇವ–ಬ್ರಹ್ಮ ಜ್ಞಾನಿಗಳಿಗೆ ಸ್ವಾಮಿಯಾದ ಪರಮಾತ್ಮ ಸಲಹುವನು–ತನ್ನ ಪಿತೃಗಳ ಸಂರಕ್ಷಿಸುವನು. ಈ ಪರಮಾತ್ಮ, ಭವಾಬ್ಧಿಪೋತ–ಸಂಸಾರಾಖ್ಯ ಸಮುದ್ರಕ್ಕೆ ನಾವಿಸ್ಥಾನಾಪನ್ನನು (ಜಲದಿಂದ ಯುಕ್ತವಾದ ಸಮುದ್ರದಲ್ಲಿ ಮುಣುಗದೆ ಇರಬೇಕಾದರೆ ಪರಮಾತ್ಮ ಎಂಬ ನಾವಿಯನ್ನು ಆಶ್ರಯ ಮಾಡಿದವ ಮುಣುಗೋದಿಲ್ಲ) ಆದ್ದರಿಂದ, ಬಹು ಪ್ರಕಾರದಲಿ–ಪೂರ್ವೋಕ್ತ ಪ್ರಕಾರ ಶ್ರೀ ಪರ ಮಾತ್ಮನ್ನ ನಂಬಿದರೆ, ಅವನು ನಾನಾ ಪ್ರಕಾರದಿಂದ ಕಾಪಾಡುತ್ತಾನೆಂದು ತಾತ್ಪರ್ಯ.

**ದೇಹಗಳ ಕೊಡುವವನು ಅವರವ ।**
**ರಹರವನು ಕೊಡದಿಹನೆ ಸುಮನಸ ।**
**ಮಹಿತ ಮಂಗಳಚರಿತ ಸದ್ಗುಣಭರಿತನನವರತ ॥**
**ಅಹಿಕ ಪಾರತ್ರಿಕ ಸುಖಪ್ರದ ।**
**ವಹಿಸಿ ಬೆನ್ನಿಲಿ ಬೆಟ್ಟವನ್ಮೃತವ ।**
**ದ್ರುಹಿಣ ಮೊದಲಾದವರಿಗುಣಿಸಿದ ಮುರಿದನಹಿತರನ ॥ ೧೦ ॥**

ಶ್ರೀ ದೇವರು ಜೀವರಿಗೆ ಜೀವನವನ್ನು ಉಂಟುಮಾಡಿದ್ದಾನೆಂತ ಹೇಳುತ್ತಾರೆ.

ದೇಹಗಳ ಕೊಡುವವನು – ಮಾತಾಪಿತೃಗಳ ಅಂತರ್ಗತನಾಗಿ, ಅವರ ದ್ವಾರಾ ಪಾಂಚಭೌತಿಕ ಸ್ಥೂಲದೇಹಗಳ, ಮಾತೃ ಉದರದಲ್ಲಿ ನಿರ್ಮಾಣಮಾಡಿ ಜೀವರನ್ನ ಗರ್ಭದಿಂದ ಹೊರಗೆ ಸೃಷ್ಟಿಮಾಡಿದ ಪರಮಾತ್ಮನು, ಅವರವರಹರವನು–ಆಯಾ ಪ್ರಾಣಿ ಗಳ ಆಹಾರವನ್ನ, ಕೊಡದಿಹನೆ–ಕೊಡದೇ ಇರುತ್ತಾನೆಯೆ ? ತಾಯಿ ಸ್ತನದಲ್ಲಿ ಶಿಶು ಸಂರಕ್ಷಣಾರ್ಥ ಶಿಶು ಜನಿಸೋದಕ್ಕೆ ಪೂರ್ವದಲ್ಲೇ ಕ್ಷೀರವನ್ನು ಸಿದ್ಧಮಾಡಿ ಇಡಲಿಲ್ಲವೆ ?

ತದ್ವತ್, ಪೂರ್ವಜನ್ಮ ಕರ್ಮಾನುಸಾರ ಜನನಾರಭ್ಯ ಮರಣಾಂತವರಿಗೂ, ಭೋಜನಕ್ಕೆ ಯೋಗ್ಯವಾದ ಆಹಾರ ಸಿದ್ಧಮಾಡಿಕೊಡತಲೇ ಇದ್ದಾನೆ. ಆದ್ದರಿಂದ ಈಶನಿಂದ ದಾವ ಕಾಲಕ್ಕೂ ಏನು ಲಭ್ಯವಾಗತದೋ ಆದರನ್ನ, ಭುಂಜಿಸುತ್ತ ಅಧಿಕ ಆಶಾ ಪಡಬ್ಯಾಡಾ ಎಂತ ತಾತ್ಪರ್ಯ. ಆದ್ದರಿಂದ ಈ ಪರಮಾತ್ಮನು, ಸುಮನಸಮಹಿತ–ಬ್ರಹ್ಮಾದಿ ದೇವತೆಗಳಿಂದ ಪೂಜ್ಯ ಎಂತಲೂ, ಮಂಗಳಚರಿತ–ಅವತಾರಾದಿ ರೂಪಗಳಿಂದ ಮಾಡಿದ ಚರಿತ್ರೆಗಳ ಸ್ಮರಿಸಿದವರಿಗೆ ಅಮಂಗಳವಾದ ಲಿಂಗದೇಹವನ್ನ ಭಂಗಪಡಿಸಿ ಮಂಗಳವಾದ ಸ್ವರೂಪಾನಂದವನ್ನ ಭೋಗಕ್ಕೆ ಕೊಡತಕ್ಕವ ಎಂತಲೂ, ಸದ್ಗುಣಭರಿತನು–ಅಸದೃಶವಾದ ಅಪರಿಚ್ಛಿನ್ನವಾದ ಸ್ವಾಖ್ಯಗಳಾದ ಸದ್ಗುಣಗಳಿಂದ ಪೂರ್ಣ ಎಂತಲೂ ಸ್ತೋತ್ರಮಾಡತಕ್ಕವರಿಗೆ, ಐಹಿಕ–ಇಹಲೋಕದಲ್ಲಿ ಸಂಸಾರದುಃಖದಿಂದ ದೂರಮಾಡಿ, ಸುಖಪ್ರದಗಳಾದ ಜ್ಞಾನ, ಭಕ್ತಿ, ವೈರಾಗ್ಯಗಳ ಕೊಟ್ಟೋನೂ, ಪಾರತ್ರಿಕ–ಪರಲೋಕದಲ್ಲಿ, ಜ್ಞಾನ, ಭಕ್ತಿ, ವೈರಾಗ್ಯಗಳಿಗೆ ಅನುಸರಿಸಿದ ಸುಖಪ್ರದಗಳಾದ ಲೋಕದಲ್ಲಿ ಇಟ್ಟೋನೂ, ಅನವರತ ಸುಖಪ್ರದ–ಸರ್ವಕಾಲದಲ್ಲೂ, ಇಂಥಾ ಸುಖವನ್ನು ಕೊಡೋವನಾಗತಾನೆ. ಬೆಟ್ಟವ ಬೆನ್ನಿಲಿ ಪಹಿಸಿ–ಮಂದರಪರ್ವತವ ಕೂರ್ಮರೂಪದಿಂದ ಬೆನ್ನಮ್ಯಾಲೆ, ತನ್ನ ನಂಬಿದವರಾದ ದೇವತೆಗಳಿಗೋಸ್ಕರ ಹೊತ್ತುಕೊಂಡು, ಅಮೃತವ–ಕ್ಷೀರಸಮುದ್ರದಲ್ಲಿ ಪರ್ವತಮಥನದಿಂದ ಜನಿಸಿದ ಅಮೃತವನ್ನ, ದ್ರುಹಿಣ ಮೊದಲಾದವರಿಗೆ–ಬ್ರಹ್ಮಾದಿ ದೇವತೆಗಳಿಗೆ, ಉಣಿಸಿದ–ಸ್ತ್ರೀರೂಪದಿಂದ ಅಮೃತ ಪರಿವೇಷಣ ಮಾಡಿ, ಅಮೃತಪಾನ ಮಾಡಿಸಿ, ಮುರಿದನಹಿತರನ–ದೈತ್ಯರಿಗೆ ಅಮೃತಪಾನ ಇಲ್ಲದಂತೆ ಮಾಡಿ ಅವರ ಆಶಾ ಪೂರ್ಣ ಮಾಡದೆ, ಅವರನ್ನ ನಿಗ್ರಹ ಮಾಡಿದ್ದಾನೆ. ಆದಕಡಿಯಿಂದ, ಪರಮಾತ್ಮ ತನ್ನ ನಂಬಿದವರನ್ನ ಉದ್ಧಾರ ಮಾಡಿ ಅವರವರಿಗೆ ಯೋಗ್ಯವಾದ ಅನ್ನಾದಿಗಳ ಕಲ್ಪನ ಮಾಡಿದ್ದಾನೆ. ಇದರನ್ನ ತಿಳಿದು ಜೀವರು ವೃಥಾ ಶ್ರಮಪಡದೆ ಪರಮಾತ್ಮನ್ನ ನಂಬಿ ಉದ್ಧಾರವಾಗಬೇಕು ಎಂತ ತಾತ್ಪರ್ಯ.

**ದ್ರುಹಿಣ ಮೊದಲಾದಮರರಿಗೆ ಸ ।**
**ನ್ಮಹಿತ ಮಾಯಾರಮಣ ತಾನೇ ।**
**ಸ್ನಹನೆನಿಸಿ ಸಂತೃಪ್ತಿಬಡಿಸುವ ಸರ್ವಕಾಲದಲಿ ॥**
**ಪ್ರಹಿತ ಸಂಕರುಷಣನು ಪಿತೃಗಳಿ ।**
**ಗಹರನೆನಿಪ ಸ್ವಧಾಖ್ಯರೂಪದಿ ।**
**ಮಹಿಜ ಫಲತೃಣ ಪೆಸರಿನಲಿ ಪ್ರದ್ಯುಮ್ನ ಅನಿರುದ್ಧ ॥ ೧೧ ॥**

ಶ್ರೀ ಪರಮಾತ್ಮನು ಪ್ರಾಣಿಗಳಿಗೆ ಆಹಾರ ರೂಪವಾದ ಅನ್ನಾದಿಗಳಲ್ಲಿ ಅನ್ನ ರೂಪದಿಂದ ಇದ್ದಾನೆ ಎಂತ ಹೇಳತಾರೆ.

ಸನ್ಮಹಿತ–ನಿರ್ದುಷ್ಟನಾದ ಸರ್ವೋತ್ತಮನೆಂದು ಕರಿಸಿ, ಪೂಜ್ಯನಾದ, ಮಾಯಾರಮಣ–ಮಾಯಾನಾಮಕ ಲಕ್ಷ್ಮೀದೇವಿಯರಿಗೆ ಪತಿಯಾದ ವಾಸುದೇವ, ದ್ರುಹಿಣ

ಮೊದಲಾದವುರರಿಗೆ–ಬ್ರಹ್ಮನೇ ಮೊದಲು ಮಾಡಿ ಯಾವತ್ತೂ ದೇವತೆಗಳಿಗೆ, ಸ್ವಹ–ಸ್ವಾಹಾ ಎಂತ ಕೊಡುವ ಆಹುತಿಗಳ ಒಳಗೆ, ತಾನೇ–ವಾಸುದೇವನಾದ ತಾನೇ, ನೆನಿಸಿ–ಸ್ವಾಹಾ ಎಂತ ಕರಿಸಿದವನಾಗಿ, ಸರ್ವಕಾಲದಲಿ ಸಂತೃಪ್ತಿಬಡಿಸುವ–ನಿರಂತರ, ಛಂದಾಗಿ ತೃಪ್ತಿಯನ್ನು ಐದಿಸೋವನಾಗತಾನೆ. ದೇವತೆಗಳಿಗೆ ತೃಪ್ತಿಪಡಿಸುವ ವಾಸುದೇವರೂಪ ಎಂತಲೂ, ಪ್ರಹಿತ–ಪ್ರಕರ್ಷೇಣ ಮುಕ್ತಿಯೋಗ್ಯರಿಗೆ ಹಿತನಾದವ, ಸಂಕರುಷಣನು–ಸಂಕರ್ಷಣರೂಪಿಯಾದ ಪರಮಾತ್ಮ, ಸ್ವಧಾಖ್ಯರೂಪದಿ–'ಸ್ವಧಾ' ಎಂತ ಕೊಡುವ ಆಹುತಿಗಳಲ್ಲಿ ಪ್ರಸಿದ್ಧನಾಗಿ ತನ್ನಾಮ ರೂಪದಿಂದ ಇದ್ದವನಾಗಿ, ಪಿತೃಗಳಿಗೆ–ಪಿತೃದೇವತೆಗಳಿಗೆ, ಅಹರನೆನಿಪ–ಆಹಾರ ಕೊಡತಕ್ಕವ ಎಂತ ಅನಿಸೋವನಾಗತಾನೆ. ಎಂದರೆ, ದೇವತೆಗಳು ಸರ್ವತ್ರ ವ್ಯಾಪ್ತರು. ಆದ್ದರಿಂದ 'ಸ್ವಾಹಾ' 'ಸ್ವಧಾ' ಎಂತ ಕೊಡತಕ್ಕ ಆಹುತಿ ದ್ರವ್ಯಗಳಲ್ಲಿ ದೇವತೆಗಳು ಅಂಶದಿಂದ ವ್ಯಾಪ್ತರಾಗಿ ಇರುವ ಅವರವರ ರೂಪಗಳ, ಅವರವರ ಮೂಲ ರೂಪಕ್ಕೆ ಆತ್ಮಪ್ರದರ್ಶನ ರೂಪದಿಂದ ತೃಪ್ತಿಪಡಿಸತಾನೆ. ಅಗ್ನಿದೇವರಿಗೆ 'ಸ್ವಾಹಾ', 'ಸ್ವಧಾ' ಎಂತ ಉಭಯ ಪತ್ನೇರು. ಅಗ್ನಿಯಲ್ಲಿ ಮಾಡಿದ ಆಹುತಿ ಅಗ್ನಿದ್ವಾರಾ ಸ್ವಾಹಾ, ಸ್ವಧಾ ಎಂಬ ಅಗ್ನಿಪತ್ನೇರ ದ್ವಾರಾ ವಾಸುದೇವ ಸಂಕರ್ಷಣ, ದೇವತೆಗಳಿಗೆ, ಪಿತೃಗಳಿಗೆ, ಆತ್ಮಪ್ರದರ್ಶನ ರೂಪದಿಂದ ಸೇರಿಸಿ ತೃಪ್ತಿಪಡಿಸತಾನೆ. ಮಹಿಜ–ಭೂಮಿಯನ್ನ ಭೇದಿಸಿಕೊಂಡು ಉತ್ಪನ್ನಗಳಾದ, ಫಲ–ವೃಕ್ಷಸಸ್ಯಾದಿಗಳಲ್ಲಿ ಫಲಿಸಿದ ಧಾನ್ಯಾದಿ ಫಲಗಳಲ್ಲಿ, ಪ್ರದ್ಯುಮ್ನ–ಪ್ರದ್ಯುಮ್ನನಾಮಕ ಪರಮಾತ್ಮ, ತೃಣ–ಭೂಮಿ ಭೇದಿಸಿಕೊಂಡು ಬರುವ ಹುಲ್ಲು ಮೊದಲಾದುವುಗಳಲ್ಲಿ, ಅನಿರುದ್ಧರೂಪಿ ಪರಮಾತ್ಮ, ಪೆಸರಿನಲಿ–ಅದರದರ ಅಂತರ್ಗತನಾಗಿ ಆಯಾ ಪೆಸರಿನಿಂದ ಕರಿಸುತ್ತಾ ಇರೋವನಾಗಿದ್ದಾನೆ. ಇದ್ದು ದಾರನ್ನ ಸಂರಕ್ಷಿಸುತ್ತಾನೆಂದರೆ, ಮುಂದೆ ಹೇಳತಾರೆ.

**ಅನ್ನನೆನಿಸುವ ನೃಪಶುಗಳಿಗೆ ಹಿ ।**
**ರಣ್ಯಗರ್ಭಾಂಡದೊಳು ಸಂತತ ।**
**ತನ್ನನೀಪರಿಯಿಂದುಪಾಸನೆಗೈವ ಭಕುತರನ ॥**
**ಬನ್ನಬಡಿಸದೆ ಭವಸಮುದ್ರ ಮು ।**
**ಹೋನ್ನತಿಯ ದಾಟಿಸಿ ಚತುರ್ವಿಧ ।**
**ಅನ್ನಮಯನಾತ್ಮಪ್ರದರ್ಶನ ಸುಖವನೀವ ಹರಿ ॥ ೧೨ ॥**

ಅನ್ನಾಂತರ್ಗತ ಭಗವದುಪಾಸನಾ ಮಾಡುವವರಿಗೆ ಫಲವನ್ನ ಹೇಳತಾರೆ.

ನೃಪಶುಗಳಿಗೆ– ನೃ–ಮಾನುಷಾದಿಗಳಿಗೆ ಫಲರೂಪದಿಂದಲೂ, ಪಶುಗಳಿಗೆ ತೃಣಾದಿ ರೂಪದಿಂದಲೂ, ಅನ್ನನೆನಿಸುವ–ಪ್ರದ್ಯುಮ್ನ, ಅನಿರುದ್ಧ ರೂಪದಿಂದ 'ಅನ್ನ' ನೆನಿಸುತ್ತಾನೆ. ಚತುರ್ವಿಧ–ಪೂರ್ವೋಕ್ತ ನಾಲ್ಕು ವಿಧದೊಳು ವಾಸುದೇವಾದಿ ನಾಲ್ಕು ರೂಪಗಳಿಂದ ಅಂತರ್ಗತನಾಗಿದ್ದು, ಅನ್ನಮಯ–ಆಯಾ 'ಅನ್ನ'ನಾಮದಿಂದ ಪ್ರಚುರನಾಗಿ, ಆತ್ಮಪ್ರದರ್ಶನ–ದೇವತೆಗಳಿಗೆ, ಪಿತೃಗಳಿಗೆ ಪೂರ್ವೋಕ್ತ ಪ್ರಕಾರ ವಾಸುದೇವ,

ಸಂಕರ್ಷಣ, ಆತ್ಮಪ್ರದರ್ಶನ ಎಂದರೆ ಆಯಾ ದೇವತೆಗಳ ಅಂಶವನ್ನ ಅಂಶಿಯಲ್ಲಿ ಮೇಳನ ಮಾಡಿಸಿ, ಸುಖವನೀವ ಹರಿ–ಸುಖ ಕೊಡತಾನೆ. ಮನುಷ್ಯ, ಪಶು, ಮೃಗಾದಿಗಳಿಗೆ ಫಲ ತೃಣಾದಿ ಭಕ್ಷಣ ದ್ವಾರಾ, ದೇಹಕ್ಕೆ ಉಪಚಯಮಾಡಿ ಸುಖ ಕೊಡತಾನೆ. ಹಿರಣ್ಯ ಗರ್ಭಾಂಡದೊಳು–ಈ ಬ್ರಹ್ಮಾಂಡದಲ್ಲಿ ದಾರಾದರೆ, ಸಂತತ–ನಿರಂತರದಲ್ಲೂ, ತನ್ನನೀ ಪರಿಯಿಂದ–ಪರಮಾತ್ಮನಾದ ತನ್ನ ಈ ಪ್ರಕಾರವಾಗಿ, ಉಪಾಸನೆಗೈವ–ವಿಸ್ಮೃತಿ ಇಲ್ಲದೆ ಉಪಾಸನಾ ಮಾಡತಕ್ಕ, ಭಕುತರನ–ಮಾಹಾತ್ಮ್ಯಜ್ಞಾನಪೂರ್ವಕ ಸುದೃಢ ಸ್ನೇಹ ಯುಕ್ತರಾದ ಭಕ್ತರನ್ನ, ಬನ್ನಬಡಿಸದೆ–ಸಂಸಾರದುಃಖದಿಂದ ಆಯಾಸಪಡಿಸದೆ ಸುಜ್ಞಾನ ವನ್ನು ಕೊಟ್ಟು, ತದ್ದ್ವಾರಾ, ಭವಸಮುದ್ರ–ಸಂಸಾರಾಖ್ಯ ಸಮುದ್ರವನ್ನ, ದಾಟಿಸಿ– ದಾಟಿಸುವನಾಗಿ, ಮಹೋನ್ನತಿಯ–ಅತ್ಯಂತ ಉನ್ನತವಾದ, ಅಚಂಚಲವಾದ, ಐಶ್ವರ್ಯ ರೂಪವಾದ ಭಕ್ತಿಯನ್ನ ಕೊಟ್ಟು ತನ್ನ ರೂಪವನ್ನ ಅಪರೋಕ್ಷದಿಂದ ಪ್ರದರ್ಶನ ಮಾಡಿ ಶ್ರೀಹರಿ, ಕ್ರಮಾತ್ ಲಿಂಗಭಂಗ ಐದಿಸಿ, ಸ್ವರೂಪಸುಖ ಅಭಿವ್ಯಕ್ತಿ ಮಾಡಿಕೊಡತಾನೆ. ಮತ್ತು ಸ್ವಾಹಾ, ಸ್ವಧಾ, ಫಲ, ತೃಣ ಈ ನಾಲ್ಕು ವಿಧ ಆಹಾರಗಳಿಂದ ಪಿತೃಗಳ ತೃಪ್ತಿ ಪಡಸತಾನೆ. ಬ್ರಾಹ್ಮಣರಲ್ಲಿ ಆವಾಹಿತರಾದ ಪಿತೃಗಳು ಮೂರು ಪ್ರಕಾರದವರು, ಅಂಶ ಭೂತರಾದವರು. ಈ ಅಂಶಕ್ಕೆ ಅಂಶಿ ಬ್ಯಾರೆ ಇರೋದಾಗಿ ಅದೆ. ಬ್ಯಾರೆ ಇರುವ ಅಂಶೀಭೂತರಾದ ಪಿತೃಗಳು, ದೇವತೆಗಳು ಎಂತಲೂ, ಪಿತೃದೇವತೆಗಳು ಎಂತಲೂ, ಮಾನುಷರೆಂತಲೂ ಮೂರು ಪ್ರಕಾರದವರು. ಈ ಪಿತೃಕಾರ್ಯದಿಂದ ಮೂಲರೂಪ ದಿಂದ ಇರುವ ಪೂರ್ವೋಕ್ತರಾದ ಪಿತೃಗಳಿಗೆ ಸ್ವಾಹಾಖ್ಯ ಅನ್ನದಿಂದ ದೇವಸಾಂಕೇತ ಪಿತೃಗಳಿಗೂ, ಸ್ವಧಾಖ್ಯ ಅನ್ನದಿಂದ ಪಿತೃದೇವಾಖ್ಯ ಪಿತೃಗಳಿಗೂ, ಫಲಾಖ್ಯ ಅನ್ನದಿಂದ, ನಿರಂಶರಾದ ಮಾನುಷ ದೇಹ ಧರಿಸಿರುವ ಪಿತೃಗಳಿಗೂ, ತೃಣಾಖ್ಯ 'ಅನ್ನ'ದಿಂದ ತನ್ನ ಪಿತೃಗಳು ಪಶುಗಳಾಗಿ ಜನಿಸಿದ್ದರೆ, ತೃಣಾಖ್ಯ 'ಅನ್ನ'ದಿಂದಲೂ, ಅನ್ನದಲ್ಲಿ ಈ ನಾಲ್ಕು ವಿಧ ಅನ್ನವನ್ನು ಅಲ್ಲಲ್ಲಿ ವಿಶೇಷಾಕಾರವಾಗಿ ಅವರವರಿಗೆ ಘಟನ ಮಾಡಿಕೊಟ್ಟು ತೃಪ್ತಿ ಪಡಿಸೋಣವಲ್ಲದೆ, ಆ ದಿನದಲ್ಲಿ ಒಂದು ವಿಚಿತ್ರವಾದ ಆನಂದವನ್ನುಂಟುಮಾಡಿ ಕೊಡ ತಾನೆ. ದೇವತೆಗಳು, ಪಿತೃದೇವತೆಗಳು, ಮಾನುಷತ್ವೇನ ಅವತಾರ ಮಾಡಿದ ಕಾಲದಲ್ಲಿ ಸಂತಾನಗಳ ಪಡದು, ದೇವತೆಗಳು ಪಿತೃಗಳಾಗತಾರೆ. ಅಂಥ ಪಿತೃಗಳು ಇದ್ದಲ್ಲಿ, ಸ್ವಾಹಾ, ಸ್ವಧಾದಿಂದ ತೃಪ್ತಿ ಮತ್ತು ಅವರೇ ಮಾನುಷರಾಗಿ, ಪಶುಗಳಾಗಿ ಜನಿಸಿದ್ದಲ್ಲಿ, ಫಲತೃಣಾದಿಗಳಿಂದ ತೃಪ್ತಿ. ಇನ್ನು ದಾವ ಜನ್ಮ ಬಂದಿದ್ದರೂ ಸರಿಯೆ, ಆಯಾ ಜನ್ಮ ಗಳಿಗೆ ಯೋಗ್ಯವಾದ ಆಹಾರಗಳಿಂದ ತೃಪ್ತಿ : ಪ್ರಮಾಣ

"ಅಗ್ನೌ ಕರಣೇನ ದೇವಸ್ಥಾಃ ಸ್ವರ್ಗಸ್ಥಾಃ ವಿಪ್ರಭೋಜನೇ | ಯಮಸ್ಥಾಃ ಪಿಂಡದಾನೇನ ನರಕೇ ವಿಕಿರೇಣ ತು | ಉಚ್ಛಿಷ್ಟೇನ ಚ ಪೈಶಾಚಾಃ ಅಸುರಾ ಭೂರಿ ಭೋಜನಾತ್ || ದಕ್ಷಿಣೇನ ಮನುಷ್ಯಾದ್ಯಾಃ ಶ್ರಾದ್ಧೇ ಸಪ್ತ ವಿಧೀಯತೇ"

ಇದು ಅಂಶಾಂಶಿ ಎರಡರಲ್ಲೂ ಸಮನ್ವಯವೆಂದು ತಿಳಿಯಬೇಕು.

**ಮನವಚನಕಾಯುಗಳ ದೆಶೆಯಿಂ ।**
**ದನುದಿನದಿ ಬಿಡದಾಚರಿಸುತಿ ।**
**ಪ್ಪನುಚಿತೋಚಿತ ಕರ್ಮಗಳ ಸದ್ಭಕ್ತಿಪೂರ್ವಕದಿ ॥**
**ಅನಿಳದೇವನೊಳಿಪ್ಪ ನಾರಾ ।**
**ಯಣಗಿದನ್ನವು ಎಂದು ಕೃಷ್ಣಾ ।**
**ರ್ಪಣವೆನುತ ಕೊಡೆ ಸ್ವೀಕರಿಸಿ ಸಂತೈಪ ಕರುಣಾಳು ॥ ೧೩ ॥**

ಸರ್ವಕರ್ಮಗಳ ಪರಮಾತ್ಮಗೆ ಅನ್ನತ್ವೇನ ಅರ್ಪಿಸಬೇಕೆಂದು ಹೇಳತಾರೆ.

ಮನವಚನಕಾಯುಗಳ ದೆಶೆಯಿಂದ–ಮನಸಾ, ವಾಚಾ, ಕಾಯೇನ ದೇಹೇಂದ್ರಿಯಾದಿಗಳಿಂದ, ಅನುದಿನದಿ–ಪ್ರತಿದಿನದಲ್ಲೂ, ಬಿಡದೆ ಆಚರಿಸುತಿಪ್ಪನ–ಕ್ಷಣಲವ ಕಾಲಗಳಲ್ಲಿ ಆಚರಣೆ ಮಾಡತಕ್ಕ, ಅನುಚಿತೋಚಿತ–ನಿಂದ್ಯಾನಿಂದ್ಯ, ಕರ್ಮಗಳ–ಈ ಉಭಯ ಕರ್ಮಗಳ, ಸದ್ಭಕ್ತಿ ಪೂರ್ವಕದಿ–ಮಾಹಾತ್ಮ್ಯ ಜ್ಞಾನಪೂರ್ವಕ ಸುದೃಢ ಸ್ನೇಹದಿಂದ ಅಹಂಜ್ಞಾನರಹಿತನಾಗಿ, ಬಿಂಬ ಕ್ರಿಯಾದ್ವಾರಾ ಪ್ರತಿಬಿಂಬಕ್ರಿಯಾ ಎಂದು ತಿಳದು, ಈ ಉಭಯ ಕರ್ಮಗಳ, ಅನಿಳದೇವನೊಳಿಪ್ಪ–ತನ್ನ ಹೃದಯಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತನಾದ, ನಾರಾಯಣಗೆ–ಶ್ರೀ ನಾರಾಯಣ ದೇವರಿಗೆ, ಇದು ಅನ್ನವು ಎಂದು–ಈ ಉಭಯವಿಧವಾದ ಕರ್ಮಗಳು 'ಅನ್ನ' ಎಂತ ಅನುಸಂಧಾನ ಮಾಡಿ, ಎಂದರೆ ಪರಮಾತ್ಮಗೆ ತನ್ನ ಸ್ವಾಖ್ಯಗಳು ತನಗೆ ಅನ್ನವಾಗಬೇಕೇ ಹೊರತು, ಅನ್ಯವಾದುವು ಅನ್ನವಾಗೋದಿಲ್ಲ. ಕರ್ಮಾಂತರ್ಗತ ಕರ್ಮಶಬ್ದವಾಚ್ಯವಾದ ತನ್ನ ರೂಪವೇ, ದೇಹಾಂತರ್ಗತ ತನ್ನ ಬಿಂಬರೂಪಿ ಪರಮಾತ್ಮಗೆ ಅನ್ನ ಎಂತ ಕರಿಸೋದಾಗತದೆ. ಇದೇ ಅನ್ನವೆಂದು ತಿಳಿದು, ಕೃಷ್ಣಾರ್ಪಣವೆನುತ–ವಾಚಾ "ಕೃಷ್ಣಾರ್ಪಣ"ವೆಂದು ಉಚ್ಚಾರ ಮಾಡುತ್ತ, ಕೊಡೆ–ಅರ್ಪಿಸಿದರೆ, ಕರುಣಾಳು–ದಯಾಳು ಆದ ಶ್ರೀ ನಾರಾಯಣ ದೇವರು, ಸ್ವೀಕರಿಸಿ–ತೆಗೆದುಕೊಂಡು, ಸಂತೈಪ–ಜ್ಞಾನಭಕ್ತ್ಯಾದಿಗಳು, ಐಶ್ವರ್ಯಾದಿಗಳ ಕೊಟ್ಟು ಸಂತೋಷಪಡಿಸತಾನೆಂದು ತಾತ್ಪರ್ಯ.

**ಏಳುವಿಧದನ್ನಪ್ರಕರಣವ ।**
**ಕೇಳಿ ಕೋವಿದರಾಸ್ಯದಿಂದಲಿ ।**
**ಆಲಸವ ಮಾಡದಲೆ ಅನಿರುದ್ಧಾದಿ ರೂಪಗಳ ॥**
**ಕಾಲಕಾಲದಿ ನೆನೆದು ಪೂಜಿಸು ।**
**ಸ್ಥೂಲಮತಿಗಳಿಗಿದನು ಪೇಳದೆ ।**
**ಶ್ರೀ ಲಕುಮಿವಲ್ಲಭನೆ ಅನ್ನಾದನ್ನ ಅನ್ನದನು ॥ ೧೪ ॥**

ಪೂರ್ವೋಕ್ತ ಏಳು ವಿಧ ಅನ್ನ ವಿಚಾರ ಹೇಳತಾರೆ.

ಏಳುವಿಧದನ್ನ–ಏಳುಪ್ರಕಾರ ಪಿತೃಗಳಿಗೆ ಕೊಡತಕ್ಕ ಅನ್ನವು. ಪಿತೃಗಳು ಮೃತರಾದ ನಂತರದಲ್ಲಿ, ಏಳು ಸ್ಥಾನವನ್ನ ಆಶ್ರಯ ಮಾಡಿ ಇರುತ್ತಾರೆ ; ಅದಕ್ಕೆ ಅಧಿಕವಾಗಿ ಸ್ಥಾನ ಆಶ್ರಯ ಮಾಡಿ ಇರೋದಿಲ್ಲ. ಈ ಏಳು ಸ್ಥಾನದೊಳಗೆ ತನ್ನ ಪಿತೃಗಳು ದಾವ ಸ್ಥಾನದಲ್ಲಿ ಇರ್ತಾರೋ ತಿಳಿಯದು. ಆದ್ದರಿಂದ ಏಳು ಪ್ರಕಾರ ಅನ್ನ ಕೊಟ್ಟರೆ, ಏಳು ಸ್ಥಾನದಲ್ಲಿ ಎಲ್ಲಿ ಇದ್ದರೂ ಅವರಿಗೇ ಸೇರೋದಾಗತದೆ. ಆದ್ದರಿಂದ ಏಳು ಪ್ರಕಾರ 'ಅನ್ನ' ಕೊಡಬೇಕು. ಆ ಏಳು ವಿಧ ದಾವದೆಂದರೆ ಹೇಳತಾರೆ :

೧. **" ಅಗ್ನೌಕರಣೇನ ದೇವಸ್ಥಾಃ "** ತನ್ನ ಪಿತೃಗಳು ದೇವತೆಗಳಾಗಿ ದೇವ ಲೋಕದಲ್ಲಿದ್ದರೆ, ಅವರಿಗೆ ಅಗ್ನೌಕರಣಾಖ್ಯ 'ಅನ್ನ'ದಿಂದ ತೃಪ್ತಿಯಾಗುತ್ತದೆ.

೨. **" ಸ್ವರ್ಗಸ್ಥಾಃ ವಿಪ್ರಭೋಜನೇ "** ತನ್ನ ಪಿತೃಗಳು ಸ್ವರ್ಗದಲ್ಲಿ ಇದ್ದರೆ, ಬ್ರಾಹ್ಮಣರ ಭೋಜನಾಖ್ಯ 'ಅನ್ನ'ದಿಂದ ಅವರಿಗೆ ತೃಪ್ತಿಯಾಗುತ್ತದೆ.

೩. **" ಯಮಸ್ಥಾಃ ಪಿಂಡದಾನೇನ "** ತನ್ನ ಪಿತೃಗಳು ಯಮಲೋಕದಲ್ಲಿ ಇದ್ದರೆ, ಪಿಂಡಪ್ರದಾನ ರೂಪವಾದ 'ಅನ್ನ'ದಿಂದ ಅವರಿಗೆ ತೃಪ್ತಿಯಾಗತದೆ.

೪. **" ನರಕೇ ವಿಕಿರೇಣತು "** ತನ್ನ ಪಿತೃಗಳು ನರಕಲೋಕದಲ್ಲಿ ಇದ್ದರೆ, ವಿಕಿರಾಖ್ಯ 'ಅನ್ನ'ದಿಂದ ಅವರಿಗೆ ತೃಪ್ತಿಯಾಗತದೆ.

೫. **" ಉಚ್ಛಿಷ್ಟೇನ ಚ ಪೈಶಾಚಾಃ "** ತನ್ನ ಪಿತೃಗಳು ಪೈಶಾಚರಾಗಿದ್ದರೆ, ಉಚ್ಛಿಷ್ಟಾನ್ನದಿಂದ (ಉಚ್ಛಿಷ್ಟಪಿಂಡ) ಅವರಿಗೆ ತೃಪ್ತಿ ಆಗತದೆ.

೬. **" ಅಸುರಾ ಭೂರಿಭೋಜನಾತ್ "** ತನ್ನ ಪಿತೃಗಳು ಅಸುರರಾಗಿದ್ದರೆ, ಭೂರಿಭೋಜನದಿಂದ ಅವರಿಗೆ ತೃಪ್ತಿ ಉಂಟಾಗುತ್ತದೆ.

೭. **" ದಕ್ಷಿಣೇನ ಮನುಷ್ಯಾದ್ಯಾಃ "** ತನ್ನ ಪಿತೃಗಳು ಮನುಷ್ಯರಾಗಿ ಜನಿಸಿದ್ದ ಕಾಲಕ್ಕೂ, ಅಥವಾ ದಾವ ಯೋನಿಯಲ್ಲಿ ಜನಿಸಿ ದಾವ ಜನ್ಮ ಬಂದಿದ್ದ ಕಾಲಕ್ಕೂ ದಕ್ಷಿಣಾಖ್ಯ 'ಅನ್ನ'ದಿಂದ ಅವರಿಗೆ ತೃಪ್ತಿ ಆಗತದೆ.

ಆದ್ದರಿಂದ " ಶ್ರಾದ್ಧೇ ಸಪ್ತ ವಿಧೀಯತೇ " ಎಂತ, ಶಾದ್ಧಕಾಲದಲ್ಲಿ ಈ ಪ್ರಕಾರ ಏಳು ವಿಧ 'ಅನ್ನ'ದಿಂದ ತೃಪ್ತಿ. ಈ ಏಳರಲ್ಲಿ ದಾವದೋ ಒಂದು ಸೇರತದೆ. ಅಥವಾ ಮೂರು ವಿಧ ಪಿತೃಗಳು ಬ್ಯಾರೆ ಬ್ಯಾರೆ ಮೂರು ಸ್ಥಾನದಲ್ಲಿ ಇದ್ದರೂ, ಮೂರು ವಿಧ ಅಂಶ ಸೇರತದೆ. ಉಳಿದದ್ದಕ್ಕೆ ಭಾಗಿಗಳಿಲ್ಲ. ಭಾಗಿಗಳು ಇಲ್ಲದಿದ್ದರೆ, ಪುಣ್ಯ, ಪಿತೃದೇವತೆಗಳಿಗೆ ಸೇರತದೆ. ಉಚ್ಛಿಷ್ಟಪಿಂಡದ ವಿಚಾರ ಏಳರಲ್ಲಿ ಅಂತರ್ಭೂತ, ಪ್ರತ್ಯೇಕವಲ್ಲ. ಇವೇ ಏಳು ವಿಧ ಅನ್ನಗಳು.

ಪ್ರಕರಣವ–ಇದರ ವಿಚಾರ ಬಹಳ ವಿಸ್ತಾರವಾಗಿ ಅದೆ. ಈ ವಿಷಯಗಳನ್ನ, ಆಲಸವ ಮಾಡದಲೆ–ಸಾವಕಾಶ ಮಾಡಥಾಂಗೆ ಅಶ್ರದ್ಧಾ ಮಾಡದೆ, ಕೋವಿದರ–ಇದರ ಮರ್ಮವನ್ನು ತಿಳಿದ ಜ್ಞಾನಿಗಳ, ಆಸ್ಯದಿಂದಲಿ–ಮುಖದಿಂದಲಿ, ಕೇಳಿ–ಶ್ರವಣಮಾಡಿ

ತಿಳಕೊಂಡು, ಅನಿರುದ್ಧಾದಿ ರೂಪಗಳ ಪೂರ್ವೋಕ್ತ ಪ್ರಕಾರ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ಮೂರು ರೂಪಗಳ, ಮೂರು ವಿಧ ಪಿತೃಗಳೊಳಗೂ, ಅನಿರುದ್ಧನ ಕರ್ತೃ, ಕರ್ಮ, ಕ್ರಿಯೆಗಳೊಳಗೂ, ಅಂತು ನಾಲ್ಕು ರೂಪಗಳ, ಕಾಲಕಾಲದಿ–ಶ್ರಾದ್ಧ ಮಾಡ ತಕ್ಕ ಪ್ರತಿಕಾಲದಲ್ಲೂ, ನೆನೆದು–ಪೂರ್ವೋಕ್ತ ತೊಂಭತ್ತಾರು ರೂಪಗಳ, ಅನಿರುದ್ಧಾದಿ ರೂಪಗಳ–ಉಭಯಪ್ರಕಾರವಾದ ರೂಪಗಳ ತಿಳಿದು, ಪೂಜಿಸು–ಭಾರತೀರಮಣಮುಖ್ಯ ಪ್ರಾಣಾಂತರ್ಗತನ್ನಾಗಿ ಪೂಜಿಸು. ಸ್ಥೂಲಮತಿಗಳಿಗೆ–ಅಲ್ಪರಾದ ಅಜ್ಞಾನಿಗಳಿಗೆ, ಪಂಡಿತಮಾನಿಗಳಿಗೆ, ಇದನು ಪೇಳದೆ–ಈ ವಿಚಾರವನ್ನು ಹೇಳಬ್ಯಾಡ. ಹೇಳದೇನೆ, ಶ್ರೀ ಲಕುಮಿವಲ್ಲಭನೆ–ಕಾಂತಿಸಂಪನ್ನರಾದ ಲಕ್ಷ್ಮೀದೇವಿಯರಿಗೆ ಪತಿಯಾದ ನಾರಾಯಣನೇ ಸಪ್ತಾನ್ನದಲ್ಲಿ, ಅನ್ನ–'ಅನ್ನ'ಶಬ್ದವಾಚ್ಯನಾಗಿದ್ದಾನೆ. ಅನ್ನ–ತನ್ನ ಸ್ವಾಖ್ಯ 'ಅನ್ನ'ವನ್ನ, ದನು–ಅಧಿಷ್ಠಾನಾಂತರ್ಗತನಾಗಿ ತನಗೆ ತಾನೇ ಕೊಡತಕ್ಕವ, ಅನ್ನಾದ–ಮತ್ತೊಂದು ಅಧಿಷ್ಠಾನಾಂತರ್ಗತನಾಗಿ ತನಗೆ ತಾನೇ ಭಕ್ಷಿಸತಕ್ಕವ. ಈ ಪ್ರಕಾರ ನಿಮಂತ್ರಿತ ಬ್ರಾಹ್ಮಣರ ಭುಕ್ತಾನ್ನಗತ ದ್ವಾರಾ ತನ್ನ ಸ್ವಾಖ್ಯ 'ಅನ್ನ'ವನ್ನ ಭೋಜನಮಾಡ ತಕ್ಕವ. ಈ ಪ್ರಕಾರ ಅನುಸಂಧಾನದಿಂದ ಪಿತೃಕಾರ್ಯದಲ್ಲಿ ಚಿಂತನಮಾಡಬೇಕು ಎಂತ ತಾತ್ಪರ್ಯ.

**ವಿಶೇಷಾರ್ಥ :**– ಏಳು ವಿಧ 'ಅನ್ನ'ವೆಂದರೆ, ಪ್ರಕಾರಾಂತರ ಅರ್ಥ :– ದೇವ, ಪಿತೃ, ಮಾನುಷ, ಪಶುಗಳು ಈ ನಾಲ್ಕು ವಿಧ ಜೀವರಿಗೆ ಮನೋವಾಕ್ಕಾಯವೆಂಬ ಮೂರು ವಿಧದಿಂದ ಆದ ಮೂರು ವಿಧ ಸರ್ವಕರ್ಮಗಳು ದೇವರಿಗೆ ಅನ್ನ ಎಂತ ಹೇಳುವ ಬೃಹದಾರಣ್ಯಕೋಪನಿಷದ್ಭಾಷ್ಯದ ಅರ್ಥವು. 'ಅನ್ನ' ಎಂದರೆ, ಉಪಜೀವ್ಯ ಆಶ್ರಯ ನಾದ್ದರಿಂದ ಅನ್ನ ಎಂತ ಹೆಸರು. ಅನ್ನಾದ ಎಂದರೆ, ಜಠರಾಗ್ನಿಯಲ್ಲಿದ್ದು ಅನ್ನಪರಿ ಪಾಕಾದಿಗಳ ಮಾಡಿ ಸ್ವರಸ ಕೊಳ್ಳುವದ್ದರಿಂದ 'ಅನ್ನಭೋಕ್ತೃ' ಎಂದು ಹೆಸರುಳ್ಳವನು. ಎಲ್ಲರಿಗೂ ತನಗೂ ಸಹ ಮೇಲೆ ಹೇಳಿದ 'ಅನ್ನ' ಕಲ್ಪಿಸಿಕೊಡುವದ್ದರಿಂದ ಅನ್ನ ಕೊಡುವ ತಾನು **'ಅನ್ನದ'** ಎನಿಸಿಕೊಂಬೋನು.

**ಎಂದರಿತು ಸಪ್ತಾನ್ನಗಳ ದೈ ।**
**ನಂದಿನದಿ ಮರೆಯದೆ ಸದಾ ಗೋ ।**
**ವಿಂದಗರ್ಪಿಸು ನಿರ್ಭಯದಿ ಮಹಯಜ್ಞವಿದುಯೆಂದು ॥**
**ಇಂದಿರೇಶನು ಸ್ವೀಕರಿಸಿ ದಯ ।**
**ದಿಂದ ಬೇಡಿಸಿಕೊಳದೆ ತವಕದಿ ।**
**ತಂದು ಕೊಡುವನು ಪರಮಮಂಗಳ ತನ್ನ ದಾಸರಿಗೆ ॥ ೧೫ ॥**

ಇಂಥಾ ಅನುಸಂಧಾನದಿಂದ ಪಿತೃಯಜ್ಞ ಮಾಡಿದವರಿಗೆ ಮಂಗಳ ಕೊಡುತ್ತಾ ನೆಂದು ಹೇಳತಾರೆ.

ಎಂದರಿತು–ಈ ಪ್ರಕಾರ ಸಪ್ತಾನ್ನಗಳನ್ನ ಪೂರ್ವೋಕ್ತ ಪ್ರಕಾರ ಅರಿತವನಾಗಿ, ಸಪ್ತಾನ್ನಗಳ–ಏಳು ವಿಧ 'ಅನ್ನ'ಗಳ, ದೈನಂದಿನದಿ–ಮಾನುಷರಿಗೆ ಒಂದು ವರುಷ, ಪಿತೃಗಳಿಗೆ ಒಂದು ದಿನ ಸಾಂಕೇತವಾದ, ಇಂಥಾ ಪ್ರತಿದಿನದಲ್ಲೂ ಮಾಡತಕ್ಕ ಪಿತೃಕರ್ಮಾಖ್ಯ ಯಜ್ಞದಲ್ಲಿ, ಮರೆಯದೆ–ಅನುಸಂಧಾನಕ್ರಮಗಳ ಮರಿಯದೆ, ಸದಾ ಗೋವಿಂದಗರ್ಪಿಸು–ಅವಿಯೋಗನಾಗಿ ಸರ್ವದಾ ಇರತಕ್ಕ ವೇದಪ್ರತಿಪಾದ್ಯನಾದ ಶ್ರೀ ನಾರಾಯಣಗೆ ಅರ್ಪಿಸೋವನಾಗು. ಆ ಪರಮಾತ್ಮ, ಮಹಯಜ್ಞವಿದು ಎಂದು–ಇದು ದೊಡ್ಡದಾದ ಯಜ್ಞ ಎಂತ ತಿಳಿದು, ಇಂದಿರೇಶನು–ಲಕ್ಷ್ಮೀಪತಿಯಾದ ಪರಮಾತ್ಮನು, ಸ್ವೀಕರಿಸಿ–ತೆಗೆದುಕೊಂಡವನಾಗಿ, ದಯದಿಂದೆ–ಸಮರ್ಪಣೆ ಮಾಡಿದ ಅಧಿಕಾರಿ ಮ್ಯಾಲೆ ಅಂತಃಕರಣದಿಂದ ಯುಕ್ತನಾಗಿ, ಬೇಡಿಸಿಕೊಳದೆ–ಅಧಿಕಾರಿಯ ಪ್ರಾರ್ಥನಾ ಇಲ್ಲದೆ, ನಿರ್ಭಯದಿ–ವಿಷಯಾದಿಗಳ ಭಯದಿಂದ ರಹಿತನ್ನಾಗಿ ಮಾಡಿ, ತವಕದಿ–ಅತ್ಯಂತ ಶ್ರದ್ಧಾದಿಂದ, ಅಜ್ಞಾನಾದಿಗಳ ಪರಿಹರಿಸಿ ಜ್ಞಾನ ಅಭಿವ್ಯಕ್ತಿ ಮಾಡಿ, ಪರಮಮಂಗಳ–ಉತ್ತಮವಾದ ಮಂಗಳಸಾಂಕೇತವಾದ ಆನಂದವನ್ನ ತನ್ನ ದಾಸರಿಗೆ–ತನ್ನ ಭಕ್ತರಿಗೆ, ತಂದುಕೊಡುವನು–ಅಜ್ಞಾನಾದಿಗಳ ಪರಿಹರಿಸಿ ಜ್ಞಾನ ಅಭಿವ್ಯಕ್ತಿಮಾಡಿ ತಂದುಕೊಡೋವನಾಗತಾನೆಂತ ತಾತ್ಪರ್ಯ.

**ಸೂಜಿ ಕರದಲಿ ಪಿಡಿದು ಸಮರವ ।**
**ನಾ ಜಯಿಸುವೆನು ಎಂಬ ನರನಂ ।**
**ತೀ ಜಗತ್ತಿನೊಳುಳ್ಳ ಅಜ್ಞಾನಿಗಳು ನಿತ್ಯದಲಿ ॥**
**ಶ್ರೀ ಜಗತ್ಪತಿ ಚರಣಯುಗಳಸ ।**
**ರೋಜ ಭಕ್ತಿಜ್ಞಾನಪೂರ್ವಕ ।**
**ಪೂಜಿಸದೆ ಧರ್ಮಾರ್ಥಕಾಮವ ಬಯಸಿ ಬಳಲುವರು ॥ ೧೬ ॥**

ಶ್ರೀ ದೇವರ ಪೂಜಿಸದೆ ಧರ್ಮಾರ್ಥಕಾಮಗಳ ಬಯಸತಾರೆ ಎಂತ ಹೇಳತಾರೆ.

ಸೂಜಿ ಕರದಲಿ ಪಿಡಿದು–ಆಯುಧ ವಿಶೇಷವಾದ ಒಂದು ಸೂಜಿಯನ್ನು ಕೈಯಲ್ಲಿ ಹಿಡಿದುಕೊಂಡವನಾಗಿ, ಸಮರವ–ಯುದ್ಧಾಪೇಕ್ಷಿಯಾಗಿ ಬಹು ಸೇನಾ ಸಂಗಡ ಬಂದಿರುವ ಪ್ರತಿವಾದಿಯ, ನಾ ಜಯಿಸುವೆನು–ನಾನು ಜೈಸತೇನೆ ಎಂತ, ಎಂಬ ನರನಂತೆ–ಅನತಕ್ಕ ಮನುಷ್ಯನೋಪಾದಿಯಲ್ಲಿ, ಈ ಜಗತ್ತಿನೊಳುಳ್ಳ–ಈ ಭೂಮಿಯಲ್ಲಿ ಇರತಕ್ಕ, ಅಜ್ಞಾನಿಗಳು–ಭಗವದ್ವಿಷಯಕವಾದ, ಜ್ಞಾನರಹಿತರಾದ, ಮೂಢರು, ನಿತ್ಯದಲಿ–ಪ್ರತಿದಿನದಲ್ಲೂ (ಯುದ್ಧಸನ್ನದ್ಧರಾದ ಶತ್ರುಜನಗಳೋಪಾದಿಯಲ್ಲಿ ಸನ್ನದ್ಧರಾಗಿ ಇರತಕ್ಕ ಪಾಪಗಳೆಂಬೋ ಸೇನೆಗಳ ಜೈಸತಕ್ಕ ಮಹಾಯುದ್ಧ ಸದೃಶವಾದ), ಶ್ರೀ ಜಗತ್ಪತಿ–ಕಾಂತಿಸಂಪನ್ನ, ಜಗತ್ತಿಗೆ ಸ್ವಾಮಿಯಾದ ಪರಮಾತ್ಮನ, ಚರಣಯುಗಳಸರೋಜ–ಪಾದದ್ವಯವೆಂಬ ಕಮಲವೆಂಬ ಆಯುಧವನ್ನ, ಭಕ್ತಿಜ್ಞಾನಪೂರ್ವಕ–ಜ್ಞಾನ, ಭಕುತಿ, ವೈರಾಗ್ಯ ಪೂರ್ವಕ ಭಜನಾ ಎನತಕ್ಕದ್ದರಿಂದ ಮಹಾ ಆಯುಧವನ್ನು, ಪೂಜಿಸದೆ–ಪೂಜಾ

ಮಾಡದೆ ಎಂದರೆ, [ಪೂಜಾದಿಗಳು ಮಾಡಿ ಮನವೆಂಬ ಕರದಲಿ ಆಯುಧವನ್ನ ಧರಿಸಿದರೆ ಪಾಪಗಳೆಂಬೋ ಸೇನೆಗಳ ಪರಾಜಯು ಐದಿಸಬಹುದು.] ಅದು ಬಿಟ್ಟು ಸೂಜಿಗೆ ಸಮಾನವಾದ ಪಿತೃಯಜ್ಞವೇನು, ಇನ್ನೂ ಅನೇಕ ಯಜ್ಞಗಳೇನು, ಸತ್ಕರ್ಮಗಳೇನು ಮಾಡಿ, ಇಂಥಾ ಆಯುಧವನ್ನ ಕರದಲ್ಲಿ ಧರಿಸಿ, ಪಾಪಗಳೆಂಬೋ ಸೈನ್ಯಗಳ ಜೈಸಿ ಸುಖ ಐದೋ ನಿಮಿತ್ತ, ಕಾಮುವ–ಸಕಾಮುರಾಗಿ, ಧರ್ಮ–ಪರಮಾತ್ಮನ ವಿಸ್ಮೃತಿ ಪೂರ್ವಕವಾದ ಧರ್ಮಗಳ ಮಾಡಿ, ಅರ್ಥ–ತಮ್ಮ ಮನೋಗತ ಪ್ರಯೋಜನ ಸಿದ್ಧಿ ಆಗಬೇಕೆಂದು, ಬಯಸಿ–ಅಪೇಕ್ಷಿಸಿ, ಬಳಲುವರು–ಅಪೇಕ್ಷೆ ಸಿದ್ಧಿ ಆಗದೆ ಬಲಿಷ್ಠವಾದ ಪಾಪಗಳೆಂಬೊ ಸೈನ್ಯಗಳಿಂದ ಪೆಟ್ಟು ತಿಂದು, ಸೂಜಿಗಳೆಂಬ ಯಜ್ಞಯಾಗಾದಿ ಸತ್ಕರ್ಮಾಖ್ಯ ಆಯುಧಗಳು ಪ್ರಯೋಜನರಹಿತಗಳಾಗಿ ನಾನಾವಿಧ ಕ್ಲೇಶಗಳಿಂದ ಶ್ರಮಿಸೋವರಾಗತಾರೆ. ಏವಂ ಸಮ್ಮೇಳನೇ ಪರಮಾತ್ಮನ ಅಂತರ್ಗತತ್ವ ತಿಳಿದು ಪರಮಾತ್ಮನ ಸ್ಮೃತಿಪೂರ್ವಕ ಕರ್ಮಗಳ ಮಾಡಿದವಗೆ ಇಷ್ಟ ಸಿದ್ಧಿ, ಪಾಪಗಳ ಜಯಿ ಸೋಣವಾಗತದೆ. ತದ್ವ್ಯತಿರಿಕ್ತ ಅಹಂ ಮಮತಾದಿಗಳಿಂದ ಏನು ಸತ್ಕರ್ಮ ಮಾಡಿ ದರೂ ನಿಷ್ಫಲವಾಗಿ, ಇಹದಲ್ಲಿ ಸುಖವಿಲ್ಲದೆ ಪಾರತ್ರಿಕದಲ್ಲಿ ದುಃಖಿತನಾಗತಾನೆ.

**ಶಕಟಭಂಜನ ಸಕಲ ಜೀವರ ।**
**ನಿಕಟಗನು ತಾನಾಗಿ ಲೋಕಕೆ ।**
**ಪ್ರಕಟನಾಗದೆ ಸಕಲಕರ್ಮವ ಮಾಡಿ ಮಾಡಿಸುತ ॥**
**ಅಕುಟಿಲಾತ್ಮಕ ಭಕುತ ಜನರಿಗೆ ।**
**ಸುಖದನೆನಿಸುವ ಸರ್ವಕಾಲದಿ ।**
**ಅಕಟಕಟ ಈತನ ಮಹಾಮಹಿಮೆಗಳಿಗೇನೆಂಬೆ ॥ ೧೭ ॥**

ಸಕಲ ಕರ್ಮಗಳು ಬಿಂಬಕ್ರಿಯಾ ದ್ವಾರಾ ಆಗತವೆ ಎಂದು ಹೇಳತಾರೆ.

ಶಕಟಭಂಜನ–ಶಕಟಾಸುರನ ಸಂಹಾರ ಮಾಡಿದ ಶ್ರೀ ಕೃಷ್ಣ, ಸಕಲ ಜೀವರ– ಸಮಸ್ತ ತ್ರಿವಿಧ ಪ್ರಾಣಿಗಳ, ನಿಕಟಗನು–ಜೀವಾಂತರ್ಗತ, ದೇಹಾಂತರ್ಗತನಾಗಿ ಜೀವ ದೇಹಗಳಿಗೆ ಅತ್ಯಂತ ಸಮೀಪನು, ಆಗಿ–ಆದವನಾಗಿ, ಲೋಕಕೆ–ತ್ರಿವಿಧ ಜೀವರಿಗೆ ಅಪಕ್ವದಶಾದಲ್ಲಿ, ಪ್ರಕಟನಾಗದೆ–ಪ್ರತ್ಯಕ್ಷನಾಗದೆ ಇರೋಣ ಎಂಬುದು, ತ್ರಿವಿಧರಿಗೂ ಸಮ. ಪಕ್ವದಶಾದಲ್ಲಿ ಮುಕ್ತಿ ಯೋಗ್ಯರಿಗೆ ಪ್ರತ್ಯಕ್ಷನಾಗತಾನೆ; ಭಗವದ್ದ್ವೇಷಿಗಳಾದ ತದನ್ಯ ಉಭಯರಿಗೆ, ಪ್ರತ್ಯಕ್ಷನಾಗೋದಿಲ್ಲ. ಇವರಿಗೆ ದಾವಾಗ್ಯೂ ಪ್ರತ್ಯಕ್ಷನಲ್ಲ. ತ್ರಿವಿಧರಿಗೆ ಅಪಕ್ವದೆಶೆಯಲ್ಲಿ ಪ್ರಕಟನಾಗದೆ ಇದ್ದು, ತಾನು–ಪರಮಾತ್ಮನಾದ ತಾನು, ಕರ್ಮಮಾಡೋದಕ್ಕೆ ನಿಮಿತ್ತಕಾರಣವಾದ ಸ್ಥೂಲ ದೇಹದಲ್ಲಿ ದೇಹಾಕಾರನಾಗಿ, ಜೀವಗೆ ಬಿಂಬನಾಗಿ ಇದ್ದು ಎಂದರೆ, ಅತ್ಯಣುವಾದ ಜೀವ "ಅಂಗಾರೇ ವಹ್ನಿಮಿವ ಜೀವಂ ನಿವೇಶ್ಯ" ಎಂಬ ಪ್ರಮಾಣಾನುಸಾರ ಬೊಗ್ಗಿನಲ್ಲಿ (ಇದ್ದಿಲು) ಅಗ್ನಿ ಪ್ರವೇಶವಾಗಿ ತದಾಕಾರದಿಂದ ಇದ್ದಂತೆ, ತದ್ವತ್ ಸ್ಥೂಲ ದೇಹದಲ್ಲಿ ಜೀವ, ತದಾಕಾರದಿಂದ

ಸ್ಥೂಲಾತ್ಮನಾ ಪ್ರಕಾಶತೋ ವ್ಯಾಪ್ತನಾಗಿ ಇದ್ದಾನೆ. ಈ ದೇಹಾಕಾರನಾದ ಜೀವನಲ್ಲಿ ತದಾಕಾರದಿಂದ, ಜೀವಾಂತರ್ಗತನಾದ, ಅವಿಯೋಗನಾದ ಬಿಂಬ, ತಾನೂನೂ ಜೀವನ ಸಂಗಡ ಅಂಶದಿಂದ ಹೊರಟು ದೇಹಾಕಾರನಾದ ಜೀವನದಲ್ಲಿ, ತದಾಕಾರನಾಗಿ ಬಿಂಬನಾಗಿ ಇದ್ದಾನೆ. ಸ್ಥೂಲದೇಹಕ್ಕೆ ಜೀವ, ಬಿಂಬ. ಜೀವಗೆ, ಪರಮಾತ್ಮ ಬಿಂಬ. ಈ ಪ್ರಕಾರ ಸ್ಥೂಲದೇಹಗತನಾದ ವ್ಯಾಪ್ತಜೀವಗೆ ಬಿಂಬನಾಗಿ, ಸಕಲ ಕರ್ಮವ– ದೇಹೇಂದ್ರಿಯಾದಿಗಳಿಂದ, ಸಕಲ ಕರ್ಮ, ಪ್ರಾಣಿಗಳು ಮಾಡಬೇಕಾದರೆ (ಕರ್ಮಗಳ), ಮಾಡಿ–ಬಿಂಬರೂಪವಾದ, ಜೀವಾಂತರ್ಗತವಾದ ತನ್ನ ಅವಯವಗಳ ಚಲನಮಾಡಿ ಇಂಥಾ ತನ್ನ ಕ್ರಿಯಾದ್ವಾರಾ, ಮಾಡಿಸುತ–ತನಗೆ ಪ್ರತಿಬಿಂಬನಾದ, ವ್ಯಾಪ್ತನಾದ, ಜೀವನ ಕ್ರಿಯಾ, ತದ್ದ್ವಾರಾ ಜೀವಗೆ ಪ್ರತಿಬಿಂಬವಾದ ಸ್ಥೂಲದೇಹದ್ವಾರಾ ಈ ರೀತ್ಯಾ ಸಕಲ ಕರ್ಮಗಳ ಮಾಡಿಸುತ್ತಾ, ಅಕುಟಿಲಾತ್ಮಕ–ಸ್ವರೂಪ ಸ್ವಭಾವದಲ್ಲಿ ಅನಾದಿಯಿಂದ ಮಿಶ್ರಜ್ಞಾನ, ಮಿಥ್ಯಾಜ್ಞಾನರೂಪವಾದ ಕುಟಿಲರಹಿತರಾಗಿ ತಾರತಮ್ಯ, ಪಂಚಭೇದ ಹರಿ ಸರ್ವೋತ್ತಮನೆಂಬ ನಿಶ್ಚಯ ಜ್ಞಾನದಿಂದ, ಪ್ರಚುರಸ್ವಭಾವರಾದ, ಭಕುತ ಜನರಿಗೆ–ತನ್ನಲ್ಲಿ ಸರ್ವೋತ್ತಮತ್ವೇನ ಭಕ್ತಿ ಮಾಡತಕ್ಕ ಭಕ್ತ ಜನರಿಗೆ, ಸುಖದ ನೆನಿಸುವ–ಸ್ವರೂಪ ಸುಖ ವ್ಯಕ್ತಮಾಡಿ ಕೊಡತಕ್ಕವನು, ಎಂದು ಅನಿಸೋವನಾಗುತ್ತಾನೆ. ತದನ್ಯರಿಗೆ ಇದೇ ಪರಮಾತ್ಮನೇ ಬಿಂಬನಾದರೂ, ಇವರು ದುಃಖ ಸ್ವರೂಪಿಗಳಾದ್ದರಿಂದ, ದುಃಖ ಕೊಡೋವನಾಗುತ್ತಾನೆ (ಲಿಂಗ ಭಂಗಾನಂತರ), ಎಂತ ತಾತ್ಪರ್ಯ. ತತ್ಪೂರ್ವದಲ್ಲಿ ಕರ್ಮವಶಾತ್ ತ್ರಿವಿಧರಿಗೆ ಸುಖದುಃಖಗಳ ಕೊಡತಾ ಇರತಾನೆ. ಸರ್ವಕಾಲದಿ–ಸರ್ವ ದೇಶ ಕಾಲಗಳಲ್ಲೂ, ಅಪರಿಚ್ಛಿನ್ನ ವ್ಯಾಪ್ತನಾದ, ಈತನ–ಈ ಗುಣಪೂರ್ಣನಾದ ಶ್ರೀ ಪರಮಾತ್ಮನ, ಅಕಟಕಟ–ಆಶ್ಚರ್ಯ, ಆಶ್ಚರ್ಯಕರವಾದ, ಮಹಾಮಹಿಮೆಗಳಿಗೆ–ಉತ್ಕೃಷ್ಟವಾದ ಮಹಾತ್ಮೆಗಳಿಗೆ ಏನೆಂಬೆ–ಏನಂತ ಹೇಳಲಿ.

**ತಾ||** ಅಂದರೆ, ರಮಾ ಬ್ರಹ್ಮಾದಿಗಳಿಗೆ ಆಶ್ಚರ್ಯಗೊಳಿಸತಕ್ಕ ಮಹಾಮಹಿಮ ಎಂತ ಅರ್ಥ. ಈ ಪ್ರಕಾರ ದೇಹೇಂದ್ರಿಯಾದಿಗಳಿಂದ ಮಾಡಿಸುವ ಕರ್ಮಗಳಲ್ಲಿ, ವಿಧಿ ದಾವದು, ನಿಷೇಧ ದಾವುದು, ವಿಧಿ ಕರ್ಮಗಳೇ ಮಾಡಿಸು, ನಿಷೇಧ ಕರ್ಮ ಮಾಡಿಸಬ್ಯಾಡ ಎಂತ (ತತ್ತ್ವಾಭಿಮಾನಿ ದೇವತೆಗಳಿಗೆ) ಆಜ್ಞಾ ಮಾಡತಕ್ಕ, ಪರಮಾತ್ಮನಿಗಿಂತಲೂ ಉತ್ತಮರಾದ ಪ್ರಭುಗಳು ದಾರೂ ಇಲ್ಲವಾದ ಪ್ರಯುಕ್ತ, ಉಭಯಕರ್ಮಗಳೂ ಆಚರಿಸಬೇಕು. ದಾವಾಗಾದರೆ ತನ್ನ ಕ್ರಿಯಾ ದ್ವಾರಾ, ಪ್ರತಿಬಿಂಬಕ್ರಿಯಾ ಅನುಸಂಧಾನವನ್ನ ತಂದುಕೊಟ್ಟು ಅಹಂ ಮಮತಾದಿಗಳ ಬಿಡಸತಾನೋ, ಆಗ್ಗೆ ಇವನ್ನ ನಿರ್ಲಿಪ್ತನ್ನ ಮಾಡಿ, ಎಲ್ಲಾ ಪುಣ್ಯಗಳಾಗಿ ಮಾಡತಾನೆ ಎಂದು ತಾತ್ಪರ್ಯ.

**ಶ್ರೀ ಲಕುಮಿವಲ್ಲಭನು ವೈಕುಂ ।**
**ಠಾಲಯದಿ ಪ್ರಣವ ಪ್ರಕೃತಿ ಕೀ ।**
**ಲಾಲಜಾಸನಮುಖ್ಯ ಚೇತನರೊಳಗೆ ನೆಲೆಸಿದ್ದು ॥**

*

**ಮೂಲಕಾರಣ ಅಂಶನಾಮದಿ ।**
**ಲೀಲೆಗೈಸುತ ತೋರಿಕೊಳ್ಳದೆ ।**
**ಪಾಲಿನೊಳು ಘೃತವಿದ್ದತೆರದಂತಿಪ್ಪ ತ್ರಿಸ್ಥಳದಿ॥ ೧೮ ॥**

ಜೀವಾಂತರ್ಗತ, ದೇಹಾಂತರ್ಗತ ಪರಮಾತ್ಮನ ವಿಚಾರ ಹೇಳತಾರೆ.

ವೈಕುಂಠ-ಕಾಲಕ್ರಮುದಲ್ಲೂ, ಅನಾದ್ಯನಂತ ಕಾಲದಲ್ಲೂ, ನಿತ್ಯವಾದ ನಾಶರಹಿತ ವಾದ ವೈಕುಂಠ ಲೋಕದಲ್ಲಿ ವಿದ್ಯಮಾನವಾದ, ಶ್ರೀ-ಲಕ್ಷ್ಮ್ಯಾತ್ಮಕವಾದ, ಲಕ್ಷ್ಮೀ ಸ್ವರೂಪ ಭೂತಗಳಾದ, ಆಲಯದಿ-ಲಕ್ಷ್ಮ್ಯಾತ್ಮಕ ಪ್ರದೇಶಗತ ಆಲಯದಲ್ಲಿ, ಲಕುಮಿ ವಲ್ಲಭನು-ಲಕ್ಷ್ಮೀಸಮೇತನಾಗಿ ಶ್ರೀ ನಾರಾಯಣ ದೇವರು ಇರೋವನಾಗಿ ಇದ್ದಾನೆ. ಇಲ್ಲಿ ಬ್ರಹ್ಮಾದಿಗಳ ಪ್ರವೇಶವಿಲ್ಲದ್ದು ಶಾಸ್ತ್ರಸಿದ್ಧವು. ಇದರಂತೆ, ಪ್ರಣವ-ಸರ್ವ ವೇದಗಳ, ಮಂತ್ರಗಳ ಅಭಿವ್ಯಕ್ತಿಗೆ ಕಾರಣವಾದ, ಮೂಲಭೂತವಾದ ಓಂಕಾರದಲ್ಲಿ, ಪ್ರಕೃತಿ-ಸ್ಥೂಲ ಸೃಷ್ಟಿಗೆ ಕಾರಣವಾದ ಮೂಲ ಜಡ ಪ್ರಕೃತಿಯಲ್ಲಿ, ಹಾಂಗೆ ಸೂಕ್ಷ್ಮ ಸೃಷ್ಟಿಗೆ ಕಾರಣವಾದ ಮೂಲಭೂತ ಅನಾದಿ ಲಿಂಗ ದೇಹಾಖ್ಯ ಪ್ರಕೃತಿಯಲ್ಲಿ, ಮುಖ್ಯ-ಜೀವೋತ್ತಮರಾದ, ಕೀಲಾಲಜಾಸನ-ಉದಕದಲ್ಲಿ ಉತ್ಪನ್ನವಾದ ಕಮಲವೇ ಆಸನವಾಗಿ ಉಳ್ಳ ಬ್ರಹ್ಮದೇವರು ಮೊದಲಾದ, ಚೇತನರೊಳಗೆ-ಚರಾಚರಾತ್ಮಕ ತ್ರಿವಿಧ ಜೀವರ ಸ್ವರೂಪ ದೇಹದ ಒಳಗೆ, ನೆಲೆಸಿದ್ದು-ರಮಾಸಹಿತ ತಾನುಮಾತ್ರ ಪೂರ್ವೋಕ್ತ ನಾಲ್ಕು ಸ್ಥಳಗಳಲ್ಲಿ ವಾಸವಾಗಿದ್ದು, ಮೂಲಕಾರಣ-ಚರಾಚರ ಸೃಷ್ಟಿಗೆ ಮೂಲಕಾರಣ ನಾದ ಪರಮಾತ್ಮ ನಾಲ್ಕು ಸ್ಥಾನಗಳಲ್ಲಿ, ಹಾಂಗೆ ಲಿಂಗದೇಹಾಖ್ಯ ಐದನೇ ಸ್ಥಾನದಲ್ಲಿ, ರಮಾಸಹಿತನಾಗಿ ಇದ್ದಾನೆ. ಬ್ರಹ್ಮ, ವಾಯ್ವಾದಿಗಳ ಪ್ರವೇಶವಿಲ್ಲ. ಇದರಲ್ಲಿ, ಅಂಶನಾಮದಿ-ಜೀವಾಂತರ್ಗತನಾದ ಮೂಲಕಾರಣನಾದ ಬಿಂಬ, ಜೀವನ ಪ್ರಕಾಶರೂಪ ವಾದ ಅಂಶ, ಸ್ಥೂಲ ದೇಹೇಂದ್ರಿಯಾದಿಗಳಲ್ಲಿ ತದಾಕಾರದಿಂದ ಪ್ರವೇಶವಾದದ್ದರಲ್ಲಿ ತಾನೂನೂ ಅಂಶದಿಂದ ಹೊರಟು, ಅಂಶ ಎಂತ ನಾಮದಿಂದ ಕರಿಸಿ, ಸ್ಥೂಲದೇಹಗತ ವ್ಯಾಪ್ತನಾದ ಜೀವನಲ್ಲಿ ಇದ್ದಾನೆ. ಹ್ಯಾಂಗೆ ಇದ್ದಾನೆ ಎಂದರೆ, ದೃಷ್ಟಾಂತ: ಪಾಲಿನೊಳು-ಕ್ಷೀರದಲ್ಲಿ, ಘೃತವು-ತುಪ್ಪವು, ಇದ್ದ ತೆರದಂತೆ-ಇದ್ದ ದೃಷ್ಟಾಂತದೋಪಾದಿ ಯಲ್ಲಿ, ತ್ರಿಸ್ಥಳದಿ-ತ್ರಿವಿಧ ಜೀವರ ಸ್ಥೂಲ ದೇಹದಲ್ಲಿ ವ್ಯಾಪ್ತರಾದ ಜೀವರಲ್ಲಿ, ಇಪ್ಪ-ಇರೋವನಾಗಿ ಇದ್ದಾನೆ. ಇದ್ದು, ಲೀಲೆಗೈಸುತ-ದೇಹದ ದ್ವಾರಾ ಜೀವರ ಕಡಿಯಿಂದ ಕರ್ಮರೂಪವಾದ ಆಟಗಳ ಆಡಿಸುತ್ತ, ತೋರಿಕೊಳ್ಳದೆ-ಪ್ರಾಣಿಗಳಿಗೆ ಕಾಣಿಸಿಕೊಳ್ಳದೆ ಹಾಲಿನಲ್ಲಿ ತುಪ್ಪ ಇದ್ದಂತೆ ಇರೋವನಾಗಿ ಇದ್ದಾನೆ, ಎಂತ ಭಾವವು.

**ಮೂರುಯುಗದಲಿ ಮೂಲರೂಪನು ।**
**ಸೂರಿಗಳ ಸಂತೈಸಿ ದಿತಿಯ ಕು ।**
**ಮಾರಕರ ಸಂಹರಿಸಿ ಧರ್ಮವನುಳುಹಬೇಕೆಂದು ॥**

**ಕಾರುಣಿಕ ಭೂಮಿಯೊಳು ನಿಜಪರಿ ।**
**ವಾರಸಹಿತವತರಿಸಿ ಬಹುವಿಧ ।**
**ತೋರಿದನು ನರವತ್ಪ್ರವೃತ್ತಿಯ ಸಕಲ ಚೇತನಕೆ ॥ ೧೯ ॥**

ಶ್ರೀ ಪರಮಾತ್ಮನು ತನ್ನ ಅವತಾರಗಳಲ್ಲಿ ಮಾನುಷರಂತೆ ವರ್ತಿಸಿದನೆಂದು ಹೇಳುತಾರೆ.

ಮೂರು ಯುಗದಲಿ–ಕೃತ, ತ್ರೇತ, ದ್ವಾಪರ ಈ ಮೂರು ಯುಗಗಳಲ್ಲಿ, ಮೂಲ ರೂಪನು–ಶ್ವೇತದ್ವೀಪಗತ ವಾಸುದೇವನಾದ ಮೂಲರೂಪಿ ಪರಮಾತ್ಮನು, ಕಾರುಣಿಕ–ಕರುಣಾಳುವಾದ, ಧರ್ಮ ಸಂಸ್ಥಾಪನ ಮಾಡೋದಕ್ಕೆ ಕಾರಣನಾದ ಶ್ರೀ ಪರಮಾತ್ಮ, ಸೂರಿಗಳ ಸಂತೈಸಿ–ಆಯಾ ಯುಗಗತ ಜ್ಞಾನಿಗಳ ಮೊರೆ ಕೇಳಿದವನಾಗಿ, ದಿತಿಯ ಕುಮಾರಕರ – ಧರ್ಮಕಾರ್ಯಗಳಿಗೆ ಪ್ರತಿಬಂಧಕರಾದ, ದಿತಿದೇವಿಯ ಪುತ್ರರಾದ ಭಗವದ್ದ್ವೇಷಿಗಳಾದ ಅಸುರರನ್ನ, ಸಂಹರಿಸಿ–ಸಂಹಾರಮಾಡಿ, ಧರ್ಮವನುಳುಹ ಬೇಕೆಂದು–ಧರ್ಮಸ್ಥಾಪನ ಮಾಡಬೇಕೆಂದು, ಭೂಮಿಯೊಳು–ಭರತಖಂಡವಾದ ಈ ಭೂಮಿಯಲ್ಲಿ, ನಿಜಪರಿವಾರಸಹಿತ–ತನ್ನ ಭಕ್ತರಾದ ದೇವತೆಗಳಿಂದ ಸಹಿತನಾಗಿ, ಅವತರಿಸಿ–ಮನುಷ್ಯನೋಪಾದಿಯಲ್ಲಿ ಅವತಾರಮಾಡಿ, ತನ್ನ ಸಚ್ಚಿದಾನಂದಾತ್ಮಕವಾದ ಶರೀರವನ್ನ ಪ್ರದರ್ಶನಮಾಡದೆ ಮನುಷ್ಯನ ಹಾಂಗೆ ತೋರಿ, ಬಹುವಿಧ–ನಾನಾಪ್ರಕಾರ ವಾಗಿ, ನರವತ್–ಪ್ರದರ್ಶನಮಾಡಿ ಶರೀರಕ್ಕೆ ಸಾಮರ್ಥ್ಯ ಎಷ್ಟೋ ಅಷ್ಟೇ ಪ್ರದರ್ಶನ ವಾಗುವಂತೆ ಮಾನುಷವತ್, ಪ್ರವೃತ್ತಿಯ–ತಾನು ವ್ಯಾಪಾರಗಳಿಂದ ಪ್ರವರ್ತಿಸಿ, ಅಂಥಾ ಪ್ರವೃತ್ತಿಯೇ, ಸಕಲ ಚೇತನಕೆ–ಸಮಸ್ತ ಪ್ರಾಣಿಗಳಿಗೆ, ತೋರಿದನು–ತೋರಿಸೋವ ನಾದನು. ಅಸುರರು ಹ್ಯಾಂಗೆ ಜ್ಞಾನಹೀನರೆಂದರೆ, ದೇವರನ್ನ ಮಾನುಷರಂತೆ ತಿಳಿದ್ದರಿಂದ, ಆದರೆ ಜ್ಞಾನಿಗಳು ಮತ್ತು ದೇವತೆಗಳು ಸಾಕ್ಷಾತ್ ಪರಮಾತ್ಮನೆಂದು ತಿಳಿದರು.

| ಕೃತಯುಗದಲ್ಲಿ | ತ್ರೇತಾಯುಗದಲ್ಲಿ | ದ್ವಾಪರಯುಗದಲ್ಲಿ | ಕಲಿಯುಗದಲ್ಲಿ |
|---|---|---|---|
| ೧. ಮತ್ಸ್ಯ | ೫. ವಾಮನ | ೮. ಕೃಷ್ಣಾವತಾರ | ೧೦. ಕಲ್ಕಿ ಅವತಾರ |
| ೨. ಕೂರ್ಮ | ೬. ಪರಶುರಾಮ | ೯. ಬೌದ್ಧಾವತಾರ | ಈ ಕಲಿಯುಗದ |
| ೩. ವರಾಹ | ೭. ದಶರಥರಾಮ | ದ್ವಾಪರ ಮತ್ತು | ಅಂತ್ಯದಲ್ಲಿ |
| ೪. ನಾರಸಿಂಹ | | ಕಲಿ ಸಂಧಿಯಲ್ಲಿ | |

ಅಂತು ೧೦ ದಶಾವತಾರಗಳು. ಈ ಪ್ರಕಾರ ಪರಮಾತ್ಮನ ಅವತಾರಗಳು. ಈ ಅವತಾರಗಳು ದುಷ್ಟನಿಗ್ರಹ ಅವತಾರಗಳು. ಇನ್ನೂ ಜ್ಞಾನೋಪದೇಶ ರೂಪವಾದ ಅವತಾರಗಳು ಬೇರೆ ಅವೆ.

**ಕಾರಣಾಹ್ವಯ ಪ್ರಕೃತಿಯೊಳಗಿ ।**
**ದ್ದಾರಧಿಕ ಹದಿನೆಂಟು ತತ್ತ್ವವ ।**
**ತಾ ರಚಿಸಿ ತದ್ರೂಪ ತನ್ನಾಮಂಗಳನೆ ಧರಿಸಿ ॥**
**ನೀರಜಭವಾಂಡವನು ನಿರ್ಮಿಸಿ ।**
**ಕಾರುಣಿಕ ಕಾರ್ಯಾಖ್ಯ ರೂಪದಿ ।**
**ತೋರುವನು ಸಹಜಾಹಿತಾಚಲಗಳಲಿ ಪ್ರತಿದಿನದಿ ॥ ೨೦ ॥**

ಬ್ರಹ್ಮಾಂಡವನ್ನು ಸೃಷ್ಟಿ ಮಾಡಿದವ ಪರಮಾತ್ಮ. ಇಂಥಾ ಸಾಮರ್ಥ್ಯದವನೇ, ಅವತಾರ ಮಾಡಿದ ಪರಮಾತ್ಮ, ಎಂತ ಹೇಳತಾರೆ.

ಕಾರಣಾಹ್ವಯ–ಕಾರಣಸಾಂಕೇತನಾದ ಶ್ರೀ ನಾರಾಯಣ ದೇವರು ವಾಸುದೇವಾದಿ ಅನಿರುದ್ಧಾಂತ ನಾಲ್ಕು ರೂಪಗಳ ಧರಿಸಿ, ಅದರಲ್ಲಿ ಮೂರು ರೂಪಗಳಿಂದ, ಲಿಂಗೋಪಾದಾನದಿಂದ ಅನಿರುದ್ಧಶರೀರದವರೆಗೂ ಸೂಕ್ಷ್ಮ ಸೃಷ್ಟಿಮಾಡಿ ನಂತರ, ಅನಿರುದ್ಧ ರೂಪದಿಂದ, ಪ್ರಕೃತಿ–ತನ್ನ ಪತ್ನಿಯಾದ ಶಾಂತೀದೇವಿಯರ ಅಭಿಮನ್ಯಮಾನವಾದ ಸ್ಥೂಲಸೃಷ್ಟಿಗೆ ಕಾರಣವಾದ ಅನ್ಯವಾದ ಮೂಲ ಜಡ ಪ್ರಕೃತಿಯನ್ನ ತೆಗೆದುಕೊಂಡು ತದ್ದ್ವಾರಾ, ಅಸಂಸೃಷ್ಟ ಚತುರ್ವಿಂಶತಿ ತತ್ತ್ವಗಳ ಬ್ರಹ್ಮಾಂಡಕ್ಕೆ ಆವರಣತ್ವೇನ ಸೃಷ್ಟಿಮಾಡಿ, ಯೊಳಗಿದ್ದ–ಈ ಚತುರ್ವಿಂಶತಿ ಅಸಂಸೃಷ್ಟ ತತ್ತ್ವದೊಳು ವಿದ್ಯಮಾನವಾದ ಸ್ವಲ್ಪ ಭಾಗವನ್ನು ತೆಗೆದುಕೊಂಡು, ಅಸಂಸೃಷ್ಟಗಳ ಪರಸ್ಪರ ಮೇಳನದಿಂದ ಸಂಸೃಷ್ಟಗಳ ಮಾಡಿ, ಸಂಸೃಷ್ಟಾಖ್ಯ, ಆರಧಿಕ ಹದಿನೆಂಟು–ಆರನ್ನು ಹದಿನೆಂಟನ್ನು ಸೇರಿಸಿದರೆ ಇಪ್ಪತ್ತುನಾಲ್ಕು, ತತ್ತ್ವವ–ಈ ಇಪ್ಪತ್ತುನಾಲ್ಕು ಸಂಸೃಷ್ಟ ತತ್ತ್ವವ, ತಾ ರಚಿಸಿ–ಅನಿರುದ್ಧನಾದ ತಾನು ರಚಿಸಿ, ತದ್ರೂಪ ತನ್ನಾಮಂಗಳನೆ ಧರಿಸಿ–ಆಯಾ ತತ್ತ್ವರೂಪ, ಆಯಾ ತತ್ತ್ವನಾಮಗಳ ಧರಿಸಿ ಆಯಾ ತತ್ತ್ವಗಳಲ್ಲಿ ಅನಿರುದ್ಧನಾದ ತಾನು ಪ್ರವೇಶಮಾಡಿ ಎಲ್ಲಾನೂ, ಏಕಾಕಾರವಮಾಡಿ ಸಂಸೃಷ್ಟಾತ್ಮಕ, ನೀರಜಭವಾಂಡವನು ನಿರ್ಮಿಸಿ–ಬ್ರಹ್ಮಾಂಡವನ್ನು ನಿರ್ಮಿಸಿ, ಕಾರುಣಿಕ–ಬ್ರಹ್ಮಾಂಡಸೃಷ್ಟಿಗೆ ಕಾರಣನಾದ ಅನಿರುದ್ಧ, ಕಾರ್ಯಾಖ್ಯ ರೂಪದಿ – ಕಾರ್ಯಸಾಂಕೇತದಿಂದ ಪ್ರಸಿದ್ಧವಾದ ಬ್ರಹ್ಮಾಂಡದಲ್ಲಿ ತದಾಕಾರ, ತದ್ರೂಪದಿಂದ, ತೋರುವನು–ಪ್ರವೇಶಮಾಡಿ ಅದರಂತೆ ತನ್ನ ರೂಪವ ಆ ಬ್ರಹ್ಮಾಂಡದಲ್ಲಿ ಪ್ರದರ್ಶನಮಾಡೋವನಾಗಿ, ಅದಕ್ಕೆ ಆಧಾರನಾಗಿ ಇದ್ದಾನೆ. ಅಂಡದ ಒಳಗಿನ ಜಡ ದ್ರವ್ಯಗಳು ಯಾವತ್ತೂ, ಸಂಸೃಷ್ಟಗಳೆ. ಸಹಜ ಆಹಿತ ಅಚಲ–ಅಂಡಗತ ಸಂಸೃಷ್ಟಪ್ರಕೃತಿ ಒಳಗೆ ಮೂರು ಪ್ರಕಾರ, ಸಹಜ–ಅಚಲ–ಆಹಿತ ಎಂತಲೂ ಮೂರು ಪ್ರಕಾರ. ವಿವರ :—

೧. **ಸಹಜಗಳು** ಎಂದರೆ ಸಾಲಿಗ್ರಾಮಾದಿಗಳು, ಗಂಗಾದಿ ತೀರ್ಥಗಳು. ಇವುಗಳು ಉತ್ಪತ್ತಿ ಕಾಲಕ್ಕೆ ಸಂಗಾತ ಭಗವಂತನ ವಿಭೂತಿ ಸನ್ನಿಧಾನಗಳಿಂದ ಉತ್ಪತ್ತಿಗಳಾದವು.

೨. **ಆಹಿತ** ಎಂದರೆ, ಕರಚರಣಾದಿ ವಿಶಿಷ್ಟಗಳಾದ ಅವಯವ ಸಹಿತ ಪ್ರತಿಮೆಗಳು. ಪ್ರಥಮತಃ, ಪ್ರತಿಮಾದೇವತೆಗಳಿಂದ ನಿರ್ಮಿತವಾಗಿ ನಂತರ, ಅದರಲ್ಲಿ ತಮ್ಮ ಬಿಂಬವನ್ನ ಆವಾಹನೆ ಮಾಡಿದ ಅರ್ಚಿರಾದಿ ರೂಪಗಳು ಕೆಲವು.

೩. **ಅಚಲ** ಎಂದರೆ, ಈ ಉಭಯ ವಿಧವಾದದ್ದಕ್ಕೆ ಅನ್ಯವಾದ ಅಚಲಗಳು, ಕೆಲವು. ಗಳಲ್ಲಿ–ಈ ಮೂರು ವಿಧ ಅಚಲಗಳಲ್ಲಿ ಅನಿರುದ್ಧದೇವರು, ಪ್ರತಿದಿನದಿ–ಪ್ರತಿ ದಿನದಲ್ಲೂ ಕಾರುಣಿಕನಾದ ಅನಿರುದ್ಧ, ಕಾರ್ಯಾಖ್ಯ ರೂಪದಿಂದ ತೋರುತ್ತಾ ಇರುತ್ತಾನೆ. ನರವತ್ ಪ್ರವರ್ತಿಸತಕ್ಕ ಅವತಾರ ರೂಪ ಇಂಥಾದ್ದೆಂತಲೂ ಮೂಲಾವತಾರಗಳಿಗೆ ಭೇದವಿಲ್ಲ ಎಂತಲೂ ತಾತ್ಪರ್ಯ.

**ಜೀವರಂತರ್ಯಾಮಿ ಅಂಶಿ ಕ |**
**ಳೇವರಗಳೊಳಗಿಂದ್ರಿಯಗಳಲಿ |**
**ತಾ ವಿಹಾರವ ಗೈವುತನುದಿನ ಅಂಶನಾಮದಲಿ ||**
**ಈ ವಿಷಯಗಳನುಂಡು ಸುಖಮಯ |**
**ಈವ ಸುಖ ಸಂಸಾರದುಃಖವ |**
**ದೇವಮಾನವದಾನವರಿಗವಿರತ ಸುಧಾಮಸಖ || ೨೧ ||**

ಜೀವನದಲ್ಲಿ ಸ್ಥೂಲ ದೇಹದಲ್ಲಿ ವಿದ್ಯಮಾನ ಭಗವದ್ರೂಪಗಳ ಅಂಶಾಂಶಿ ವಿಚಾರ ಹೇಳತಾರೆ.

ಜೀವರಂತರ್ಯಾಮಿ ಅಂಶಿ–ಪರಮಾಣು ಸ್ವರೂಪನಾದ ಲಿಂಗಗತ ಜೀವಾಂತರ್ಯಾಮಿ ಅವಿಯೋಗನಾದ ಜೀವಬಿಂಬ, ಅಂಶಿ ಎಂತ ಕರಿಸೋವನಾಗತಾನೆ. ಇದಲ್ಲದೆ ಜೀವರಲ್ಲಿ ಅನಿರುದ್ಧನಾಮಕ ಪರಮಾತ್ಮ ಎಂತ ಸಂಧ್ಯಂತರದಲ್ಲಿ ವಿದಿತವಾಗಿ ಅದೆ. ಆದ್ದರಿಂದ ಅನಾದಿ ಬಿಂಬನಕೂಡ ಸೃಷ್ಟಿಕಾಲದಲ್ಲಿ ಅಂಶ ವಿಶೇಷದಿಂದ ಪ್ರವಿಷ್ಟವಾದ ಅನಿರುದ್ಧ ರೂಪವೂ ಇರೋದಾಗಿ ಅದೆ. ಎರಡೂ ಸೇರಿ ಜೀವಾಂತರ್ಗತನಲ್ಲಿ ಇದ್ದು ಅಂಶಿ ಎಂತ ಕರಿಸೋದಾಗತದೆ. ಅಂಶನಾಮದಲಿ–ಈ ಅಂಶಿಯೇ ಅಂಶದಿಂದ ಹೊರಟು ತನ್ನಾಮದಿಂದ ಯುಕ್ತವಾಗಿ, ಕಳೇವರಗಳೊಳಗೆ–ಆಯಾ ಪ್ರಾಣಿಗತ ಅಂಶಿ ಅಂಶದಿಂದ ಆಯಾ ಜೀವರ ಸ್ಥೂಲ ದೇಹಗಳೊಳಗೆ, ಇಂದ್ರಿಯಗಳಲಿ–ಆಯಾ ಸ್ಥೂಲ ದೇಹಗತ ಇಂದ್ರಿಯಗಳಲ್ಲಿ ಪ್ರವಿಷ್ಟಗಳಾಗಿ ಇರತಕ್ಕ ಪ್ರಕಾಶತೋ ವ್ಯಾಪ್ತನಾದ ಜೀವೇಂದ್ರಿಯಗಳಲ್ಲಿ ಪ್ರವಿಷ್ಟನಾಗಿ, ಅನುದಿನ–ಪ್ರತಿದಿನದಲ್ಲೂ, ತಾ ವಿಹಾರವ ಗೈವುತ–ತಾನು ಆಯಾ ಇಂದ್ರಿಯಗಳಲ್ಲಿ ವಿಹಾರಮಾಡುತ್ತಾ ಸುಖಮಯಗಳಾದ, ಈ ವಿಷಯಗಳನುಂಡು–ಈ ಪ್ರಾಕೃತ ವಿಷಯಾಂತರ್ಗತ ತನ್ನ ಸ್ವಾಖ್ಯ ವಿಷಯಗಳ ಉಂಡು, ಸುಧಾಮ–ಸಮಿಾಚೀನವಾದ ಭಕ್ತಿಪಾಶದಿಂದ ತನ್ನ ದಾರು ಕಟ್ಟುತಾರೋ ಅವರಿಗೆ, ಸಖ–ಸಖನಾದವ. ಅವಿರತ–ವಿಶೇಷಾಕಾರವಾಗಿ ತನ್ನಲ್ಲಿ ಆಸಕ್ತಿಯಿಂದ ರತರಲ್ಲದ,

ದ್ವೇಷಗಳ ಮಾಡತಕ್ಕ ನಿತ್ಯಸಂಸಾರಿ ತಮೋಯೋಗ್ಯರಿಗೆ ಸಖನಲ್ಲದವ, ಇಂಥಾ ಪರಮಾತ್ಮ, ದೇವ–ದೇವ ಶಬ್ದದಿಂದ ಬ್ರಹ್ಮನಾರಭ್ಯ ತೃಣಾಂತ, ಸುಖ–ತನ್ನ ಭಕ್ತರಾದವರಿಗೆ ಲಿಂಗಭಂಗಾನಂತರ ಸುಖ, ಮಾನವ–ನಿತ್ಯ ಸಂಸಾರಿಗಳಿಗೆ ಲಿಂಗಭಂಗಾನಂತರ ಸಂಸಾರ, ದುಃಖವ–ದುಃಖವನ್ನ, ಲಿಂಗಭಂಗಾನಂತರ ದಾನವರಿಗೆ–ತಮೋಯೋಗ್ಯರಿಗೆ, ಈವ–ಕೊಡೋವನಾಗುತಾನೆ.

**ದೇಶದೇಶವ ಸುತ್ತಿ ದೇಹಾ |**
**ಯಾಸಗೊಳಿಸದೆ ಕಾಮ್ಯಕರ್ಮದು |**
**ರಾಶೆಗೊಳಗಾಗದಲೆ ಬ್ರಹ್ಮಾದ್ಯಖಿಳ ಚೇತನರು ||**
**ಭೂ ಸಲಿಲ ಪಾವಕ ಸಮೀರಾ |**
**ಕಾಶ ಮೊದಲಾದಖಿಳ ತತ್ತ್ವ ಪ |**
**ರೇಶಗಿವಧಿಷ್ಠಾನವೆಂದರಿತರ್ಚಿಸನವರತ || ೨೨ ||**

ಅನುಸಂಧಾನರಹಿತನಾಗಿ ಪುಣ್ಯದೇಶಗಳ ತಿರುಗಿದ್ದರಿಂದ ಪ್ರಯೋಜನವಿಲ್ಲ, ಎಂತ ಹೇಳತಾರೆ.

ಕಾಮ್ಯಕರ್ಮದುರಾಶೆಗೆ–ಐಹಿಕದಲ್ಲಿ ವನಿತಾದಿ ನಾನಾವಿಧ ಪ್ರಾಕೃತ ಭೋಗಗಳ ಅಪೇಕ್ಷಾರೂಪವಾದ ದುರಾಶೆಯಿಂದ ಕಾಮ್ಯವಾದ ಕಾರ್ಯಗಳ, ದೇಶದೇಶವ ಸುತ್ತಿ–ಅನುಸಂಧಾನಹೀನರಾಗಿ ಅನೇಕ ಪುಣ್ಯಕ್ಷೇತ್ರಗಳ ಚರಿಸಿ, ದೇಹಾಯಾಸಗೊಳಿಸದೆ–ವೃಥಾ.ಶರೀರವನ್ನ ಕಷ್ಟಪಡಿಸಿ ಶ್ರಮಪಡಧಾಂಗೆ, ಒಳಗಾಗದಲೆ–ಕಾಮ್ಯಕರ್ಮಕ್ಕೆ ಅನುಸಂಧಾನವಿಲ್ಲದೆ ಪುಣ್ಯಕ್ಷೇತ್ರಗಳ ಯಾತ್ರಾಕ್ಕೂ, ಈ ಎರಡಕ್ಕೂ ವಶನಾಗದೇನೇ, ಭೂ ಸಲಿಲ ಪಾವಕ ಸಮೀರಾಕಾಶ–ಭೂಮಿ, ಉದಕ, ಅಗ್ನಿ, ವಾಯು, ಆಕಾಶ, ಮೊದಲಾದಖಿಳತತ್ತ್ವ–ಈ ಪಂಚಭೂತಗಳೇ ಆದಿಯಾಗಿ ಸಮಸ್ತವಾದ ಚತುರ್ವಿಂಶತಿ ತತ್ತ್ವಗಳು ಸೇರಿ, ಜಗತ್ತೇನು, ಚರಾಚರ ಜೀವರ ದೇಹವೇನು, ನಿರ್ಮಿತವಾಗಿ ಅವೆ, ಇವುಗಳಲ್ಲಿ, ಬ್ರಹ್ಮಾದ್ಯಖಿಳಚೇತನರು–ಬ್ರಹ್ಮದೇವರೇ ಆದಿಯಾಗಿ ಸಮಸ್ತರಾದ ಚತುರ್ವಿಂಶತಿ ತತ್ತ್ವಾಭಿಮಾನಿ ದೇವತೆಗಳು ಅಭಿಮಾನಿಗಳಾಗಿ ಇದ್ದಾರೆ. ಪರೇಶಗೆ–ಉತ್ತಮರಾದ ರಮಾದೇವಿಯರಿಗೆ ಈಶನಾದ ಪರಮಾತ್ಮಗೆ, ಇವು–ತತ್ತ್ವಗಳು, ತತ್ತ್ವದೇವತೆಗಳು, ಇವು ಎರಡೂ, ಅಧಿಷ್ಠಾನವೆಂದು–ಆವಾಸಸ್ಥಾನವೆಂದು, ಅರಿತು–ತಿಳಿದವನಾಗಿ, ಅನವರತ–ನಿರಂತರದಲ್ಲೂ, ಅರ್ಚಿಸು–ದೇಹಗತ ತತ್ತ್ವಗಳಲ್ಲಿ, ಬಾಹ್ಯತತ್ತ್ವಗಳಲ್ಲಿ ತದಭಿಮಾನಿಗಳ ಚಿಂತಿಸಿ ತದಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಪರಮಾತ್ಮನ್ನ ಚಿಂತಿಸಿ, ಪರಸ್ಪರ ಐಕ್ಯಚಿಂತನರೂಪದಿಂದ ಪೂಜಾ ಮಾಡು ಎಂತ ಅರ್ಥ.

**ಎರಡು ವಿಧದಲಿ ಲೋಕದೊಳು ಜೀ |**
**ವರುಗಳಿಪ್ಪರು ಸಂತತ ಕ್ಷರಾ |**
**ಕ್ಷರ ವಿಲಿಂಗ ಸಲಿಂಗ ಸೃಜ್ಯಾಸೃಜ್ಯ ಭೇದದಲಿ ||**

**ಕರಿಸುವದು ಜಡಪ್ರಕೃತಿ ಪ್ರಣವಾ ।**
**ಕ್ಷರ ಮಹಾದಣುಕಾಲನಾಮದಿ ।**
**ಹರಿಸಹಿತ ಭೇದಗಳಪಂಚಕ ಸ್ಮರಿಸು ಸರ್ವತ್ರ ॥ ೨೩ ॥**

ಪಂಚಭೇದಗಳ ಸರ್ವತ್ರ ಚಿಂತಿಸಬೇಕೆಂದು ಹೇಳುತಾರೆ.

ಲೋಕದೊಳು–ಬ್ರಹ್ಮಾಂಡದಲ್ಲಿ ವಿದ್ಯಮಾನವಾದ ಹದಿನಾಲ್ಕು ಲೋಕಗಳಲ್ಲಿ, ಹಾಂಗೆ ವೈಕುಂಠ, ಅಂಧಂತಮಸ್ಸು, ಅಂಡದ ಹೊರಗೆ, ಅದಕ್ಕೆ ಆಚೀಲಿ ಅವ್ಯಾಕೃತಾಕಾಶ ಇಷ್ಟು ಪ್ರದೇಶದಲ್ಲಿ ಜೀವರು ಇದ್ದಾರೆ. ಲೋಕಶಬ್ದ, ಲೋಕಪರವೂ, ಪ್ರದೇಶಪರವೂನು. ಇವುಗಳಲ್ಲಿ, ಕ್ಷರ–ಸ್ಥೂಲದೇಹಗಳ ಐದಿ ಅದರ ನಾಶ ಉಳ್ಳವರು, ಕ್ಷರಜೀವರು ಎಂತ ಸಾಂಕೇತ. ಅಷ್ಟೇ ಹೊರತು, ಕ್ಷರಶಬ್ದ ಸ್ವರೂಪದಲ್ಲಿ ಸಮನ್ವಯವಲ್ಲ. ಇವರು ಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರು. ಅಕ್ಷರ–ನಾಶರಹಿತವು, ಸ್ಥೂಲದೇಹ ದಾವಾಗ್ಯೂ ಐದೋಣ ಇಲ್ಲದೆ ಅದರ ನಾಶವೂ ಇಲ್ಲ. ಇಂಥಾವರು ರಮಾದೇವಿಯರು ಒಬ್ಬರೇ. ಇವರಲ್ಲಿ ಅಸ್ವತಂತ್ರಾಖ್ಯ ಜೀವರ ಲಕ್ಷಣ ಇರೋಣದರಿಂದ ಜೀವರು ಎಂತಲೂ, ಈಶನಂತೆ ಅನಾದ್ಯನಂತ ಕಾಲಕ್ಕೂ ಪಾಂಚಭೌತಿಕ ಸ್ಥೂಲದೇಹದಿಂದ ರಹಿತರಾದ್ದರಿಂದಲೂ, ಶಶ್ವದೇಕ ಪ್ರಕಾರವಾಗಿ, ಈಶನೋಪಾದಿಯಲ್ಲಿ ಒಬ್ಬರೇ ಆದ್ದರಿಂದಲೂ, ಅಕ್ಷರರು ಎಂತಲೂ, ಜೀವರು ಎಂತಲೂ, ಈಶರು ಎಂತಲೂ, ಈ ಪ್ರಕಾರ ಅನ್ವರ್ಥಕನಾಮದಿಂದ ಕರಿಸುವರು. ಎರಡು ವಿಧದಲಿ–ಈ ಪ್ರಕಾರ ಕ್ಷರಾಕ್ಷರ ಭೇದಗಳಿಂದ ಎರಡು ವಿಧವಾಗಿ, ಜೀವರುಗಳು–ಜೀವಸಮುದಾಯರು, ಸಂತತ–ನಿರಂತರದಲ್ಲೂ, ಅನಾದ್ಯನಂತಕಾಲಕ್ಕೂ, ಇಪ್ಪರು–ಇರೋವರಾಗಿದ್ದಾರೆ. ಕ್ಷರಸಾಂಕೇತರಾದ ಸ್ಥೂಲದೇಹಗಳ ಧರಿಸಿ ನಾಶ ಉಳ್ಳವರಾದ ಜೀವರಲ್ಲಿ ಇರತಕ್ಕ ಭೇದಗಳು ದಾವವೆಂದರೆ, ವಿವರ :—ವಿಲಿಂಗ–ಸಾಧನ ಪೂರ್ತಿ ಆಗಿ, ಲಿಂಗಭಂಗ ಐದಿ, ತಮ್ಮ ತಮ್ಮ ಸ್ವರೂಪಗತಿ ಐದಿ "ನ ಚ ಪುನರಾವರ್ತ"ನರಾದ ಕ್ಷರ ಸಾಂಕೇತರಾದವರು ಇವರು ಒಂದು, ಸಲಿಂಗ–ಲಿಂಗಭಂಗ ಇಲ್ಲದೆ ಸ್ವರೂಪಕ್ಕೆ ಅನ್ಯವಾದ ಪ್ರಕೃತ್ಯಾತ್ಮಕ ಅನಾದಿಲಿಂಗದೇಹದಿಂದ ಸಹಿತರಾದವರು ಒಂದು, ಅಂತು ಎರಡು ಪ್ರಕಾರ. ಇದರಲ್ಲಿ ಸಲಿಂಗರಾದ ಕ್ಷರಜೀವರಲ್ಲಿ ಎರಡು ಪ್ರಕಾರ. ಸೃಜ್ಯ – ಬ್ರಹ್ಮಾಂಡದಲ್ಲಿ ಸೃಷ್ಟರಾಗಿ ಲಿಂಗಭಂಗಕ್ಕಾಗಿ ಸಾಧನಮಾಡುತ್ತಾ ಇರತಕ್ಕ ಸಲಿಂಗರಾದ, ಪರಿದೃಶ್ಯಮಾನರಾದ ಜೀವರು ಒಂದು, ಅಸೃಜ್ಯ–ಉತ್ತರೋತ್ತರ ಸೃಷ್ಟಿಗೆ ಬರತಕ್ಕವರು. ಇದುವರಿಗೆ ಸೃಷ್ಟಿಗೆ ಬಾರದವರು. ಇವರು ಅಸೃಜ್ಯಜೀವರಾಶಿಗಳು, ಅನಂತರು, ಒಂದು. ಇವರು ಅವ್ಯಾಕೃತಾಕಾಶದಲ್ಲಿ ಅನಂತರಾಗಿ ಇದ್ದಾರೆ. ಭೇದದಲಿ–ಜೀವರು ಈ ಪ್ರಕಾರ ಭೇದದಿಂದ, ಕರೆಸುವದು–ಕರಿಸೋದಾಗತದೆ. ಇನ್ನು ಜಡಗಳೊಳಗೆ, ಜಡಪ್ರಕೃತಿ–ಪೃಥಿವ್ಯಾದಿ ಪಂಚಭೂತಗಳು, ಗುಣತ್ರಯಗಳು, ಕಾರ್ಯಭೂತಗಳು, ಇವೇನು, ಇವಕ್ಕೆ ಉಪಾದಾನಕಾರಣಭೂತವಾದ ಮೂಲ ಜಡಪ್ರಕೃತಿ ಏನು, ಪ್ರಣವಾಕ್ಷರ–ಜಡರೂಪವಾದ ಓಂಕಾರ ಎಂಬ ಅಕ್ಷರ, ಇದರಿಂದ ಅಭಿವ್ಯಕ್ತವಾದ ಮಂತ್ರಗಳು, ಏಕಪಂಚಾಶ

ದ್ವರ್ಣಗಳು, ವೇದಗಳು, ಮಹಾದಣುಕಾಲ–ಅನಾದಿನಿತ್ಯವಾದ ಉಪಾದಾನಭೂತವಾದ ರಮಾಭಿಮನ್ಯವಾದ, ಜಡಭೂತವಾದ ಮಹಾಕಾಲ, ತದುಪಾದೇಯ ಕ್ಷಣ, ಲವಕಾಲ ಗಳು, ನಾಮದಿ–ಈ ಪ್ರಕಾರ ನಾಮದಿಂದ ಇರತಕ್ಕ ಜಡಗಳು, ಅಂತು ಜೀವರು ಎಂತಲೂ, ಜಡಗಳೆಂತಲೂ ಎರಡು ವಿಧವಾಯಿತು. ಹರಿ–ಈ ಜೀವ ಜಡಗಳಿಗೆ ವಿಲಕ್ಷಣನಾದ, ಸರ್ವೋತ್ತಮನಾದ ಪರಮಾತ್ಮ ಒಂದು, ಸಹಿತ–ಪೂರ್ವೋಕ್ತ ಮೂರರಿಂದ ಸಹಿತನಾಗಿ, ಪಂಚಕ–ಪಂಚವಿಧವಾದ, ಭೇದಗಳ–ಭೇದವಾಗಿ ಇರುವ ವಿಶೇಷಗಳ, ಸರ್ವತ್ರ–ಚರಾಚರ ಸರ್ವತ್ರದಲ್ಲೂ, ಸ್ಮರಿಸು–ಚಿಂತಿಸೋವನಾಗಬೇಕು. ಈ ಪಂಚಭೇದಗಳು ದಾವವೆಂದರೆ, ಅದರನ್ನ ಮುಂದಿನ ಶ್ಲೋಕದಲ್ಲಿ ವಿವರಮಾಡಿ ಹೇಳತಾರೆ.

**ಜೀವಜೀವರ ಭೇದ ಜಡಜಡ ।**
**ಜೀವಜಡಗಳ ಭೇದ ಪರಮನು ।**
**ಜೀವಜಡ ಸುವಿಲಕ್ಷಣನು ಎಂದರಿದು ನಿತ್ಯದಲಿ ॥**
**ಈ ವಿರಿಂಚಾಂಡದಲಿ ಎಲ್ಲಾ ।**
**ಠಾವಿನಲಿ ತಿಳಿದೈದು ಭೇದ ಕ ।**
**ಳೇವರದೊಳರಿತಚ್ಯುತನ ಪದ ಐದು ಶೀಘ್ರದಲಿ ॥ ೨೪ ॥**

ಈ ಶ್ಲೋಕದಲ್ಲಿ ಪಂಚಭೇದ ಹೇಳತಾರೆ.

ಜೀವ ಜೀವರ ಭೇದ–ಜೀವರಲ್ಲಿ ಚೇತನ ಜೀವರೆಂತಲೂ, ಜಡ ಜೀವರೆಂತಲೂ ಎರಡು ಪ್ರಕಾರ. ಚೇತನ ಜೀವರಲ್ಲಿ ಪರಸ್ಪರ ಭೇದ. ಜಡ ಜೀವರಾದ ವೃಕ್ಷ ಜೀವರಲ್ಲಿ ಪರಸ್ಪರ ಭೇದ. ಚೇತನ ಜೀವರಾದ ಮನುಷ್ಯರು, ಪಶುಗಳು, ಪಕ್ಷಿಗಳು ಮೊದಲಾದವರಲ್ಲಿ ಅವಾಂತರ ಭೇದ. ಜಡ ಜೀವರಾದ ವೃಕ್ಷ, ಗುಲ್ಮ ಇದರಲ್ಲಿ ಅವಾಂತರ ಭೇದ. ಜಡ ಜಡ–ಜಡ ಜೀವರಾದ ಚೂತ ವೃಕ್ಷ ಜೀವಗೂ, ಪನಸ ವೃಕ್ಷ ಜೀವಗೂ ಪರಸ್ಪರ ಭೇದ. ಜೀವ ಜಡಗಳ ಭೇದ–ಚೇತನರಾದ ಮಾನುಷಾದಿ ಜೀವರಿಗೂ, ಜಡ ಜೀವರಾದ ಚೂತ, ಪನಸಾದಿ ವೃಕ್ಷಗಳ ಜೀವರಿಗೂ ಭೇದ. ಶುದ್ಧ ಜಡಗಳಿಗೂ, ಈ ಜೀವರುಗಳಿಗೂ ಭೇದ, ಪರಮನು–ಶ್ರೀ ಪರಮಾತ್ಮನು, ಜೀವ–ಚೇತನ ಜೀವರಿಂದ ಭೇದ ಎಂದರೆ, ಚೇತನ ಜೀವರಿಗೂ ಪರಮಾತ್ಮಗೂ ಭೇದ. ಜಡ–ಜಡ ಜೀವರಿಗೂ, ಪರಮಾತ್ಮಗೂ ಭೇದ. ಜೀವರ ಕಾರಣದಿಂದ ಮೂರು ಭೇದ. ಪರಮಾತ್ಮ ಕಾರಣದಿಂದ ಎರಡು ಭೇದ. ಅಂತು ಐದು ಭೇದ. ಸುವಿಲಕ್ಷಣನು–ಪರಮಾತ್ಮ ಚರಾಚರ ಸರ್ವರಿಂದ ಸಮೀಚೀನವಾದ ವಿಲಕ್ಷಣಸ್ವರೂಪನು. ಎಂದರಿದು–ಎಂತ ತಿಳಿದವನಾಗಿ, ನಿತ್ಯದಲಿ–ಪ್ರತಿದಿನದಲ್ಲೂ, ಈ ವಿರಂಚಾಂಡದಲಿ–ಈ ಬ್ರಹ್ಮಾಂಡ ದಲ್ಲಿ, ಎಲ್ಲಾ ಠಾವಿನಲಿ–ಸರ್ವಸ್ಥಳಗಳಲ್ಲಿ, ಐದು ಭೇದ–ಪೂರ್ವೋಕ್ತ ಪ್ರಕಾರ, ಸ್ವರೂಪ ವನ್ನು ಹಿಡಿದು ಐದು ಭೇದ ಅಂತ, ತಿಳಿದು–ಅರಿಯೋವನಾಗಿ, ಈ ಸ್ವರೂಪ ಹಿಡಿದು ಹೇಳಿದ ಪಂಚ ಭೇದಗಳು ವರ್ತಮಾನದಲ್ಲಿ ಪ್ರತ್ಯಕ್ಷವಲ್ಲ, ಮೋಕ್ಷದಲ್ಲಿ ಪ್ರತ್ಯಕ್ಷವು.

ಸ್ವರೂಪವನ್ನು ಅನುಸರಿಸಿದ ಪಂಚ ಭೇದ ಸತ್ಯ, ಪ್ರಕೃತ ಪಂಚ ಭೇದ ತಿಳಿಯಬೇಕಾದರೆ, ಕಳೇವರದೊಳು–ಪ್ರಾಣಿಗಳು ಧರಿಸಿದ ಚೇತನಾಚೇತನ ಸ್ಥೂಲ ದೇಹಗಳು, ಪರಸ್ಪರ ಅನೇಕ ಭೇದಗಳಿಂದ ಸಹಿತವಾಗಿ ಅವೆ, ಈ ದೇಹಗಳು ಯಾವತ್ತೂ ಸ್ವರೂಪವನ್ನು ಅನುಸರಿಸಿ ಆಕಾರಗಳು ನಿರ್ಮಿತವಾದ್ದರಿಂದ ಸ್ಥೂಲ ದೇಹಗಳ ಅನುಸರಿಸಿ, ಪಂಚ ಭೇದ ಗಳ ತಿಳಿಯಬೇಕು. ಇಂಥಾ ಸ್ಥೂಲ ದೇಹದೊಳು ವಿದ್ಯಮಾನವಾದ, ಅರಿತು– ಪರಮಾತ್ಮನ್ನ ಧ್ಯಾನೋಪಾಸನಾದಿಗಳಿಂದ ಅರಿತು, ಅಪರೋಕ್ಷೀಕರಿಸಿಕೊಂಡು, ಶೀಘ್ರ ದಲಿ–ಅತಿ ಜಾಗ್ರತೆಯಿಂದ, (ವೈಕುಂಠಗತ) ಅಚ್ಯುತನ–ನಾಶರಹಿತನಾದ ಪರಮಾತ್ಮನ, ಪದ ಐದು–ಪಾದವನ್ನು ಸೇರೋವನಾಗು.

**ವಿಶೇಷಾರ್ಥ :**—ಪ್ರಕಾರಾಂತರ : (ಗೀತಾತಾತ್ಪರ್ಯ ಅರ್ಥ)

೧. ಜೀವಜೀವರ ಭೇದ ಎಂದರೆ, ಸುಖದುಃಖಾನುಭವ ಪ್ರತ್ಯೇಕ ಇರುವುದ್ದರಿಂದ ಜೀವರು ಪರಸ್ಪರ ಭೇದ ಉಳ್ಳವರು.

೨. ಜಡ ಜಡ ಭೇದ ಎಂದರೆ, ನೀರು ಬೆಂಕಿ ಮೊದಲಾದ್ದರ ಗುಣ ಬ್ಯಾರೆ ಬ್ಯಾರೆ, ಆದ್ದರಿಂದ ಜಡಗಳು ಪರಸ್ಪರ ಭೇದ ಉಳ್ಳವು.

೩. ಜೀವ ಜಡಗಳ ಭೇದ, ಎಂದರೆ, ಜಡವಸ್ತುವಿಗೆ ಜ್ಞಾನವಿಲ್ಲ, ಜೀವರಿಗೆ ಜ್ಞಾನ ವಿದೆ. ಆದ್ದರಿಂದ ಜೀವ ಜಡಕ್ಕೆ ಭೇದ.

೪. ಜೀವ ಪರಮಾತ್ಮರ ಭೇದ ಎಂದರೆ, ಜೀವರು ಪರಾಧೀನ ಜ್ಞಾನಿಗಳು. ಪರಮಾತ್ಮ ಸ್ವತಂತ್ರ ಜ್ಞಾನಿ, ಸರ್ವಜ್ಞನಾದ್ದರಿಂದ ಜೀವ ಪರಮಾತ್ಮರ ಭೇದ.

೫. ಜಡ ಪರಮಾತ್ಮರ ಭೇದ ಎಂದರೆ, ಜ್ಞಾನವಿಲ್ಲದೆ ಜಡವೇ ದೇವರಲ್ಲವಾದ್ದರಿಂದ ಜಡ ಪರಮಾತ್ಮರ ಭೇದ.

**ಆದಿಯಲಿ ಕ್ಷರಾಕ್ಷರಾಖ್ಯ ।**
**ದ್ವೇಧ ಅಕ್ಷರದೊಳು ರಮಾಮಧು ।**
**ಸೂದನರು ಕ್ಷರಗಳೊಳು ಪ್ರಕೃತಿ ಪ್ರಣವಕಾಲಗಳು ॥**
**ವೇಧಮುಖ್ಯ ತೃಣಾಂತಜೀವರ ।**
**ಭೇದಗಳನರಿತೀ ರಹಸ್ಯವ ।**
**ಬೋಧಿಸದೆ ಮಂದರಿಗೆ ಸರ್ವತ್ರದಲಿ ಚಿಂತಿಪುದು ॥ ೨೫ ॥**

ಭೇದಗಳು ಆರು ಎಂತ ಹೇಳತಾರೆ.

ಆದಿಯಲಿ–ಪ್ರಥಮದಲ್ಲಿ ಹೇಳಿದ, ಕ್ಷರ–ಕ್ಷರ ಜೀವರು ಎಂತಲೂ, ಅಕ್ಷರ–ಅಕ್ಷರ ಜೀವರು ರಮಾ ಎಂತಲೂ, ಆಖ್ಯ–ಪ್ರಸಿದ್ಧರಾದ ಜೀವರು, ದ್ವೇಧ–ಎರಡು ವಿಧ ಅಂದರೆ, ಎರಡು ಪ್ರಕಾರವು. ಇದರೊಳು, ಅಕ್ಷರದೊಳು–ಅಕ್ಷರದಲ್ಲಿ ಅಸ್ವತಂತ್ರರಾದ ರಮಾ

ದೇವಿಯರೂ, ಸರ್ವ ಸ್ವತಂತ್ರನಾದ, ಸರ್ವೋತ್ತಮನಾದ ಶ್ರೀ ಪರಮಾತ್ಮ, ಈ ಉಭಯರೂ ಅಕ್ಷರ ಸಾಂಕೇತರು. ರಮಾಮಧುಸೂದನರು—ಈ ರಮಾ, ಶ್ರೀ ಪರಮಾತ್ಮರು ಪರಸ್ಪರ ಭೇದರು. ಆದ್ದರಿಂದ ಅಕ್ಷರದೊಳಗೆ ಒಂದು ಭೇದ, ಕ್ಷರಗಳೊಳು—ನಾಶವುಳ್ಳವುಗಳಲ್ಲಿ, ಪ್ರಕೃತಿ—ಪೂರ್ವೋಕ್ತವಾದ ಮೂಲ ಜಡಪ್ರಕೃತಿ, ಪ್ರಣವ—ಓಂಕಾರ, ಕಾಲಗಳು—ಕ್ಷಣ ಲವಾದಿ ಕಾಲಗಳು, ಮುಖ್ಯ—ಜೀವೋತ್ತಮರಾದ, ವೇಧ—ಬ್ರಹ್ಮದೇವರು ಆರಂಭ ಮಾಡಿ, ತೃಣಾಂತ ಜೀವರ—ತೃಣ ಜೀವರೇ ಅಂತವಾಗಿ ಜೀವರ ಅಂತು ಶುದ್ಧ ಜಡಗಳ, ತದನ್ಯ ಜೀವರ, ಅಂತು ಎರಡರಲ್ಲಿ, ಭೇದಗಳನರಿತು—ಪಂಚಭೇದಗಳ ಅರಿತವನಾಗಿ, ಅಕ್ಷರದಲ್ಲಿ ಒಂದು ಭೇದ, ಕ್ಷರದಲ್ಲಿ ಐದು ಭೇದ. ಅಂತು ಆರು ಭೇದಗಳ ತಿಳಿದು ಅನುಷ್ಠಾನ ಮಾಡತಾ, ಈ ರಹಸ್ಯವ—ಈ ಆರು ಭೇದಗಳ ಲಕ್ಷಣವನ್ನ, ರಹಸ್ಯವನ್ನ, ಮಂದರಿಗೆ ಬೋಧಿಸದೆ—ಮಿಥ್ಯಾಜ್ಞಾನಿಗಳಿಗೆ ತಿಳಿಸದೆ, ಸರ್ವತ್ರದಲಿ ಚಿಂತಿಪುದು—ಸರ್ವತ್ರ ಚಿಂತಿಸೋವನಾಗು. ವೇಧಮುಖ್ಯ ತೃಣಾಂತ ಎಂಬೋಣದರಿಂದ, ತಾರತಮ್ಯವೂ ಚಿಂತಿಸಬೇಕೆಂತ ಭಾವವು. ಇದರ ವಿಚಾರ ಸಂಧ್ಯಂತರದಲ್ಲಿ ವಿವರ ಮಾಡಿದ್ದಾರೆ.

**ದೀಪದಿಂ ದೀಪಗಳು ಪೊರಮ ।**
**ಟ್ಟಾಪಣಾಲಯಗತ ತಿಮಿರಗಳ ।**
**ತಾ ಪರಿಹರಗೈಸಿ ತದ್ಗತ ಪದಾರ್ಥ ತೋರ್ಪಂತೆ ॥**
**ಸೌಪರಣಿ ವರವಹನ ತಾ ಬಹು ।**
**ರೂಪನಾಮದಿ ಎಲ್ಲ ಕಡೆಯಲಿ ।**
**ವ್ಯಾಪಿಸಿದ್ದು ಯಥೇಷ್ಟ ಮಹಿಮೆಯ ತೋರ್ಪ ತಿಳಿಸದಲೆ ॥ ೨೬ ॥**

ದೇವರು ಸರ್ವತ್ರ ಸಮನಾಗಿದ್ದಾಗ್ಯೂ ಅಧಿಷ್ಠಾನದ ಶಕ್ತಿಯನ್ನೇ ವ್ಯಕ್ತ ಮಾಡಿ ತೋರಿಸುವದ್ದರಿಂದ ಜೀವರ ತಾರತಮ್ಯ ತಿಳಿಪಿ ಸ್ವಸಾಮರ್ಥ್ಯ ಸರ್ವರಿಗೂ ತಿಳಿಸಧಾಂಗೆ ಇರುವನೆಂದು ಸದೃಷ್ಟಾಂತವಾಗಿ ಹೇಳತಾರೆ.

ದೀಪದಿಂ ದೀಪಗಳು—ಒಂದು ದೀಪದಿಂದ ಅನೇಕ ದೀಪಗಳು, ಪೊರಮಟ್ಟು—ಹೊರಟು, ಆಪಣಾಲಯಗತ—ವ್ಯಾಪಾರ ಮಾಡತಕ್ಕ ಅಂಗಡಿ ಮನೆಯಲ್ಲಿ ಇಡಲ್ಪಟ್ಟ ಪದಾರ್ಥಗಳ ಕಾಣಗೊಡದೆ ಅಂಧಕಾರ ಸುತ್ತಿಕೊಂಡಿರುವ, ತಿಮಿರಗಳ—ಇನ್ನೂ ಅನೇಕ ಪ್ರದೇಶಗಳಲ್ಲಿರುವ ಅಂಧಕಾರಗಳ ತಾ ಪರಿಹರಗೈಸಿ—ದೀಪಗಳಾದ ತಾವು, ಪರಿಹಾರ ಮಾಡಿ, ತದ್ಗತ ಪದಾರ್ಥ — ಅಂಗಡಿಯಲ್ಲಿರುವ ಅಂಧಕಾರದಲ್ಲಿರುವ ಪದಾರ್ಥಗಳ, ತೋರ್ಪಂತೆ—ತೋರಿಸೋದಾಗತವೆ. ಈ ದೀಪಗಳೋಪಾದಿಯಲ್ಲಿ, ಸೌಪರಣಿವರ—ಸೌಪರಣೀ ದೇವಿಯರ ಪತಿಯಾದ ಗರುಡ ದೇವರೇ, ವಹನ—ವಾಹನನಾಗಿ ಉಳ್ಳ, ತಾ—ಬಿಂಬರೂಪಿ ಪರಮಾತ್ಮ, ದೀಪ ಸದೃಶನಾಗಿ, ಅಂಶಿ ಭೂತನಾಗಿ, ಜೀವಾಂತರ್ಗತದಲ್ಲಿ

ಇರತಕ್ಕ ತಾನು, ಬಹುರೂಪ–ಒಂದು ದೀಪದಿಂದ ಅನೇಕ ದೀಪಗಳು ಹೊರಟಂತೆ ತನ್ನ ಅಂಶಿಯಿಂದ ಅನೇಕವಾದ ದೀಪ ಸಾಮ್ಯಗಳಾದ ಅನೇಕ ಅಂಶಗಳು ಹೊರಟು, ನಾಮದಿ–ಅಂಗಡಿಯಲ್ಲಿ ನಾನಾ ನಾಮದಿಂದ ಯುಕ್ತವಾದ ಪದಾರ್ಥಗಳೋಪಾದಿಯಲ್ಲಿ, ದೇಹಾಖ್ಯ ಪಟ್ಟಣದಲ್ಲಿ, ಇಂದ್ರಿಯಾಖ್ಯ ಅಂಗಡಿಗಳಲ್ಲಿ, ವ್ಯಾಪಾರಕ್ಕೆ ಯೋಗ್ಯವಾದ ಆಯಾ ಇಂದ್ರಿಯಗತ ಅನೇಕವಿಧ ಸದ್ವ್ಯಾಪಾರಗಳೆಂಬೋ ನಾನಾ ನಾಮದಿಂದ ಯುಕ್ತವಾದ ಪದಾರ್ಥಗಳು, ನಾನಾ ವಿಧಗಳಾಗಿ ಇರೋವಾಗಿ ಅವೆ. ಆ ಪದಾರ್ಥಗಳ ವ್ಯಾಪಾರ ಮಾಡತಕ್ಕವ, ವರ್ತಕನಾದ ಜೀವ. ಈ ಜೀವಗೆ, ಅಂಗಡಿಗತ ಪದಾರ್ಥಗಳು ಕಾಣ ಗೊಡದಂತೆ, ಅಜ್ಞಾನಾಖ್ಯ ಅಂಧಕಾರ ಸುತ್ತಿಕೊಂಡು ಅದೆ. ಅಂಧಕಾರ ಪರಿಹಾರಕ್ಕೆ ಒಂದು ದೀಪದಿಂದ ಅನೇಕ ದೀಪಗಳು ಮುಟ್ಟಿಸಿ, ಅವನ್ನು ಅಂಗಡಿ ಮನೆಯಲ್ಲಿ ಇಟ್ಟು ಅಂಧಕಾರವನ್ನ ವರ್ತಕ, ಪರಿಹಾರಗೈಸಿದಂತೆ ಜೀವ ಸಾಂಕೇತನಾದ ವರ್ತಕನು, ಎಲ್ಲ ಕಡಿಯಲಿ–ಜೀವಾಂತರ್ಗತನಾದ, ಅಂಶಿಭೂತನಾದ ಪರಮಾತ್ಮ, ಅನೇಕ ಅಂಶಗಳಿಂದ ದೇಹೇಂದ್ರಿಯಾದಿ ಎಲ್ಲಾ ಪ್ರದೇಶದಲ್ಲಿ, ವ್ಯಾಪಿಸಿದ್ದು–ಅಂಶ ವಿಶೇಷದಿಂದ ವ್ಯಾಪಿಸಿದ್ದಾನೆ ಎಂದು ತಿಳಿದು, ಆಯಾ ಇಂದ್ರಿಯಗಳಲ್ಲಿ ಅಂಶ ರೂಪಗಳ ಆವಾಹನವೆಂಬ ದೀಪಗಳ ಮುಟ್ಟಿಸಿ ಸರ್ವ ವ್ಯಾಪಾರವೂ ಈಶ ತಂತ್ರದಿಂದ ಆಗತದೆ ಎಂದು ಮಾಡತಕ್ಕ, ಅನು ಸಂಧಾನದಿಂದ ಅಜ್ಞಾನಾಖ್ಯ ಅಂಧಕಾರ ಪರಿಹಾರವಾಗತದೆ. ಆಗ್ಗೆ ಲಾಭ ಹೊಂದ ತಕ್ಕ ವ್ಯಾಪಾರಕ್ಕೆ ಯೋಗ್ಯವಾದ ಸುಕರ್ಮಗಳೆಂಬೋ ಪದಾರ್ಥಗಳು, ಜ್ಞಾನ ಚಕ್ಷುಸ್ಸಿಗೆ ಗೋಚರವಾಗತವೆ. ತಿಳಿಸದಲೆ–ತಾನು ಇದ್ದು ಸರ್ವ ವ್ಯಾಪಾರವೂ ಮಾಡಸತೇನು ಎಂಬೋದು, ಅಪಕ್ವ ಕಾಲದಲ್ಲಿ ಜೀವಗೆ ಪ್ರತ್ಯಕ್ಷನಾಗಿ ತಿಳಿಸದೆ ಈ ಪ್ರಕಾರ ಅನು ಸಂಧಾನ ಮಾಡುವ, ಯಥೇಷ್ಟ–ಅಧಿಕಾರಿಗೆ ಜೀವನ ಯೋಗ್ಯತಾನುಸಾರ ಸಂಪೂರ್ಣ ವಾದ, ಮಹಿಮೆಯು ತೋರ್ಪ–ತನ್ನ ಮಹಾತ್ಮೆಯನ್ನು ತೋರಿಸತಾನೆ. ಜೀವ ಅಸ್ವತಂತ್ರನೆಂತಲೂ, ತಾನು ಸ್ವತಂತ್ರನೆಂತಲೂ, ಸರ್ವವೂ ತನ್ನಾಧೀನವೆಂತಲೂ, ತನ್ನ ದ್ವಾರಾ ಜೀವನ ಕ್ರಿಯಾ ಎಂತಲೂ, ಇತ್ಯಾದಿ ಮಹಿಮಾವನ್ನ ಅನುಸಂಧಾತೃಗಳಿಗೆ ತಿಳಿಸತಾ ಇರುತ್ತಾನೆ ಎಂತ ತಾತ್ಪರ್ಯ.

**ನಳಿನಮಿತ್ರಗೆ ಇಂದ್ರಧನು ಪ್ರತಿ ।**
**ಫಲಿಸುವಂತೆ ಜಗತ್ತ್ರಯವು ಕಂ ।**
**ಗೊಳಿಪದನುಪಾಧಿಯಲಿ ಪ್ರತಿಬಿಂಬಾಹ್ವಯದಿ ಹರಿಗೆ ॥**
**ತಿಳಿಯೆ ತ್ರಿಕಕುದ್ಧಾಮನತಿಮಂ ।**
**ಗಳ ಸುರೂಪವ ಸರ್ವ ಕಾವಿಲಿ ।**
**ಪೊಳೆವ ಹೃದಯಕೆ ಪ್ರತಿದಿವಸ ಪ್ರಹ್ಲಾದಪೋಷಕನು ॥ ೨೭ ॥**

ಪ್ರಮಾಣಶ್ಲೋಕ :– "ಸೋಪಾಧಿರನುಪಾಧಿಶ್ಚ ಪ್ರತಿಬಿಂಬೋ ದ್ವಿಧೇಯತೇ । ಜೀವ ಈಶಸ್ಯಾನುಪಾಧಿರಿಂದ್ರಚಾಪೋ ಯಥಾ ರವೇಃ ॥"

ಜೀವರು ದೇಹಾಭಿಮಾನಬದ್ಧರಾದ್ದರಿಂದ ಜಲಗತ ಸೂರ್ಯಬಿಂಬದಂತೆ, ಉಪಾಧಿ ಎಂಬ ದೇಹಾದಿ ನಿಮಿತ್ತಬದ್ಧರು. ಕಾಮನಬಿಲ್ಲೆಂದು ಅಂತರಿಕ್ಷದಲ್ಲಿ ತೋರುವ ಧನುಸ್ಸಿನಲ್ಲಿ ಸೂರ್ಯ ಪ್ರತಿಬಿಂಬಿಸಿದಂತೆ, ದೇವರು ನಿರಭಿಮಾನಿಯಾದ್ದರಿಂದ, ಬಂಧರಹಿತನೆಂದು ಹೇಳತಾರೆ.

ನಳಿನಮಿತ್ರಗೆ–ಕಮಲಗಳಿಗೆ ಸ್ನೇಹಿತನಾದ ಸೂರ್ಯಗೆ ಎಂದರೆ, ಸೂರ್ಯನ ದ್ವಾರಾ, ಇಂದ್ರಧನು–ವರ್ಷಾಕಾಲದಲ್ಲಿ, ಆಕಾಶದಲ್ಲಿ ಇಂದ್ರದೇವರ ಧನುಸ್ಸು ಯಾವ ರೀತಿಯಿಂದ ಬೊಗ್ಗಿ ಇರುತ್ತದೋ ಅದೇ ಪ್ರಕಾರವಾಗಿ ಧನುರಾಕಾರದಿಂದ ತೇಜೋವಿಶಿಷ್ಟವಾಗಿ ಛಾಯಾ ಎಂಬುದು, ಪ್ರತಿಫಲಿಸುವಂತೆ–ಪ್ರತಿಫಲಿಸೋದಾಗತದೆ, ಆ ಧನುಸ್ಸು ಸೂರ್ಯ ಇರೋ ಕಾಲದಲ್ಲೇ ನಾಶವಾಗತದೆ. ಆದ್ದರಿಂದ ಇಂದ್ರಧನುಸ್ಸು ಉಪಾಧಿಯಿಂದ ಪ್ರತಿಫಲಿಸಿದ್ದಾಯಿತೇ ಹೊರತು, ಅನುಪಾಧಿ ದ್ವಾರಾ ಪ್ರತಿಫಲಿಸಿದ್ದಾಗಲಿಲ್ಲ. ಮತ್ತು ಅನುಪಾಧಿಯೇ ಆಗಿದ್ದರೆ, ಸೂರ್ಯೋದಯಾರಭ್ಯ ಅಸ್ತಮಾನದವರಿಗೂ ೩೬೦ ದಿವಸದವರಿಗೂ ಇರಬೇಕು. ಈ ರೀತ್ಯಾ ಇಲ್ಲದ್ದರಿಂದ ಉಪಾಧಿಯಿಂದ ಪ್ರತಿಫಲಿಸಿದಂತೆ ಸಿದ್ಧವು. ಇದರಂತೆ, ಜಗತ್ತ್ರಯವು–ಜಗಚ್ಛಬ್ದ ಜೀವಪರ. ತ್ರಿವಿಧಜೀವರು, ಪೂರ್ವೋಕ್ತ ದೃಷ್ಟಾಂತದಿಂದ ಉಪಾಧಿಯುಕ್ತರು. ಉಪಾಧಿ ದಾವದೆಂದರೆ :–ಪರಮಾತ್ಮಗೆ ನಿತ್ಯಾವಿಯೋಗಿನಿಯಾದ ರಮಾದೇವಿಯರು ಜೀವಾಂತರ್ಗತದಲ್ಲಿ ಇದ್ದಾರೆ. ತದಂತರ್ಗತ ಬಿಂಬರೂಪೀ ಪರಮಾತ್ಮ ಇದ್ದಾನೆ. ಬಿಂಬ ಪ್ರತಿಬಿಂಬರ ಮಧ್ಯದಲ್ಲಿ ಇರತಕ್ಕ ರಮಾದೇವಿಯರೆಂಬ ವಸ್ತುವಿಶೇಷಕ್ಕೆ ಉಪಾಧಿ ಎಂತ ಸಂಕೇತ. ಬಿಂಬ ಪ್ರತಿಬಿಂಬರ ಮಧ್ಯಗತ ದರ್ಪಣಸದೃಶರು ರಮಾದೇವಿಯರು. ಅಷ್ಟೇ ಹೊರತು, ದರ್ಪಣದ್ವಾರಾ ಪ್ರತಿಬಿಂಬ ಪ್ರತಿಫಲಿಸಿದಂತೆ ಜೀವನೆಂಬೋ ಪ್ರತಿಬಿಂಬನಲ್ಲಿ ಉಪಾಧಿಪ್ರದರ್ಶನವು. ಈ ಪ್ರಕಾರ ಉಪಾಧಿಯಿಂದ ಸಹಿತರಾದವರು, ಪ್ರತಿಬಿಂಬರಾದ ತ್ರಿವಿಧ ಜೀವರುಗಳು ; ಗರುಡ ಪುರಾಣದಲ್ಲಿ ಪ್ರಮಾಣವದೆ. ಕಂಗೊಳಿಪುದು–ಈ ಪ್ರಕಾರ ಜ್ಞಾನದೃಷ್ಟಿಯಿಂದ ಜೀವರಿಗೆ ವಿಷಯವು. ಅನುಪಾಧಿಯಲಿ–ಉಪಾಧಿರಹಿತವಾಗಿ ಪ್ರತಿಬಿಂಬರಾಗಿ ಇರತಕ್ಕವರು ರಮಾದೇವಿಯರು. ರಮಾದೇವಿಯರಿಗೂ ಪರಮಾತ್ಮಗೂ ಮಧ್ಯೆ ಬ್ಯಾರೆ ಅಂತರವಿಲ್ಲ. ಆದ್ದರಿಂದ ಅನುಪಾಧಿಪ್ರತಿಬಿಂಬರು ರಮಾದೇವಿಯರು. ಕ್ಷರಾಕ್ಷರದಲ್ಲಿ ಸೋಪಾಧಿರನುಪಾಧಿ ಇದು. ಹರಿಗೆ–ಬಿಂಬರೂಪಿಯಾದ ಪರಮಾತ್ಮಗೆ, ಪ್ರತಿಬಿಂಬಾಹ್ವಯದಿ–ಪೂರ್ವೋಕ್ತ ಪ್ರಕಾರ ಪ್ರತಿಬಿಂಬನಾಮದಿಂದ ಕರಿಸತಕ್ಕ ಕ್ಷರಾಕ್ಷರ ಜೀವರ, ಪ್ರತಿದಿವಸ–ನಿರಂತರದಲ್ಲೂ, ತಿಳಿಯೆ–ಈ ರೀತ್ಯಾ ಪ್ರತಿಬಿಂಬರೆಂದು ತಿಳಿದರೆ, ತ್ರಿಕಕುದ್ಧಾಮನ–ಮೂರಾದಂಥಾ ಶ್ರೇಷ್ಠವಾದ ಶ್ವೇತದ್ವೀಪ, ಅನಂತಾಸನ, ವೈಕುಂಠ, ಈ ಮೂರು ಮನೆಗಳುಳ್ಳ ಶ್ರೀ ಪರಮಾತ್ಮನ, ಅತಿಮಂಗಳಸುರೂಪವ–ಅತ್ಯಂತ ಮಂಗಳಪ್ರದರೂಪವನ್ನ ಧ್ಯಾನಿಸಿದರೆ, ಹೃದಯಕೆ–ಮನಸ್ಸಿಗೆ, ಸರ್ವತಾವಿಲಿ–ದೇಹಾಂತರ್ಗತ ಸರ್ವ ಇಂದ್ರಿಯಗಳಲ್ಲೂ, ಪೊಳೆವ–ಪ್ರತ್ಯಕ್ಷನಾಗತಾನೆ. ದಾರು ಎಂದರೆ, ಪ್ರಹ್ಲಾದಪೋಷಕನು–ದೇಹಾಂತರ್ಗತ

ರಾದ ರಾಕ್ಷಸರ ಸಂಹಾರಮಾಡಿ, ಸಮೀಚೀನವಾದ ಜ್ಞಾನಾನಂದ ಕೊಡತಕ್ಕ ಶ್ರೀ ನೃಸಿಂಹರೂಪೀ ಪರಮಾತ್ಮ ಎಂತ ತಾತ್ಪರ್ಯ. ಪ್ರಹ್ಲಾದನ್ನ ರಕ್ಷಿಸಿದಂತೆ, ಸರ್ವಾರಿಷ್ಟ ನಿವೃತ್ತಿಮಾಡಿ, ಶುಭರೂಪವಾದ ಆನಂದಾತಿಶಯ ಕೊಟ್ಟು ಕಾಪಾಡತಾನೆ ಎಂತ ತಾತ್ಪರ್ಯ.

ಶ್ರೀ ಗರುಡಪುರಾಣ ೨ನೆಯ ಅಧ್ಯಾಯದಲ್ಲಿ ಈ ಪ್ರಕಾರ ಹೇಳತಾರೆ :– ದೇವರ ಮೂಲರೂಪದಲ್ಲಿ, ದೇವರ ಅವತಾರರೂಪಗಳು ಬ್ರಹ್ಮಾದಿ ಕಲ್ಯಂತ ಸಕಲ ಜೀವರಲ್ಲಿ ಇರೋ ಬಿಂಬರೂಪಗಳು, ಮಹಾಪ್ರಳಯದಲ್ಲಿ ಒಂದಂಶದಿಂದ ಲಯಹೊಂದುತ್ತವೆ. ಒಂದಂಶದಿಂದ ಜೀವರುಗಳಲ್ಲಿ ಇರದೆ ಸರ್ವಾಂಶದಿಂದ ಮೂಲರೂಪದಲ್ಲಿ ಏಕೀಭೂತ ಆಗತವೆಂದು ಪೇಳುವವರಿಗೆ ತಮಃಪ್ರಾಪ್ತಿ ಆಗತದೆ.

ಸ್ವರೂಪೋಪಾಧಿ, ಬಾಹ್ಯೋಪಾಧಿಯಾದ ಈ ಲಿಂಗದೇಹ, ಈ ಲಿಂಗದೇಹೋಪಾಧಿ ಎಂಬುದು ಮುಕ್ತಿಯೋಗ್ಯರಿಗೂ, ತಮೋಯೋಗ್ಯರಿಗೂ, ನಿತ್ಯಸಂಸಾರಿಗಳಿಗೂ ಮುಕ್ತಿಯಲ್ಲಿ ನಾಶವಾಗುತ್ತದೆ. ಪ್ರತಿಬಿಂಬದಲ್ಲಿ ದೇವರ ಹತ್ತಿರ ಲಕ್ಷ್ಮೀರೂಪಗಳು ಸಹಾ ಉಂಟು. ಪ್ರಳಯದಲ್ಲಿ ದೇವರಂತೆ ಲಕ್ಷ್ಮೀರೂಪಗಳು ಒಂದಂಶದಿಂದ ಲಕ್ಷ್ಮೀಮೂಲರೂಪ ದಲ್ಲಿ ಸೇರುತ್ತವೆ.

**ರಸವಿಶೇಷದೊಳತಿವಿಮಲ ಸಿತ ।**
**ವಸನ ತೋಯಿಸಿ ಅಗ್ನಿಯೊಳಗಿಡೆ ।**
**ಪಸರಿಸುವುದು ಪ್ರಕಾಶ ನಸುಗುಂದದಲೆ ಸರ್ವತ್ರ ॥**
**ತ್ರಿಶಿರದೂಷಣವೈರಿ ಭಕ್ತಿಸು ।**
**ರಸದಿ ತೋಯ್ದ ಮಹಾತ್ಮರನು ಬಾ ।**
**ಧಿಸವು ಭವದೊಳಗಿದ್ದರೆಯು ಸರಿ ದುರಿತರಾಶಿಗಳು ॥ ೨೮ ॥**

ಭಗವದ್ಭಕ್ತರಿಗೆ ದುರಿತ ರಾಶಿಗಳು ಪೀಡಿಸೋದಿಲ್ಲ ಎಂತ ಹೇಳತಾರೆ.

ಅತಿವಿಮಲ–ಅತ್ಯಂತ ನಿರ್ದೋಷವಾದ, ರಸವಿಶೇಷದೊಳು–ವಸ್ತ್ರವನ್ನು ಅಗ್ನಿ ಸ್ಪರ್ಶವಾದ ಕಾಲಕ್ಕೂ ಸುಡದೆ ಇರತಕ್ಕ ರಸವಿಶೇಷವಾದ ಒಂದು ತೈಲದಲ್ಲಿ, ಸಿತವಸನ–ಅತಿ ಶುಭ್ರವಾದ ವಸ್ತ್ರವನ್ನು, ತೋಯಿಸಿ–ಛಂದಾಗಿ ಅದ್ದಿದವರಾಗಿ, ಅಗ್ನಿಯೊಳಗಿಡೆ–ಅಗ್ನಿಯಲ್ಲಿಟ್ಟರೆ, ಅಗ್ನಿಸಂಬಂಧದಿಂದ ಜ್ವಾಲವಾಗಿ, ಆ ಜ್ವಾಲದ, ಸರ್ವತ್ರ–ಯೋಗ್ಯತೆ ಎಷ್ಟೋ ಅಷ್ಟು ಪರಿಯಂತ ಸರ್ವತ್ರ, ಪ್ರಕಾಶ ಪಸರಿಸುವುದು–ಪ್ರಕಾಶ ವ್ಯಾಪಿಸೋದಾಗತದೆ. ನಸುಗುಂದದಲೆ–ಆ ವಸ್ತ್ರ ದಾವದದೆ ಅದು, ಕಿಂಚಿತ್ತಾದರೂ ಅಗ್ನಿಯಿಂದ ಬಾಧಿತವಾಗಿ ಲೋಪ ಕಾಣದೆ ಇರೋದಾಗತದೆ. ಅಗ್ನಿ ಎಂಬುದು ವಸ್ತ್ರಕ್ಕೆ ಸಂಬಂಧ ವಾದ ರಸ ವಿಶೇಷವನ್ನ ದಹಿಸಿ, ವಸ್ತ್ರವನ್ನ ದಹಿಸದೆ ಬಿಡೋದಾಗತದೆ. ಇದರೋಪಾದಿಯಲ್ಲಿ, ತ್ರಿಶಿರದೂಷಣವೈರಿ–ತ್ರಿಶಿರ, ದೂಷಣ ಎಂಬ ಈ ದೈತ್ಯರಿಗೆ ಶತ್ರುವಾದ,

ಭಕ್ತಿಸುರಸದಿ–ಶ್ರೀರಾಮನಲ್ಲಿ ಮಾಹಾತ್ಮ್ಯಪೂರ್ವಕ ಸುದೃಢ ಸ್ನೇಹ ರೂಪವಾದ ಭಕ್ತಿ ಎಂಬ ಸಮೀಚೀನವಾದ ರಸದಲ್ಲಿ, ತೋಯ್ದ ಮಹಾತ್ಮರನ–ಅಂದರೆ, ಮಹಾಭಕ್ತರನ್ನ, ಭವದೊಳಗಿದ್ದರೆಯು–ಸುಖದುಃಖಾತ್ಮಕವಾದ ದಾರಾಪುತ್ರಾದಿಗಳ ಸಹಿತವಾದ ಸಂಸಾರ ದೊಳಗಿದ್ದರೂ ಅದನ್ನನುಸರಿಸಿ ಈಶಸಂಕಲ್ಪಾನುಸಾರ ಪಾಪಗಳು ಘಟನವಾಗುತ್ತಾ ಇರುತ್ತವೆ. ಹಿಂಗೆ ಇದ್ದ, ಸರಿ–ಕಾಲಕ್ಕೂ ಸಹ, ದುರಿತ ರಾಶಿಗಳು–ಪಾಪರಾಶಿಗಳು, ಬಾಧಿಸವು–ಬಾಧಿಸೋದಿಲ್ಲ. ಮುಖ್ಯ ಜ್ಞಾನ, ಭಕುತಿ, ವೈರಾಗ್ಯ ಸಹಿತರಾದ ಭಕ್ತರಿಗೆ ಪಾಪ ಲೇಪವಾಗೋದಿಲ್ಲ ಎಂತ ದೃಷ್ಟಾಂತವೆಂದು ತಾತ್ಪರ್ಯ.

**ವಾರಿನಿಧಿಯೊಳಗಖಿಳ ನದಿಗಳು ।**
**ಬೇರೆ ಬೇರೆ ನಿರಂತರದಲಿ ವಿ ।**
**ಹಾರಗೈವುತ ಪರಮಮೋದದಲಿಪ್ಪ ತೆರನಂತೆ ॥**
**ಮೂರು ಗುಣಗಳ ಮಾನಿಯೆನಿಸುವ ।**
**ಶ್ರೀರಮಾರೂಪಗಳು ಹರಿಯಲಿ ।**
**ತೋರುತಿಪ್ಪವು ಸರ್ವಕಾಲದಿ ಸಮರಹಿತವೆನಿಸಿ ॥ ೨೮ ॥**

ರಮಾದೇವಿಯರು ಪರಮಾತ್ಮಗೆ ಸಮರು ಅಸಮರು ಎಂತ ಹೇಳತಾರೆ.

ವಾರಿನಿಧಿಯೊಳಗೆ–ಸಮುದ್ರದೊಳಗೆ, ಅಖಿಳ ನದಿಗಳು–ಸಮಸ್ತವಾದ ನದಿಗಳು, ಬೇರೆ ಬೇರೆ–ಪ್ರತ್ಯೇಕ ಪ್ರತ್ಯೇಕವಾಗಿ, ನಿರಂತರದಲಿ–ಸದಾ ಸರ್ವಕಾಲವೂ, ವಿಹಾರ ಗೈವುತ–ಸಂಚಾರಮಾಡುತ್ತಾ, ಪರಮಮೋದದಲಿ–ಅತ್ಯಂತ ಸಂತೋಷದಿಂದ, ಇಪ್ಪ ತೆರನಂತೆ–ಇರುವೋಪಾದಿಯಲ್ಲಿ, ಮೂರು ಗುಣಗಳ ಮಾನಿಯೆನಿಸುವ–ಸತ್ತ್ವಾದಿ ತ್ರಿಗುಣಗಳಾದ ಮೂಲ ಜಡ ಪ್ರಕೃತಿಗೆ ಅಭಿಮಾನಿ ಎಂತ ಕರಿಸತಕ್ಕಂಥಾ, ಶ್ರೀರಮಾ ರೂಪಗಳು–ಕಾಂತಿಸಂಪನ್ನರಾದ ರಮಾದೇವಿಯರ ರೂಪಗಳು, ಹರಿಯಲಿ–ಶ್ರೀ ಪರಮಾತ್ಮನಲ್ಲಿ, ಸಮರಹಿತವೆನಿಸಿ–ಸಮಾನವೆಂತಲೂ, ಅಸಮಾನವೆಂತಲೂ, ಸರ್ವ ಕಾಲದಿ–ಅನಾದ್ಯನಂತಕಾಲಕ್ಕೂ, ತೋರುತಿಪ್ಪವು–ತೋರತಾ ಇರುತ್ತವೆ. ಅಂದರೆ ಶ್ರೀ ಪರಮಾತ್ಮ ಸಮುದ್ರದೋಪಾದಿಯಲ್ಲಿ, ಅಪರಿಚ್ಛಿನ್ನವ್ಯಾಪ್ತ. ನದಿಗಳೋಪಾದಿ ಯಲ್ಲಿ, ರಮಾರೂಪಗಳು ಏಕೈಕ ದೇಶವ್ಯಾಪ್ತವು. ಸಮುದ್ರದಲ್ಲಿ ನದಿಗಳು ಏಕದೇಶ ವ್ಯಾಪ್ತಿಯೇ ಹೊರತು ಸರ್ವದೇಶ ವ್ಯಾಪ್ತಿ ಇಲ್ಲ. ಸಮುದ್ರ ಅಪರಿಚ್ಛಿನ್ನ ವ್ಯಾಪ್ತಿ ಉಳ್ಳದ್ದು. ನದಿಗಳಿಗೆ ಸಮುದ್ರಕ್ಕೆ ಹ್ಯಾಂಗೆ ವಿಯೋಗವಿಲ್ಲವೊ, ತದ್ವತ್ ಶ್ರೀಹರಿ, ಹಾಗೂ ರಮಾ ಇವರು ಅವಿಯೋಗರು. ಈ ರೀತ್ಯಾ ಸಮಾನಾಸಮಾನರು ಎಂತ ತಾತ್ಪರ್ಯ.

**ಕೋಕನದಸಖನುದಯ ಘೂಕಾ ।**
**ಲೋಕನಕೆ ಸೊಗಸದಿರೆ ಭಾಸ್ಕರ ।**
**ತಾ ಕಳಂಕನೆ ಈ ಕೃತೀಪತಿ ಜಗನ್ನಾಥನಿರೆ ॥**

**ಸ್ವೀಕರಿಸಿ ಸುಖಬಡಲರಿಯುದವಿ ।**
**ವೇಕಿಗಳು ನಿಂದಿಸಿದರೇನಹು ।**
**ದೀ ಕವಿತ್ವವ ಕೇಳಿ ಸುಖಬಡದಿಹರೆ ಕೋವಿದರು ॥ ೩೦ ॥**

ಈ ಕಾವ್ಯ ವಿವೇಕಿಗಳಿಗೆ ಯೋಗ್ಯವಾದದ್ದೆಂದು ಹೇಳತಾರೆ.

ಕೋಕನದಸಖ–ಕಮಲಾಪ್ತನಾದ ಸೂರ್ಯನ, ಉದಯ–ಉದಯವು, ಘೂಕಾಲೋಕನಕೆ–ಗೂಗಿ ನೋಡೋದಕ್ಕೆ, ಸೊಗಸದಿರೆ–ಸೊಗಸದ ಮಾತ್ರಕ್ಕೆ, ಭಾಸ್ಕರ ತಾ ಕಳಂಕನೆ–ಸೂರ್ಯ ದೋಷಿ ಎಂತ ಕರಿಸೋನೆ ಅಂದರೆ, ದೋಷಿ ಆದಾನೆ? ಆಗಲಾರ. ದೋಷ ಎಂಬುದು ಗೂಗಿ ನೇತ್ರದ್ದೇ ಹೊರತು ಸೂರ್ಯಂದು ಅಲ್ಲ. ಸೂರ್ಯ ದಾವಾಗ್ಯೂ ನಿರ್ದೋಷವಾದ ತೇಜಃಪುಂಜನಾಗಿ ಇದ್ದಾನೆ. ತದ್ವತ್, ಈ ಕೃತೀಪತಿ–ಈ ಕಾವ್ಯವೆಂಬ ಸೂರ್ಯನಲಿ ತೇಜಸ್ಸಿಗೆ ಸಮಾನನಾದ ಜಗತ್ಪತಿಯಾದ, ಜಗನ್ನಾಥ ನಿರೆ–ಶ್ರೀ ಪರಮಾತ್ಮ ಇರೋವನಾಗಿದ್ದಾನೆ. ಎಂದರೆ, ಸೂರ್ಯನ ಕಾಂತಿಗೆ ಸಮಾನವಾದ ಪರಮಾತ್ಮನ ಮಾಹಾತ್ಮ್ಯ ಪ್ರಕಾಶಮಾನವಾಗಿ ಅಜ್ಞಾನಾಂಧಕಾರ ಪರಿಹಾರ ಮಾಡಿ ಜ್ಞಾನ ಪ್ರಕಾಶಮಾಡತಾ ಇರಲಾಗಿ, ಸ್ವೀಕರಿಸಿ–ಇದರನ್ನ ಅಂಗೀಕಾರಮಾಡಿ, ಸುಖಬಡಲು–ಜ್ಞಾನನೇತ್ರ ಉಳ್ಳ ಅಧಿಕಾರಿಗಳು ಆಗುತಾರೆ. ಆದ್ದರಿಂದ, ಸುಖ ಪಡೋದಕ್ಕೆ ಯೋಗ್ಯರಾಗುತ್ತಾರೆ. ಅರಿಯದ–ಭಗವನ್ಮಹಿಮೆ ಅರಿಯದ ಗೂಗಿ ನೇತ್ರಕ್ಕೆ ಸಮವಾದ ಅಜ್ಞಾನನೇತ್ರ ಉಳ್ಳ, ಅವಿವೇಕಿಗಳು–ವಿವೇಕಶೂನ್ಯರಾದವರು, ನಿಂದಿಸಿದರೇನಹುದು–ನಿಂದಾಮಾಡೋಣದರಿಂದ ಈ ಕಾವ್ಯಕ್ಕೆ ಆಗತಕ್ಕ ನಷ್ಟ ಏನೂ ಇಲ್ಲ. ಗೂಗಿ ನಿಂದಾಮಾಡೋಣದರಿಂದ ಸೂರ್ಯಗೆ ಏನು ದೋಷವೂ ಬರಲಿಲ್ಲ. ಹ್ಯಾಂಗೋ, ತದ್ವತ್, ಈ ಕವಿತ್ವವ–ಪರಮಾತ್ಮನ ಮಾಹಾತ್ಮ್ಯದಿಂದ ಪೂರ್ಣವಾದ ಅಜ್ಞಾನಾಂಧಕಾರ ಪರಿಹಾರ ಮಾಡತಕ್ಕ ಈ ಗ್ರಂಥವನ್ನ, ಕೋವಿದರು–ಜ್ಞಾನ ನೇತ್ರ ಉಳ್ಳ ಭಕ್ತರು, ಕೇಳಿ ಸುಖ ಬಡದಿಹರೆ–ಶ್ರವಣ ಮಾಡಿ ತದ್ಗತ ಸಾರಭೂತ ಭಗವನ್ಮಾಹಾತ್ಮ್ಯ ಎಂಬ ಅಮೃತವನ್ನು ಶ್ರವಣೇಂದ್ರಿಯದಿಂದ ಪಾನಮಾಡಿ ಸುಖ ಪಡದೆ ಇರೋರೆ? ಸುಖ ಪಡತಾರೆ ಎಂತ ತಾತ್ಪರ್ಯ. ಈ ಗ್ರಂಥಸೂರ್ಯ, ಕಮಲಸದೃಶರಾದ ಭಗವದ್ಭಕ್ತರಿಗೆ ಶ್ಲಾಘ್ಯ. ಗೂಗಿಗೆ ಸದೃಶರಾದ ಅಯೋಗ್ಯರಿಗೆ ಶ್ಲಾಘ್ಯವಾಗೋದಿಲ್ಲ ಎಂತ ಭಾವವು.

**ಚೇತನಾಚೇತನಗಳಲಿ ಗುರು ।**
**ಮಾತರಿಶ್ವಾಂತರ್ಗತ ಜಗ ।**
**ನ್ನಾಥವಿಠಲ ನಿರಂತರದಿ ವ್ಯಾಪಿಸಿ ತಿಳಿಸಿಕೊಳದೆ ॥**
**ಕಾತುರವ ಪುಟ್ಟಿಸಿ ವಿಷಯದಲಿ ।**
**ಯಾತುಧಾನರ ಮೋಹಿಸುವ ನಿ ।**
**ರ್ಭೀತ ನಿತ್ಯಾನಂದಮಯ ನಿರ್ದೋಷ ನಿರವದ್ಯ ॥ ೩೧ ॥**

ಅಸುರಸ್ವಭಾವದವರನ್ನ ಮೋಹಯುಕ್ತರನ್ನಾಗಿ ಮಾಡತಾನೆ ಎಂತ ಹೇಳತಾರೆ.

ಚೇತನ–ಚೇತನರಾದ ಮಾನುಷ, ಪಶು, ಪಕ್ಷಿ ಜೀವರುಗಳು, ಅಚೇತನ–ವೃಕ್ಷಾದಿ ಜೀವರು. ಈ ರೀತ್ಯಾ ತ್ರಿವಿಧ ಜೀವರು, ಗಳಲಿ–ಈ ಜೀವರುಗಳಲ್ಲಿ, ಮಾತರಿಶ್ವ–ವಾಯು ದೇವರಿಗೆ, ಗುರು–ನೀತ ಗುರುವಾದ, ಜಗನ್ನಾಥವಿಠಲ–ಜಗನ್ನಾಥ ಅಂದರೆ ಜಗತ್ತಿಗೆ ಸ್ವಾಮಿಯಾದ ಶ್ರೀ ಪರಮಾತ್ಮ, ಅಂತರ್ಗತ–ಚರಾಚರ ಜಗತ್ತಿಗೆ ಅಂತರ್ಗತನಾಗಿ, ನಿರಂತರದಿ–ಅನಾದ್ಯನಂತ ಕಾಲಕ್ಕೂ ಅವಿಯೋಗನಾಗಿ, ಬಿಂಬನಾಗಿ, ವ್ಯಾಪಿಸಿ–ಈ ರೀತ್ಯಾ ವ್ಯಾಪಿಸಿ ಇದ್ದು, ತಿಳಿಸಿಕೊಳದೆ–ಅಪಕ್ವದಶಾದಲ್ಲಿ ಭಗವದ್ಭಕ್ತರಿಗೆ ಅಪರೋಕ್ಷ ದಿಂದ ತಿಳಿಯಲಾರದೆ, ದ್ವೇಷಿಗಳಾದ ಅಸುರರಿಗೆ, ನಿತ್ಯಸಂಸಾರಿಗಳಿಗೆ ದಾವಾಗ್ಯೂ ತಿಳಿಸಿಕೊಳದೆ ಅದರಲ್ಲಿ, ಯಾತುಧಾನರ–ಭಗವದ್ವೇಷಿಗಳಾದ ದೈತ್ಯರ, ನಿರ್ಭೀತ–ಭಯ ರಹಿತನಾದ, ನಿತ್ಯಾನಂದಮಯ–ಸದಾ ಸಂತೋಷದಿಂದ ಪೂರ್ಣನಾದ, ನಿರ್ದೋಷ–ದೋಷದಿಂದ ರಹಿತನಾದ, ನಿರವದ್ಯ–ಜೀವಭುಕ್ತ ಸುಖದುಃಖಾದಿ ದೋಷಗಳಿಂದ ದೂರನಾದವ, ವಿಷಯದಲಿ–ಪ್ರಾಕೃತ ವನಿತಾದಿ ಭೋಗಗಳ ವಿಷಯದಲ್ಲಿ, ಕಾತುರವ ಪುಟ್ಟಿಸಿ–ಅತ್ಯಂತವಾದ ಆಸಕ್ತಿಯನ್ನು, ಅವರ ಸ್ವಭಾವವನ್ನನುಸರಿಸಿ ಉತ್ಪತ್ತಿ ಮಾಡಿ, ಮೋಹಿಸುವ–ಮೋಹಯುಕ್ತರನ್ನಾಗಿ ಮಾಡಿ ಮತ್ತು ವಿಪರೀತ ಜ್ಞಾನದಲ್ಲಿ ಆಸಕ್ತ ರನ್ನಾಗಿ ಮಾಡಿ ದುಃಖವ ಕೊಡತಾನೆ. ತದನ್ಯರಾದ ಮುಕ್ತಿಯೋಗ್ಯರಿಗೆ ಪ್ರಾಕೃತ ವಿಷಯಾದಿಗಳಲ್ಲಿ ಹೇಯತಾ ಬುದ್ಧಿ ಕೊಟ್ಟು, ಸುಖವನ್ನ ಕೊಡತಾನೆಂತ ತಾತ್ಪರ್ಯ.

**ವಿಶೇಷಾರ್ಥ :–** ಪ್ರಮಾಣ :– "ಪರಾ ಪೂರ್ವೇಷಾಂ ಸಖ್ಯಾ ವೃಣಕ್ತಿ ವಿತರ್ತುರಾಣೋ ಅಪರೇಭಿರೇತಿ | ಅನಾನುಭೂತೀರವಧೂನ್ವಾನಃ ಪೂರ್ವೀ ಇಂದ್ರಃ ಶರದಸ್ತರ್ತರೀತಿ ||" (ಋ. ಮಂ. ೬, ಸೂ. ೪೭, ಮಂ. ೧೭) ಎಂಬ ಶ್ರುತ್ಯರ್ಥವನ್ನ ಮೇಲಿನ ಶ್ಲೋಕದಲ್ಲಿ ಹೇಳಿದ್ದಾರೆ.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ಪಿತೃಗಣಸಂಧಿವ್ಯಾಖ್ಯಾನಂ ಸಂಪೂರ್ಣಂ**

|| ಶ್ರೀ ಕೃಷ್ಣಾರ್ಪಣಮಸ್ತು ||

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಹದಿನೈದನೆಯ ಸಂಧಿ

## ಶ್ವಾಸ ಸಂಧಿ

**ಹರಿಕಥಾಮೃತಸಾರ ಗುರುಗಳ |**
**ಕರುಣದಿಂದಾಪನಿತು ಪೇಳುವೆ |**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು || ಪ ||**

**ಮೂಲ :**

**ಭಾರತೀಶನು ಘಳಿಗೆಯೊಳು ಮು |**
**ನ್ನೂರಅರುವತ್ತು ಸುರಜಪಗಳ |**
**ತಾ ರಚಿಸುವನು ಸರ್ವಜೀವರೊಳಿದ್ದು ಬೇಸರದೆ ||**
**ಕಾರುಣಿಕನವರವರ ಸಾಧನ |**
**ಪೂರೈಸಿ ಭೂ ಸ್ವರ್ಗ ನರಕವ |**
**ಸೇರಿಸುವ ಸರ್ವಜ್ಞ ಸಕಲೇಷ್ಟಪ್ರದಾಯಕನು || ೧ ||**

**ಟೀಕಾ :**

ಶ್ರೀ ವಾಯುದೇವರು ಶ್ವಾಸ ಜಪಗಳ ನಡಸಿ ಗತಿಗಳ ಕೊಡತಾರೆಂದು ಹೇಳತಾರೆ.

ಭಾರತೀಶನು—ಭಾರತೀದೇವಿಯರ ಪತಿಯಾದ ಶ್ರೀ ವಾಯುದೇವರು, ಘಳಿಗೆಯೊಳು—ಒಂದು ದಿನಕ್ಕೆ ಅರುವತ್ತು ಘಳಿಗೆ. ಒಂದು ಘಳಿಗೆ ಒಳಗೆ, ಮುನ್ನೂರ ಅರುವತ್ತು—(೩೬೦) ಮುನ್ನೂರಾ ಅರವತ್ತು, ಸುರ ಜಪಗಳ—'**ಹಂಸ**' ಎಂಬ ಸಮಿಾಚೀನವಾದ '**ಹಂಸ**' ನಾಮಕ ಪರಮಾತ್ಮನ ನಾಮೋಚ್ಚಾರಣ ರೂಪವಾದ ಜಪಗಳ, ತಾ ರಚಿಸುವನು—ವಾಯುದೇವರು ತಾವು ಮಾಡತಾರೆ. ಬೇಸರದೆ—ಜಾಮಿತಾದಿ ದೋಷಗಳಿಂದ ರಹಿತರಾಗಿ (ಸ್ವಲ್ಪವೂ ಬೇಜಾರುಪಟ್ಟುಕೊಳ್ಳದೆ), ಸರ್ವ ಜೀವರೊಳಿದ್ದು—ಸಮಸ್ತ ಪ್ರಾಣಿಗಳಲ್ಲಿದ್ದು, ಕಾರುಣಿಕನು—ಆಯುಸ್ಸು ಕ್ಷೀಣಕ್ಕೆ ಕಾರಣರಾದ ವಾಯುದೇವರಕಡಿಯಿಂದ ಶ್ವಾಸನಿಮಿತ್ತದಿಂದ ೨೧,೬೦೦ ಜಪಗಳು ದಾವಾಗ ಮುಗಿಯುತ್ತವೆ, ಆಗ ಒಂದು ದಿನದ ಆಯುಸ್ಸು ಕ್ಷೀಣವಾಗುತ್ತದೆ. ಈ ಪ್ರಕಾರ ಆಯುಸ್ಸಿಗೆ ಕಾರಣರಾದವರು,—ಅವರವರ ಸಾಧನ ಪೂರೈಸಿ—೨೧,೬೦೦ ಶ್ವಾಸಕ್ಕೆ ಆಗತಕ್ಕ ಪ್ರತಿಯೊಂದು ದಿನದ ಆಯುಸ್ಸು ಕಾಲದಲ್ಲಿ ಸರ್ವತತ್ತ್ವಗಳಿಗೆ, ತತ್ತ್ವಾಭಿಮಾನಿ ದೇವತೆಗಳಿಗೆ

*

ನಿಯಾಮಕರಾಗಿ ಇದ್ದು, ಅವರವರ ಸ್ವರೂಪಯೋಗ್ಯತಾವನ್ನನುಸರಿಸಿ, ಅವರವರಿಗೆ ಯೋಗ್ಯವಾದ ಸಾಧನಿಗಳ, ಸ್ಥೂಲ ದೇಹೇಂದ್ರಿಯಾದಿಗಳ ದ್ವಾರಾ ಪೂರ್ಣಮಾಡಿ, ಭೂ–ಕೆಲವ್ರಕಾಲ ಭೂಮಿಯಲ್ಲಿ, ಸ್ವರ್ಗ–ಸಕಾಮಪುಣ್ಯವಿಶೇಷಗಳಿಂದ ಸ್ವರ್ಗದಲ್ಲಿ ಹಾಂಗೇ, ತದ್ವ್ಯತಿರಿಕ್ತ ಭೋಗಭೂಮಿಗಳಾದ ಇತರ ಖಂಡಗಳಲ್ಲಿ, ನರಕವ–ಪಾಪ ಕರ್ಮವಶಾತ್ ನರಕದಲ್ಲಿ, ಸೇರಿಸುವ–ಸೇರಿಸೋವರಾಗತಾರೆ ಎಂದರೆ, ಹಾಂಗೆ ಸೇರತಕ್ಕ ಕರ್ಮ ಮಾಡಿಸೋದರಲ್ಲಿ ಕಾರಣರಾದ್ದರಿಂದ, ತದ್ದ್ವಾರಾ ಸೇರಸತಾರೆ. ಇದು ಅಪಕ್ವ ದಶಾದಲ್ಲಿ, ಅನಾದಿ ಕರ್ಮವನ್ನನುಸರಿಸಿ ಮಾಡಿಸಿದ ಕಾಮ್ಯಕರ್ಮಫಲ; ತ್ರಿವಿಧ ರಾದವರಿಗೂ ಆಗೋದಾಗತದೆ. ಸರ್ವಜ್ಞ–ಸರ್ವ ಪ್ರಾಣಿಗಳ ಸ್ವರೂಪಯೋಗ್ಯತಾ ಬಲ್ಲ ವಾಯುದೇವರು, ಸಕಲೇಷ್ಟಪ್ರದಾಯಕನು–ಸರ್ವ ಜೀವರ ಸ್ವರೂಪ ಯೋಗ್ಯತಾಕ್ಕೆ ಅನುಸರಿಸಿದ ಇಷ್ಟಗಳ ಭಗವಂತಗೆ ವಿಜ್ಞಾಪನಾಮಾಡಿ ಲಿಂಗಭಂಗಾನಂತರ ಭಗವದಾಜ್ಞಾ ದಿಂದ ಕೊಡತಕ್ಕವರು. "ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ" ಎಂಬ ವಚನರೀತ್ಯಾ ದೇವರ ಆಜ್ಞಾನುಸಾರ ಮುಮುಕ್ಷುಗಳಿಗೆ ಮೋಕ್ಷ ಕೊಡತಾ ರೆಂತಲೂ, 'ಹುಂ'ಕಾರದಿಂದ ನಿತ್ಯಸಂಸಾರಿಗಳಿಗೆ ಲಿಂಗಭಂಗಮಾಡಿ ಸುಖದುಃಖಗಳ ಕೊಡತಾರೆಂತಲೂ ತಾತ್ಪರ್ಯ.

ಶ್ರೀ ವಾಯುದೇವರು ದೇಹದಲ್ಲಿ ದಾವ ಸ್ಥಳದಲ್ಲಿದ್ದು ಜಪಮಾಡತಾರೆ ಎಂದರೆ, ಸ್ಥೂಲದೇಹಗತ ಹೃದಯಕಮಲದಲ್ಲಿ, ಕರ್ಣಿಕಾಮೂಲಗತ ಮೂಲೇಶನ ಪಾದ ಮೂಲದಲ್ಲಿ ಇದ್ದು, '**ಹಂಸ**' ಎಂತ ಜಪಿಸೋವರಾಗತಾರೆ. (೯ ನೇ ಸಂಧಿ ೧೯ ನೇ ಶ್ಲೋಕ). ಅನ್ಯರಾದ ರುದ್ರಾದಿ ದೇವತೆಗಳಿಗೆ ಈ ಅಧಿಕಾರವಿಲ್ಲ. '**ಹಂ**' ಎಂಬ ವರ್ಣ ಉಚ್ಚಾರ ಕಾಲಕ್ಕೆ, ಆ ವರ್ಣ ವಾಯುದೇವರ ಮುಖದಿಂದ ಬಾಹ್ಯದಲ್ಲಿ ವ್ಯಕ್ತ ವಾಗಿ, ಶ್ವಾಸದಲ್ಲಿ ಅಂತರ್ಭೂತವಾಗಿ ಶ್ವಾಸದ್ವಾರಾ ಬಾಹ್ಯದಲ್ಲಿ, ನಾಸಿಕಾದ್ವಾರದಿಂದ ವ್ಯಕ್ತವಾಗತದೆ. '**ಸ**' ಎಂಬ ವರ್ಣ ಉಚ್ಚಾರ ಕಾಲಕ್ಕೆ ಅದೂನೂ ಶ್ವಾಸದಲ್ಲಿ ಪ್ರವಿಷ್ಟವಾಗಿ, ನಾಸಿಕಾದ್ವಾರದಿಂದ ಶ್ವಾಸ ಒಳಗೆ ಪ್ರವೇಶಕಾಲದಲ್ಲಿ, '**ಸ**' ಎಂಬ ವರ್ಣಸಹಿತವಾಗಿ ಒಳಗೆ ಪ್ರವೇಶಮಾಡತದೆ. ಉಚ್ಛ್ವಾಸ, ನಿಶ್ಶ್ವಾಸಗತ ಎರಡು ವರ್ಣಗಳೂ ಸೇರಿ '**ಹಂಸ**' ಎಂತ ಮಂತ್ರವಾಯಿತು. ವಾಯುದೇವರು ದೇಹಗತ ಜಡವಾಯು ಅಧಿಷ್ಠಿತರಾಗಿ ಗಾಳಿರೂಪ ಧರಿಸಿ, ಒಳಗೆ ಹೊರಗೆ ಸಂಚರಿಸುತ್ತಾ ಇದ್ದಾರೆ. ಆಯುಸ್ಸಿಗೆ ಕಾರಣವಾದದ್ದು, ಈ ಶ್ವಾಸ. ಇದರಲ್ಲಿ ಈ ಪ್ರಕಾರ '**ಹಂಸ**' ಮಂತ್ರ ವಾಯುದೇವರು ತಾವು ಮಾಡತಾರೆ. ಆದರೆ, ಜೀವರ ಅತ್ಯಣುಸ್ವರೂಪದಲ್ಲಿ ಎಂತ ತಾತ್ಪರ್ಯವಲ್ಲ. ಜೀವಾಂತರ್ಗತ ವಾಯು ಪ್ರವೇಶವಿಲ್ಲ. ಮತ್ತು ಶ್ವಾಸ ಎಂಬುದು, ಮೇಲೆ ಹೇಳಿದ ಪ್ರಕಾರ, ಆಯುಸ್ಸಿಗಾಗಿ ನೇಮಕವಾದದ್ದು. ಆಯುರ್ನೇಮ ಜೀವಗೆ ಇಲ್ಲ, ಬಾಹ್ಯವಾದ ಸ್ಥೂಲ ದೇಹಕ್ಕೇ ಆದ್ದರಿಂದ, ಜೀವಶಬ್ದ ಸ್ಥೂಲ ದೇಹದಲ್ಲಿ ಪ್ರಕಾಶತೋ ವ್ಯಾಪ್ತನಾದ ಜೀವಪರ ಎಂಬುದು, ಅರ್ಥಾತ್ ಸಿದ್ಧವು. ಈ '**ಹಂಸ**' ಮಂತ್ರ ತ್ರಿವಿಧ ಜೀವರೊಳು, ವಾಯುದೇವರು ಏಕಪ್ರಕಾರ ಮಾಡೋವರಾಗತಾರೆ.

**ತಾಸಿಗೊಂಭೈನೂರು ಶ್ವಾಸೋ ।**
**ಚ್ಛ್ವಾಸಗಳ ನಡೆಸುತಲಿ ಚೇತನ ।**
**ರಾಶಿಯೊಳು ಹಗಲಿರುಳು ಜಾಗೃತನಾಗಿ ನಿತ್ಯದಲಿ ॥**
**ಈ ಸುಮನಸೋತ್ತಂಸ ಲೇಶಾ ।**
**ಯಾಸವಿಲ್ಲದೆ ಪೋಷಿಸುತ ಮೂ ।**
**ಲೇಶನಂಘ್ರಿಸರೋಜಮೂಲದಲಿಪ್ಪ ಕಾಣಿಸದೆ ॥ ೨ ॥**

ಶ್ರೀ ಪ್ರಾಣದೇವರು ಒಂದು ಮುಹೂರ್ತಕ್ಕೆ ಆಗೋ ಶ್ವಾಸದಲ್ಲಿದ್ದು ಯಾವ ಜಪ ಮಾಡತಾರೋ, ಅದರನ್ನ ಹೇಳತಾರೆ :–

ತಾಸಿಗೆ–ಎರಡುವರೆ ಘಳಿಗೆಗೆ ಒಂದು ತಾಸು (ಒಂದು ಘಂಟೆ) ಇಂಥಾ ತಾಸು ಒಂದಕ್ಕೆ, ಒಂಭೈನೂರು-(೯೦೦) ಒಂಭತ್ತು ನೂರು, ಹ್ಯಾಂಗೆಂದರೆ, ಒಂದು ಘಳಿಗೆಗೆ ೩೬೦, ಮತ್ತೊಂದು ಘಳಿಗೆಗೆ ೩೬೦, ಅರ್ಧ ಘಳಿಗೆಗೆ ೧೮೦. ಅಂತು ಒಟ್ಟು ೯೦೦, ಒಂದು ತಾಸಿಗೆ. ಶ್ವಾಸೋಚ್ಛ್ವಾಸಗಳ–೧) ಶ್ವಾಸ, ಒಳಗಿನಿಂದ ಹೊರಗೆ ಬರೋ ಶ್ವಾಸರೂಪವಾದ '**ಹಂ**' ಎಂಬ ಅಕ್ಷರದಿಂದ ಯುಕ್ತವಾಗಿ ನಾಸಿಕಾದ್ವಾರದಿಂದ ಹೊರಗೆ ಬರತದೆ. ೨) ಉಚ್ಛ್ವಾಸ, ಹೊರಗೆ ಬಂದ ಶ್ವಾಸ ಎಂಬುದು, '**ಸ**' ಎಂಬ ವರ್ಣದಿಂದ ಸಹಿತವಾಗಿ ನಾಸಿಕಾ ದ್ವಾರದಿಂದ ಒಳಗೆ ಪ್ರವೇಶವಾಗತದೆ, ಅಂತು, ಶ್ವಾಸೋಚ್ಛ್ವಾಸಗಳು ಎರಡೂ ಸೇರಿ ಒಂದು ಶ್ವಾಸ ಎಂತ ತಾತ್ಪರ್ಯ. ತದ್ಗತ ಎರಡು ವರ್ಣಗಳೂ ಸೇರಿ '**ಹಂಸ**' ಮಂತ್ರವಾಯಿತು. ಈ ರೀತ್ಯಾ '**ಹಂಸ**' ಮಂತ್ರವ, ಹಗಲಿರಳು–ಅಹೋರಾತ್ರಿಗಳಲ್ಲಿ, ಚೇತನರಾಶಿಯೊಳು–ಸ್ಥಾವರ ಜಂಗಮಾತ್ಮಕ ತ್ರಿವಿಧ ಜೀವರಾಶಿಗಳು ಧರಿಸಿ ಇರುವ ಸ್ಥೂಲ ದೇಹದೊಳು, ಚೇತನಶಬ್ದದಿಂದ ಸ್ವರೂಪ ದೇಹವೇ ತೆಗೆದುಕೊಂಬೋಣ ಎಂದರೆ ಘಳಿಗೆ, ತಾಸು, ಹಗಲು, ಇರುಳುಸಾಂಕೇತ, ಸ್ಥೂಲ ದೇಹವನ್ನ ಅನುಸರಿಸಿದ ಕಾಲವನ್ನು ಪ್ರದರ್ಶನಮಾಡಿ ಇರೋಣದರಿಂದ, ಸ್ಥೂಲ ದೇಹ ಎಂತ ತಾತ್ಪರ್ಯವು, ಜೀವನ ಅಣುಸ್ವರೂಪದಲ್ಲಿ ಅಲ್ಲ. ಇದಕ್ಕೆ ಸಮಾಖ್ಯಾ ಉದಾತ್ತಾನುದಾತ್ತ ಸಂಧಿ ೧೨ನೇ ಶ್ಲೋಕವು. ಸ್ಥಾವರಗಳಿಗೂ ಆಯುರ್ನೇಮ ಇರೋಣದರಿಂದ ಅಲ್ಲಿನೂ ಶ್ವಾಸ ಜಪಮಾಡತಾರಂತಲೇ ಹೇಳಬೇಕು. ಕಾಣಿಸದೆ–ಸ್ಥಾವರ ಜೀವರಲ್ಲಿ ಮಾಡಸತಕ್ಕ ಶ್ವಾಸಕಾರ್ಯ ಅನ್ಯರಿಗೆ ಕಾಣಿಸದೆ ಆಗತಾ ಅದೆ. ಆಯಾ ಸ್ಥಾವರಗಳಿಗೂ ತಿಳಿಯೋದಿಲ್ಲ. ಜಂಗಮ ಜೀವರಲ್ಲಿ, ನಿದ್ರಾಕಾಲದಲ್ಲಿ ಮಾಡ ತಕ್ಕ ಶ್ವಾಸ ಕಾರ್ಯ ಆಯಾ ಪ್ರಾಣಿಗಳಿಗೆ ಹ್ಯಾಂಗೆ ತಿಳಿಯೋದಿಲ್ಲವೊ ತದ್ವತ್, ಜಡ ಜೀವರಿಗೆ ತಿಳಿಯೋದಿಲ್ಲ. ನಡೆಸುತಲಿ–ಈ ಪ್ರಕಾರ ಶ್ವಾಸಗಳ ನಡಿಸುತ್ತಲೇ, ಲೇಶಾ ಯಾಸವಿಲ್ಲದೆ–ಸ್ವಲ್ಪವಾದರೂ ಆಯಾಸವಿಲ್ಲದೇನೆ, ಈ ಸುಮನಸೋತ್ತಂಸ–ಈ ದೇವೋ ತ್ತಮರಾದ ವಾಯುದೇವರು, ಜಾಗೃತನಾಗಿ–ಜೀವರು ನಿದ್ರಾಯುಕ್ತರಾಗಿ ದೇಹದಲ್ಲಿ ಸ್ಮರಣೆ ಇಲ್ಲದೆ ಮಲಗಿದ್ದ ಕಾಲಕ್ಕೂ ತಾವು ಜಾಗೃತರಾಗಿ, ನಿತ್ಯದಲಿ–ಪ್ರತಿದಿನದಲ್ಲೂ.

ಪೋಷಿಸುತ–ಆಯಾ ದೇಹಗಳ ಸಂರಕ್ಷಿಸುತ್ತಾ, ಮೂಲೇಶನ–ಸ್ಥೂಲ ಹೃದಯುಗತ ಅಷ್ಟ ದಳ ಕಮಲದಲ್ಲಿ ಸಂಚಾರ ಮಾಡತಕ್ಕ ಶ್ರೀ ಮೂಲೇಶ ನಾಮಕ ಪರಮಾತ್ಮನ (ಇದರ ಬಗ್ಗೆ ೯ ನೇ ಸಂಧಿ, ೮ ರಿಂದ ೧೧ ನೇ ಶ್ಲೋಕಗಳು ಪೂರ್ತಿ), ಅಂಘ್ರಿಸರೋಜ–ಪಾದ ಗಳೆಂಬ ಕಮಲಗಳ, ಮೂಲದಲಿ–ಪಾದಗಳ ಅಂಗುಷ್ಠ ಮಧ್ಯಭಾಗದಲ್ಲಿ, ಇಪ್ಪ–ಇರೋವ ರಾಗಿದ್ದಾರೆ. ಶ್ವಾಸಗಳು ಸ್ಥೂಲ ನಾಸಿಕಾದಿಂದ ಬರತಾ ಅವೆ. ಆದಕಡಿಯಿಂದ, ಸ್ಥೂಲದೇಹದಲ್ಲೇ ಈ ಶ್ವಾಸಕಾರ್ಯಗಳೆಂದು ತಾತ್ಪರ್ಯ.

**ಅರಿವುದೊಂದ್ಯಾಮದೊಳು ಶ್ವಾಸಗ ।**
**ಳೆರಡುಸಾವಿರದೇಳುನೂರನು ।**
**ಶರಸಹಸ್ರದ ಮೇಲೆ ನಾನೂರಹವು ದ್ವಿತಿಯಕೆ ॥**
**ಮರಳಿ ಯಾಮತ್ರಯಕೆ ವಸುಸಾ ।**
**ವಿರದ ಮೇಲ್ನೂರೆಣಿಕೆಯಲಿ ಹ ।**
**ನ್ನೆರಡುತಾಸಿಗೆ ಹತ್ತುಸಾವಿರದೆಂಟು ನೂರಹವು ॥ ೩ ॥**

ಯಾಮಾದಿ ಘಳಿಗೆಗೆ ಆಗುವ ಶ್ವಾಸ ಸಂಖ್ಯಾ ಹೇಳತಾರೆ.

ಒಂದ್ಯಾಮದೊಳು–ಮೂರು ಮುಹೂರ್ತಕ್ಕೆ ಒಂದು ಯಾಮ. ಯಾಮಕ್ಕೆ (೭ ೧/೨) ಏಳೂವರೆ ಘಳಿಗೆ. ಮುಹೂರ್ತಕ್ಕೆ ೯೦೦ ಶ್ವಾಸಗಳ ಮ್ಯಾರಿಗೆ ಒಂದು ಯಾಮದೊಳಗೆ, ಶ್ವಾಸಗಳು–' **ಹಂಸ** ' ಮಂತ್ರಾಖ್ಯ ಶ್ವಾಸಗಳು, ಎರಡುಸಾವಿರದೇಳು ನೂರನು–(೨,೭೦೦) ಎರಡುಸಾವಿರದ ಏಳುನೂರು. ದ್ವಿತಿಯಕೆ–ಎರಡನೇ ಯಾಮಕ್ಕೆ (೨,೭೦೦). ಅಂತು ಸೇರಿ ಎಷ್ಟು ಅಂದರೆ, ಶರಸಹಸ್ರದ ಮೇಲೆ–(೫,೦೦೦) ಐದು ಸಾವಿರದ ಮ್ಯಾಲೆ, ನಾನೂರಹವು–(೪೦೦) ನಾಲ್ಕುನೂರು ಆಗುತ್ತವೆ. ಅಂತು (೫,೪೦೦) ಐದುಸಾವಿರದ ನಾಲ್ಕುನೂರು ಆಯಿತು. ಮರಳಿ ಯಾಮತ್ರಯಕೆ– ಮತ್ತು ಮೂರೂ ಯಾಮಕ್ಕೆ ಎಷ್ಟು ಎಂದರೆ, ವಸುಸಾವಿರದ ಮೇಲೆ–(೮,೦೦೦) ಎಂಟು ಸಾವಿರದ ಮ್ಯಾಲೆ, ನೂರೆಣಿಕೆಯಲಿ–(೧೦೦). ಅಂತು (೮,೧೦೦) ಎಂಟುಸಾವಿರದ ನೂರು. ಹನ್ನೆರಡು ತಾಸಿಗೆ–ತಾಸು ಸಾಂಕೇತವಾದ ಹನ್ನೆರಡು ಮುಹೂರ್ತದಿಂದ ಯುಕ್ತವಾದ (೪) ನಾಲ್ಕು ಯಾಮಕ್ಕೆ ಒಂದು ದಿನ ಹಗಲಿಗೆ, ಹತ್ತುಸಾವಿರದೆಂಟು ನೂರಹವು–(೧೦,೮೦೦) ಹತ್ತುಸಾವಿರದೆಂಟುನೂರು ಶ್ವಾಸಗಳು ಆಗೋದಾಗತವೆ ಎಂತ, ಅರಿವುದು–ಈ ಪ್ರಕಾರ ಅನುಸಂಧಾನ ಮಾಡಬೇಕೆಂತ ತಾತ್ಪರ್ಯ.

**ಒಂದು ದಿನದೊಳಗನಿಲ ಇಪ್ಪ ।**
**ತ್ತೊಂದುಸಾವಿರದಾರುನೂರು ಮು ।**
**ಕುಂದನಾಜ್ಞದಿ ಮಾಡಿ ಮಾಡಿಸಿ ಲೋಕಗಳ ಪೊರೆವ ॥**

**ನೆಂದು ಪವನನ ಪೊಗಳುತಿರು ಎಂ ।**
**ದೆಂದು ಮರಿಯದೆ ಈ ಮಹಿಮೆ ಸಂ ।**
**ಕ್ರಂದನಾದ್ಯರಿಗುಂಟೆ ನೋಡಲು ಸರ್ವಕಾಲದಲಿ ॥ ೪ ॥**

ಒಂದು ದಿನವಾದ ಅಹೋರಾತ್ರಿಗೆ ಆಗುವ ಶ್ವಾಸಗಳ ಹೇಳತಾರೆ.

ಒಂದು ದಿನದೊಳಗೆ–ಹಗಲು, ರಾತ್ರಿ ಎರಡೂ ಸೇರಿ ಒಂದು ದಿನ. ಎಂಟು ಯಾಮ ದಿಂದ ಯುಕ್ತವಾದ ಒಂದು ದಿನದೊಳಗೆ, ಅನಿಲ–ಜೀವೋತ್ತಮರಾದ ವಾಯುದೇವರು, ಇಪ್ಪತ್ತೊಂದುಸಾವಿರದಾರುನೂರು–ಇಪ್ಪತ್ತೊಂದು ಸಾವಿರದ ಆರುನೂರು, ಮುಕುಂದ ನಾಜ್ಞದಿ–ಇಷ್ಟು ಜಪಗಳು ಮೋಕ್ಷದಾತನಾದ ದೇವರ ಆಜ್ಞಾದಿಂದ, ಮಾಡಿ ಮಾಡಿಸಿ– ಶ್ವಾಸದ್ವಾರಾ ತಾವು ಮಾಡಿ, ತಮ್ಮ ಕ್ರಿಯಾದ್ವಾರದಿಂದ ಜೀವನ ಕಡಿಯಿಂದ ಮಾಡಿಸಿ ಎಂದರೆ, ಸ್ಥೂಲೇಂದ್ರಿಯಗಳಲ್ಲಿ ಜೀವ ಪ್ರಕಾಶತೋ ವ್ಯಾಪ್ತನಾಗಿದ್ದಾನೆ. ತದ್ವತ್, ಜೀವನ '**ಹಂಸ**'ಮಂತ್ರಾಖ್ಯ ಶ್ವಾಸವೂ, ಸ್ಥೂಲದೇಹಗತ ಜಡಶ್ವಾಸದಲ್ಲಿ ವ್ಯಾಪ್ತವಾಗಿ ಅದೆ. ಈ ವ್ಯಾಪ್ತಶ್ವಾಸಾಂತರ್ಗತರಾಗಿ, ಚತುರ್ವಿಂಶತಿ ತತ್ತ್ವೇಶರು ಇದ್ದಾರೆ. ಎಲ್ಲಾರೂ ಶ್ವಾಸರೂಪದಿಂದಲೇ ಇದ್ದಾರೆ. ಈ ಶ್ವಾಸಪ್ರತಿಪಾದ್ಯನಾದವ '**ಹಂಸ**'ರೂಪಿ ಪರಮಾತ್ಮ. ಶ್ವಾಸಗಳು, ತದ್ಗತ '**ಹಂಸ**' ಎಂಬ ಎರಡು ವರ್ಣಗಳು ಜಡಗಳು. ಇದರಲ್ಲಿ ಜೀವನ ಶ್ವಾಸ, ತದ್ಗತ ವರ್ಣಗಳು ಇರೋವಾಗಿ ಅವೆ. ಇದರಲ್ಲಿ ವಾಯ್ವಾದಿ ತತ್ತ್ವೇಶರು ತದಾಕಾರದಿಂದ ಇದ್ದಾರೆ. ವಾಯುದೇವರು ಮೂಲೇಶನ ಪಾದಮೂಲದಲ್ಲಿ ಇದ್ದವರಾಗಿ ಉಚ್ಚಾರಮಾಡತಕ್ಕ '**ಹಂಸ**' ಎಂಬ ಜಪಾತ್ಮಕ ವರ್ಣಗಳಲ್ಲಿ ಪ್ರವಿಷ್ಟರಾಗತಾ ಇರತಾರೆ. ವಾಯುದೇವರ ಶರೀರ ಎಂಥಾದ್ದೋ ಅಂಥಾದ್ದೇ ಅವರ ಮುಖವೂ. ಈ ಪ್ರಕಾರ ಜಡ ಶ್ವಾಸ ದ್ವಾರಾ, ಜೀವನ ಶ್ವಾಸದ್ವಾರಾ '**ಹಂಸ**'ಮಂತ್ರ ತಾವು ಮಾಡಿ, ಜೀವನ ದ್ವಾರಾ ಪೂರ್ವೋಕ್ತರೀತ್ಯಾ ಮಾಡಸತಾರೆ. ಈ ವಾಯುದೇವರಲ್ಲಿ ಪರಮಾತ್ಮ ತಾನೇ ಶ್ವಾಸ ಕಾರ್ಯ ಮಾಡತಾನೆ. ಮುಕ್ತಿಯೋಗ್ಯಜೀವರ ಸ್ವರೂಪದಲ್ಲಿ ತದ್ಗತ ಬಿಂಬ '**ಹಂಸ**' ಎಂಬ ಶ್ವಾಸಜಪ ಮಾಡತಾನೆ. ಅನಾದಿಯಾದ ಅವನ ಸ್ವರೂಪಯೋಗ್ಯತಾಕ್ಕೆ ಅನು ಸರಿಸಿದ ಶ್ವಾಸ ಅಂಥಾದ್ದೇ. ಅದು ಈಶ್ವರನಿಂದ ರಚಿತವಲ್ಲ, ಅನಾದಿಸಿದ್ಧ. ಅದರನ್ನ ವ್ಯಾಪ್ತನಾದ ಜೀವನ ಕೂಡಾ ಸ್ಥೂಲದಲ್ಲಿ ಅಭಿವ್ಯಕ್ತಿ ಮಾಡತಾನೆ. ಅದನ್ನನುಸರಿಸಿ ವಾಯುದೇವರು, ತಾವು '**ಹಂಸ**'ಮಂತ್ರ ಜಪಿಸಿ ಪೂರ್ವೋಕ್ತಪ್ರಕಾರ ಜೀವನ ದ್ವಾರಾ ಮಾಡಸತಾರೆ. ಲೋಕಗಳ ಪೊರೆವನೆಂದು–ಶ್ವಾಸಾಖ್ಯ ಆಯುರ್ಮಾನ ಕಾಲದಲ್ಲಿ ದೇಹಾಂತರ್ಗತರಾಗಿ ಪ್ರಾಣಿಗಳ ಯೋಗ್ಯತಾನುಸಾರ ತ್ರಿವಿಧಸಾಧನಗಳ ಮಾಡಿಸುತ್ತಾ, ದೇಹಗಳ ಸಂರಕ್ಷಣೆ ಮಾಡತಾರೆಂದು, ಪವನನ–ದೇಹಾಂತರ್ಗತರಾದ, ಶ್ವಾಸನಿಯಾಮಕ ರಾದ, ಜೀವೋತ್ತಮರಾದ ವಾಯುದೇವರ, ಎಂದೆಂದು ಮರಿಯದೆ–ದಾವಾಗ್ಯೂ ಮರಿಯ ದೇನೆ, ಪೊಗಳುತಿರು–ಸ್ತೋತ್ರಮಾಡತಾ ಇರೋವನಾಗು, ಸರ್ವಕಾಲದಲಿ–ಜಾಗ್ರದ್ದಶಾ ವಾದ ಸರ್ವಕಾಲದಲ್ಲಿ ವಾಯುದೇವರ ಮರಿಯಬ್ಯಾಡ. ಈ ಮಹಿಮೆ – ರುದ್ರಾದಿ

ತೃಣಾಂತ ತ್ರಿವಿಧ ಜೀವರಲ್ಲಿ ಶ್ವಾಸಕಾರ್ಯ ನಡಸತಕ್ಕ ಈ ವಾಯುದೇವರ ಮಹಿಮಾ, ವಾಯುದೇವರ ಬಲಪರಾಕ್ರಮ ಮೊದಲಾದುವು, ನೋಡಲು–ವಿಚಾರಮಾಡಿ ನೋಡಲು, ಸಂಕ್ರಂದನಾದ್ಯರಿಗುಂಟೆ–ರುದ್ರದೇವರೇ ಆದಿಯಾದ ಇಂದ್ರಾದಿಗಳಿಗೆ ಉಂಟೆ ? ಅಂದರೆ, ಇಲ್ಲಾ ಎಂತ ತಾತ್ಪರ್ಯ. ಶ್ವಾಸಕಾರ್ಯ ನಡಿಸತಕ್ಕ ಮಹಾತ್ಮೆ ವಾಯುದೇವರದೇ ಹೊರತು, ಅನ್ಯರಿಗಿಲ್ಲ ಎಂತ ತಾತ್ಪರ್ಯ. ಇದು ನಿಶ್ಚಯವು.

**ಮೂರು ಲಕ್ಷದ ಮೇಲೆ ವಿಂಶತಿ ।**
**ಈರೆರಡುಸಾವಿರವು ಪಕ್ಷಕೆ ।**
**ಆರುಲಕ್ಷದ ಮೇಲೆ ನಾಲ್ವತ್ತೆಂಟುಸಾವಿರವು ॥**
**ಮಾರುತನು ಮಾಸಕೆ ಜಪಿಸಿ ಸಂ ।**
**ಸಾರಸಾಗರದಿಂದ ಸುಜನರ ।**
**ಪಾರುಗಾಣಿಸಿ ಸಲಹುವನು ಬಹುಭೋಗಗಳನಿತ್ತು ॥ ೫ ॥**

ಒಂದು ಪಕ್ಷಕ್ಕೆ, ಮಾಸಕ್ಕೆ ಆಗತಕ್ಕ ಶ್ವಾಸಗಳ ಸಂಖ್ಯಾ ಹೇಳತಾರೆ.

ಪಕ್ಷಕೆ–೧೫ ದಿನಕ್ಕೆ ಒಂದು ಪಕ್ಷ. ದಿನ ಒಂದಕ್ಕೆ ೨೧,೬೦೦ ಶ್ವಾಸದ ಮ್ಯಾರಿಗೆ ಒಂದು ಪಕ್ಷಕ್ಕೆ; ಮೂರುಲಕ್ಷದ ಮೇಲೆ ವಿಂಶತಿ–ಮೂರು ಲಕ್ಷದ ಇಪ್ಪತ್ತು ಸಾವಿರ, ಈರೆರಡು ಸಾವಿರವು–ನಾಲ್ಕುಸಾವಿರ ಆಗೋದಾಗತದೆ. ಮಾಸಕೆ–ಎರಡು ಪಕ್ಷಾತ್ಮಕ ಒಂದು ತಿಂಗಳಿಗೆ, ಆರುಲಕ್ಷದ ಮೇಲೆ–ಆರು ಲಕ್ಷದ ಮ್ಯಾಲೆ, ನಾಲ್ವತ್ತೆಂಟುಸಾವಿರವು–ನಲವತ್ತೆಂಟು ಸಾವಿರ, ಅಂತು (೬,೪೮,೦೦೦) ಆರು ಲಕ್ಷದ ನಲವತ್ತೆಂಟು ಸಾವಿರ ಶ್ವಾಸಗಳು ಒಂದು ತಿಂಗಳಿಗೆ ಆಗತವೆ. ಮಾರುತನು–ವಾಯದೇವರು, ಜಪಿಸಿ–ಪೂರ್ವೋಕ್ತ ಸಂಖ್ಯಾಕವಾದ **'ಹಂಸ'** ಮಂತ್ರ ಜಪಿಸಿ, ಸುಜನರ–ಭಗವದ್ಭಕ್ತರಾದ ಸಜ್ಜನರ, ಬಹು ಭೋಗಗಳನಿತ್ತು–ಅಜ್ಞಾನ ಪರಿಹಾರ ಮಾಡಿ, ಜ್ಞಾನ, ಭಕ್ತಿ, ವೈರಾಗ್ಯಗಳಿಂದ ಆಗತಕ್ಕ ಅನೇಕವಾದ ಸುಖಗಳ ಐಹಿಕದಲ್ಲಿ ಇತ್ತು, ಸಂಸಾರಸಾಗರದಿಂದ ಪಾರುಗಾಣಿಸಿ–ಸಂಸಾರ ಸಮುದ್ರದ ಆಚೆ ದಡವನ್ನು ಸೇರಿಸಿ, ಸಲಹುವನು–ಜೀವನ್ಮುಕ್ತರನ್ನ ಮಾಡಿ ಮಹರಾದಿ ಲೋಕಗಳಲ್ಲಿ ಇಟ್ಟು, ಜ್ಞಾನರೂಪವಾದ ಸಾಧನ ಮಾಡಿಸುತ್ತಾ ಸಂರಕ್ಷಣೆ ಮಾಡತಾರೆ. ಕರ್ಮಸಾಧನಭೂಮಿ ಭರತಖಂಡ, ಜ್ಞಾನಸಾಧನಭೂಮಿ ಮಹರಾದಿಲೋಕ; ಜೀವನ್ಮುಕ್ತದಶಾದಲ್ಲಿ, ಇದೇ ವಾಯುದೇವರೇ ಬ್ರಹ್ಮಪಟ್ಟಕ್ಕೆ ಬಂದು, ಜೀವನ್ಮುಕ್ತರಾದ ಮಹರಾದಿ ಲೋಕಗತ ಪ್ರಾಣಿಗಳ ರಕ್ಷಿಸುತ್ತಾರೆ ಎಂತ ತಾತ್ಪರ್ಯ.

**ಎರಡು ತಿಂಗಳಿಗಹವು ಋತು ಭೂ ।**
**ಸುರರು ತಿಳಿವದು ಶ್ವಾಸಜಪ ಹ ।**
**ನ್ನೆರಡುಲಕ್ಷದ ಮೇಲೆ ತೊಂಭತ್ತಾರುಸಾಹಸ್ರ ॥**

**ಕರೆಸುವದು ಅಯನಾಹ್ವಯದಲರೆ ।**
**ವರುಷ ಮೂವತ್ತೆಂಟುಲಕ್ಷೋ ।**
**ಪರಿ ತಿಳಿವದೆಂಭತ್ತುಎಂಟುಸಹಸ್ರ ಕೋವಿದರು ॥ ೬ ॥**

ಋತು ಅಯನಕ್ಕೆ ಆಗತಕ್ಕ ಶ್ವಾಸಗಳ ಹೇಳತಾರೆ.

ಎರಡು ತಿಂಗಳಿಗಹವ್ರ ಋತು–ಎರಡು ತಿಂಗಳು ಸಂಪೂರ್ಣವಾಗಿ ಗತವಾದರೆ ಒಂದು ಋತು ಎಂತ ಕರಿಸತದೆ. ಇಂಥಾ ಋತು ಒಂದಕ್ಕೆ, ಶ್ವಾಸಜಪ–ಶ್ವಾಸಜಪಗಳು, ಹನ್ನೆರಡುಲಕ್ಷದಮೇಲೆ–(೧೨,೦೦,೦೦೦) ಹನ್ನೆರಡು ಲಕ್ಷದ ಮೇಲೆ, ತೊಂಭತ್ತಾರು ಸಾಹಸ್ರ–(೯೬,೦೦೦) ತೊಂಭತ್ತಾರು ಸಾವಿರ. ಅಂತು ಸೇರಿ (೧೨,೯೬,೦೦೦) ಹನ್ನೆರಡು ಲಕ್ಷದ ತೊಂಭತ್ತಾರು ಸಾವಿರ ಆಗತದೆ. ಅಯನಾಹ್ವಯದಲಿ–ಅಯನ ಎಂತ ನಾಮದಿಂದ, ಅರೆವರುಷ–ಮೂರು ಋತುಗಳಿಂದ ಸಹಿತವಾದ ಆರು ತಿಂಗಳು, ಅಂದರೆ, ಅರ್ಧ ವರುಷ ಎಂತ, ಕರೆಸುವದು–ಕರಿಸೋದಾಗತದೆ. ಈ ಅರ್ಧ ವರುಷದಲ್ಲಿ, ಮೂವತ್ತೆಂಟು ಲಕ್ಷೋಪರಿ–(೩೮,೦೦,೦೦೦) ಮೂವತ್ತೆಂಟು ಲಕ್ಷದ ವ್ಯಾಲೆ, ಎಂಭತ್ತು ಎಂಟು ಸಹಸ್ರ–(೮೮,೦೦೦) ಎಂಭತ್ತೆಂಟು ಸಾವಿರ, ಅಂತು ಸೇರಿ (೩೮,೮೮,೦೦೦) ಮೂವತ್ತೆಂಟು ಲಕ್ಷ ಎಂಭತ್ತೆಂಟು ಸಾವಿರ ಜಪಗಳ ಮಾಡಿಸುತ್ತಾರೆಂದು, ಕೋವಿದರು–ಜ್ಞಾನಿಗಳಾದವರು, ತಿಳಿವದು–ತಿಳಿಯೋವರಾಗಬೇಕು. ಭೂಸುರರು ತಿಳಿವದು–ಭೂಮಿಗೆ ದೇವತೆಗಳಾದ ಬ್ರಾಹ್ಮಣರು, ಆಯುಸ್ಸಿಗೆ ಕಾರಣವಾದ ಶ್ವಾಸಗಳು ಗತವಾಗಿ ಹೋಗತಾ ಅವೆ ಎಂತ ತಿಳಿದು ಸಾಧನೆ ಸಂಪೂರ್ಣ ಮಾಡಿಕೋಬೇಕೆಂದೂನೂ, ಜ್ಞಾನಪೂರ್ವಕವಾಗಿ ತಿಳಿಯೋವರಾಗಬೇಕು ಎಂತಲೂ ತಾತ್ಪರ್ಯ.

**ವರುಷಕಿದರಿಮ್ಮಡಿ ಜಪಂಗಳ ।**
**ಗುರುವರ್ಯ ತಾ ಮಾಡಿ ಮಾಡಿಸಿ ।**
**ದುರಿತಗಳ ಪರಿಹರಿಸುವನು ಚಿಂತಿಸುವ ಸಜ್ಜನರ ॥**
**ಸುರವಿರೋಧಿಗಳೊಳಗೆ ನೆಲಸಿ ।**
**ದ್ದರವಿದೂರ ತಮೋಧಿಕಾರಿಗ ।**
**ಳಿರವರಿತು ಸೋಹಮುಪಾಸನೆ ಮಾಳ್ಪನವರಂತೆ ॥ ೭ ॥**

ವರುಷಕ್ಕೆ ಆಗುವ ಶ್ವಾಸಗಳು, ದೈತ್ಯರಲ್ಲಿ '**ಹಂಸ**' ಮಂತ್ರೋಪಾಸನಾಕ್ರಮ ಹೇಳತಾರೆ.

ವರುಷಕಿದರಿಮ್ಮಡಿ–ಆರು ತಿಂಗಳಿಗೆ ಆಗುವ ಶ್ವಾಸಗಳನ್ನು ಎರಡರಷ್ಟು ಸೇರಿಸಿದರೆ (೭೭,೭೬,೦೦೦) ಎಪ್ಪತ್ತೇಳು ಲಕ್ಷದ ಎಪ್ಪತ್ತಾರು ಸಾವಿರ ಶ್ವಾಸಗಳು ಆದುವು, ಜಪಂಗಳ–ಈ ಶ್ವಾಸಾಖ್ಯ '**ಹಂಸ**' ಮಂತ್ರಗಳ, ಗುರುವರ್ಯ–ತಾರತಮ್ಯಾನುಸಾರ ಸ್ವಾವರರಿಗೆ ಸ್ವೋತ್ತಮರು ಗುರುಗಳಾಗುತ್ತಾರೆ. ಈ ರೀತ್ಯಾ ಕ್ಷರಜೀವರಿಗೆ ಅಂತ್ಯ ಗುರುಗಳಾದವರು ವಾಯುದೇವರು. ಇವರೇ ಶ್ರೇಷ್ಠ ಗುರುಗಳು. ಜೀವಕೋಟಿ

ಒಳಗೆ ಇವರಿಗೆ ಮಿಂಚಿದ ಗುರುಗಳು ದಾರೂ ಇಲ್ಲ. ಇಂಥಾ ಗುರುವರ್ಯರಾದ ವಾಯುದೇವರು, ತಾ ಮಾಡಿ ಮಾಡಿಸಿ–ಶ್ವಾಸ ಜಪಗಳ ತಾವು ಮಾಡಿ, ಶ್ವಾಸಾಭಿಮಾನಿ ಗಳಾದ ದೇವತೆಗಳ ದ್ವಾರಾ, ಜೀವನ ಶ್ವಾಸದ್ವಾರಾ ದೇಹಗತ ನಾಸಿಕದ್ವಾರಾ ಮಾಡಿಸಿ, ದುರಿತಗಳ–ಈ ಪ್ರಕಾರ ಅನುಸಂಧಾನಮಾಡಿ ಶ್ವಾಸಗಳ, ಯಾವತ್ತೂ ಜಪಗಳಿಂದು ತಿಳಿದು ಕ್ಷಣ ಕ್ಷಣ ಮರಿಯದೆ ಭಗವದರ್ಪಣೆ ಮಾಡತಕ್ಕ ಭಕ್ತರ ಜ್ಞಾನಕ್ಕೆ ಪ್ರತಿಬಂಧಕವಾದ ಪಾಪಗಳ, ಪರಿಹರಿಸುವನು–ಪರಿಹಾರ ಮಾಡುವರು. ಚಿಂತಿಸುವ ಸಜ್ಜನರ–ಹರಿ ಸರ್ವೋತ್ತಮ, ವಾಯು ಜೀವೋತ್ತಮ, ತಾರತಮ್ಯ, ಪಂಚಭೇದ, ಸ್ಥಿತಿ ಕಾಲದಲ್ಲಿ ಮೋಕ್ಷದಲ್ಲಿ ಸತ್ಯ ಎಂಬ ದೃಢ ಜ್ಞಾನ ಉಳ್ಳವರು ದಾರೊ ಅವರೇ ಸಜ್ಜನರು. ಇಂಥಾ ಸಜ್ಜನರ ಪಾಪ ಪರಿಹಾರ ಮಾಡತಾರೇ ಹೊರತು, ಅನ್ಯರ ಪಾಪ ಪರಿಹರಿಸೋ ದಿಲ್ಲ, ಎಂತ ಭಾವವು, ಅರವಿದೂರ–ದೋಷದೂರರಾದ ವಾಯುದೇವರು, ಸುರ ವಿರೋಧಿಗಳೊಳಗೆ–ದೇವತೆಗಳಿಗೆ ಶತ್ರುಗಳಾದ ದೈತ್ಯರಲ್ಲಿ, ನೆಲಸಿದ್ದು–ಆವಾಸರಾಗಿದ್ದು, ತಮೋಧಿಕಾರಿಗಳ–ಅಂಧಂತಮಸ್ಸಿಗೆ ಯೋಗ್ಯರಾದ ದೈತ್ಯರ, ಇರವರಿತು–ಸ್ವರೂಪ ಯೋಗ್ಯತಾವರಿತು, ಅವರಂತೆ–**'ಸೋಽಹಂ'** ಎಂತ ಉಪಾಸನ ಮಾಡತಕ್ಕ ಅನಾದಿ ಭೂತವಾದ ಅಯೋಗ್ಯತಾ ಉಳ್ಳವರಾದ್ದರಿಂದ ಅವರೋಪಾದಿಯಲ್ಲಿ, **'ಸೋಽಹಂ'**–**'ಸಃ'**, ತದಂತರ್ಯಾಮಿಯಾದಂಥಾ ಭಗವಂತನೇ, **'ಅಹಂ'**, ಮದಂತರ್ಯಾಮಿ ಯಾದಂಥವ ಎಂದು ಮುಕ್ತಿಯೋಗ್ಯನು ಉಪಾಸನಾಮಾಡತಾನೆ. **'ಸ್ವಾಹಾ'** ಎಂತ ನಿತ್ಯಸಂಸಾರಿ ಉಪಾಸನ ಮಾಡತಾನೆ. ಹ್ಯಾಂಗೆಂದರೆ, **'ಸ್ವ'**, ಅಂದರೆ ತನಗೂ, ವಿಷ್ಣು ಬ್ರಹ್ಮ ರುದ್ರಾದಿ ದೇವತೆಗಳಿಗೂ ತಾರತಮ್ಯವಿಲ್ಲ. ಸಮಾನರು. **'ಅಹಂ'**, ನಾನು ಅವರಿಗೆ ಭೃತ್ಯ ಎಂತ ಉಪಾಸನ. **'ಸೋಽಹಂ'** ಎಂದರೆ **'ಸಃ'**, ಆ ಪರಮಾತ್ಮನೇ **'ಅಹಂ'** ನಾನು, ಎಂತ ದೈತ್ಯರು ಉಪಾಸನಮಾಡತಾರೆ. ಶ್ರೀ ವಾಯುದೇವರ ಉಪಾಸನ ಎಂಥಾದ್ದೆಂದರೆ ಗುಣಪೂರ್ಣನಾದ, ಪರಮಾತ್ಮನಾದ, **'ಹಂಸ'** ರೂಪನಾದ, ಶ್ರೀ ದೇವರನ್ನ **'ಅಹಂ'** ನಾನು **'ಸ್ವಾಹಾ'**, ಉಪಾಸನ ಮಾಡತೇನೆ, ಎಂತ ಇರುತ್ತದೆ. ಮುಕ್ತಿಯೋಗ್ಯರಲ್ಲಿ ಪೂಜ್ಯನಾದ **'ಹಂಸ'** ರೂಪಿ ಪರಮಾತ್ಮನ್ನ ನಾನು ಉಪಾಸನ ಮಾಡತೇನೆ ಎಂತ ಉಪಾಸನ ಮಾಡಸತಾರೆ. ನಿತ್ಯಸಂಸಾರಿಗಳಲ್ಲಿ, ಪೂಜ್ಯನಾದ **'ಹಂಸ'** ರೂಪಿ ಪರಮಾತ್ಮಗೂ, ತನಗೂ ಭೇದ ಎಂತಲೂ, ತಾರತಮ್ಯವಿಲ್ಲ, ಸರ್ವ ಜೀವರೂ ವಿಷ್ಣುವಿಗೆ ಸಮಾನರು ಎಂತಲೂ ಉಪಾಸನ ಮಾಡಸತಾರೆ. ತಮೋಯೋಗ್ಯರಲ್ಲಿ **'ಹಂಸ'** ನಾಮಕ ಪರಮಾತ್ಮನೇ ನಾನು. ಅವನಿಗೂ ನನಗೂ ಭೇದವಿಲ್ಲ. ನನ್ನನ್ನೇ ನಾನು ಉಪಾಸನ ಮಾಡತೇನೆ ಎಂತ ಈ ಪ್ರಕಾರ ಉಪಾಸನ ತ್ರಿವಿಧರಿಗೂ ಮೂರು ಪ್ರಕಾರ ಮಾಡಸತಾರೆ. ಉಪಾ ಸನ ಮಾಳ್ಪನು–ಈ ಪ್ರಕಾರ ಜೀವರ ಕಡಿಯಿಂದ ಮಾಡಿಸಿ, ತಾವು ಮಾಡಿ, ತ್ರಿವಿಧ ಜೀವರ ಗತಿಗಳನ್ನು ಕೊಟ್ಟು ಸಂರಕ್ಷಣ ಮಾಡತಾರೆ. **'ಸ್ವಾಹಾ'** ಎಂದರೆ **'ಹಂಸ'** ಮಂತ್ರವನ್ನ ಅರ್ಪಣ ಎಂತಲೂ ತಾತ್ಪರ್ಯವೆ.

**ಇನಿತುಪಾಸನೆ ಸರ್ವಜೀವರೊ ।**
**ಳನಿಲದೇವನು ಮಾಡುತಿರೆ ಚಿಂ ।**
**ತನೆಯ ಮಾಡದೆ ಕಂಡ ನೀರೊಳು ಮುಳುಗಿ ನಿತ್ಯದಲಿ ॥**
**ಮನೆಯೊಳಗೆ ಕೃಷ್ಣಾಜಿನಾದ್ಯಾ ।**
**ಸನದಿ ಕುಳಿತು ವಿಶಿಷ್ಟ ಬಹು ಸ ।**
**ಜ್ಜನನೆನಿಸಿ ಜಪಮಣಿಗಳೆಣಿಸಿದರೇನು ಬೇಸರದೆ ॥ ೮ ॥**

ಇದರ ಅನುಸಂಧಾನವಿಲ್ಲದೆ ದಾವ ಜಪ ಮಾಡಿದರೂ ಫಲವಿಲ್ಲ ಎಂತ ಹೇಳತಾರೆ.

ಇನಿತು–ಪೂರ್ವೋಕ್ತ ಪ್ರಕಾರ, ಉಪಾಸನೆ–'**ಹಂಸ**' ನಾಮಕ ಪರಮಾತ್ಮನ ಧ್ಯಾನೋಪಾಸನೆ, ಸರ್ವ ಜೀವರೊಳು–ರುದ್ರಾದಿ ತೃಣಾಂತ ತ್ರಿವಿಧ ಜೀವರೊಳು, ಅನಿಲದೇವನು–ಜೀವೋತ್ತಮರಾದ ವಾಯುದೇವರು, ಮಾಡುತಿರೆ–೬೦ ಘಳಿಗೆಯೂ '**ಹಂಸ**' ಮಂತ್ರ ಜಪಮಾಡತಾ ಇರಲಾಗಿ, ಚಿಂತನೆಯ ಮಾಡದೆ–ಅನುಸಂಧಾನದಿಂದ ತಿಳಿದು, ಈ ಜಪವನ್ನ ಮಾಡಿ ಭಗವದರ್ಪಣ ಮಾಡಿದರೆ, ಆಯುಸ್ಸು ಸಾರ್ಥಕವಾಗಿ ಪುನೀತನಾಗತೇನೆ ಎಂತ ತಿಳಿಯದೆ, ಕಂಡ ನೀರೊಳು ಮುಳುಗಿ–ಅನೇಕ ತೀರ್ಥಸ್ನಾನ ಮಾಡಿ, ನಿತ್ಯದಲಿ–ಪ್ರತಿನಿತ್ಯದಲ್ಲೂ, ಮನೆಯೊಳಗೆ–ಸ್ವಕೀಯ ಗೃಹದಲ್ಲಿ, ಕೃಷ್ಣಾಜಿನಾದ್ಯಾಸನದಿ ಕುಳಿತು–ಕೃಷ್ಣಾಜಿನ ಮೊದಲಾದ ಆಸನದ ಮ್ಯಾಲೆ ಛಂದಾಗಿ ಕೂತವನಾಗಿ, ಬಹು ಸಜ್ಜನನೆನಿಸಿ–ಅತ್ಯಂತ ಯೋಗ್ಯತಾ ಉಳ್ಳವನೆಂದು ತಿಳಿಸೋಪಾದಿಯಲ್ಲಿ, ಬೇಸರದೆ–ಬ್ಯಾಸರಿಕೆ ಇಲ್ಲದೆ, ವಿಶಿಷ್ಟ–ಸಮಸ್ತವಾದ ಜಪಗಳ ಮಾಡತಾ, ಜಪಮಣಿಗಳ–ಜಪಸಂಖ್ಯಾ ತಿಳಿಯೋ ಉದ್ದಿಶ್ಯ ಜಪಮಣಿಗಳನ್ನ, ಎಣಿಸಿದರೇನು–ಎಣಿಕೆ ಮಾಡೋಣದರಿಂದ ಫಲವಿಲ್ಲ, ಯಾಕೆಂದರೆ, ಸರ್ವ ಕ್ರಿಯಾವೂ ಶ್ರೀ ಹರಿವಾಯುಗಳಿಂದ ನಡಿಯುತ್ತದೆ ಎಂತಲೂ, ಮಿಥ್ಯಾಜ್ಞಾನರಹಿತನಾಗಿ, ಶ್ರೀಹರಿ ಸರ್ವೋತ್ತಮ, ವಾಯು ಜೀವೋತ್ತಮ, ತಾರತಮ್ಯ, ಪಂಚಭೇದ ಸತ್ಯ ಎಂತ, ಇಂಥಾ ದೃಢ ಇಲ್ಲದೆ ಕಾರ್ಯ ಮಾಡಿದರೆ, ಫಲವಿಲ್ಲದೆ ಬರೀ ದೇಹಾಯಾಸ ಕೊಟ್ಟು ಹೋಗತದೆ, ಎಂತ ತಾತ್ಪರ್ಯ.

**ಓದನೋದಕ ಎರಡು ತೇಜದೊ ।**
**ಳೈದುವವು ಲಯ ತದಭಿಮಾನಿಗ ।**
**ಳಾದ ಶಿವಪವನರು ರಮಾಧೀನತ್ವ ಐದುವರು ॥**
**ಈ ದಿವಿಜರೊಡಗೂಡಿ ಶ್ರೀ ಮಧು ।**
**ಸೂದನನ ಐದುವಳು ಎಂದರಿ ।**
**ದಾದರದಲನ್ನೋದಕವ ಕೊಡುತುಣುತ ಸುಖಿಸುತಿರು ॥ ೯ ॥**

ಅನ್ನೋದಕಾದಿಗಳ ಭೋಜನಲಯಾನುಸಂಧಾನಕ್ರಮ ಹೇಳತಾರೆ.

ಓದನ–ಅನ್ನಕ್ಕೆ ಅಭಿಮಾನಿಯಾದವರು, ಶಿವ–ರುದ್ರದೇವರು (ಚಂದ್ರದೇವರಿಗೂ ಹೇಳತಾರೆ), ಉದಕ–ಭೋಜನಕಾಲಕ್ಕೆ ಪಾನಮಾಡಿದ ಉದಕ, ಪವನರು–ಈ ಉದಕಾಭಿಮಾನಿಯಾದ ವಾಯುದೇವರು, ಅಂತು ರುದ್ರದೇವರು, ವಾಯುದೇವರು ಇವರಿಬ್ಬರೂ, ಎರಡು–ಅನ್ನೋದಕ ಎರಡೂ, ತೇಜದೊಳು–ದೇಹಗತ ಜಠರಾಗ್ನಿಯೊಳು, ಲಯ ಐದುವವು–ಲಯ ಐದೋವಾಗತವೆ. ಅಗ್ಗೆ ಕ್ಷುತ್ತು ನಿವಾರಣೆ ಆಗತದೆ. ತದಭಿಮಾನಿಗಳಾದ–ಅನ್ನೋದಕಗಳಿಗೆ ಅಭಿಮಾನಿಗಳಾದ ಪೂರ್ವೋಕ್ತ, ರುದ್ರದೇವರು, ವಾಯುದೇವರು ಇಬ್ಬರೂ, ರಮಾಧೀನತ್ವ ಐದುವರು–ರಮಾದೇವಿಯರ ಅಧೀನ ಐದತಾರೆ. ಎಂದರೆ, ಜಡಾನ್ನ ಜಡದೇಹದಿಂದ ಭೋಜನರೂಪದಿಂದ ಜಠರಾಗ್ನಿ ಸೇರತದೆ. ತದ್ವತ್ ರಮಾದೇವಿಯರು ಅನ್ನಾಭಿಮಾನಿಯಾದ ರುದ್ರದೇವರನ್ನ ಅನ್ನವಾಗಿಮಾಡಿನ್ನೂ, ಉದಕಾಭಿಮಾನಿಯಾದ ವಾಯುದೇವರನ್ನ ಉದಕವಾಗಿ ಮಾಡಿನ್ನೂ ಭೋಜನ ಮಾಡತಾರೆ. ಈ ದಿವಿಜರೊಡಗೂಡಿ–ತಾವು ಅನ್ನೋದಕತ್ವೇನ ಭೋಜನಮಾಡಿದ ವಿದ್ಯಮಾನರಾದ ರುದ್ರ, ವಾಯು ದೇವತೆಗಳಿಂದ ಕೂಡಾ ಕೂಡಿಕೊಂಡು, ಶ್ರೀ–ಲಕ್ಷ್ಮೀದೇವಿಯರು, ಮಧುಸೂದನನ–ಶ್ರೀ ಪರಮಾತ್ಮನ, ಐದುವಳು–ಹೊಂದೋವರಾಗತಾರೆ. ಅಂದರೆ, ಇಂಥಾ ರಮಾದೇವಿಯರನ್ನ ಅನ್ನವಾಗಿ ಮಾಡಿಕೊಂಡು ಪರಮಾತ್ಮ ಭೋಜನಮಾಡೋವನಾಗತಾನೆ. ಜಠರಾಗ್ನಿಗೆ ರಮಾದೇವಿಯರು ಅಭಿಮಾನಿಗಳು. ಅನ್ನೋದಕಗಳು ಜಠರಾಗ್ನಿಯಲ್ಲಿ ಲಯ ಐದೋಣ ದಾವುದದೆ, ಅದೇ ದೇವತಾಲಯ ಅಂತ ತಾತ್ಪರ್ಯ. ಅಗ್ನ್ಯಂತರ್ಗತ ಮಧುಸೂದನಸಾಂಕೇತನಾದ ಶ್ರೀ ಪರಶುರಾಮದೇವರಿಗೆ ಲಕ್ಷ್ಮೀದೇವಿಯರು ಅನ್ನರೂಪರಾಗುತ್ತಾರೆ, ಎಂದರಿದು–ಎಂತ ತಿಳಿದವನಾಗಿ, ಆದರದಲಿ–ಆದರಪೂರ್ವಕವಾಗಿ, ಅನ್ನೋದಕವ–ಅನ್ನೋದಕಗಳ, ಕೊಡುತ–ಬ್ರಾಹ್ಮಣಾಧಿಷ್ಠಾನದಲ್ಲಿ ಅನ್ನೋದಕಾದಿಗಳ ಕೊಡೋ ಕಾಲದಲ್ಲೀನೂ, ಉಣುತ–ನೀನು ಭೋಜನಮಾಡೋ ಕಾಲದಲ್ಲೀನೂ, ಸುಖಿಸುತಿರು–ಭಗವದ್ಧ್ಯಾನದಿಂದ ಸುಖಪಡತಾ ಇರೋವನಾಗು. ಇದು ದಿಕ್ಪ್ರದರ್ಶನ. ಈ ಪ್ರಕಾರ ಅನ್ನೋದಕಾದಿಗಳಲ್ಲಿ ಯಾವತ್ತೂ ತತ್ತ್ವದೇವತೆಗಳ ರಸವದೆ, ಅವರವರು ತಮ್ಮ ತಮ್ಮ ರಸಗಳ ಸ್ವೀಕಾರಮಾಡತಾ, ತಾವು ಸ್ವೋತ್ತಮರಿಗೆ ಅನ್ನೋದಕರೂಪವಾಗಿ ಅವರವರಲ್ಲಿ ಪ್ರವೇಶರಾಗತಾರೆ. ರುದ್ರದೇವರು ವಾಯುದೇವರಲ್ಲಿ ಲಯ, ವಾಯುದೇವರು ಲಕ್ಷ್ಮೀಯಲ್ಲಿ ಲಯ, ಲಕ್ಷ್ಮೀ ಪರಮಾತ್ಮನಲ್ಲಿ ಲಯವಾಗುತ್ತಾರೆ ಎಂತ ಈ ಪ್ರಕಾರ ಅನುಸಂಧಾನದಿಂದ ಭೋಜನಮಾಡಿಸಿ, ತಾನೂ ಸಹ ಈ ರೀತಿ ಭೋಜನಮಾಡಬೇಕೆಂದು ತಾತ್ಪರ್ಯ.

**ಜಾಲಿತೊಪ್ಪಲಜಾವಿಗಳು ಮೆ ।**
**ದ್ದಾಲಯದಿ ಸ್ವೇಚ್ಛಾನುಸಾರದಿ ।**
**ಪಾಲಗರೆವಂದದಲಿ ಲಕುಮೀರಮಣ ತನ್ನವರ ॥**
**ಕೀಳುಕರ್ಮವ ಸ್ವೀಕರಿಸಿ ತ ।**
**ನ್ನಾಲಯದೊಳಿಟ್ಟವರ ಪೊರೆವ ಕೃ ।**
**ಪಾಳು ಕಾಮುದ ಕೈರವದಳಶ್ಯಾಮ ಶ್ರೀರಾಮ ॥ ೧೦ ॥**

ಭಕ್ತರು ಕೊಟ್ಟ ಪಾಪಕರ್ಮವ ಸ್ವೀಕರಿಸಿ, ರಕ್ಷಿಸುತ್ತಾನೆಂದು ಹೇಳುತ್ತಾರೆ.

ಅಜ—ಮೇಕೆಗಳು, ಆವಿಗಳು—ಕುರಿಗಳು, ಜಾಲಿತೊಪ್ಪಲ—ಇವುಗಳಿಂದ ಕ್ಷೀರಾಪೇಕ್ಷಿಯಾದ ಪುರುಷ, ಅಜ, ಆವಿಗಳಿಗೆ ಜಾಲಿತೊಪ್ಪಲು ಆಹಾರತ್ವೇನ ಹಾಕುತ್ತಾನೆ. ಸ್ವೇಚ್ಛಾನುಸಾರದಿ—ಅವುಗಳು ತಮ್ಮ ಇಚ್ಛಾನುಸಾರದಿ, ಮೆದ್ದು—ಭಕ್ಷಿಸಿದವುಗಳಾಗಿ, ಅಲಯದಿ—ಮನೆಗೆ ಬಂದು, ಮನೆ ಒಳಗೆ, ಪಾಲಗರೆವಂದದಲಿ—ಹಾಲು ಕರೆಯುವೋಪಾದಿಯಲ್ಲಿ, ಲಕುಮೀರಮಣ—ಅಜ ಆವಿಗಳಿಗೆ ಸದೃಶನಾದ, ಲಕ್ಷ್ಮೀಪತಿಯಾದ, ಬಿಂಬರೂಪಿಯಾದ, ಶ್ರೀ ನಾರಾಯಣದೇವರು, ತನ್ನವರ—ಅಹಂಮಮತಾದಿಗಳ ತ್ಯಜಿಸಿ, ಜ್ಞಾನ ಭಕ್ತಿ ವೈರಾಗ್ಯಗಳಿಂದ ಸಾಧನ ಪೂರ್ತಿ ಮಾಡಿಕೊಂಡು ಸ್ಥೂಲದೇಹಾಂತರ್ಗತನಾದ ಬಿಂಬನಾದ ತನ್ನ ಅಪರೋಕ್ಷೀಕರಿಸಿಕೊಂಡವರ, ಕೀಳುಕರ್ಮವ ಸ್ವೀಕರಿಸಿ—ಜಾಲಿತೊಪ್ಪಲಿಗೆ ಸದೃಶವಾದ ಪಾಪಕರ್ಮಗಳ ಸ್ವೀಕರಿಸಿ ಎಂದರೆ, ಅರ್ಪಣ ಮಾಡಿದ ಪಾಪಕರ್ಮಗಳ ಸ್ವೀಕಾರ ಮಾಡಿ ತಲ್ಲೇಪವಿಲ್ಲದಂತೆ ಮಾಡಿ, ತನ್ನಾಲಯದೊಳಿಟ್ಟು—ಆವಿ, ಅಜಗಳು ಕ್ಷೀರ ಕರೆದೋಪಾದಿಯಲ್ಲಿ ಸುಖಫಲಗಳೆಂಬೊ ಕ್ಷೀರ ಕರೆದು, ಭೋಜನರೂಪವಾದ ತನ್ನ ವೈಕುಂಠಾಲಯದೊಳಿಟ್ಟು, ಅವರ ಪೊರೆವ—ಅಂಥಾ ಅವರನ್ನ ರಕ್ಷಿಸುತ್ತಾನೆ. ಪರಮಾತ್ಮ ಎಂಥಾವನೆಂದರೆ, ಕೃಪಾಳು—ತನ್ನ ನಂಬಿದ ಭಕ್ತರ ಪಾಪಗಳ ಗಣನಮಾಡದ ದಯಾಳು, ಕಾಮದ—ತನ್ನ ಅಪರೋಕ್ಷವನ್ನು ಅಪೇಕ್ಷಿಸಿದವರಿಗೆ, ತನ್ನ ಸಂದರ್ಶನ ಕೊಡತಕ್ಕವ, ಕೈರವದಳಶ್ಯಾಮ—ನೀಲೋತ್ಪಲದೋಪಾದಿಯಲ್ಲಿ ಶ್ಯಾಮವರ್ಣೋಪೇತನಾದವ, ಶ್ರೀರಾಮ—ಕಾಂತಿಸಂಪನ್ನನಾದ ಸ್ವರಮಣನೆಂದು ತಾತ್ಪರ್ಯ.

**ಶಶಿ ದಿವಾಕರ ಪಾವಕರೊಳಿಹ ।**
**ಅಸಿತ ಸಿತ ಲೋಹಿತಗಳಲಿ ಶಿವ ।**
**ಶ್ವಸನ ಭಾರ್ಗವಿ ಮೂವರೊಳು ಶ್ರೀಕೃಷ್ಣ ಹಯವದನ ॥**
**ವಸುಧಿಪಾರ್ದನ ತ್ರಿವೃತು ಎನಿಸಿ ।**
**ವಸುಮತಿಯೊಳನ್ನೋದಕಾನಳ ।**
**ಪೆಸರಿನಿಂದಲಿ ಸರ್ವಜೀವರ ಸಲಹುವನು ಕರುಣಿ ॥ ೧೧ ॥**

ಅನ್ನದ್ವಾರಾ ಸರ್ವಪ್ರಾಣಿಗಳ ಸಂರಕ್ಷಿಸುತ್ತಾನೆಂತ ಹೇಳುತ್ತಾರೆ.

ಕರುಣಿ—ಕರುಣಾಸಮುದ್ರನಾದ ಶ್ರೀಪರಮಾತ್ಮ, ವಸುಮತಿಯೊಳು—ಭೂಮಿಯೊಳು ಸರ್ವಪ್ರಾಣಿಗಳ ರಕ್ಷಣಾರ್ಥವಾಗಿ, ಅನ್ನಾದಿ ಮೂರು ದ್ರವ್ಯಗಳ ಸೃಷ್ಟಿಮಾಡಿದವನಾಗಿದ್ದಾನೆ. ಅವು ದಾವುವೆಂದರೆ, ಅನ್ನ—ಸರ್ವಪ್ರಾಣಿಗಳಿಗೆ ಜೀವನೋಪಾಯವಾದ ವ್ರೀಹ್ಯಾದಿ ತೃಣಾದಿ ನಾನಾ ಜಾತಿ ಅನ್ನಗಳ (ಇದರಲ್ಲಿ), ಅಸಿತ—ಮಧ್ಯದಲ್ಲಿ ಕಪ್ಪಾದ ಕಳಂಕ ಉಳ್ಳ, ಶಶಿ—ಚಂದ್ರದೇವರು, ಶಿವ—ರುದ್ರದೇವರು, ಶ್ರೀಕೃಷ್ಣ—ಕಾಂತಿಸಂಪನ್ನನಾದ ಶ್ರೀಕೃಷ್ಣದೇವರು, ಉದಕ—ಪಾನಮಾಡತಕ್ಕ ಉದಕ (ಇದರಲ್ಲಿ), ಸಿತ—ಶುಭ್ರವರ್ಣವಿಶಿಷ್ಟರಾದ, ದಿವಾಕರ—ಸೂರ್ಯದೇವರು, ಶ್ವಸನ—ವಾಯುದೇವರು,

ಹಯವದನ–ತುರಗಗ್ರೀವನಾದ ಶ್ರೀಪರಮಾತ್ಮ, ಅನಳ–ತೇಜಃಪ್ರಾಚುರ್ಯವಾದ ಘೃತತೈಲಾದಿಗಳು, ಇದರಲ್ಲಿ, ಲೋಹಿತ–ರಕ್ತವರ್ಣವಿಶಿಷ್ಟನಾದ, ಪಾವಕ–ಅಗ್ನಿದೇವರು, ಭಾರ್ಗವಿ–ಲಕ್ಷ್ಮೀದೇವಿಯರು, ವಸುಧಿಪಾರ್ದನ–ಭೂಪಾಲಕರಾದ ದುಷ್ಟ ರಾಜರನ್ನ ಸಂಹಾರಮಾಡಿದ ಪರಶುರಾಮದೇವರು, ಗಳಲಿ–ಅನ್ನೋದಕಾದಿ ಮೂರರಲ್ಲಿ, ರೊಳಿಹ–ವಿದ್ಯಮಾನರಾಗಿ ಇರತಕ್ಕ, ಮೂವರೊಳು–ಮೂರು ವಿಧರಾದ ಅಭಿಮಾನಿಗಳೊಳು ಪೂರ್ವೋಕ್ತ ಕೃಷ್ಣಾದಿ ರೂಪಗಳಿಂದ, ತ್ರಿವೃತು ಎನಿಸಿ–ಮೂರು ಪ್ರಕಾರ ಅಂತರ್ಯಾಮಿ ಎಂತ ಕರಿಸಿದವನಾಗಿ, ಪೆಸರಿನಿಂದಲಿ–ಅನ್ನೋದಕಾದಿ ಮೂರು ಪೆಸರಿನಿಂದ ಕರೆಸುತ್ತ, ಸರ್ವಜೀವರ–ಸರ್ವಪ್ರಾಣಿಗಳ, ಸಲಹುವನು–ಸಂರಕ್ಷಣ ಮಾಡುವನು.

**ದೀಪ ಕರದಲಿ ಪಿಡಿದು ಕಾಣದೆ ।**
**ಕೂಪದೊಳು ಬಿದ್ದಂತೆ ವೇದನು ।**
**ಹೋಪನಿಷದರ್ಥಗಳ ನಿತ್ಯದಿ ಪೇಳುವವರೆಲ್ಲ ॥**
**ಶ್ರೀಪವನಮುಖವಿನುತನಮಲ ಸು ।**
**ರೂಪಗಳ ವ್ಯಾಪಾರ ತಿಳಿಯದೆ ।**
**ಪಾಪಪುಣ್ಯಕೆ ಜೀವ ಕರ್ತೃವಕರ್ತೃ ಹರಿಯೆಂಬ ॥ ೧೨ ॥**

ಶಾಸ್ತ್ರಜ್ಞರು ಅಜ್ಞಾನದೊಳಗೆ ಬಿದ್ದು ಕೆಡತಾರೆಂತ ಹೇಳತಾರೆ.

ದೀಪ ಕರದಲಿ ಪಿಡಿದು–ಅಂಧಕಾರಬಾಧಾ ತಪ್ಪಿಸಿಕೊಂಬೊ ನಿಮಿತ್ತವಾಗಿನ್ನು, ಅಂಧಕಾರಗತ ಮಾರ್ಗದಲ್ಲಿ ಇರುವ ಬಾವಿ ಮೊದಲಾದುದರಿಂದ ಪ್ರಾಪ್ತವಾಗತಕ್ಕ ಹಾನಿ ತಪ್ಪಿಸಿಕೊಂಬೊ ನಿಮಿತ್ತವಾಗಿನ್ನು, ದೀಪವನ್ನು ಕೈ ಒಳಗೆ ಹಿಡಕೊಂಡು ಮಾರ್ಗ ನಡಿಯತಕ್ಕ ಪುರುಷ, ಕಾಣದೆ–ತನಗೆ ಮುಂಭಾಗದಲ್ಲಿರುವ, ತನಗೆ ಬಾಧಕವಾಗಿ ಇರತಕ್ಕ ಬಾವಿ ಕಾಣದೆ ತನ್ನ ಎದುರಿಗೆ ಇರುವ ಪದಾರ್ಥವನ್ನು ದೃಷ್ಟಿಸಿ ನೋಡದೆ ತನ್ನ ಎದುರಿಗೆ ಇರತಕ್ಕ, ಕೂಪದೊಳು ಬಿದ್ದಂತೆ–ಬಾವಿಯೊಳು ಬಿದ್ದೋಪಾದಿಯಲ್ಲಿ, ವೇದ ಮಹೋಪನಿಷತ್–ಋಗಾದಿ ವೇದಗಳ ಇನ್ನೂ ಐತರೇಯಾದಿ ದೊಡ್ಡ ಉಪನಿಷತ್ತುಗಳ, ಅರ್ಥಗಳ–ಇವುಗಳಲ್ಲಿ ಹೇಳುವ ಜ್ಞಾನಭಕ್ತ್ಯಾದಿಗಳ ವೃದ್ಧಿ ಮಾಡಿಕೊಂಡು 'ನ ಪುನರಾವರ್ತಿತ'ವಾಗೋ ನಿಮಿತ್ತ ದೀಪಸದೃಶವಾದ ವೇದಾದಿಗಳ ಮನವೆಂಬ ಕೈಯಲ್ಲಿ ಧರಿಸಿ, ದೀಪಪ್ರಕಾಶರೂಪವಾದ ಅರ್ಥಗಳ, ನಿತ್ಯದಿ–ಪ್ರತಿನಿತ್ಯದಲ್ಲೂ, ಪೇಳುವವರೆಲ್ಲ–ಪ್ರಕಾಶ ಚತುರ್ದಿಕ್ಕಿನಲ್ಲಿ ವ್ಯಾಪಿಸಿದೋಪಾದಿಯಲ್ಲಿ ತಮ್ಮ ತಮ್ಮ ವಾಕ್ಯಗಳಿಂದ ಸರ್ವತ್ರ ವ್ಯಾಪಿಸುವಂತೆ ಪೇಳತಕ್ಕವರೆಲ್ಲ, ಶ್ರೀ–ಲಕ್ಷ್ಮೀದೇವಿಯರು, ಪವನ–ಜೀವೋತ್ತಮರಾದ ವಾಯುದೇವರು, ಮುಖ–ಇವರೇ ಮೊದಲಾದ ದೇವತೆಗಳಿಂದ, ವಿನುತನ–'ಸರ್ವಕರ್ತ ನೀನು, ನಿನ್ನ ಅಧೀನಕರ್ತರು ಎಲ್ಲರು', ಎಂತ ಸ್ತೋತ್ರ ಮಾಡಿಸಿ ಕೊಳ್ಳಲ್ಪಟ್ಟ ಪರಮಾತ್ಮನ, ಅಮಲಸುರೂಪಗಳ–ನಿರ್ಮಲವಾದ, ನಿರ್ದೋಷಗಳಾದ, ಹೃದಯಗತ ಏಕಾದಶೇಂದ್ರಿಯಗತ ರೂಪಗಳ, ವ್ಯಾಪಾರ–ಕರ್ತನಾದ ಶ್ರೀ ದೇವರ

ವ್ಯತಿರಿಕ್ತ, ಚಲನಾದಿ ಸಾಮರ್ಥ್ಯರಹಿತವಾದ ಸ್ವರೂಪಭೂತಕರ್ತೃತ್ವ ಈಶಾಧೀನವಾಗಿ ಉಳ್ಳ ಜೀವರ ಇಂದ್ರಿಯಸ್ಥನಾದ ಪರಮಾತ್ಮನ ಕ್ರಿಯಾರೂಪವಾದ ಕರ್ಮ ಮಾಡಿಸತಕ್ಕ ವ್ಯಾಪಾರಗಳ, ತಿಳಿಯದೆ–ವೇದಾದಿಗಳೆಂಬ ದೀಪವನ್ನು ಮನದಲ್ಲಿ ಧರಿಸಿಕೊಂಡೂನೂ, ಪ್ರಕಾಶರೂಪವಾದ ಅರ್ಥಗಳ ಹೇಳತಾನೂ ತದನುಷ್ಠಾನ ಮಾಡುವ ಕ್ರಮ ತಿಳಿಯದೆ, ಪಾಪಪುಣ್ಯಕೆ–ಪಾಪಪುಣ್ಯಗಳ ಮಾಡೋದಕ್ಕೆ, ಜೀವ ಕರ್ತೃವು–ಕರ್ತರು ಜೀವರೇ ಹೊರತು ಪರಮಾತ್ಮನಲ್ಲ ಎಂತ ತಿಳಿದು, ಅಕರ್ತೃ ಹರಿಯೆಂಬ–ಪಾಪಪುಣ್ಯಗಳ ಮಾಡಿಸೊ ವಿಷಯದಲ್ಲಿ ಪರಮಾತ್ಮ ಅಕರ್ತ ಎಂತ ಉಚ್ಚಾರಣರೂಪವಾದ ಪ್ರತ್ಯಕ್ಷ ವಿರುದ್ಧವಾದ ಅರ್ಥ ಹೇಳಿ, ಬಾವಿಯಲ್ಲಿ ಬೀಳೋವರಾಗತಾರೆ. ಎಂದರೆ ಜೀವಗೆ ಅನಾದಿ ಸ್ವರೂಪಭೂತವಾದ ಕರ್ತೃತ್ವ ಅದೆ ಎಂತಲೂ ಸರ್ವಕರ್ತಾ ಈಶನೇ ಖರೇ ಆದರೂ ಪ್ರಯತ್ನಮಾಡೋ ಮಾತ್ರಕ್ಕೆ ಜೀವಗೆ ಸ್ವಾಧೀನಕರ್ತೃತ್ವ ಅದೆ ಎಂತಲೂ ಜೀವ, ಪ್ರಯತ್ನಮಾಡೋ ವಿಷಯದಲ್ಲಿ ಪರಮಾತ್ಮನ ಪ್ರೇರಣೆ ಇಲ್ಲವೆಂತಲೂ, ಈ ವಿಷಯಕ್ಕೆ ಪರಮಾತ್ಮ ಅಕರ್ತನೆಂತಲೂ ಮತ್ತು ಜೀವರಿಗೆ ಸ್ವಾತಂತ್ರ್ಯವಿಭಾಗ ಮಾಡಿಕೊಟ್ಟಿದ್ದಾನಾದ ಕಡಿಯಿಂದ, ಅದರಿಂದ ಪ್ರಯತ್ನ ನಡಿಸತಾನೆಂತಲೂ "ಷಡ್ಭಿಃ ಮಾನುಷಯತ್ನೈಶ್ಚ ಸಪ್ತಮಂ ದೈವಚಿಂತನಂ" ಎಂಬ ವಚನವೇ ಸಾಧಕವೆಂತಲೂ ಹೇಳತಾರೆ. ಪ್ರಯತ್ನಕ್ಕೆ ಮಾತ್ರ ಸ್ವತಂತ್ರವಿದ್ದರೆ ತನಗೆ ಹಾನಿ ಆಗತಕ್ಕ ಪ್ರಯತ್ನ ಮಾಡಲಾರ. ಪರಲೋಕ ಹಾನಿ ಆಗತಕ್ಕ ಪ್ರಯತ್ನಗಳೇ ಮಾಡತಾನೆ. ಆದ್ದರಿಂದ ಪ್ರಯತ್ನ ಕೂಡ ಈಶಾಧೀನವೆ. ಇದನರಿಯದೆ ಜೀವಗೆ ಸ್ವಾಧೀನಕರ್ತೃತ್ವ ಅಂಗೀಕರಿಸಿ ಪಾಪರೂಪವಾದ ಬಾವಿಯೊಳಗೆ ಬೀಳುತ್ತಾರೆಂತ ತಾತ್ಪರ್ಯ. ಇದರ ವಿವರ ದತ್ತಸ್ವಾತಂತ್ರ್ಯ ಸಂಧಿಯಲ್ಲಿ ಅದೆ.

**ಅನಿಲದೇವನು ವಾಙ್ಮನೋಮಯ ।**
**ನೆನಿಸಿ ಪಾವಕ ವರುಣ ಸಂಕ್ರಂ ।**
**ದನಮುಖಾದ್ಯರೊಳಿದ್ದು ಭಗವದ್ರೂಪಗುಣಗಳನು ॥**
**ನೆನೆನೆನೆದು ಉಚ್ಚರಿಸುತಲಿ ನ ।**
**ಮ್ಮನು ಸದಾ ಸಂತೈಸುವನು ಸ ।**
**ನ್ಮುನಿಗಣಾರಾಧಿತಪದಾಂಬುಜ ಗೋಜ ಸುರರಾಜ ॥ ೧೩ ॥**

ಸ್ವರೂಪತಃ ಸಜ್ಜನರಾದವರ ಸಾಧನೆ, ವಾಯುದೇವರು ಮಾಡಸತಾರೆಂದು ಹೇಳತಾರೆ.

ಗೋಜ – ಗೋ–ವೇದಗಳು, ಇದರಿಂದ, ಜ–ಉತ್ಪನ್ನಗಳಾದ, ವ್ಯಕ್ತಗಳಾದ, ಗುಣಪೂರ್ಣನಾದ ಪರಮಾತ್ಮನ ಮಹಿಮೆ ಮತ್ತು ವೇದಗಳಿಂದ ಉತ್ಪನ್ನಗಳಾದ ಪುರಾಣಾದಿಗತ ಭಗವನ್ಮಹಿಮಾ, ಅನೇಕ ವಿಧವಾದ ಭಗವನ್ಮಹಿಮಾಗಳ, ಅನಿಲದೇವನು– ಜೀವೋತ್ತಮರಾದ ವಾಯುದೇವರು, ವಾಕ್–ವಾಗಿಂದ್ರಿಯವಾದ, ವಾಕ್ಯಗಳು ನುಡಿಯುತಕ್ಕ, ಮುಖದಲ್ಲೇನು, ಮನಃ–ಹೃದಯಗೋಳಕಗತ ಮನಸ್ಸಿನಲ್ಲೇನು, ಮಯನೆನಿಸಿ–

ವಾಙ್ಮನೋನಾಮುಗಳಿಂದ ಪ್ರಚುರರಾಗಿ, ಆಯಾ ನಾಮುಗಳಿಂದ ಪ್ರಚುರರಾಗಿ ಆಯಾ ನಾಮುಗಳು ಉಳ್ಳವರೆನಿಸಿ, ಆಯಾ ಸ್ಥಾನದಲ್ಲಿ ಇರೋವರಾಗಿದ್ದಾರೆ. ಪಾವಕ–ಅಗ್ನಿಯು, ವಾಗಭಿಮಾನಿ, ವರುಣ–ವರುಣದೇವರು, ಸ್ಥೂಲಜಿಹ್ವಾಭಿಮಾನಿ, ಸಂಕ್ರಂದನ–ಇಂದ್ರದೇವರು, ಕಂಠಗತ ಅಣುನಾಲಿಗೆಗೆ ಅಭಿಮಾನಿ. ಹಾಗೇ ಮನೋಭಿಮಾನಿಗಳಾದ ಗರುಡ, ಶೇಷ, ರುದ್ರಾದಿಗಳು ಭಗವನ್ಮಹಾತ್ಮೆ ಉಚ್ಚಾರ ಮಾಡಬೇಕಾದರೆ, ಭಗವದ್ಧ್ಯಾನ ಮಾಡಬೇಕಾದರೆ, ಪೂರ್ವೋಕ್ತ ಇಂದ್ರಿಯಸ್ಥಾನಗಳು, ತದಭಿಮಾನಿಗಳು, ತನ್ನಿಯಾಮಕರು ಹೊರತು ಆಗೋದಿಲ್ಲ. ಆದ್ದರಿಂದ ವಾಯುದೇವರು ವಾಙ್ಮನೋನಾಮದಿಂದ ವಾಕ್, ಮನಃಸ್ಥಾನದಲ್ಲಿ, ಮುಖಾದ್ಯರೊಳಿದ್ದು–ವರುಣದೇವರೇ ಮೊದಲಾದ ಪೂರ್ವೋಕ್ತ ದೇವತೆಗಳಲ್ಲಿದ್ದು, ಭಗವದ್ರೂಪ–ಹೃದಯಾಕಾಶದಲ್ಲಿ ಭಗವದ್ಧ್ಯಾನ, ರುದ್ರಾದಿಗಳ ದ್ವಾರಾ ಜೀವನಕಡೆಯಿಂದ ಮಾಡಿಸುತಲಿ, ಗುಣಗಳನು–ಶ್ರೀ ಪರಮಾತ್ಮನ ಗುಣಗಳನ್ನು, ನೆನೆನೆನೆದು–ತಾವು ಬಾರಿಬಾರಿಗೆ ನೆನೆದು, ತಮ್ಮ ಕ್ರಿಯಾದ್ವಾರಾ, ವರುಣಾದಿ ದೇವತೆಗಳ ಕ್ರಿಯಾದ್ವಾರಾ, ವರ್ಣಗಳು ನುಡಿಯೋದಕ್ಕೆ ಅಧಿಷ್ಠಾನ, ಸಹಕಾರಿಯಾದ ಅಣುನಾಲಗೆ, ವದನ, ಜಿಹ್ವೆ ಇವುಗಳಲ್ಲಿ ಹಾಗೆ, ಮನದಲ್ಲಿ ತಾವಿದ್ದು, ಉಚ್ಚರಿಸುತಲಿ – ಉಚ್ಚಾರ ಮಾಡುತಲಿ ಜೀವನ ದ್ವಾರಾ ವಾಗಿಂದ್ರಿಯದಿಂದ ಉಚ್ಚಾರ ಮಾಡಿಸುತಲಿ, ಸನ್ಮುನಿಗಣ–ಸಮೀಚೀನರಾದ ಜ್ಞಾನಿಗಳಾದ ರುದ್ರಾದಿ ದೇವತೆಗಳೇ ಮೊದಲಾದ ಸಮೂಹಗಳಿಂದ, ಆರಾಧಿತ–ಪೂಜಿತರಾದ, ಪದಾಂಬುಜ–ಪಾದಕಮಲಗಳುಳ್ಳ, ಸುರರಾಜ–ದೇವೋತ್ತಮರಾದ ವಾಯುದೇವರು, ನಮ್ಮನು–ಪೂರ್ವೋಕ್ತ ಪ್ರಕಾರ ಸ್ವತಂತ್ರಾಸ್ವತಂತ್ರ ತತ್ತ್ವಗಳ ತಿಳಿದು ಅಹಂಮಮತಾದಿಗಳ ತ್ಯಜಿಸಿ, ಭಾರತೀರಮಣಮುಖ್ಯಪ್ರಾಣಾಂತರ್ಗತನಾದ ಪರಮಾತ್ಮನ್ನ ಭಜಿಸತಕ್ಕ ನಮ್ಮನ್ನು, ಭಗವದಾಜ್ಞಾದಿಂದ ವಾಯುದೇವರು, ಸದಾ ಸಂತೈಸುವನು–ನಿರಂತರದಲ್ಲೂ ಅಜ್ಞಾನಾದಿ ದೋಷಗಳು ಪ್ರಾಪ್ತವಾಗದಂತೆ ಜ್ಞಾನ ಭಕುತಿ ವೈರಾಗ್ಯಾದಿಗಳನ್ನು ಕೊಟ್ಟು ಸಂರಕ್ಷಣೆ ಮಾಡತಾರೆಂದು ತಾತ್ಪರ್ಯ.

**ಪಾದವೆನಿಪವು ವಾಙ್ಮನೋಮಯ ।**
**ಪಾದರೂಪದ್ವಯಗಳೊಳು ಪ್ರ ।**
**ಲ್ಹಾದಪೋಷಕ ಸಂಕರುಷಣಾಹ್ವಯದಿ ನೆಲಸಿದ್ದು ॥**
**ವೇದಶಾಸ್ತ್ರಪುರಾಣಗಳ ಸಂ ।**
**ವಾದರೂಪದಿ ಮನನಗೈವುತ ।**
**ಮೋದಮಯ ಸುಖವಿತ್ತು ಸಲಹುವ ಸರ್ವಸಜ್ಜನರ ॥ ೧೪ ॥**

ಪೂರ್ವೋಕ್ತ ವಾಙ್ಮನೋಮಯ ಭಗವದ್ರೂಪಗಳ ಹೇಳತಾರೆ.

ಮಯ–ಸಾಧನೆಗೆ ಪ್ರಚುರವಾದ, ಪ್ರಸಿದ್ಧವಾದ ಇಂದ್ರಿಯಗಳು, ವಾಕ್–ವಾಗಿಂದ್ರಿಯ ಒಂದು, ಮನ–ಮನೋ ಇಂದ್ರಿಯ ಒಂದು, ಅಂತು ಎರಡು ಇಂದ್ರಿಯಗಳು,

ಪಾದವೆನಿಸವು–ಗ್ರಾಮದಿಂದ ಗ್ರಾಮಾಂತರಕ್ಕೆ ಹೋಗಬೇಕಾದರೆ ಎರಡು ಪಾದಗಳು ವ್ಯತಿರಿಕ್ತ ನಡೆಯೋಣ ಹೇಗೆ ಆಗುವುದಿಲ್ಲವೋ, ತದ್ವತ್ ವೈಕುಂಠಾಖ್ಯ ಗ್ರಾಮಕ್ಕೆ ಇಹಲೋಕವೆಂಬ ಗ್ರಾಮದಿಂದ ಹೋಗುವುದಕ್ಕೆ ಪಾದಗಳು ಎರಡು ಯಾವುವೆಂದರೆ, ವಾಕ್, ಮನ, ಎಂಬೆರಡು ಇಂದ್ರಿಯಗಳು. ಇವುಗಳು ಗಮನಾಗಮನಸದೃಶಗಳು. ಅಹಂ ಮಮತಾ ತ್ಯಾಗಪೂರ್ವಕ, ಜ್ಞಾನ ಭಕ್ತಿ ವೈರಾಗ್ಯಗಳು, ಪಾದರೂಪದ್ವಯಗಳೊಳು–ಪಾದಸಾಂಕೇತವಾದ ವಾಙ್ಮನಗಳೆಂಬ ಎರಡರೊಳು ವಿದ್ಯಮಾನಗಳಾದ ವಾಙ್ಮನೋ ನಾಮಗಳಿಂದ ಯುಕ್ತರಾದ ವಾಯುದೇವರ ರೂಪದ್ವಯಗಳೊಳು, ಪ್ರಲ್ಹಾದಪೋಷಕ–ವಾಙ್ಮಯನಾದ ವಾಯುದೇವರಲ್ಲಿ ಪ್ರಲ್ಹಾದಪೋಷಕ ನರಸಿಂಹ, ಸಂಕರುಷಣ–ಮನೋಮಯನಾದ ವಾಯುದೇವರಲ್ಲಿ ಸಂಕರ್ಷಣ, ಈ ಉಭಯರು, ಆಹ್ವಯದಿ–ವಾಙ್ಮನೋ ನಾಮದಿಂದ, ನೆಲಸಿದ್ದು–ಅಂತರ್ಗತರಾಗಿ ಆವಾಸರಾಗಿದ್ದು, ವೇದ–ಋಗಾದಿ ವೇದಗಳು, ಹಾಗೆ ಶ್ರೀ ಮಹಾಭಾರತ, ಶಾಸ್ತ್ರ–ಭಾಗವತಾದಿ ಶಾಸ್ತ್ರಗಳು, ಪುರಾಣಗಳ–ವಿಷ್ಣುಪುರಾಣಾದಿಗಳ, ಸಂವಾದರೂಪದಿ–ಮನಸ್ಸಿಗೂ, ವಾಕ್ಕಿಗೂ ಸಂವಾದರೂಪವಾದ ಕ್ರಿಯೆಗಳ ನಡೆಸುತ್ತ, ತನ್ನಾಮದಿಂದ ಅಂತರ್ಗತನಾಗಿ ಇದ್ದು, ಮನನ ಗೈವುತ–ಪರಮಾತ್ಮನಾದ ತಾನು ಮನಃಕ್ರಿಯಾ ನಡೆಸುತ್ತ, ತದ್ದ್ವಾರಾ ಜೀವರ ಕಡಿಯಿಂದ ನಡೆಸುತ್ತ, 'ಮನನ' ಎಂದರೆ ಸರ್ವದಾ ಮನಸ್ಸಿನಲ್ಲಿ ಜ್ಞಾಪಕ ಕೊಡುತ್ತ, ಕ್ರಿಯಾ ವಾಕ್ಕಿನಿಂದ ನಡೆಸುತ್ತ, ಮೋದಮಯ – ಆನಂದಮಯನಾದ ಬಿಂಬರೂಪೀ ಪರಮಾತ್ಮ, ಸುಖವಿತ್ತು–ಅಪರೋಕ್ಷಾಖ್ಯ ಸುಖವನ್ನು ಕೊಟ್ಟು, ಸರ್ವಸಜ್ಜನರ–ಈ ಪ್ರಕಾರ ಅನುಸಂಧಾತೃಗಳಾದ ಭಗವದ್ಭಕ್ತರ, ಸಲಹುವ–ಸಂರಕ್ಷಣ ಮಾಡತಕ್ಕಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :–** ಛಾಂದೋಗ್ಯೋಪನಿಷದ್ಭಾಷ್ಯಾರ್ಥವನ್ನು ತಿಳಿಸುತ್ತಾರೆ :– "ಏಷ ಹ ವೈ ಯಜ್ಞೋ ಯೋಽಯಂ ಪವತ ಏಷ ಯನ್ನಿದಂ ಸರ್ವಂ ಪುನಾತಿ ಯದೇಷ ಯನ್ನಿದಂ ಸರ್ವಂ ಪುನಾತಿ, ತಸ್ಮಾದೇಷ ಏವ ಯಜ್ಞಃ ತಸ್ಯ ಮನಶ್ಚ ವಾಕ್ ಚ ವರ್ತನೀ ತಯೋರನ್ಯತರಾಂ ಮನಸಾ ಸಂಸ್ಕರೋತಿ ||" (ಛಾಂ. ಅ. ೪, ಖಂ. ೪). ಭಾಷ್ಯ – "ವಾಙ್ಮನಃಪಾದಯಜ್ಞಾಖ್ಯಪ್ರತಿಮೋ ವಾಯುರೀರಿತಃ | ಧ್ಯಾಯನ್ ವಾಯುಂ ಹರಿಂ ಚೈವ ತತೋ ಬ್ರಹ್ಮಾ ಮುನಿರ್ಭವೇತ್ ||" ಇತಿ.

**ಗಂಧವಹ ದಶದಿಶಗಳೊಳಗರ |**
**ವಿಂದಸೌರಭ ಪಸರಿಸುತ ಘ್ರಾ |**
**ಣೇಂದ್ರಿಯಗಳಿಗೆ ಸುಖವನೀವುತ ಸಂಚರಿಸುವಂತೆ ||**
**ಇಂದಿರೇಶನ ಸುಗುಣಗಳ ದೈ |**
**ನಂದಿನದಿ ತುತಿಸುತನುಮೋದಿಸು |**
**ತಂಧಬಧಿರಸುಮೂಕನಂತಿರು ಮಂದಜನರೊಡನೆ || ೧೫ ||**

ಜ್ಞಾನಿಯಾದವ ಅಜ್ಞಾನಿಯ ಕೂಡ ಇರಬೇಕಾದರೆ ಇರತಕ್ಕ ಕ್ರಮ ಹೇಳತಾರೆ.

ಗಂಧವಹ–ಸಮೀಚೀನವಾದ, ಗಂಧಯುಕ್ತವಾದ ಪರಿಮಳವನ್ನ ಹೊತ್ತುಕೊಂಡು ತಿರುಗುವ ವಾಯು, ಎಂತ ತಾತ್ಪರ್ಯ. ಇಂಥಾ ವಾಯು, ತಾನು ಅನ್ಯರ ನೇತ್ರಕೆ ಗೋಚರನಾಗದೆ, ಅರವಿಂದ–ಕಮಲ ಪುಷ್ಪಗತ, ಸೌರಭ–ಪರಿಮಳವನ್ನ, ದಶದಿಶ ಗಳೊಳಗೆ–ಹತ್ತು ದಿಕ್ಕುಗಳಲ್ಲಿ, ಪಸರಿಸುತ–ಆ ಪರಿಮಳವನ್ನ ಹರವುತ ತಾನು ಅನ್ಯರಿಗೆ ಗೋಚರನಾಗದೆ, ಘ್ರಾಣೇಂದ್ರಿಯಗಳಿಗೆ – ನಾಸಿಕೇಂದ್ರಿಯಕ್ಕೆ ವಾಸನೆಯಿಂದಲೂ, ತ್ವಗಿಂದ್ರಿಯಕ್ಕೆ ವಾಯುವಾದ ತನ್ನ ಸ್ಪರ್ಶದಿಂದಲೂ, ಈ ಪ್ರಕಾರ, ಸುಖವನೀವುತ–ಸಂತೋಷ ಕೊಡುತ್ತಾ, ಸಂಚರಿಸುವಂತೆ–ಸಂಚಾರ ಮಾಡುವಂತೆ, ಇಂದಿರೇಶನ–ಇಂದಿರಾಪತಿಯಾದ ಶ್ರೀ ನಾರಾಯಣ ದೇವರ ಪಾದಗಳೆಂಬ ಕಮಲದಲ್ಲಿ, ವಿದ್ಯಮಾನ ವಾದ ಸೌರಭ ಸಾಂಕೇತವಾದ ಮಹಿಮಾಖ್ಯ ಸುಗಂಧವನ್ನ ಗಾಳಿ ಸದೃಶನಾಗಿ ಅದರನ್ನ ತೆಗೆದುಕೊಂಡು, ಸುಗುಣಗಳ – ಪರಮಾತ್ಮನ ಪಾದಗತ ಅಸದೃಶವಾದ ಈ ಸುಗುಣಗಳ ದಶದಿಕ್ಕಿನಲ್ಲಿ ವ್ಯಾಪ್ತಿಮಾಡಿ ತ್ವಗಿಂದ್ರಿಯ, ಘ್ರಾಣೇಂದ್ರಿಯಕ್ಕೆ ಸದೃಶ ರಾದ ಭಗವದ್ಭಕ್ತರಿಗೆ ಉಪದೇಶಮಾಡಿ ಅದರಿಂದ, ಅವರಿಗೆ ಸುಖಪಡಿಸುತ್ತ, ದೈನಂದಿ ನದಿ–ಪ್ರತಿ ದಿನದಲ್ಲೂ ನೀನೂನೂ ಅದರನ್ನ ಸ್ವೀಕಾರಮಾಡಿ, ತುತಿಸುತ–ಪಾದಕಮಲಗಳ ಸ್ತೋತ್ರಮಾಡುತ್ತ, ಅನುಮೋದಿಸುತ–ಅತ್ಯಂತ ಸಂತೋಷಪಡುತ್ತಾ, ಸು–ಸಮೀಚೀನ ಗಳಾದ, ಅಂಧ–ಕುರುಡ, ಸರ್ವತ್ರ ಅಂತರ್ಗತನಾದವನನ್ನ ನೋಡುತ್ತ, ಬಾಹ್ಯ ವಿಷಯಾದಿಗಳನ್ನ ನೋಡೋ ವಿಷಯದಲ್ಲಿ ಕುರುಡನಾಗು, ಬಧಿರ–ಭಗವನ್ಮಹಿಮಾ ವ್ಯತಿರಿಕ್ತ ಲೋಕವಾರ್ತೆ ಕೇಳುವುದರಲ್ಲಿ ಕಿವುಡನಾಗು, ಮೂಕನಂತಿರು–ಭಗವತ್ಕಥಾ ವ್ಯತಿರಿಕ್ತ ಲೋಕವಾರ್ತೆ ಮಾತನಾಡುವುದರಲ್ಲಿ, ಮೂಕನಂತಿರು. ಮಂದಜನರೊಡನೆ–ಮಂದಜನರಾದ ಅಜ್ಞಾನಿಗಳ ಕೂಡ ಮೂಕನಂತೆ, ಕಿವುಡನಂತೆ, ಕುರುಡನಂತೆ ಇರು. ಯೋಗ್ಯತಾವನ್ನ ಅಯೋಗ್ಯರಿಗೆ ಪ್ರದರ್ಶನ ಮಾಡದೆ, ವಾಯುವಿನಂತೆ ಸಂಚರಿಸು. ಗಂಧಸದೃಶವಾದ ಜ್ಞಾನ, ಸಜ್ಜನರಿಗೆ ಉಪದೇಶಮಾಡಿ ಅವರಿಗೆ ಸುಖವನ್ನು ಕೊಡುವ ನಾಗು ಎಂತ ತಾತ್ಪರ್ಯ.

**ಶ್ರೀರಮಣನರಮನೆಯ ಪೂರ್ವ ।**
**ದ್ವಾರದಲ್ಲಿಹ ಸಂಜ್ಞ ಸೂರ್ಯಗ ।**
**ಭಾರತೀಪತಿಪ್ರಾಣನೊಳಗಿಹ ಲಕುಮಿನರಯಣನ ॥**
**ಸೇರಿ ಮನುಜೋತ್ತಮರು ಸರ್ವಶ ।**
**ಶರೀರಗತ ನಾರಾಯಣನ ಅವ ।**
**ತಾರಗುಣಗಳ ತುತಿಸುತಲಿ ಮೋದಿಪರು ಮುಕ್ತಿಯಲಿ ॥ ೧೬ ॥**

ಉಕ್ತಂ ಚ ಪಾಂಚರಾತ್ರಾಗಮೇ :– "ಪ್ರಾಣಾಭಿಮಾನೀ ಚಕ್ಷುಶ್ಚ ಸೂರ್ಯ ಏವ ಹ್ಯುದಾಹೃತಃ । ತೇಜೋನ್ನಾದ್ಯಭಿಮಾನೀ ಚ ಪ್ರಾಗ್ದ್ವಾರಾಧಿಪತಿರ್ಹರೇಃ ॥" ಇತಿ.

"ಸೂರ್ಯಪ್ರಸಾದಾತ್ತು ನರಾಃ ಪೂರ್ವದ್ವಾರೇಣ ಕೇಶವಂ ಪ್ರಾಪ್ನುವಂತೀತಿ" ಛಾಂದೋಗ್ಯ ಭಾಷ್ಯೇ.

ಶ್ವೇತದ್ವೀಪಗತ ವಾಸುದೇವನಿಂದ ಇಚ್ಛಾವರಣ ಅಪಸರಣ ವಿಚಾರಕ್ರಮುವನ್ನ ಹೇಳತಾರೆ.

ಶ್ರೀರಮಣನ–ಮಾಯಾನಾಮಕ ಲಕ್ಷ್ಮೀಪತಿಯಾದ ವಾಸುದೇವನ, ಅರಮನೆಯ–ಶ್ವೇತದ್ವೀಪಗತ ಅರಮನೆಗೆ, ಪೂರ್ವದಲ್ಲಿಹ–ಪೂರ್ವದಿಕ್ಕಿನಲ್ಲಿ ಇರತಕ್ಕ ಬಾಗಿಲುಗಳು ಮೂರು. ಈ ಮೂರು ಬಾಗಿಲುಗಳಲ್ಲಿ ಇರತಕ್ಕ ದ್ವಾರಪಾಲಕರು, ಸಂಜ್ಞಸೂರ್ಯಗ–ಇದುವರೆಗೆ ಮುಕ್ತರಾದ ಸಂಜ್ಞಾದೇವಿಯರು, ಇವರಿಗೆ ಪತಿಯಾದ ಸೂರ್ಯ ಇವರು ಪ್ರಥಮದ್ವಾರಕ್ಕೆ ದ್ವಾರಪಾಲಕರು. ಭಾರತೀಪತಿಪ್ರಾಣ–ಭಾರತೀಸಾಂಕೇತದಿಂದ ಮುಕ್ತರಾದ ಸರಸ್ವತೀದೇವಿಯರು. ಈಕೆಯ ಪತಿಯಾದ ಪ್ರಾಣಸಾಂಕೇತದಿಂದ ಮುಕ್ತರಾದ ಬ್ರಹ್ಮದೇವರು, ಇವರಿಬ್ಬರೂ ಪೂರ್ವದ್ವಾರದ ಎರಡನೇ ಬಾಗಿಲಿನಲ್ಲಿ ಇರತಕ್ಕ ದ್ವಾರಪಾಲಕರು. ಒಳಗಿಹ–ಎರಡನೇ ದ್ವಾರಕ್ಕೆ ಒಳಗೆ ಇರತಕ್ಕ ಮೂರನೇ ದ್ವಾರವಾದ ಪೂರ್ವದಿಕ್ಕಿನ ದ್ವಾರದಲ್ಲಿ ಇರತಕ್ಕ ದ್ವಾರಪಾಲಕರಾದ, ಲಕುಮಿನರಯಣನ–ಲಕ್ಷ್ಮೀಪತಿಯಾದ ನಾರಾಯಣದೇವರನ್ನ ತಿಳಿವುದು, ಮನುಜೋತ್ತಮರು–ಮನುಜೋತ್ತಮ ಶಬ್ದದಿಂದ ಮಾನುಷ ಗಂಧರ್ವರಾರಭ್ಯ ತೃಣಾಂತವರಿಗೂ ಗ್ರಾಹ್ಯ. ಇವರುಗಳು, ಸೇರಿ–ಪೂರ್ವದ್ವಾರಗಳಾದ ಮೂರು ದ್ವಾರಗಳು, ಆಯಾ ದ್ವಾರಪಾಲಕರ ಆಜ್ಞಾದಿಂದ ದಾಟಿ, ಒಳಗಿನ ವಾಸುದೇವನ ಸೇರಿ, ವಾಸುದೇವನಿಂದ ಇಚ್ಛಾವರಣ ಅಪಸರಿತರಾಗಿ, ಮುಕ್ತಿಯಲಿ–ನಿರ್ದೋಷರಾದ ಮುಕ್ತರೆಂದು ಕರೆಸಿ ಇಚ್ಛಾವರಣದಿಂದ ಮುಕ್ತರಾಗಿ ಶ್ವೇತದ್ವೀಪಾಖ್ಯ ಸ್ಥಾನಗತ ವಾಸುದೇವನ ಅರಮನೆಯಲ್ಲಿ ವಿದ್ಯಮಾನವಾದ ಪೂರ್ವಭಾಗಗತ ಸ್ಥಾನದಲ್ಲೇ, ಸರ್ವಶರೀರಗತ–ಸಮುಸ್ತರಾದ ಮಾನುಷಗಂಧರ್ವರಾರಭ್ಯ ತೃಣಾಂತ ಸರ್ವರೂ ತಮ್ಮ ತಮ್ಮ ಸ್ವರೂಪದೇಹಗತ ಬಿಂಬನ ಹಾಗೆ, ನಾರಾಯಣನ–ಪೂರ್ವದಿಕ್ಕಿನಲ್ಲಿ ಇರತಕ್ಕ ನಾರಾಯಣದೇವರ, ಅವತಾರ–ಈ ನಾರಾಯಣವೇವರಿಂದ ವ್ಯಕ್ತವಾದ ಅವತಾರರೂಪಗಳ, ಇನ್ನೂ ಈ ರೂಪಗತ, ಗುಣಗಳ–ಕಲ್ಯಾಣಗುಣಗಳನ್ನ, ತುತಿಸುತಲಿ–ಸ್ತೋತ್ರ ಮಾಡುತ್ತಲಿ, ಮೋದಿಪರು–ಪೂರ್ವದಿಕ್ಕಿನಲ್ಲಿ ಇದ್ದು ತಮ್ಮ ತಮ್ಮ ಸ್ವರೂಪಾನಂದದಿಂದ ಸಂತೋಷಿಸುತ್ತಾ ಇರುತ್ತಾರೆ. ಹೀಗೆ ಹೇಳಿದ್ದು ಮುಂದೆ ಹೇಳತಕ್ಕದ್ದು ಯಾವತ್ತೂ ಮುಕ್ತರೇವೇ, ಅಮುಕ್ತರಲ್ಲ. ಶುದ್ಧ ತತ್ತ್ವಾತ್ಮಕ ಶರೀರಗಳ ಧರಿಸಿ ದ್ವಾರಪಾಲಕರಾಗಿ ಇದ್ದಾರೆಂದು ಭಾವ.

**ಪ್ರಣವಪ್ರತಿಪಾದ್ಯನ ಪುರದ ದ।**
**ಕ್ಷಿಣ ಕವಾಟದಲಿಪ್ಪ ಶಶಿರೋ।**
**ಹಿಣಿಗತ ವ್ಯಾನಸ್ಥ ಕೃತಿಪ್ರದ್ಯುಮ್ನ ರೂಪವನು॥**

**ಗುಣಗಳನು ಸಂತುತಿಸುತಲಿ ಪಿತೃ ।**
**ಗಣ ಗದಾಧರನತಿವಿಮಲ ಪ ।**
**ಟ್ಟಣದೊಳಗೆ ಸ್ವೇಚ್ಛಾನುಸಾರದಿ ಸಂಚರಿಸುತಿಹರು ॥ ೧೭ ॥**

"ದಕ್ಷಿಣಾಧಿಪತಿಃ ಸೋಮೋ ವ್ಯಾನಃ ಶ್ರೋತ್ರಾಭಿಮಾನವಾನ್ । ಪ್ರಾಪ್ನುವಂತ್ಯಥ ಸೋಮಸ್ಯ ಪ್ರಸಾದಾತ್ಪಿತರಸ್ತಥಾ ॥ ದ್ವಾರೇಣ ದಕ್ಷಿಣೇನೈವ ॥ " ಇತಿ ಛಾಂದೋಗ್ಯ ಭಾಷ್ಯೇ ॥ ಪಾಂಚರಾತ್ರಾಗಮೇ ॥

ವಾಸುದೇವನ ಅರಮನೆಯ ದಕ್ಷಿಣ ದ್ವಾರದಿಂದ ಪ್ರವೇಶರಾಗಿ, ಇಚ್ಛಾವರಣ ಅಪಸರಿತರಾದವರ ಹೇಳತಾರೆ.

ಪ್ರಣವಪ್ರತಿಪಾದ್ಯನ–ಓಂಕಾರಪ್ರತಿಪಾದ್ಯನಾದ ವಾಸುದೇವನ, ಪುರದ–ಶ್ವೇತ ದ್ವೀಪಗತ ಪುರಸಾಂಕೇತವಾದ ಅರಮನೆಯ, ದಕ್ಷಿಣ ಕವಾಟದಲಿ–ದಕ್ಷಿಣಭಾಗಗತ ಕವಾಟಗಳು ಮೂರರಲ್ಲಿ, ಪ್ರಥಮ ಕವಾಟದಲ್ಲಿ, ಇಪ್ಪ–ಇರತಕ್ಕವರು, ಶಶಿ–ಮುಕ್ತನಾದ ಚಂದ್ರನು, ರೋಹಿಣಿ–ಚಂದ್ರನ ಪತ್ನಿಯಾದ ಮುಕ್ತರಾದ ರೋಹಿಣೀ ದೇವಿಯರು (ಇವರಿಬ್ಬರು), ಗತ–ಈ ದ್ವಾರಕ್ಕೆ ಒಳಭಾಗದಲ್ಲಿ ವಿದ್ಯಮಾನವಾದ, ಎರಡನೇ ದ್ವಾರದಲ್ಲಿ, ವ್ಯಾನ–ವ್ಯಾನನಾಮಕ ಮುಕ್ತವಾಯು ಇವರ ಪತ್ನಿ, ಇವರಿಬ್ಬರು, ಸ್ಥ–ಎರಡನೇ ದ್ವಾರದ ಒಳಗೆ ಇರತಕ್ಕ ಮೂರನೇ ದ್ವಾರದಲ್ಲಿ, ಕೃತಿ–ಕೃತೀನಾಮಕ ಲಕ್ಷ್ಮೀ ದೇವಿಯರು, ಪ್ರದ್ಯುಮ್ನ–ಈಕೆಯ ಪತಿ ಪ್ರದ್ಯುಮ್ನದೇವರು ಉಭಯರೂ ಇರೋವರಾಗಿ ದ್ದಾರೆ. ಪಿತೃಗಣ–ಪಿತೃದೇವತೆಗಳ ಸಮೂಹ, ಈ ಮಾರ್ಗದಿಂದ ದ್ವಾರಪಾಲಕರ ಆಜ್ಞಾದಿಂದ ಒಳಗೆ ಪ್ರವೇಶಮಾಡಿ, ವಾಸುದೇವನಿಂದ ಇಚ್ಛಾ ಆವರಣ ಅಪಸರಿತರಾಗಿ, ರೂಪವನು–ಈ ಪ್ರದ್ಯುಮ್ನದೇವರ ರೂಪವನ್ನು, ಗದಾಧರನ–ಗದಾಧರ ದೇವರ ರೂಪ ವನ್ನು ಅಂದರೆ, ಪಿತೃ ದೇವತೆಗಳಿಗೆ ಗದಾಧರ ಸಾಂಕೇತನಾದ ಪರಮಾತ್ಮನೇ ಉಪಾಸ್ಯ ಬಿಂಬನು. ಇಂಥಾ ಬಿಂಬನ, ಗುಣಗಳನು–ಮಂಗಳಕರವಾದ ಗುಣಗಳನ್ನು, ಸಂತುತಿ ಸುತಲಿ – ಛಂದಾಗಿ ಸ್ತೋತ್ರಮಾಡುತ್ತಾ, ಅತಿವಿಮಲ – ಅತ್ಯಂತ ನಿರ್ಮಲವಾದ, ನಿರ್ದೋಷವಾದ, ಶುಭ್ರವರ್ಣೋಪೇತವಾದ ಶ್ರೀ ವಾಸುದೇವನ, ಪಟ್ಟಣದೊಳಗೆ–ಶ್ವೇತದ್ವೀಪಾಖ್ಯ ಪಟ್ಟಣಗತ ಅರಮನೆಯ ದಕ್ಷಿಣದ್ವಾರ ಭಾಗದಲ್ಲಿ ನಿರ್ದೋಷರಾದ, ಮುಕ್ತರಾದ ಪಿತೃ ದೇವತಾಗಣ, ಸ್ವೇಚ್ಛಾನುಸಾರದಿ–ತಮ್ಮ ತಮ್ಮ ಇಚ್ಛಾನುಸಾರದಿಂದ, ಸಂಚರಿಸುತಿಹರು–ಸಂಚರಿಸುತ್ತಾ ಇರುವರಾಗಿದ್ದಾರೆ.

**ಅಮಿತವಿಕ್ರಮನಾಲಯದ ಪ ।**
**ಶ್ಚಿಮ ಕವಾಟದಿ ಸತಿಸಹಿತ ಸಂ ।**
**ಭ್ರಮದಿ ಭಗವದ್ಗುಣಗಳನೆ ಪೊಗಳುತಲಿ ಮೋದಿಸುವ ॥**

**ಸುಮನಸಾಸ್ಯನೊಳಿಪ್ಪಪಾನಗ ।**
**ದಮನಸಂಕರುಷಣನ ನಿಜಹೃ ।**
**ತ್ಕಮಲದೊಳು ಧೇನಿಸುವ ಋಷಿಗಣ ಐದಿ ಸುಖಿಸುವರು ॥ ೧೮ ॥**

ಉಕ್ತಂ ಚ ಪಾಂಚರಾತ್ರಾಗಮೇ ॥ "ಯಶೋಲಾವಣ್ಯರೂಪಶ್ಚ ಪಶ್ಚಿಮದ್ವಾರ ಪಸ್ತಥಾ । ವಾಗಪಾನಾತ್ಮಕೋ ವಹ್ನಿರ್ಬ್ರಹ್ಮತೇಜೋಽನ್ನದೇವತೇತಿ ॥" "ಅಗ್ನಿಪ್ರಸಾದಾ ದೃಷಯಃ" ಇತಿ ಛಾಂದೋಗ್ಯ ಭಾಷ್ಯೇ ॥

ವಾಸುದೇವನ ಅರಮನೆಯ ಪಶ್ಚಿಮ ಮಾರ್ಗದಿಂದ ಪ್ರವೇಶರಾಗಿ, ಇಚ್ಛಾವರಣ ಅಪಸರಿತರಾದವರನ್ನ ಹೇಳತಾರೆ.

ಅಮಿತವಿಕ್ರಮನ–ಆದ್ಯಂತ ಶೂನ್ಯಗಳಾದ, ಪರಾಕ್ರಮವಂತನಾದ, ವಾಸುದೇವನ, ಆಲಯದ–ಆಲಯ ಸಂಕೇತವಾದ ಅರಮನೆಯ, ಪಶ್ಚಿಮ ಕವಾಟದಿ–ಪಶ್ಚಿಮ ದಿಕ್ಕುಗತ ದ್ವಾರಗಳು ಮೂರು ; ಇವುಗಳೊಳಗೆ ಪ್ರಥಮ ಬಾಗಿಲಿನಲ್ಲಿ, ಸತಿಸಹಿತ–ಪತ್ನಿಯಾದ ಸ್ವಾಹಾದೇವಿಸಹಿತನಾಗಿ, ಸುಮನಸಾಸ್ಯ–ದೇವತೆಗಳಿಗೆ ಮುಖಸ್ಥಾನಾಪನ್ನನಾದ, ಮುಕ್ತನಾದ, ಅಗ್ನಿದೇವರು ದ್ವಾರಪಾಲಕರು. ನೊಳಿಪ್ಪ–ಅಗ್ನಿದೇವರು ಇರತಕ್ಕ ದ್ವಾರಕ್ಕೆ ಒಳಭಾಗದಲ್ಲಿ ಇರುವ ಎರಡನೇ ದ್ವಾರದಲ್ಲಿ, ಅಪಾನಗ–ಅಪಾನ ನಾಮಕ ಮುಕ್ತ ವಾಯು, ಇವರ ಪತ್ನಿ ಸಹ ಇದ್ದಾರೆ. ದಮನಸಂಕರುಷಣನ–ಮೂರನೇ ಬಾಗಿಲಿನಲ್ಲಿ ಸಂಹಾರಕರ್ತನಾದ ಜಯಾಪತಿಯಾದ ಸಂಕರ್ಷಣ, ತನ್ನ ಪತ್ನಿ ಜಯಾ ಸಹಿತನಾಗಿ ಇದ್ದಾನೆ. ಋಷಿಗಣ ಐದಿ–ಈ ಪಶ್ಚಿಮದಿಗ್ಭಾಗಗತ ಮಾರ್ಗದಿಂದ ದ್ವಾರ ಪಾಲಕರ ಆಜ್ಞಾದಿಂದ ಪ್ರವೇಶಮಾಡಿ, ವಾಸುದೇವನಿಂದ ಇಚ್ಛಾವರಣ ಅಪಸರಿತರಾಗಿ ನಿರ್ದೋಷರಾದ ಮುಕ್ತರೆಂದು ಕರಿಸಿ, ನಿಜಹೃತ್ಕಮಲದೊಳು–ತಮ್ಮ ತಮ್ಮ ಸ್ವರೂಪ ದೇಹಗತ, ಹೃದಯಗತ ಅಷ್ಟದಳ ಕಮಲದೊಳು, ವಿದ್ಯಮಾನನಾದ ಬಿಂಬಸಾಂಕೇತನಾದ ಜಯಾಸಂಕರುಷಣನ, ಧೇನಿಸುವ–ಧ್ಯಾನವನ್ನು ಮಾಡುವ ಮತ್ತು ಸಂಭ್ರಮದಿ–ಅತ್ಯಂತ ಸಂತೋಷದಿಂದ, ಭಗವದ್ಗುಣಗಳನೆ–ಪರಮಾತ್ಮನ ಗುಣಗಳನ್ನು, ಪೊಗಳುತಲಿ–ಬಾಯಿಂದ ಉಚ್ಚಾರಮಾಡುತ್ತಲಿ, ಮೋದಿಸುವ–ಆನಂದಪಡುವ ಮುಕ್ತರಾದ ಋಷಿಗಣ, ಸುಖಿಸುವರು–ಪಶ್ಚಿಮಭಾಗದಲ್ಲಿ ತಮ್ಮ ತಮ್ಮ ಇಚ್ಛೆ ಬಂದಂತೆ, ಸಂಚರಿಸುತ್ತಾ ಇರೋವರಾಗುತ್ತಾರೆ.

**ಸ್ವರಮಣನ ಗುಣರೂಪ ಸಪ್ತ ।**
**ಸ್ವರಗಳಿಂದಲಿ ಪಾಡುತಿಹ ತುಂ ।**
**ಬುರನೆ ಮೊದಲಾದಖಿಳ ಗಂಧರ್ವರು ರಮಾಪತಿಯ ॥**
**ಪುರದ ಉತ್ತರಬಾಗಿಲಾಧಿಪ ।**
**ಸುರಪಶಚಿಗಸಮಾನವಾಯುಗ ।**
**ಹರಿನ್ಮಣಿನಿಭ ಶಾಂತಿಪತಿಯನಿರುದ್ಧನೈದುವರು ॥ ೧೯ ॥**

ಉಕ್ತಂಚ ಪಾಂಚರಾತ್ರಾಗಮೇ, ಹೃದಯೇ ಚೈವ ವಿಷ್ಣುಃ ಲೋಕೇ ಚ ಸರ್ವದಾ | ಅಂತರದ್ವಾರಪಾ ಹ್ಯೇತೇ || "ಉತ್ತರದ್ವಾರಪಸ್ತ್ವಿಂದ್ರಃ ಸಮಾನೋ ಮನಆತ್ಮಕಃ ||" ಛಾಂದೋಗ್ಯ ಭಾಷ್ಯೇ ||

ವಾಸುದೇವನ ಅರಮನೆಯ ಉತ್ತರ ಭಾಗಗತ ದ್ವಾರದಿಂದ ಪ್ರವೇಶರಾಗಿ, ಇಚ್ಛಾವರಣ ಅಪಸರಿತರಾದವರ ಹೇಳುತ್ತಾರೆ.

ರಮಾಪತಿಯ–ಮಾಯಾದೇವಿಯರ ಪತಿಯಾದ ವಾಸುದೇವನ, ಪುರದ–ಶ್ವೇತ ದ್ವೀಪಗತಪುರಸಾಂಕೇತವಾದ ಅರಮನೆಯ, ಉತ್ತರ ಬಾಗಿಲಾಧಿಪ–ಉತ್ತರ ಭಾಗಗತ ಬಾಗಿಲುಗಳು ಮೂರು; ಅದರೊಳಗೆ ಪ್ರಥಮ ಬಾಗಿಲಿಗೆ ಅಧಿಪರು, ಸುರಪ–ದೇವತೆಗಳನ್ನು ಪಾಲನೆ ಮಾಡತಕ್ಕ ಮುಕ್ತರಾದ ಇಂದ್ರದೇವರು, ಶಚಿಗ–ಇಂದ್ರಪತ್ನಿ ಮುಕ್ತರಾದ ಶಚೀದೇವಿಯರು, ಸಮಾನವಾಯುಗ–ಮುಕ್ತರಾದ ಸಮಾನವಾಯು, ಇವರ ಪತ್ನಿ ಉಭಯರೂ ಉತ್ತರಭಾಗಗತ ಎರಡನೇ ಬಾಗಿಲಿನಲ್ಲಿ ಇದ್ದಾರೆ. ಹರಿನ್ಮಣಿನಿಭ–ಇಂದ್ರ ನೀಲದಂತೆ ಕಾಂತಿಸಂಪನ್ನನಾದ, ಶಾಂತಿಪತಿ ಅನಿರುದ್ಧನ–ಶಾಂತೀನಾಮಕ ಲಕ್ಷ್ಮೀಪತಿಯಾದ ಅನಿರುದ್ಧನ (ಈ ಉಭಯರೂ ಉತ್ತರಭಾಗಗತ ಮೂರನೇ ಬಾಗಿಲಿನಲ್ಲಿ ಇದ್ದಾರೆ) ಸ್ವರಮಣನ–ರಮಾದೇವಿಯರ ಅಪೇಕ್ಷ ಇಲ್ಲದೆ ತನ್ನ ಶ್ರೀ ರೂಪದಿಂದ ತಾನೇ ರಮಿಸತಕ್ಕ ಶ್ರೀ ಪರಮಾತ್ಮನ, ಗುಣರೂಪ–ಉತ್ಕೃಷ್ಟವಾದ ಕಲ್ಯಾಣ ಗುಣವೇನು, ರೂಪವೇನು, ಇವುಗಳ, ಸಪ್ತಸ್ವರಗಳಿಂದಲಿ–ಸಂಗೀತಶಾಸ್ತ್ರಗತ ಏಳು ಸ್ವರಗಳಿಂದ, ಪಾಡುತಿಹ–ಗಾನಮಾಡುತ್ತಾ ಇರತಕ್ಕ, ತುಂಬುರನೆ ಮೊದಲಾದ ಅಖಿಲ ಗಂಧರ್ವರು–ತುಂಬುರರು ಮೊದಲಾದ ಸರ್ವ ಗಂಧರ್ವರು, ಐದುವರು–ಉತ್ತರಭಾಗಗತ ದ್ವಾರಪಾಲಕರ ಆಜ್ಞಾದಿಂದ ಒಳಗೆ ಪ್ರವೇಶರಾಗಿ ವಾಸುದೇವನ ಐದೋವರಾಗುತ್ತಾರೆ. ಐದಿ, ಇಚ್ಛಾವರಣ ಅಪಸರಿತರಾಗಿ ಆ ಭಾಗದಲ್ಲೇ ಸ್ವೇಚ್ಛಾನುಸಾರ ವಿಹಾರ ಮಾಡುತ್ತಾ ಸ್ವರೂಪಾನಂದವನ್ನು ಭೋಗ ಮಾಡುತ್ತಾ ಇರೋವರಾಗಿದ್ದಾರೆ.

**ಗರುಡಶೇಷಮರೇಂದ್ರಮುಖ ಪು |**
**ಷ್ಕರನೆ ಕಡೆಯಾಗಿಪ್ಪಖಿಳ ನಿ |**
**ರ್ಜರರು ಊರ್ಧ್ವದ್ವಾರಗತ ಭಾರತಿ ಉದಾನದೊಳು ||**
**ಮೆರೆವ ಮಾಯಾವಾಸುದೇವನ |**
**ಪರಮಮಂಗಳವಯವಗಳ ಮಂ |**
**ದಿರವನೈದಿ ಸದಾ ಮುಕುಂದನ ನೋಡಿ ಸುಖಿಸುವರು || ೨೦ ||**

ಉಕ್ತಂ ಚ ಪಾಂಚರಾತ್ರಾಗಮೇ :– "ಕೀರ್ತ್ಯೈಶ್ವರ್ಯಾತ್ಮಕೋ ನಿತ್ಯಮೂರ್ಧ್ವದ್ವಾರಪ ಏವ ಚ | ಪ್ರಧಾನವಾಯುರಾಕಾಶಃ ಸಾರ್ವಜ್ಞಾದುನ್ನತೇಸ್ತಥಾ | ಉದಾನ ಊರ್ಜಿತತ್ವಾತ್ಸ ಓಜಃ ಪೂರ್ಣತ್ವತೋ ಮಹಃ | ಪರಸ್ಯ ಬ್ರಹ್ಮಣಸ್ತ್ವೇತೇ ಪುರುಷಾಃ

ಪಂಚ ಕೀರ್ತಿತಾಃ || ದ್ವಾರಪಾ ಜಯಾದ್ಯಾ ಬಾಹ್ಯತಃ ಸ್ಮೃತಾಃ ||" ಛಾಂದೋಗ್ಯ ಭಾಷ್ಯೇ. "ಪೃಥಿವೀನಾಮಿಕಾ ಶ್ರೀಸ್ತು ದ್ಯೌರ್ದಿಶೋ ವಿದ್ಯುದೇವ ಚ | ವಾಯುಪತ್ನೀ ಸಮುದ್ದಿಷ್ಟಾ ತತ್ತದ್ದ್ವಾರಾಧಿಪಾಶ್ಚ ತೇ | ಅಧಿತಿಷ್ಠಂತಿ ತೇ ಸರ್ವೇ ನಾರಾಯಣಮನಾಮಯಂ ||"

ವಾಸುದೇವನ ಅರಮನೆಯ ಊರ್ಧ್ವದ್ವಾರದಿಂದ ಪ್ರವೇಶರಾಗಿ ಇಚ್ಛಾವರಣ ಅಪಸರಿತರಾದವರನ್ನು ಹೇಳುತ್ತಾರೆ.

ಊರ್ಧ್ವದ್ವಾರಗತ–ವಾಸುದೇವನ ಅರಮನೆಗೆ ಗವಾಕ್ಷಿಸದೃಶವಾಗಿ ಊರ್ಧ್ವಭಾಗದಲ್ಲಿ ಇರತಕ್ಕ ದ್ವಾರ ಒಂದೆ. ಈ ಒಂದು ಭಾಗದಲ್ಲಿ, ಭಾರತಿ–ಮುಕ್ತರಾದ ಭಾರತೀದೇವಿಯರೆಂದು ಕರೆಸಿದ ಸರಸ್ವತೀದೇವಿಯರು, ಉದಾನ–ಉದಾನನಾಮಕ ಮುಕ್ತಬ್ರಹ್ಮ, ಇವರು ಹೊರಭಾಗದಲ್ಲಿ ದ್ವಾರಪಾಲಕರು. ನೊಳು–ಊರ್ಧ್ವದ್ವಾರಕ್ಕೆ ಒಳಭಾಗದಲ್ಲಿ ಮೆರೆವ–ಶುಭ್ರವರ್ಣದಿಂದ ವಿಶಿಷ್ಟರಾಗಿ ಪ್ರಕಾಶಮಾನರಾಗಿ ಇರತಕ್ಕ, ಮಾಯಾ–ಮಾಯಾರೂಪರಾದ ಲಕ್ಷ್ಮೀದೇವಿಯರು, ವಾಸುದೇವನ–ವಾಸುದೇವರೂಪನಾದ ಪರಮಾತ್ಮ, ಇವರನ್ನ ದ್ವಾರಪಾಲಕರಾಗಿ ತಿಳಿಯಬೇಕು. ಈ ಊರ್ಧ್ವದ್ವಾರಾಭಿಮಾನಿಗಳಾದವರ ಆಜ್ಞಾದಿಂದ, ಗರುಡ–ಗರುಡದೇವರು, ಶೇಷ–ಶೇಷದೇವರು, ಅಮರೇಂದ್ರ–ಇಂದ್ರದೇವರು, ಮುಖ–ಮೊದಲಾದ, ಪುಷ್ಕರನೆ ಕಡೆಯಾಗಿಪ್ಪ–ಪುಷ್ಕರನೇ ಅಂತ್ಯವಾಗಿ ಈ ಮಧ್ಯಗತ ಅವಶಿಷ್ಟರಾದ, ಅಖಿಲ ನಿರ್ಜರರು–ಸಮಸ್ತ ದೇವತೆಗಳು ಊರ್ಧ್ವದ್ವಾರದಿಂದ ಒಳಗೆ ಪ್ರವೇಶರಾಗಿ, ವಾಸುದೇವನ ಸಂದರ್ಶನ ಮಾಡಿ ಇಚ್ಛಾವರಣ ಅಪಸರಿತರಾಗಿ, ಪರಮಮಂಗಳ–ಅರಮನೆಯ ಮಧ್ಯಗತನಾದ, ಪರಮಮಂಗಳಕರನಾದ, ಮುಕ್ತಿಪ್ರದನಾದ ಶ್ರೀ ವಾಸುದೇವನ, ಅವಯುವಗಳ–ಕರಚರಣ ಅವಯುವಗಳು ಎನತಕ್ಕ, ಮಂದಿರವನೈದಿ–ಮನೆಗಳ ಐದಿ, ಅಂಗಸಾಯುಜ್ಯರೂಪದಿಂದ ಯುಕ್ತರಾಗಿ, ಸದಾ–ಸರ್ವಕಾಲದಲ್ಲೂ ಸ್ವರೂಪಾನಂದವನ್ನ ಭೋಗಿಸುತ್ತಾ, ಮುಕುಂದನ ನೋಡಿ–ಹೃದಯಾಕಾಶಗತ ಮುಕುಂದನ, ತಮ್ಮ ತಮ್ಮ ಕಾಲಕ್ಲೃಪ್ತಾನುಸಾರ ನೋಡಿ, ಸುಖಿಸುವರು–ಆನಂದಪಡುತ್ತಾ ಇರೋವರಾಗಿದ್ದಾರೆ.

**ದ್ವಾರಪಂಚಕಪಾಲಕರೊಳಿಹ |**
**ಭಾರತೀಪ್ರಾಣಾಂತರಾತ್ಮಕ |**
**ನಾರಮಣನೈರೂಪ ತತ್ತದ್ದ್ವಾರದಲಿ ಬಪ್ಪ ||**
**ಮೂರೆರಡುವಿಧ ಮುಕ್ತಿಯೋಗ್ಯರ |**
**ತಾರತಮ್ಯವನರಿತವರ ಕಂ |**
**ಸಾರಿ ಸಂಸಾರಾಬ್ಧಿ ದಾಟಿಸಿ ಮುಕ್ತರನ ಮಾಳ್ಪ || ೨೧ ||**

ವಾಸುದೇವನ ಅರಮನೆಯ ಊರ್ಧ್ವದ್ವಾರದಿಂದ ಬ್ರಹ್ಮ ಪ್ರವೇಶನಾಗಿ ಇಚ್ಛಾವರಣ ಅಪಸರಣವೆಂದು ಹೇಳುತಾರೆ.

ದ್ವಾರಪಂಚಕ–ವಾಸುದೇವನ ಅರಮನೆಗೆ ಪೂರ್ವೋಕ್ತಪ್ರಕಾರ ದ್ವಾರಗಳು ಐದು ದಿಕ್ಕಿನಲ್ಲಿ ಹದಿಮೂರು ದ್ವಾರಗಳು ಇವೆ. (ದಿಕ್ಕು ಒಂದಕ್ಕೆ ಮೂರು ಬಾಗಿಲುಗಳ ಪ್ರಕಾರ, ನಾಲ್ಕು ದಿಕ್ಕುಗಳಿಗೆ ಹನ್ನೆರಡು ಬಾಗಿಲುಗಳು, ಊರ್ಧ್ವದ್ವಾರ ಒಂದು, ಅಂತು ಹದಿಮೂರು ದ್ವಾರಗಳು), ಪಾಲಕರೊಳಿಹ–ಪ್ರತಿ ದಿಕ್ಕಿನಲ್ಲಿ ಪ್ರಥಮದ್ವಾರಕ್ಕೆ ದ್ವಾರಪಾಲಕರಾದವರ ಒಳಬಾಗಿಲಿನಲ್ಲಿ ಇರತಕ್ಕ, ದ್ವಿತೀಯದ್ವಾರಕ್ಕೆ ದ್ವಾರಪಾಲಕರಾಗಿ ಇರತಕ್ಕ, ಭಾರತೀ–ಮುಕ್ತರಾದ ಭಾರತೀಸಾಂಕೇತರಾದ ಸರಸ್ವತೀದೇವಿಯರು, ಪ್ರಾಣ–ಪ್ರಾಣಸಾಂಕೇತ ಮುಕ್ತ ಬ್ರಹ್ಮ, ಪ್ರಾಣಾದಿ ಐದು ರೂಪಗಳಿಂದ, ಹಾಗೂ ಸರಸ್ವತೀ ದೇವಿಯರು, ಐದು ರೂಪಗಳಿಂದ ಇರೋವರಾಗಿದ್ದಾರೆ. ಅಂತರ–ಎರಡನೇ ದ್ವಾರದ ಆಚೇಲಿ ಇರತಕ್ಕ ಮೂರನೇ ದ್ವಾರದಲ್ಲಿ, ಮಾರಮಣನ–ಲಕ್ಷ್ಮೀಪತಿಯಾದ ನಾರಾಯಣನ, ಆತ್ಮಕ–ಸ್ವಾತ್ಮಕವಾದ, ಐರೂಪ–ನಾರಾಯಣಾದಿ ಅನಿರುದ್ಧಾಂತ ಐದು ರೂಪಗಳಿಂದ ಇದ್ದು, ತತ್ತದ್ದ್ವಾರದಲಿ ಬಪ್ಪ–ಆಯಾ ಐದು ದ್ವಾರಗಳಿಂದ ಬರತಕ್ಕ, ಮೂರೆರಡು ವಿಧ–ಮೂರೆರಡುಗಳು ಅಂದರೆ, ಆರು ವಿಧ ಎಂತ ತಾತ್ಪರ್ಯ. ಅದರ ವಿವರ :

| | | | |
|---|---|---|---|
| ೧. | ಪೂರ್ವದ್ವಾರ | ಮಾನುಷಗಂಧರ್ವರಾರಭ್ಯ ತೃಣಾಂತ | ನಾರಾಯಣ |
| ೨. | ಪಶ್ಚಿಮದ್ವಾರ | ಋಷಿಗಣ | ಸಂಕರ್ಷಣ |
| ೩. | ಉತ್ತರದ್ವಾರ | ದೇವಗಂಧರ್ವರು | ಅನಿರುದ್ಧ |
| ೪. | ದಕ್ಷಿಣದ್ವಾರ | ಪಿತೃಗಣ | ಪ್ರದ್ಯುಮ್ನ |
| ೫. | ಊರ್ಧ್ವದ್ವಾರ | ಗರುಡ ಶೇಷರು ಮತ್ತು ಬ್ರಹ್ಮ, ಸರಸ್ವತೀ, ಇತರ ನಿರ್ಜರರು | ವಾಸುದೇವ |

ಆರನೇ ವಿಧರಾದ ಬ್ರಹ್ಮದೇವರು, ಸರಸ್ವತೀದೇವಿಯರು ಊರ್ಧ್ವದ್ವಾರದಿಂದ ರುದ್ರಾದಿಗಳ ಅನಂತರ ಪ್ರವೇಶಮಾಡಿ, ವಾಸುದೇವನಿಂದ ಇಚ್ಛಾವರಣ ಅಪಸರಿತರಾಗಿ, ಆ ವಾಸುದೇವನಲ್ಲಿ ಸರ್ವಾಂಗ ಸಾಯುಜ್ಯವನ್ನ ಐದೋವರಾದರೆಂದು ತಾತ್ಪರ್ಯ.

ಈ ಪ್ರಕಾರ ಆರು ವಿಧ ಮುಕ್ತಿ. ರುದ್ರಶಬ್ದದಿಂದ ಶೇಷದೇವರು ಎಂತ ಅರ್ಥ. ಮುಕ್ತಿಯೋಗ್ಯರ ಇಚ್ಛಾವರಣ ಮಾತ್ರ ಅವಶಿಷ್ಟವುಳ್ಳ, ಮುಕ್ತಿಯೋಗ್ಯರ ತಾರತಮ್ಯವ ನರಿತು–ಸ್ವರೂಪಯೋಗ್ಯತಾ ತಾರತಮ್ಯವನ್ನ ತಿಳಿದು, ಅವರ–ಇರುವ ಆ, ಆ ಅಧಿಕಾರಿಗಳಾದ ಜೀವರನ್ನ, ಕಂಸಾರಿ–ಶ್ರೀಕೃಷ್ಣದೇವರು, ಸಂಸಾರಾಬ್ಧಿ ದಾಟಿಸಿ–ಸಂಸಾರಸಮುದ್ರ ಸಾಂಕೇತವಾದ ಲಿಂಗದೇಹ ಭಂಗ ಐದಿಸಿ, ಇಚ್ಛಾವರಣ ಮಾತ್ರ ಉಳಿಸಿ ಅಮುಕ್ತರೆಂತ ಕರೆಸಿದವರ, ಪುನಃ ಸೃಷ್ಟಿಕಾಲದಲ್ಲಿ, ಮುಕ್ತರನ ಮಾಳ್ಪ–ವಾಸುದೇವರೂಪದಿಂದ ಇಚ್ಛಾವರಣ ಅಪಸರಣ ಮಾಡಿ, ದೋಷರಹಿತರಾದಮುಕ್ತರನ್ನು ಮಾಡೋವನಾಗ ತಾನೆ. ಮುಕ್ತಸ್ಥಾನದಲ್ಲಿ, ವಾಯುರುದ್ರಶಬ್ದಗಳು ಬ್ರಹ್ಮ, ಶೇಷ ಎಂತ ತಿಳಿಯಬೇಕು. ಮುಕ್ತಬ್ರಹ್ಮರೇ ಪ್ರಾಣಾದಿ ಪಂಚನಾಮಗಳಿಂದ ದ್ವಾರಪಾಲಕರಾಗಿದ್ದಾರೆಂದು ತಾತ್ಪರ್ಯ.

**ಬೆಳಗಿಧೂಜಿಯು ನೋಳ್ಪರಿಗೆ ಥಳ ।**
**ಥಳಿಸುತಲಿ ಕಂಗೊಳಿಸುವಂದದಿ ।**
**ತೊಳೆದು ದೇಹವ ನಾಮುಮುದ್ರೆಗಳಿಂದಲಂಕರಿಸಿ ॥**
**ಒಲಿಸಿ ನಿತ್ಯ ಕುತರ್ಕಯುಕ್ತಿಗ ।**
**ಳಲವಬೋಧರ ಶಾಸ್ತ್ರಮರ್ಮವ ।**
**ತಿಳಿಯದಿಹ ನರ ಬರಿದೆ ಇದರೊಳು ಶಂಕಿಸಿದರೇನು ॥ ೨೨ ॥**

ಶ್ರೀ ಮಧ್ವಾಚಾರ್ಯರಿಂದ ಕೃತವಾದ ಸಚ್ಛಾಸ್ತ್ರಮರ್ಮ ಅರಿಯದೆ, ಈ ಗ್ರಂಥೋಕ್ತಿಗಳಲ್ಲಿ ಶಂಕೆಮಾಡೋಣದರಿಂದ ಈ ಗ್ರಂಥ ದೋಷಿವಾಗುವುದಿಲ್ಲ ಎಂದು ಹೇಳತಾರೆ.

ಬೆಳಗಿದ–ಛಂದಾಗಿ ತೊಳೆಯಲ್ಪಟ್ಟ, ಹೂಜಿಯು–ಕಂಚಿನ ಹೂಜಿಯು, ನೋಳ್ಪರಿಗೆ–ದೂರದಿಂದ ನೋಡತಕ್ಕವರಿಗೆ, ಥಳಥಳಿಸುತಲಿ–ಬೆಳ್ಳಿಯಂತೆ ಥಳಥಳಾಯಮಾನವಾಗಿ, ಕಂಗೊಳಿಸುವಂದದಿ–ಕಣ್ಣಿಗೆ ಒಪ್ಪುವದಾಗತದೆ. ವಿಚಾರಮಾಡಿ ನೋಡಿದರೆ ಬೆಳ್ಳಿಯೇನೋ ಅಲ್ಲ. ತದ್ವತ್, ಮತ್ತು ಹೂಜಿಯ ಬಾಯಿ ಸಣ್ಣದಾಗಿರೋಣದರಿಂದ, ಕೈಹಾಕಿ ಒಳಗೆ ತೊಳಿಯೋದಕ್ಕೆ ಬರುವುದಿಲ್ಲ. ಮೇಲೆ ಮಾತ್ರ ಛಂದಾಗಿ ನಿರ್ಮಲವಾಗಿ ತೊಳಿಯುತ್ತಾನೆ. ಒಳಗೆ ಕಶ್ಮಲರೂಪವಾದ ಪಾಚಿ ಅಲ್ಲೇ ಇರುತ್ತದೆ. ಈ ಹೂಜಿಯಂತೆ, ದೇಹವ ತೊಳೆದು–ಹೂಜಿ ಸಾಂಕೇತವಾದ ದೇಹವನ್ನ ಛಂದಾಗಿ ತಿಕ್ಕಿ, ಜಲದಿಂದ ತೊಳೆದು, ನಾಮು–ದ್ವಾದಶ ನಾಮುಗಳಿಂದಲೂ, ಮುದ್ರೆಗಳಿಂದ–ಪಂಚ ಮುದ್ರೆಗಳಿಂದಲೂ, ಈ ಉಭಯವಿಧದಿಂದ ಅಲಂಕರಿಸಿ–ದೇಹಕ್ಕೆ ಅಲಂಕಾರಮಾಡಿ, ಒಲಿಸಿ–ಬಾಹ್ಯ ವೇಷದಿಂದ, ಜನರಿಂದ ಮಹಾಸಜ್ಜನ ತಾನೆಂದು ಎನಿಸಿ, ಹೂಜಿ ಒಳಗೆ ವಿದ್ಯಮಾನವಾದ ಕಶ್ಮಲದಂತೆ ಅಹಂ ಮಮತಾದಿಂದಲೂ, ಕಾಮಕ್ರೋಧಾದಿ ಅರಿಷಡ್ವರ್ಗದಿಂದಲೂ ಮಹಾಕಶ್ಮಲದಿಂದ ಇರುವವಗೆ ಫಲ ಕೊಡತಕ್ಕ ದೇವತೆಗಳಿಂದ ಯೋಗ್ಯ ಎಂತ ಎನಿಸಿಕೊಂಬನೇ ? ಕಂಚಿನ ಹೂಜಿ ಬೆಳ್ಳಿ ಸದೃಶ ಹೊಳೆಯೋಮಾತ್ರದಿಂದ, ಬೆಳ್ಳಿಯ ಯೋಗ್ಯತಾ ಬಂದೀತೇ ? ಬರಲಾರದು. ಏತಾದೃಶರಾದ ಅಧಿಕಾರಿಗಳು, ಅಲವಬೋಧರ–ಸ್ವಲ್ಪವಲ್ಲದೆ, ಅಪರಿಚ್ಛಿನ್ನವಾದ ಪರಮಾತ್ಮನ ಮಹಾಮಹಿಮೆಯನ್ನ ಸಜ್ಜನರಿಗೆ ಬೋಧನಮಾಡತಕ್ಕ ಜೀವೋತ್ತಮರಾದ ಶ್ರೀಮದಾನಂದತೀರ್ಥರಿಂದ ಕೃತವಾದ, ಶಾಸ್ತ್ರಮರ್ಮವ–ಸಚ್ಛಾಸ್ತ್ರದಲ್ಲಿರುವ ಗೋಪ್ಯವಾದ ಮಹಾ ಅರ್ಥಗಳ, ತಿಳಿಯದಿಹ ನರ–ತಿಳಿಯದೆ ಮಂದನಾಗಿ ಪೂರ್ವೋಕ್ತ ಲಕ್ಷಣೋಪೇತನಾದ ಮನುಷ್ಯ, ಬರಿದೆ – ನಿಷ್ಪ್ರಯೋಜನವಾದ, ಕುತರ್ಕ – ಕುತ್ಸಿತವಾದ ತರ್ಕಶಾಸ್ತ್ರಾಭ್ಯಾಸಮಾಡಿ, ಯುಕ್ತಿಗಳ–ಅದರನ್ನ ಅನುಸರಿಸಿ ಕುತ್ಸಿತ ಉಕ್ತಿಗಳ, ಇದರೊಳು–ಈ ಗ್ರಂಥದೊಳು ಆರೋಪಣಮಾಡಿ, ನಿತ್ಯ–ಪ್ರತಿದಿನದಲ್ಲೂ, ಶಂಕಿಸಿದರೇನು–ಶಂಕಾರೂಪವಾದ ದೋಷಗಳು ಹೇಳಿ ಸಂದೇಹಪಡುವುದರಿಂದ ಆಗತಕ್ಕ ಕಾರ್ಯವೇನೋ ಕಾಣೆ. ಆದ್ದರಿಂದ

ಸಚ್ಛಾಸ್ತ್ರ ಮರ್ಮವ ಗುರುಮುಖದಿಂದ ತಿಳಿದು, ತದನುಷ್ಠಾನಪರರಾದ ಭಗವದ್ಭಕ್ತರಿಗೆ ಪ್ರಯೋಜನವೇ ಹೊರತು ಡಾಂಭಿಕರಾಗಿ ಪಂಡಿತಮಾನಿಗಳಾದ ಅಯೋಗ್ಯರಿಗೆ, ಇದು ಅವಲೋಕನಕ್ಕೆ ಯೋಗ್ಯವಾಗಲಾರದು ಎಂತ ತಾತ್ಪರ್ಯ.

**ಉದಧಿಯೊಳು ಊರ್ಮಿಗಳು ತೋರ್ಪಂ ।**
**ದದಲಿ ಹಂಸೋದ್ಗೀಥಹರಿಹಯ ।**
**ವದನ ಕೃಷ್ಣಾದ್ಯಮಿತನವತಾರಗಳು ನಿತ್ಯದಲಿ ॥**
**ಪದುಮನಾಭನೊಳಿರುತಿಹವು ಸ ।**
**ರ್ವದ ಸಮಸ್ತಪ್ರಾಣಿಗಳ ಚಿದ್ ।**
**ಹೃದಯಗತ ರೂಪಗಳನನ್ಯವಧಾನದಲಿ ಬಿಡದೆ ॥ ೨೩ ॥**

ಶ್ರೀ ಪರಮಾತ್ಮನ ಮೂಲರೂಪ, ಅವತಾರ ರೂಪಗಳು ಎಂಥಾವೆಂದರೆ ಅದರನ್ನ ಹೇಳುತ್ತಾರೆ.

ಉದಧಿಯೊಳು–ಸಮುದ್ರದಲ್ಲಿ, ಊರ್ಮಿಗಳು–ತರಂಗಗಳು ಅಲೆಗಳು, ತೋರ್ಪಂದದಲಿ–ತೋರಿದಂತೆ, ಸಮುದ್ರನಾದ ತಾನು ಅಲೆಗಳ ತೋರಿಸುವನಾಗುತ್ತಾನೆ. ಅಲೆಗಳು, ಸಮುದ್ರವನ್ನು ಬಿಟ್ಟು ಇರೋದಿಲ್ಲ. ಉದಕ, ತರಂಗ ಬಿಟ್ಟು ಇರೋದಿಲ್ಲ. ಇರದೇನೇ ತರಂಗಗಳು ಬೇರೆ ಬೇರೆ ಕಾಣುತ್ತಾ ಇರುತ್ತವೆ. ಆ ತರಂಗಗಳು ಇತಸ್ತತಃ ಚಲನವಾಗುತ್ತಾ, ಹೋಗುತ್ತಾ, ಬರುತ್ತಾ ಇರುತ್ತವೆ. ವ್ಯಕ್ತವಾದ ತರಂಗಗಳು ಪುನಶ್ಚ, ಆ ಉದಕದಲ್ಲೇ ಸೇರುತ್ತವೆ. ಇದರಂತೆ ಎಂದರೆ, ಸಮುದ್ರಸದೃಶನಾಗಿ ಅಪರಿಚ್ಛಿನ್ನವ್ಯಾಪ್ತನಾದ ಪರಮಾತ್ಮನು, ಅಪರಿಚ್ಛಿನ್ನ ಅಖಂಡರೂಪ ಉಳ್ಳವನು. ಸರ್ವತಃ ಪಾಣಿಪಾದಾದಿ ಸರ್ವ ಅವಯವಗಳು ಉಳ್ಳವನಾದ್ದರಿಂದ, ಸಮುದ್ರಸದೃಶವಾದ ಅಖಂಡರೂಪದಿಂದ ಊರ್ಮಿಗಳಸದೃಶವಾದ, ಅವತಾರರೂಪಗಳಾದ ಮೂಲಾವತಾರಕ್ಕೆ ಅವಿಯೋಗಗಳಾದ, ಹಂಸ – ಶ್ರೀ ಹಂಸನಾಮಕ ರೂಪವು, ಉದ್ಗೀಥ – ಉದ್ಗೀಥ ರೂಪವು, ಹರಿ–ಶ್ರೀಹರಿ ರೂಪವು, ಹಯವದನ–ಹಯಗ್ರೀವ ರೂಪವು, ಕೃಷ್ಣ–ಶ್ರೀ ಕೃಷ್ಣ ರೂಪವು, ಆದಿ–ಇವೇಮೊದಲಾದ, ಅಮಿತನ–ಮಿತರಹಿತನಾದ ಅಖಂಡ ರೂಪಿಯಾದ, ಮೂಲರೂಪಿ, ಪರಮಾತ್ಮನ, ಅವತಾರಗಳು–ನಾರಾಯಣ, ಮೂಲರೂಪಿ ಎಂತಲೂ, ಅದರಿಂದ ವಾಸುದೇವಾದಿ ಅವತಾರಗಳ ಅಭಿವ್ಯಕ್ತಿ ಎಂತಲೂ ಹೇಳುತ್ತದೆ. ಆ ನಾರಾಯಣನ ರೂಪ ಕೂಡ ಅಖಂಡರೂಪ, ತರಂಗಸದೃಶ ಅವತಾರರೂಪವೆಂತಲೇ ತಾತ್ಪರ್ಯ. ಏವಂ ಸಂಮೇಳನೇ ಖಂಡರೂಪಗಳು ಯಾವತ್ತೂ, ಅವತಾರ ರೂಪಗಳೆಂತಲೆ ಗ್ರಾಹ್ಯ. ಸಮುದ್ರಸದೃಶ ಈ ಮೂಲ ರೂಪವೂ, ಅವತಾರ ರೂಪಗಳೂ, ತರಂಗವತ್ ಅವಿಯೋಗಗಳಾಗಿ, ತರಂಗವತ್ ಗಮನಾಗಮನಗಳಿಂದ ಯುಕ್ತವಾಗಿ ಇವೆ. ಈ ಅವತಾರ ರೂಪಗಳು, ನಿತ್ಯದಲಿ–ಅನಾದ್ಯನಂತಕಾಲಕ್ಕೂ ಅಖಂಡ ರೂಪದಲ್ಲೇನು, ಪದುಮನಾಭ–ಪ್ರತಿ ಅವತಾರಗಳಾದ ಪದ್ಮನಾಭಾದಿ ಅನಂತಾನಂತ ಅವತಾರಗಳಾದ,

ನೊಳು–ಪರಮಾತ್ಮನೊಳು, ಇರುತಿಹವು–ಇರುವುದಾಗಿ ಇವೆ. ಒಂದು ತರಂಗಗತ ಅನೇಕ ಉದಕ ಬಿಂದುಗಳಂತೆ. ಸರ್ವದ–ಅನಾದ್ಯನಂತಕಾಲಕ್ಕೂ, ಸಮಸ್ತ ಪ್ರಾಣಿಗಳ–ಸೃಜ್ಯಾಸೃಜ್ಯ, ಮುಕ್ತ, ಏತಾದೃಶ ಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರು, ಚಿದ್ ಹೃದಯಗತ–ಸ್ವರೂಪದೇಹದ ಹೃದಯಗತ, ರೂಪಗಳನ–ಬಿಂಬರೂಪಗಳನ್ನ, ಬಿಡದೆ–ಅಖಂಡ ರೂಪವನ್ನ ಬಿಡದೆ, ಅವ್ಯವಧಾನದಲಿ–ಉದಕ ತರಂಗಗಳಂತೆ ವ್ಯವಧಾನರಹಿತವಾಗಿ, ಇರುತಿಹವು–ಇರುವುವಾಗಿ ಅವೆ. ಅಖಂಡ ಅಪರಿಚ್ಛಿನ್ನ ರೂಪಗತ ವಿದ್ಯಮಾನಗಳು ಖಂಡ ರೂಪಗಳಲ್ಲಿ, ತದ್ಗತಗಳು ಅಖಂಡ ರೂಪದಲ್ಲಿ, ನ್ಯೂನಾಧಿಕ್ಯಗಳು ಇಲ್ಲದೆ ಸಮಾನವಾಗಿ ಇವೆ ಎಂತ ತಾತ್ಪರ್ಯ.

**ವಿಶೇಷಾರ್ಥ :** – ಪ್ರಮಾಣ : – ಏತನ್ನಾನಾವತಾರಾಣಾಂ ನಿಧಾನಂ ಬೀಜಮವ್ಯಯಂ| ಯಸ್ಯಾಂಶಾಂಶೇನ ಸೃಜ್ಯಂತೇ ದೇವತಿರ್ಯಙ್ನರಾದಯಃ|| ಎಂತ ಭಾಗವತ ತಾತ್ಪರ್ಯ.

**ಶರಧಿಯೊಳು ಮಕರಾದಿ ಜೀವರು ।**
**ಇರುಳುಹಗಲೇಕಪ್ರಕಾರದಿ ।**
**ಚರಿಸುತನುಮೋದಿಸುತ ಇಪ್ಪಂದದಿ ಜಗತ್ರಯವು ॥**
**ಇರುತಿಹವು ಜಗದೀಶನುದರದಿ ।**
**ಕರೆಸುವದು ಪ್ರತಿಬಿಂಬನಾಮದಿ ।**
**ಧರಿಸಿಹದು ಹರಿನಾಮರೂಪಂಗಳನು ಅನವರತ ॥ ೨೪ ॥**

ಚರಾಚರ ಜಗತ್ತುಗಳು ಪರಮಾತ್ಮನ ಉದರದಲ್ಲಿರುವ ಕ್ರಮ ಹೇಳತಾರೆ.

ಶರಧಿಯೊಳು–ಸಮುದ್ರದಲ್ಲಿ, ಮಕರಾದಿ ಜೀವರು–ಮೊಸಳೆ, ಮೀನು ಮೊದಲಾದ ಯಾವತ್ತೂ ಜಲಚರ ಪ್ರಾಣಿಗಳು, ಇರುಳು–ರಾತ್ರಿಕಾಲದಲ್ಲಿ, ಹಗಲು–ಹಗಲುಕಾಲದಲ್ಲಿ, ಏಕಪ್ರಕಾರದಿ–ಒಂದೇ ಪ್ರಕಾರದಿಂದ, ಚರಿಸುತ–ತಿರುಗಾಡುತ್ತಾ, ಅನುಮೋದಿಸುತ–ತಮ್ಮ ತಮ್ಮ ಸ್ವಜಾತಿಗಳ ಸ್ನೇಹದಿಂದ ಅನುಸರಿಸಿ ಸಂತೋಷಪಡುತ್ತಾ, ಇಪ್ಪಂದದಿ–ಇರುವಂತೆ, ಜಗತ್ರಯವು–ಮಕರಾದಿ ಸಾಮ್ಯರಾದ ಬ್ರಹ್ಮಾದಿ ತೃಣಾಂತ ತ್ರಿವಿಧಜೀವರು, ಹಾಗೇ ಶುದ್ಧ ಜಡಗಳು, ಜಗದೀಶನುದರದಿ–ಸಮುದ್ರಸದೃಶವಾದ ಅಪರಿಚ್ಛಿನ್ನ ಅಖಂಡ ರೂಪಿಯಾದ ಚರಾಚರ ಜಗತ್ತಿಗೆ ಈಶನಾದ ಪರಮಾತ್ಮನ ಉದರದಲ್ಲಿ, ಇರುತಿಹವು–ಇರೋವಾಗಿ ಅವೆ. ಆಕಾಶದ ಗರ್ಭದಲ್ಲಿ ಸರ್ವ ಪದಾರ್ಥಗಳೂ ಇರೋವಾಗಿ ಅವೆ. ತದ್ವ್ಯತಿರಿಕ್ತ ಬೇರೆ ಮಾರ್ಗಾಂತರವೇ ಇಲ್ಲ. ಹಾಗೆ, ಪರಮಾತ್ಮನ ಉದರದಲ್ಲಿ ಜಗತ್ತು ಇರೋದಾಗಿದೆ. ಉದರ ವ್ಯತಿರಿಕ್ತ ಯಾವುದೂ ಇಲ್ಲ. ಪ್ರತಿಬಿಂಬನಾಮದಿ–ಚರಾಚರ ಜಗದಂತರ್ಗತನಾಗಿ ಪರಮಾತ್ಮ, ಬಿಂಬ ಎಂತ ಕರೆಸುವನಾಗುತ್ತಾನೆ. ಈ ಜಗತ್ತುಗಳು ಪ್ರತಿಬಿಂಬನಾಮದಿಂದ ಇದ್ದು ಸ್ವಜಾತಿಗಳ ಕೂಡ ಸಂತೋಷಯುಕ್ತವಾಗಿ ಇವೆ.

ಕರೆಸುವದು–ಈ ಇದ್ದ ಜಗತ್ತು ಪ್ರತಿಬಿಂಬ ಎಂತ ಕರೆಸುತ್ತದೆ. ಲೋಕದಲ್ಲಿ ದರ್ಪಣದಲ್ಲಿ ಪ್ರತಿಬಿಂಬ ಪ್ರತಿಫಲಿಸಿದಂತೆ, ಪ್ರತಿಬಿಂಬರಾದ ಜೀವರು ಪ್ರತಿಫಲಿಸಿದವರಲ್ಲ. ಇಲ್ಲಿ ಏಕದೇಶದೃಷ್ಟಾಂತ ಗ್ರಾಹ್ಯ. ಉಪಾಧಿಯಲ್ಲಿ ಪ್ರತಿಫಲಿಸಿದ ಪ್ರತಿಬಿಂಬ ಯಾವ ರೀತ್ಯಾ ಬಿಂಬಾಧೀನವೋ ಹಾಗೆ, ಪ್ರತಿಬಿಂಬರಾದ ಜೀವರು ಅಂತರ್ಗತನಾದ ಬಿಂಬರೂಪಿ ಪರಮಾತ್ಮನ ಅಧೀನರೆಂದು ತಾತ್ಪರ್ಯ. ಈ ಪ್ರಕಾರ, ಜಗತ್ತು ಪ್ರತಿಬಿಂಬನಾಮದಿಂದ ಕರೆಸುತ್ತದೆ. ಮತ್ತು ಬಿಂಬಸದೃಶವಾಗಿ ಉಪಾಧಿಯಲ್ಲಿ ಪ್ರತಿಫಲಿಸಿದ ಪ್ರತಿಬಿಂಬ ಇರೋದಾಗುತ್ತದೆ. ಹಾಗೆ ಉಪಾಧಿ ಇಲ್ಲದ ಪ್ರತಿಬಿಂಬರೆಂದು ತಾತ್ಪರ್ಯ, ಮತ್ತು ಜೀವಾಂತರ್ಗತ ಬಿಂಬ ಜೀವಾಕಾರದಂತೆ ಇರುತ್ತಾನಾದ್ದರಿಂದ, ಈ ರೀತ್ಯಾ, ಪ್ರತಿಬಿಂಬರು ಜೀವರೆಂತಲೂ ತಾತ್ಪರ್ಯವೇ. ಇದೇ ಕ್ರಮ, ಶುದ್ಧ ಜಡಗಳಲ್ಲಿ ಸಮನ್ವಯವು. ಈ ಪ್ರತಿಬಿಂಬಾಖ್ಯ ಜಗತ್ತು, ಅನವರತ–ನಿರಂತರದಲ್ಲೂ, ಹರಿನಾಮ–ಅಂತರ್ಗತ ಬಿಂಬನಾದ ಹರಿನಾಮಕ ಪರಮಾತ್ಮಗೆ ಯಾವ ನಾಮವೋ ಅದೇ ನಾಮದಿಂದಲೆ, ರೂಪಂಗಳನು–ಅಂತರ್ಗತನಾದ ಪರಮಾತ್ಮನ ರೂಪ, ಕುರಿಯೊ, ಅಶ್ವವೊ ಯಾವದೋ ಅಂಥಾದ್ದೇ ರೂಪಗಳನ್ನ, ಧರಿಸಿಹುದು–ಧರಿಸಿ ಇರೋದಾಗಿ ಅದೆ. ಅಂದರೆ, ಆ ರೂಪದ ಜೀವರು ಈಶ್ವರನಿಂದ ರಚಿತರಲ್ಲ. ಜೀವಾಂತರ್ಗತಬಿಂಬ ಮಧ್ಯಕಾಲದಲ್ಲಿ ಪ್ರವೇಶನಾಗಿ ಬಿಂಬನಾದವನಲ್ಲ. ಎರಡೂ ಅನಾದಿಯೆ. ಜೀವರು ಈಶಾಧೀನರು ಎಂಬುದು ಅನಾದಿಯೆ. ಆದ್ದರಿಂದ ಸರ್ವ ರೂಪವೂ ಸರ್ವ ನಾಮವೂ ದೇವರಿಗೆ ಉಂಟು, ಅನ್ಯರಾದವರಿಗೆ ಇಲ್ಲ. ಅನಾದಿಯಿಂದ ಪರಿಮಾತ್ಮನ ರೂಪ, ನಾಮ, ಜೀವರು ಧರಿಸೋವರಾಗಿದ್ದಾರೆ, ಆದರೂ ಪರಮಾತ್ಮನಲ್ಲಿ ಅನ್ವರ್ಥಕ, ಜೀವರಲ್ಲಿ ಔಪಚಾರಿಕ ಎಂತ ತಾತ್ಪರ್ಯ.

**ಜನನಿ ಸೌಷ್ಮ ಪದಾರ್ಥಗಳ ಭೋ ।**
**ಜನವ ಮಾಡಲು ಗರ್ಭಗತಶಿಶು ।**
**ದಿನದಿನದಲಭಿವೃದ್ಧಿ ಐದುವ ತೆರದಿ ಜೀವರಿಗೆ ॥**
**ವನಜನಾಭನು ಸರ್ವರಸ ಉಂ ।**
**ಡುಣಿಸಿ ಸಂರಕ್ಷಿಸುವ ಜಾಹ್ನವಿ ।**
**ಜನಕ ಜನ್ಮಾದ್ಯಖಿಳದೋಷವಿದೂರ ಗಂಭೀರ ॥ ೨೫ ॥**

ಜೀವರಿಗೆ ಭೋಕ್ತೃತ್ವಶಕ್ತಿ ಸಹ ದೇವರ ಅಧೀನವೆಂದು ದೃಷ್ಟಾಂತ ತಿಳಿಸುತ್ತಾರೆ. ಪರಮಾತ್ಮ ಜೀವರನ್ನ ಸಂರಕ್ಷಣೆಮಾಡುವ ಕ್ರಮ ಹೇಳತಾರೆ.

ಜನನಿ–ಶುಕ್ಲಶೋಣಿತ ಸಂಬಂಧದಿಂದ ಗರ್ಭವನ್ನು ಧರಿಸತಕ್ಕ ಜನನಿಸಾಂಕೇತರಾದ, ತ್ರಿವಿಧರಾದ ಮಾನುಷ, ಪಶ್ವಾದಿ ಸ್ತ್ರೀಜಾತಿ, ಇಂಥಾ ತಾಯಿಯರು, ಸೌಷ್ಮ–ಆಯಾ ಜಾತಿಗೆ ಯೋಗ್ಯಗಳಾದ, ಪದಾರ್ಥಗಳ–ಭೋಜನಯೋಗ್ಯವಾದ ಪದಾರ್ಥಗಳ, ಭೋಜನವ ಮಾಡಲು–ಊಟಮಾಡುವುದರಿಂದ, ದಿನದಿನದಲಿ–ಪ್ರತಿದಿನದಲ್ಲೂ, ಅಭಿವೃದ್ಧಿ–ತಾಯಿ ಭೋಜನಮಾಡಿದ್ದರಲ್ಲಿ ಶಿಶುವಿಗೆ ಸೇರತಕ್ಕ ಭಾಗ ಶಿಶುವಿಗೆ, ತಾಯಿಗೆ

ಸೇರತಕ್ಕ ಭಾಗ ತಾಯಿಗೆ ಸೇರಿ, ಗರ್ಭಗತ ಶಿಶು–ಗರ್ಭಸ್ಥ ಶಿಶು ಅಭಿವೃದ್ಧಿಯನ್ನು, ಐದುವ–ಐದೋದಾಗತದೆ. ತಾಯಿ ಭೋಜನಮಾಡಿದ ಹೊರತು, ಗರ್ಭಗತ ಶಿಶು ಜೀವಗೆ ಭೋಜನವಾಗೋದಿಲ್ಲ. ಹಾಗೆಯೇ, ತೆರದಿ–ಇದರಂತೆ, ವನಜನಾಭನು–ಪದ್ಮ ನಾಭರೂಪಿಯಾದ ಪರಮಾತ್ಮ, ಜೀವರಿಗೆ–ಸರ್ವಪ್ರಾಣಿಗಳಿಗೆ ಎಂದರೆ, ಸ್ಥೂಲದೇಹಗಳ ಧರಿಸಿದ ಸರ್ವಪ್ರಾಣಿಗಳ ಸ್ಥೂಲದೇಹದಲ್ಲಿ ತದಾಕಾರನಾಗಿ, ಬಿಂಬನಾಗಿ ಜನನಿಸದೃಶ ನಾಗಿ ಇದ್ದು, ಸರ್ವರಸ ಉಂಡು–ಜನನಿಯಂತೆ ತದ್ಗತ ಸ್ವಾಖ್ಯರಸಗಳ ತಾನು ಉಂಡು, ತನ್ನ ಭೋಜನಕ್ರಿಯಾ ದ್ವಾರಾ, ಉಣಿಸಿ–ಜೀವನ ದ್ವಾರಾ, ದೇಹಕ್ಕೆ ಜಡಪದಾರ್ಥಗಳ ಉಣಿಸಿ, ಆ ಜಡರಸವನ್ನ ದೇಹಕ್ಕೆ ಉಪಚಯಮಾಡಿ, ಸಂರಕ್ಷಿಸುವ–ಸ್ಥೂಲದೇಹವನ್ನ ಅಭಿವೃದ್ಧಿರೂಪವಾದ ಸಂರಕ್ಷಣ ಮಾಡತ್ತಾನೆ. ಈ ಪ್ರಕಾರ ಅನುಸಂಧಾನ ಮಾಡಿ ಭೋಜನಮಾಡತಕ್ಕ ಅಧಿಕಾರಿಗಳನ್ನ, ಗಂಭೀರ–ತನ್ನ ಮಹಾಮಾಹಾತ್ಮ್ಯವೆಂಬ ಆಳ ವನ್ನು ಯಾರಿಂದಲೂ ತಿಳಿಯುವುದಕ್ಕೆ ಅಶಕ್ಯನಾದ, ಜಾಹ್ನವಿಜನಕ–ಗಂಗಾದೇವಿಗೆ ಪಿತ ನಾದ ಶ್ರೀ ಪರಮಾತ್ಮನು, ಜನ್ಮಾದಿ–ಜನನಮರಣ ಸ್ಥಿತಿಗಳಿಗೆ ಕಾರಣವಾದ, ಅಖಿಲ ದೋಷ–ಸಮಸ್ತದೋಷಗಳಿಂದ, ವಿದೂರ–ವಿಶೇಷಾಕಾರದಿಂದ ದೂರಮಾಡಿ ಸಂರಕ್ಷಿಸು ತ್ತಾನೆಂದು ತಾತ್ಪರ್ಯ.

**ಆಸೆಗೊಳಗಾದವನು ಜನರಿಗೆ ।**
**ದಾಸನೆನಿಸುವನಾಸೆಯನು ನಿಜ ।**
**ದಾಸಗೈದಿಹ ಪುಂಸಗೆಲ್ಲರು ದಾಸರೆನಿಸುವರು ॥**
**ಶ್ರೀಶನಂಘ್ರಿಸರೋಜಯುಗಳ ನಿ ।**
**ರಾಶೆಯಿಂದಲಿ ಭಜಿಸೆ ಒಲಿದು ರ ।**
**ಮಾಸಹಿತ ತನ್ನನೆ ಕೊಡುವ ಕರುಣಾಸಮುದ್ರ ಹರಿ ॥ ೨೬ ॥**

ಮನುಷ್ಯನಾದವ ಆಶಾ ತ್ಯಾಗಮಾಡಿದರೆ, ಸುಖವಂತನಾಗುತ್ತಾನೆಂತ ಹೇಳು ತ್ತಾರೆ.

ಆಸೆಗೊಳಗಾದವನು–ಪರಮಾತ್ಮನ ವಿಸ್ಮೃತಿಪೂರ್ವಕ ಸಮಸ್ತ ಪದಾರ್ಥಗಳ ಸಂಗ್ರಹ ಮಾಡುವ ವಿಷಯದಲ್ಲಿ ಬುದ್ಧಿ ಇಟ್ಟು ಅಹಂಮಮತಾ ಎಂಬ ಆಶಾಕ್ಕೆ ವಶನಾದ ಪುರುಷ, ಜನರಿಗೆ ದಾಸನೆನಿಸುವನು–ಸರ್ವರಿಗೂ ದಾಸನಾಗುತ್ತಾನೆ. ಎಂದರೆ, ಸರ್ವ ರಲ್ಲಿ ನಮ್ರೀಭೂತನಾಗಿ ಬಂಧಕನಾಗುತ್ತಾನೆ. ಆಸೆಯನು–ದೇವನ ಸ್ಮೃತಿಪೂರ್ವಕ ಸರ್ವ ಪದಾರ್ಥದಲ್ಲಿ ಇಚ್ಛಾರಹಿತನಾಗಿ, ನಿಜದಾಸಗೈದಿಹ–ತಾನು ಆಶಾ ತ್ಯಾಗ ಮಾಡಿ ರುವ, ಪುಂಸಗೆಲ್ಲರು – ಪುರುಷಗೆ ಸಮಸ್ತರೂ ದಾಸರೆನಿಸುವರು – ನಮ್ರೀಭೂತರಾಗಿ ದಾಸಾನುದಾಸರಾಗಿ ಇರುತ್ತಾರೆ. ಆದ್ದರಿಂದ ಇದರಂತೆ, ಶ್ರೀಶನಂಘ್ರಿ–ಲಕ್ಷ್ಮೀಪತಿಯಾದ ನಾರಾಯಣ ದೇವರ ಪಾದಗಳೆಂಬೋ, ಸರೋಜಯುಗಳ–ಕಮಲದ್ವಯಗಳ, ನಿರಾಶೆ ಯಿಂದಲಿ–ಫಲಾಪೇಕ್ಷಾರಹಿತನಾಗಿ ಶ್ರೀಶನ ಪ್ರೀತಿಪೂರ್ವಕ, ಭಜಿಸೆ–ಧ್ಯಾನೋಪಾಸ

ನಾದಿ ಸತ್ಸಾಧನ ಮಾಡಿದರೆ, ಒಲಿದು–ಹೃದಯಾಂತರ್ಗತನಾದ ಪರಮಾತ್ಮ ಅಪರೋಕ್ಷ ದಿಂದ ವಶನಾಗಿ, ಕರುಣಾಸಮುದ್ರ ಹರಿ–ಬಿಂಬರೂಪಿಯಾದ ಶ್ರೀ ದೇವರು, ರಮಾ ಸಹಿತ–ಲಕ್ಷ್ಮೀಸಮೇತನಾಗಿ, ತನ್ನನೆ ಕೊಡುವ–ತಾನು ವಶನಾಗಿ ಮಹಾ ಅಪರೋಕ್ಷ ವನ್ನೇ ಕೊಟ್ಟು ಸಂರಕ್ಷಣೆ ಮಾಡುತ್ತಾನೆ. ತನ್ನ ದಾಸರಲ್ಲಿ, ಪರಮಾತ್ಮಗೆ ಕರುಣಾ ವಿಶೇಷವು ಎಂತ ಅರ್ಥ.

**ದ್ಯುನದಿಯಾದ್ಯಂತವನು ಕಾಣದೆ ।**
**ಮನುಜ ಏಕತ್ರದಲಿ ತಾ ಮ ।**
**ಜ್ಜನವ ಗೈಯೆ ಸಮಸ್ತದೋಷದಿ ಮುಕ್ತನಹ ತೆರದಿ ॥**
**ಅನಘನಮಲಾನಂತಾನಂತ ಸು ।**
**ಗುಣಗಳೊಳಗೊಂದೆ ಗುಣೋಪಾ ।**
**ಸನವ ಗೈವ ಮಹಾತ್ಮ ಧನ್ಯ ಕೃತಾರ್ಥನೆನಿಸುವನು ॥ ೨೭ ॥**

ಪರಮಾತ್ಮನ ಗುಣೋಪಾಸನ ಮಾಡತಕ್ಕವ, ಮುಕ್ತನಾಗುತ್ತಾನೆ ಎಂತ ಹೇಳುತ್ತಾರೆ.

ದ್ಯುನದಿಯ–ಭಾಗೀರಥಿಯ, ಆದ್ಯಂತವನು ಕಾಣದೆ–ಉತ್ಪತ್ತಿ ಸ್ಥಾನವೇನು, ಸಂಗಮ ಸ್ಥಾನವೇನು ಇವುಗಳನ್ನ ತಿಳಿಯದೆ, ಏಕತ್ರದಲಿ–ಆ ಭಾಗೀರಥಿ ನದಿಯ ಒಂದು ಪ್ರದೇಶದಲ್ಲಿ, ಮನುಜ–ಮನುಷ್ಯನಾದವನು, ತಾ ಮಜ್ಜನವ ಗೈಯೆ–ವಿಧಿಪೂರ್ವಕ ಅತ್ಯಂತ ಅನುಸಂಧಾನದಿಂದ ಸ್ನಾನ ಮಾಡಿದರೆ, ಆ ಗಂಗಾದೇವಿ ತನ್ನ ಯೋಗ್ಯತಾನುಸಾರವಾಗಿ, ಸ್ನಾನಮಾಡುವ ಅಧಿಕಾರಿಯ ಜ್ಞಾನಾನುಸಂಧಾನಸಾರವಾಗಿ, ಪಾಪಗಳ ಪರಿಹಾರ ಮಾಡತಾಳೆ. ಸಮಸ್ತ ಪಾಪಗಳ ಪರಿಹಾರ ಮಾಡುವುದಿಲ್ಲ. ತೆರದಿ–ಈ ಭಾಗೀರಥಿ ಯಂತೆ, ಅನಘನ–ಈ ಭಾಗೀರಥಿ ನದಿಸದೃಶನಾದವ, ದೋಷದೂರನಾದವ ಇಂಥಾ ಶ್ರೀ ಪರಮಾತ್ಮನ, ಅಮಲ–ನಿರ್ದೋಷಗಳಾದ, ಅನಂತಾನಂತ – ಅಪರಿಚ್ಛಿನ್ನಗಳಾದ ಭಾಗೀರಥಿನದಿಗತ ಜಲದಂತೆ ವಿಸ್ತಾರವಾದ, ಸುಗುಣಗಳೊಳಗೆ – ಸಮಾಚೀನವಾದ ಗುಣಸಾಂಕೇತವಾದ ಒಂದೆ ಗುಣ–ಒಂದೇ ಗುಣಸಾಂಕೇತವಾದ ಜಲದೊಳಗೆ, ಉಪಾ ಸನವ–ಗುಣೋಪಾಸನರೂಪವಾದ ಸ್ನಾನವನ್ನ, ಗೈವ ಮಹಾತ್ಮ–ಮಾಡತಕ್ಕ ಮಹಾ ಪುರುಷ, ಸಮಸ್ತ ದೋಷದಿ–ಜನನ ಮರಣಕ್ಕೆ ಕಾರಣವಾದ ಸರ್ವದೋಷದಿಂದ ದೂರ ನಾಗಿ, ಭಗವದಪರೋಕ್ಷ ಹೊಂದಿ, ಮುಕ್ತನಹ–ಲಿಂಗಭಂಗ ಐದಿ ತಥಾ ಜೀವನ್ಮುಕ್ತ ನಾಗಿ ಮೋಕ್ಷವನ್ನು ಐದುವನು. ತಥಾ, ಮಹರಾದಿ ಲೋಕಗಳಲ್ಲಿ ವಾಸವಾಗಿರುತ್ತಾನೆ. ಧನ್ಯ–ಈ ಪ್ರಕಾರ ಗುಣೋಪಾಸನ ಮಾಡತಕ್ಕವನು ಧನ್ಯ. ಕೃತಾರ್ಥನೆನಿಸುವನು– ಮಾಡಲ್ಪಟ್ಟ ಸುಗುಣೋಪಾಸನಕರ್ಮದಿಂದ, ಪ್ರಯೋಜನಕರವಾದ ಭಗವಂತನ ಪಾದಾರವಿಂದ ಹೊಂದತಕ್ಕವನೆಂದು, ದೇವತೆಗಳಿಂದ ಕರೆಲಪ್ಪಡುತ್ತಾನೆಂದು ತಾತ್ಪರ್ಯ.

ಏಕಗುಣೋಪಾಸಕ, ತೃಣಜೀವ. ಚತುರ್ಗುಣೋಪಾಸಕರು ಮನುಜೋತ್ತ

ಮರು. ಅನಂತಗುಣೋಪಾಸಕ, ಬ್ರಹ್ಮ. ಅನಂತಗುಣ ಉಪಾಸನ ಮಾಡಿದವರಿಗೆ ಸದ್ಗತಿ ಎಂತಲೂ, ಏಕಗುಣೋಪಾಸಕಗೆ ಸದ್ಗತಿ ಇಲ್ಲವೆಂತಲೂ ತಾತ್ಪರ್ಯವಲ್ಲ. ಅವರವರ ಯೋಗ್ಯತಾನುಸಾರ ಗುಣೋಪಾಸನ ಅಧಿಕಾಧಿಕಮಾಡಿ ಸದ್ಗತಿಯನ್ನು ಹೊಂದುತ್ತಾರೆ. ತೃಣಜೀವ ತನ್ನ ಯೋಗ್ಯತಾನುಸಾರ ಏಕಗುಣೋಪಾಸನ ಮಾಡಿ, ಸದ್ಗತಿ ಹೊಂದುತ್ತಾನೆಂದು ತಾತ್ಪರ್ಯ. ಕಲಿಗಿಂತಲೂ, ನಿತ್ಯಸಂಸಾರಿಗಳೊಳಗೆ ಪುರಂಜನಗಿಂತಲೂ, ಏಕಗುಣೋಪಾಸಕರಾದ ಮುಕ್ತಿಯೋಗ್ಯರಲ್ಲಿ ಅತ್ಯಂತ ಕನಿಷ್ಠನಾದ ತೃಣಜೀವ ಶ್ರೇಷ್ಠ, ಧನ್ಯ, ಕೃತಾರ್ಥ ಎನಿಸೋವನಾಗುತ್ತಾನೆ. ಇವನು ಮುಕ್ತಿ ಯೋಗ್ಯನಾದ ಅಧಮಜೀವ, ಕಲಿ, ಪುರಂಜನನಕಿಂತಲೂ ಉತ್ತಮ ಎಂತ ತಾತ್ಪರ್ಯ.

**ವಾಸುದೇವನು ಕರೆಸುವನು ಕಾ ।**
**ರ್ಪಾಸನಾಮದಿ ಸಂಕರುಷಣನು ।**
**ವಾಸವಾಗಿಹ ತೂಲದೊಳು ತಂತುಗನು ಪ್ರದ್ಯುಮ್ನ ॥**
**ವಾಸರೂಪನಿರುದ್ಧದೇವನು ।**
**ಭೂಷಣನು ತಾನಾಗಿ ತೋರ್ಪ ಪ ।**
**ರೇಶನಾರಾಯಣನು ಸರ್ವದ ಮಾನ್ಯ ಮಾನದನು ॥ ೨೮ ॥**

ಮನುಷ್ಯನಾದವನು ಮಾನ ಮಾಡಿಸಿಕೊಳ್ಳುವುದು, ಮಾನ ಮಾಡುವುದು, ಯಾವದರಿಂದ ಅಂದರೆ, ವಸ್ತ್ರದೃಷ್ಟಾಂತದಿಂದ ಹೇಳಿ, ವಸ್ತ್ರಧಾರಣಾನುಸಂಧಾನಕ್ರಮ ಹೇಳುತ್ತಾರೆ.

ವಾಸುದೇವನು–ಶ್ರೀ ವಾಸುದೇವರೂಪನಾದ ಪರಮಾತ್ಮನು, ಕಾರ್ಪಾಸನಾಮದಿ–ಬೀಜಸಹಿತವಾದ ಜಡೆಹತ್ತಿ ನಾಮದಿಂದ, ಕರೆಸುವನು–ಪ್ರಥಮತಃ ಜಡೆಹತ್ತಿ ಎಂತ ಕರೆಸುತ್ತಾನೆ. ಅನಂತರ, ಸಂಕರುಷಣನು–ಸಂಕರ್ಷಣರೂಪೀ ಪರಮಾತ್ಮನು, ತೂಲದೊಳು–ಬೀಜದಿಂದ ರಹಿತವಾಗಿ ಮಾಡಿದರೆ ಅದು ಕಳದ ಹತ್ತಿ ಎಂತ ಎನತಕ್ಕ ಶುದ್ಧವಾದ ಬರೀ ಹತ್ತಿಯಲ್ಲಿ, ವಾಸವಾಗಿಹ–ಶುದ್ಧವಾದ ಸಮೂಹವಿಶಿಷ್ಟವಾಗಿ ಹತ್ತಿ ಎಂತ ಇರುವ ಮೂಟೆಯಲ್ಲಿ ಇರುತ್ತಾನೆ. ತಂತುಗನು–ಇದರಿಂದ ನಿರ್ಮಿತವಾದ ದಾರಗಳಲ್ಲಿ, ಪ್ರದ್ಯುಮ್ನ–ಪ್ರದ್ಯುಮ್ನನಾಮಕ ಪರಮಾತ್ಮ ದಾರಗಳಲ್ಲಿ ವಾಸವಾಗಿರುತ್ತಾನೆ. ವಾಸರೂಪನಿರುದ್ಧದೇವನು–ಈ ದಾರಗಳಿಂದ ನಿರ್ಮಿತವಾದ ವಸ್ತ್ರಗಳಲ್ಲಿ ವಾಸನಾಮದಿಂದ ಅನಿರುದ್ಧರೂಪನಾದ ಪರಮಾತ್ಮನು ಇದ್ದಾನೆ. ಪರೇಶ–ಪರಮ ಉತ್ತಮರಾದ ಲಕ್ಷ್ಮೀದೇವಿಯರಿಗೆ, ಈಶ–ಸ್ವಾಮಿಯಾದ, ನಾರಾಯಣನು–ನಾರಾಯಣದೇವರು, ಭೂಷಣನು–ಈ ವಸ್ತ್ರ, ಜನರು ಧರಿಸೋಣದರಿಂದ ದೇಹಕ್ಕೆ ಅಲಂಕಾರವಾಗಿ ಇರುತ್ತದೆ. ಇಂಥಾ ಅಲಂಕಾರಸಾಂಕೇತವಾದ ಭೂಷಣದಲ್ಲಿ ಭೂಷಣಶಬ್ದವಾಚ್ಯನು, ತಾನಾಗಿ–ನಾರಾಯಣ ತಾನೇ ಆಗಿ, ತೋರ್ಪ–ಭೂಷಣವೈಚಿತ್ರ್ಯಗಳ ಪ್ರಾಣಿಗಳ ನೇತ್ರಗಳಿಗೆ ತೋರಿಸುತ್ತಿದ್ದಾನೆ. ಇದೇ ನಾರಾಯಣದೇವರೇ, ಮಾನ್ಯ–ವಿಚಿತ್ರವಸ್ತ್ರಗಳ ಧರಿಸಿದವನ ಆಯಾ ವಸ್ತ್ರಗತ ಗೌರವದಿಂದ ಮಾನಮಾಡುವುದಕ್ಕೆ ಅಧಿಕಾರಿ ಎಂತ ಅನ್ಯರ ಮನಸ್ಸಿನಲ್ಲಿ ಪ್ರೇರಿಸೋವನಾಗಿ, ಮಾನದನು–ಸ್ವಭಾವ ಅಲ್ಪವಾಗಿದ್ದು ವಸ್ತ್ರವಿಶೇಷಗಳ ದ್ವಾರಾ ಯಾವನೋ

ದೊಡ್ಡ ಮನುಷ್ಯನೆಂದು ಜನರಿಗೆ ಪ್ರೇರಿಸಿ ವಿಶೇಷಾಕಾರದಿಂದ ಬಹುಮಾನ ತಂದುಕೊಟ್ಟು ಮಾನ್ಯ ಮಾನದ ನಾಮಗಳಿಂದ ಕರೆಸುವನಾಗುತ್ತಾನೆ. ಈ ಪೂರ್ವೋಕ್ತ ಪ್ರಕಾರ ರೂಪಗಳಿಂದ ಪಟದಲ್ಲಿ ಇರೋವನಾಗಿದ್ದಾನೆ. ಈ ಪ್ರಕಾರ ವಸ್ತ್ರಗಳಲ್ಲಿ ತಿಳಿದು ದೇಹಾಂತರ್ಗತ, ತದಾಕಾರ ಬಿಂಬನ್ನ ಪಟಾಂತರ್ಗತ ತದಾಕಾರ ಬಿಂಬನ್ನ ಐಕ್ಯಚಿಂತನ ಮಾಡಿ ವಸ್ತ್ರಧಾರಣ ಮಾಡಿ, ದೇಹಾಂತರ್ಗತ ಬಿಂಬಗೆ ವಸ್ತ್ರಗಳ ಸಮರ್ಪಿಸಬೇಕೆಂತ ತಾತ್ಪರ್ಯ. ಸರ್ವದ–ಸದಾ ಸರ್ವಕಾಲದಲ್ಲೂ ವಸ್ತ್ರದಲ್ಲಿ ಅನಿರುದ್ಧಾದಿ ರೂಪಗಳನ್ನ ಚಿಂತಿಸಿ ಪರಮಾತ್ಮ ಆವಾಸನಾಗಿದ್ದಾನೆಂದು ತಿಳಿದು ಅನುಸಂಧಾನ ಮಾಡಬೇಕು.

**ವಿಶೇಷಾರ್ಥ :—** ಪಕ್ವಯೋಗಿಗಳಾಗಿ ವಸ್ತ್ರದಿಂದ ಹೀನರಾದ ತನ್ನ ಭಕ್ತರನ್ನ ಪರಮಾತ್ಮ ತಾನೇ ವಸ್ತ್ರರೂಪವಾಗಿ ಅವರನ್ನ ಸುತ್ತಿಕೊಂಡಿರುತ್ತಾನೆಂದು ತಾತ್ಪರ್ಯ.

**ಲಲನೆಯಿಂದೊಡಗೂಡಿ ಚೈಲಗ ।**
**ಳೊಳಗೆ ಓತಪ್ರೋತರೂಪದಿ ।**
**ನೆಲಸಿಹನು ಚತುರಾತ್ಮಕ ಜಗನ್ನಾಥವಿಠ್ಠಲನು ॥**
**ಛಳಿ ಬಿಸಿಲು ಮಳೆಗಾಳಿಯಿಂದರ ।**
**ಘಳಿಗೆ ಬಿಡದಲೆ ಕಾವನೆಂದರಿ ।**
**ದಿಳೆಯೊಳರ್ಚಿಸುತಿರು ಸದಾ ಸರ್ವಾಂತರಾತ್ಮಕನ ॥ ೨೯ ॥**

ವಸ್ತ್ರಾಂತರ್ಗತನಾಗಿ ಪರಮಾತ್ಮ ಪ್ರಾಣಿಗಳನ್ನ ರಕ್ಷಿಸುವ ವಿಧವನ್ನ ಹೇಳುತ್ತಾರೆ.

ಲಲನೆಯಿಂದೊಡಗೂಡಿ–ಶ್ರೀ ನಾರಾಯಣದೇವರು ತನ್ನ ಪತ್ನಿಯಿಂದ ಸಮೇತನಾಗಿ, ಚತುರಾತ್ಮಕ–ಅಂಶರೂಪಗಳಾದ ಅನಿರುದ್ಧಾದಿ ನಾಲ್ಕು ರೂಪಗಳಿಂದ, ಓತಪ್ರೋತರೂಪದಿ–ಉದ್ದ ಮತ್ತು ಅಡ್ಡ ಎರಡು ವಿಧ ದಾರಗಳಿಂದ, ಯುಕ್ತವಾದ ತತ್ತ್ವಾತ್ಮಕವಾದ, ಚೈಲಗಳೊಳಗೆ–ವಸ್ತ್ರಗಳೊಳಗೆ, ನೆಲಸಿಹನು–ತದಾಕಾರದಿಂದ ಪ್ರತಿ ತಂತುವಿನಲ್ಲಿ ಐದು, ಐದು ರೂಪಗಳಿಂದ ಆವಾಸನಾಗಿ ಇರೋವನಾಗಿದ್ದಾನೆ. ಈ ಪ್ರಕಾರ ಇರತಕ್ಕ ಜಗನ್ನಾಥವಿಠ್ಠಲನು–ಜಗತ್ತಿಗೇ ಸ್ವಾಮಿಯಾದ ವಿಠ್ಠಲ ಸಾಂಕೇತನಾದ ಪರಮಾತ್ಮನು ಆಯಾ ವಸ್ತ್ರಗಳ ದ್ವಾರಾ, ಛಳಿ ಬಿಸಲು ಮಳೆ ಗಾಳಿ–ಛಳಿಯೇನು, ಬಿಸಿಲೇನು, ಮಳೆಯೇನು, ಗಾಳಿಯೇನು, ಯಿಂದ–ಈ ನಾಲ್ಕರಿಂದ ಪ್ರಾಪ್ತವಾಗತಕ್ಕ ದೇಹಕ್ಕೆ ಆಗತಕ್ಕ ಬಾಧೆಯಿಂದ, ಕಾವನೆಂದರಿದು – ಸಂರಕ್ಷಣೆ ಮಾಡುತ್ತಾನೆಂದು ತಿಳಿದವನಾಗಿ, ಇಳೆಯೊಳು–ಸಾಧನಭೂಮಿಯಾದ ಈ ಭರತಖಂಡದಲ್ಲಿ, ಸರ್ವಾಂತರಾತ್ಮಕನ–ಸರ್ವತ್ರ ವ್ಯಾಪ್ತನಾದ ಪರಮಾತ್ಮನಲ್ಲಿ ನಿನ್ನ ಬಿಂಬನಾದ ಅಂತರಾತ್ಮಕನ ಐಕ್ಯ ಚಿಂತಸಿ, ಅರಘಳಿಗೆ ಬಿಡದಲೆ–ಅರ್ಧಘಳಿಗೆಯಾದರೂ ವಿಸ್ಮೃತನಾಗಿ ಇರದಂತೆ, ಸದಾ–ನಿರಂತರ, ಅರ್ಚಿಸುತಿರು–ಐಕ್ಯಚಿಂತನರೂಪದಿಂದ ಪೂಜೆ ಮಾಡುತ್ತಾ ಇರಬೇಕೆಂದು ತಾತ್ಪರ್ಯ.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ಶ್ವಾಸಸಂಧಿವ್ಯಾಖ್ಯಾನಂ ಸಂಪೂರ್ಣಂ.**

॥ ಶ್ರೀ ಕೃಷ್ಣಾರ್ಪಣಮಸ್ತು ॥

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಹದಿನಾರನೆಯ ಸಂಧಿ

## ದತ್ತಸ್ವಾತಂತ್ರ್ಯ ಸಂಧಿ

**ಹರಿಕಥಾಮೃತಸಾರ ಗುರುಗಳ |**
**ಕರುಣದಿಂದಾಪನಿತು ಪೇಳುವೆ |**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು || ಪ ||**

ಹಿಂದಿನ ಸಂಧ್ಯಂತರಗಳಲ್ಲಿ ಹೇಳಿದ ಕ್ರಮಕ್ಕೆ ಅನುಸಂಧಾನ ಮಾಡಿ, ಪೂಜಾ ಮಾಡತಕ್ಕ ಜೀವನ ಕರ್ತೃತ್ವ ಎಂಬುದು ಸ್ವಾಧೀನಕರ್ತೃತ್ವವೇ, ಪರಾಧೀನಕರ್ತೃತ್ವವೇ ಎಂದರೆ, ಜೀವರಿಗೆ ಕರ್ತೃತ್ವ ಎಂಬ ಸ್ವಾತಂತ್ರ್ಯವೇನೋ ಉಂಟು ; ಅದು ಪರಾಧೀನ ಸ್ವಾತಂತ್ರ್ಯವೇ ಹೊರತು, ಈಶ್ವರನೋಪಾದಿಯಲ್ಲಿ ಸ್ವಾಧೀನಸ್ವಾತಂತ್ರ್ಯವಲ್ಲ. ಅದನ್ನನು ಸರಿಸಿದ ಕೆಲವು ತತ್ತ್ವಗಳನ್ನು ಈ ಸಂಧಿಯಲ್ಲಿ ವಿವರಮಾಡಿದ್ದಾರೆ.

**ಮೂಲ :**

**ಕಾರುಣಿಕ ಹರಿ ತನ್ನೊಳಿಪ್ಪಾ |**
**ಪಾರ ಸ್ವಾತಂತ್ರ್ಯ ಗುಣವು ನಾ |**
**ನೂರು ತೆಗೆದು ಸಪಾದ ಆರೊಂದಧಿಕ ಅರುವತ್ತು ||**
**ನಾರಿಗಿತ್ತ ದ್ವಿಷೋಡಶಾಧಿಕ |**
**ನೂರು ಪಾದತ್ರಯುವ ತನ್ನ ಶ |**
**ರೀರದೊಳಗೀಪರಿ ವಿಭಾಗವ ಮಾಡಿ ತ್ರಿಪದಾಹ್ವ || ೧ ||**

**ಟೀಕಾ :**

ಕಾರುಣಿಕ–ಸೃಷ್ಟ್ಯಾದಿ ವ್ಯಾಪಾರಗಳಿಗೆ ಮೂಲಕಾರಣನಾದ, ಹರಿ–ವಟಪತ್ರಶಾಯಿಯಾದ ಶ್ರೀ ನಾರಾಯಣದೇವರು, ತನ್ನೊಳಿಪ್ಪ–ತನ್ನ ಉದರದಲ್ಲಿ ವಿದ್ಯಮಾನರಾದ, ಅಪಾರ–ಅಂತ್ಯದಿಂದ ರಹಿತರಾದ ಜೀವರಾಶಿಗಳೊಳಗೆ ಸೃಜ್ಯರಾಗಿ ಸಾಧನೆ ಮಾಡತಕ್ಕ ಜೀವರು ಯಾರೋ ಅವರಿಗೆ, ಸ್ವಾತಂತ್ರ್ಯಗುಣವು– ಸ್ವಾ–ತನ್ನ ಸ್ವಕೀಯವಾದ, ತಂತ್ರ–ಜೀವರ ಕಡೆಯಿಂದ ವ್ಯಾಪಾರಮಾಡಿಸುವುದಕ್ಕೆ ಯೋಗ್ಯವಾದ, ತ್ರಯ–ಮೂರು (ಸಂಧಿಪ್ರಯುಕ್ತ 'ತ್ರ' ಎಂಬ ವರ್ಣವನ್ನು ಆವರ್ತನ ಮಾಡಿಕೊಂಡು ಪೂರ್ವಾಪರಗಳಿಗೆ ಸೇರಿಸಿಕೊಂಡು ಸ್ವಾತಂತ್ರ್ಯತ್ರಯ ಎಂತ ಅರ್ಥಮಾಡಬೇಕು), ಗುಣವು–ಸ್ವಾತಂತ್ರ್ಯ

ತ್ರಯಗಳು ಎನತಕ್ಕದ್ದು ಪರಮಾತ್ಮನ ಗುಣವು, ಪರಮಾತ್ಮನಿಗೆ ಅಭಿನ್ನವು. ತ್ರಯ ಯಾವುವೆಂದರೆ, ದತ್ತಸ್ವಾತಂತ್ರ್ಯಗುಣ ಒಂದು, ಸ್ವಗತಸ್ವಾತಂತ್ರ್ಯಗುಣ ಒಂದು, ಸರ್ವಸ್ವಾತಂತ್ರ್ಯಗುಣ ಒಂದು. ಅಂತೂ ಮೂರು. ಸ್ವಗತಸ್ವಾತಂತ್ರ್ಯ, ಸರ್ವ ಸ್ವಾತಂತ್ರ್ಯವಿಚಾರ ಸಂಧ್ಯಂತರದಲ್ಲಿ ಹೇಳುತ್ತಾರೆ. ಪರಮಾತ್ಮನ ಸ್ವರೂಪಭೂತವೆಂದು ನಾಲ್ಕನೇ ಶ್ಲೋಕದಲ್ಲಿ ಹೇಳುತ್ತಾರೆ. ನಾನೂರು ತೆಗೆದು–ದತ್ತಸ್ವಾತಂತ್ರ್ಯಗುಣದೊಳಗೆ ನಾನ್ನೂರು ವಿಭಾಗವ ಮಾಡಿ ತೆಗೆದು ಎಂದರೆ, ಮೂಲರೂಪದಿಂದ ಮತ್ಸ್ಯಾದಿರೂಪಗಳು ಹ್ಯಾಗೆ ಅಭಿವ್ಯಕ್ತಿಯೋ ಹಾಗೆಯೇ ಮೂಲರೂಪಗುಣದಿಂದ ನಾನ್ನೂರು ಗುಣಗಳು ಅಭಿವ್ಯಕ್ತಿ ಆಗೋವಾದುವು. ಅರ್ಜುನಾದಿಗಳಲ್ಲಿ ಭಗವದಂಶ ಆವಿಷ್ಟವಾದಂತೆ ಜೀವರ ಸ್ವರೂಪಭೂತಸ್ವಾತಂತ್ರ್ಯದಲ್ಲಿ ಪ್ರವಿಷ್ಟವಾಗೋದಾಯಿತು. ಸಪಾದ–ಪಾದದಿಂದ ಸಹಿತ ವಾದ (೧/೪), ಆರೊಂದಧಿಕ–ಆರರ ಮೇಲೆ ಒಂದು (೭), ಅರುವತ್ತು–(೬೦) ಅರುವತ್ತು, ಅಂತು ಅರವತ್ತೇಳೂಕಾಲು (೬೭–೧/೪), ನಾರಿಗಿತ್ತ–ತನ್ನ ಪತ್ನಿಯಾದ ಲಕ್ಷ್ಮೀದೇವಿಯ ರಲ್ಲಿ ಇಡೋವನಾದ. ದ್ವಿಷೋಡಶ-ಎರಡು ಹದಿನಾರುಗಳು ಅಂದರೆ ಮೂವತ್ತೆರಡು (೩೨), ಅಧಿಕನೂರು-ಮೂವತ್ತೆರಡಕ್ಕೆ ಮೇಲೆ ಅಧಿಕ ನೂರು, ಪಾದತ್ರಯವ–ಮುಕ್ಕಾಲು (೩/೪), ಅಂತು ನೂರಮೂವತ್ತೆರಡೂಮುಕ್ಕಾಲು ಎಂತ ಅರ್ಥ. ತನ್ನ ಶರೀರದೊಳಗೆ–ಪರಮಾತ್ಮ ತನ್ನ ಶರೀರದಲ್ಲಿ ೧೩೨–೩/೪ ಗುಣಗಳನ್ನು ಇಡೋವನಾದ. ಈ ಪರಿ ವಿಭಾಗ ಮಾಡಿ– ಈ ಪ್ರಕಾರ ವಿಭಾಗ ಮಾಡಿ, ತ್ರಿಪದಾಹ್ವ–ತ್ರಿಪದ ಎಂತ ಕರೆಸುವನಾದ. ಹೇಗೆಂದರೆ, ತ್ರಿ–ತ್ರಿವಿಧ ಜೀವರುಗಳನ್ನು, ಪ–ಪಾಲನೆಮಾಡುತ್ತ, ದ–ಅವರವರ ಸ್ವರೂಪಯೋಗ್ಯ ತಾನುಸಾರ ಬುದ್ಧ್ಯಾದಿಗಳ ಅಭಿವ್ಯಕ್ತಿ ಮಾಡಿಕೊಡುತ್ತಾ, ಆಹ್ವ–ಆಯಾ ಜೀವರ ಸ್ವರೂಪ ಯಾವುದೋ ಆಯಾ ನಾಮಗಳಿಂದ ಕರೆಸುತ್ತ ಜೀವಾಂತರ್ಗತನಾಗಿ ಪರಮಾತ್ಮ ಬಿಂಬನಾಗಿ ಇದ್ದಾನೆ. ಪಾದತ್ರಯಸಾಂಕೇತವಾದ ಸ್ವಾತಂತ್ರ್ಯತ್ರಯದಲ್ಲಿ, ತತ್ತನ್ನಾಮ ದಿಂದಲೂ ಇದ್ದಾನೆ. ತ್ರಿವಿಧ ಜೀವರ ಸ್ವರೂಪಭೂತ ಸ್ವಾತಂತ್ರ್ಯತ್ರಯದಲ್ಲಿ ತ್ರಿವಿಧ ನಾಮದಿಂದಲೂ ಇದ್ದಾನೆ. ಈ ವಿಭಾಗಮಾಡಿದ ದತ್ತಸ್ವಾತಂತ್ರ್ಯ, ದೇವರು ತನ್ನಲ್ಲಿ, ರಮಾದೇವಿಯರಲ್ಲಿ ಇಟ್ಟು ಇರೋಣದರಿಂದ ಜೀವರ ಸ್ವರೂಪಭೂತಸ್ವಾತಂತ್ರ್ಯವೆನ್ನುವು ದಕ್ಕೆ ಆಗುವುದಿಲ್ಲ. ಹಾಗೆಯೇ ಜಡ ಎಂತಲೂ ಅನ್ನುವುದಕ್ಕೆ ಕೂಡೋದಿಲ್ಲ. ಈ ಉಭಯಗಳು ರಮಾಮಧುಸೂದನರ ಸ್ವರೂಪಭೂತಸ್ವಾತಂತ್ರ್ಯದಕ್ಕಿಂತಲೂ ಅತ್ಯಂತ ನೀಚಗಳಾದ ಪ್ರಯುಕ್ತ, ಯೋಜನಾ ಕೂಡೋದಿಲ್ಲ. ಆದ್ದರಿಂದ ಈಶ್ವರನ ಸ್ವರೂಪ ಭೂತಸ್ವಾತಂತ್ರ್ಯಗಳ ವಿಭಾಗವೆಂತಲೇ ಅರ್ಥಾತ್ ಸಿದ್ಧವು. ಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರ ಸ್ವರೂಪದಲ್ಲೇನು, ಹಾಗೆಯೇ ರಮಾದೇವಿಯರ ಸ್ವರೂಪದಲ್ಲೇನು, ಅನಾದಿ ಸ್ವರೂಪಭೂತಸ್ವಾತಂತ್ರ್ಯಗುಣದಲ್ಲಿ, ತದ್ವಾಚ್ಯ ಪರಮಾತ್ಮನ ಸ್ವಾತಂತ್ರ್ಯ ಗುಣಗಳು ಇರೋವಾಗಿವೆ. ಅದು ಲಿಂಗಭಂಗಾನಂತರ, ಸ್ವರೂಪದೇಹದ ಕಾರ್ಯಗಳ ಮಾಡಿಸುವುದಕ್ಕೆ ಕಾರಣವಾದದ್ದು. ಸ್ಥಿತಿಕಾಲದಲ್ಲಿ ಅದರ ಕಾರ್ಯ ಪೃಥಕ್ ಆಗಿಲ್ಲವಾದ್ದ ರಿಂದ ತನ್ನಿಮಿತ್ತ ಸ್ಥಿತಿಕಾಲದ ತ್ರಿಗುಣ ವ್ಯಾಪಾರಗಳ ನಡಿಸುವ ನಿಮಿತ್ತ, ಸೃಷ್ಟ್ಯಾದಿ

ವ್ಯಾಪಾರಗಳಿಗೆ ಕಾರಣನಾದ ಶ್ರೀ ನಾರಾಯಣದೇವರು, ತನ್ನ ಸ್ವಕೀಯಸ್ವಾತಂತ್ರ್ಯ ಗುಣಗಳ, ಜೀವನ ಸ್ವರೂಪಭೂತಸ್ವಾತಂತ್ರ್ಯಗುಣಗತ ತನ್ನ ಸ್ವರೂಪಭೂತಗುಣ ಗಳಲ್ಲಿ, ಬ್ರಹ್ಮರೂಪಗತ ತನ್ನ ಗುಣಗಳ ಇಡೋವನಾಗಿದ್ದಾನೆ. ಅದು ಪುನಃ ಮೂಲದಲ್ಲಿ ಲಯವಾಗುತ್ತದೆ. ತದನ್ಯ ಗುಣ, ನೀತವಾಗಿರುತ್ತದೆ. ರಮಾದೇವಿಯರಲ್ಲಿ ಇಟ್ಟದ್ದನ್ನು ಪೂರ್ವೋಕ್ತಪ್ರಕಾರ ಸೃಷ್ಟ್ಯಾದಿ ವ್ಯಾಪಾರಕ್ಕಾಗಿ, ಇದಲ್ಲದೆ, ಪರಮಾತ್ಮ ತನ್ನಲ್ಲಿ ತಾನು ಇಟ್ಟುಕೊಂಡದ್ದೂನೂ, ಸೃಷ್ಟ್ಯಾದಿ ವ್ಯಾಪಾರಕ್ಕಾಗಿ, ದೃಷ್ಟಾಂತದಿಂದ ಸಮಾಧಾನ. ಪರಮಾತ್ಮನ ಅನಂತಾನಂತ ರೂಪಗಳಿಗೆ ಅಭೇದವಾದರೂ, ರಾವಣನ ದೇಹಾಂತರ್ಗತ ರೂಪದಿಂದ ರಾವಣನ ಸಂಹಾರಮಾಡುವ ಶಕ್ತಿ ಇದ್ದರೂ, ಪ್ರತ್ಯೇಕವಾದ ರಾಮರೂಪ ದಿಂದ ಸಂಹಾರಮಾಡಿದ ತೆರದಿ, ಸೃಷ್ಟ್ಯಾದಿಗಳ ನಡೆಸುವ ನಿಮಿತ್ತ ನೂರಮೂವತ್ತೆರಡೂ ಮುಕ್ಕಾಲು ಗುಣ ತನ್ನಲ್ಲಿ ತಾನು ಇಟ್ಟುಕೊಳ್ಳುವನಾದ. ಎಂದರೆ, ಇಷ್ಟು ಗುಣದಿಂದ ಸೃಷ್ಟ್ಯಾದಿಗಳ ನಡೆಸುತ್ತಾನೆ ಎಂತ ತಾತ್ಪರ್ಯ. ಅವಶಿಷ್ಟ ಗುಣಗಳಿಂದ ಸ್ವರಮಣ ನಾಗಿ ಇರುತ್ತಾನೆ.

ರಮಾದೇವಿಯರ ಸ್ವರೂಪಭೂತಸ್ವಾತಂತ್ರ್ಯಗುಣಗಳಿಂದ, ತದ್ಗತ ತನ್ನ ಸ್ವಾಖ್ಯ ಗುಣಗಳಿಂದ, ಪರಮಾತ್ಮನ ಪ್ರದೇಶದಲ್ಲಿ ಪರಮಾತ್ಮನಾದ ತನ್ನ ಅಂಗಸಂಗಾದಿ ಕಾರ್ಯ ಗಳನ್ನು ನಡೆಸುತ್ತಾನೆ. ೬೭-೧/೪ ಗುಣದಿಂದ ರಮಾದೇವಿಯರ ದ್ವಾರಾ, ಸೃಷ್ಟ್ಯಾದಿ ಕಾರ್ಯಗಳನ್ನು ನಡೆಸುತ್ತಾನೆ. ಅಂತು ಸ್ವರೂಪಕಾರ್ಯಕ್ಕೆ ಸ್ವರೂಪಗುಣಗಳು, ಬಾಹ್ಯವ್ಯಾಪಾರಕ್ಕೆ ಪ್ರವಿಷ್ಟಗುಣಗಳು, ಈ ಕಾರಣದಿಂದ ಪರಮಾತ್ಮನು ತನ್ನ ಸ್ವಾಖ್ಯ ಸ್ವಾತಂತ್ರ್ಯಗುಣಗಳ, ಅವರವರಲ್ಲಿ ಇಡೋವನಾಗಿದ್ದಾನೆಂದು ತಾತ್ಪರ್ಯ. ೧) ದತ್ತ ಸ್ವಾತಂತ್ರ್ಯ ಅಂದರೆ, ಅಪಕ್ವದಶಾದಲ್ಲಿ ಇದರ ಕಾರ್ಯ. ಈ ಸ್ವಾತಂತ್ರ್ಯದ್ವಾರಾ ಅಪಕ್ವದಶಾದಲ್ಲಿ ಅಹಂ ಮಮತಾದಿಗಳ ಪ್ರೇರಿಸಿ, ತದ್ದ್ವಾರಾ ಪ್ರಾಪ್ತವಾಗತಕ್ಕ ಸುಖ ದುಃಖಾದಿಗಳ, ದೇಹದ್ವಾರಾ ಜೀವಗೆ ತಾನು ದತ್ತಮಾಡಿ ಉಣ್ಣಿಸುತ್ತಾನಾದಕಡಿ ಯಿಂದ, ದತ್ತಸ್ವಾತಂತ್ರ್ಯ ಎಂತ ಹೆಸರು. ೨) ಸ್ವಗತಸ್ವಾತಂತ್ರ್ಯದ್ವಾರಾ ತನ್ನಲ್ಲಿರತಕ್ಕ ಸರ್ವೋತ್ತಮತ್ವಾದಿ ನಿರ್ದೋಷಗಳಾದ ಮಹಾಮಹಾತ್ಮೆ, ವೇದಶಾಸ್ತ್ರಾದಿಗಳಿಂದ ತಿಳಿಸಿ, ವಿಷಯಾದಿಗಳಲ್ಲಿ ಆಸಕ್ತಿ, ಅಹಂ ಮಮತಾದಿಗಳ ಸಂಪೂರ್ಣವಾಗಿ ಪರಿಹಾರಮಾಡದೆ, ಸಂಸಾರ ಹೇಯ, ಅಹಂ ಮಮತಾದಿಗಳು ಹೇಯ ಎಂತಲೂ, ಇವನ್ನು ತ್ಯಾಗಮಾಡಬೇ ಕೆಂತಲೂ, ಉಭಯ ಮಿಶ್ರದಿಂದ ಸಾಧನಾ ಯಾವುದಿದೆ ಇದೇ, ಪಕ್ವಾಪಕ್ವ ಕಾಲ. ಸ್ವಗತಮಹಿಮೆಗಳ ತಿಳಿಸುತ್ತಾನಾದ್ದರಿಂದ, ಸ್ವಗತಸ್ವಾತಂತ್ರ್ಯ ಎಂತ ಹೆಸರು. ೩) ಸರ್ವಸ್ವಾತಂತ್ರ್ಯ ಎಂದರೆ, ಪಕ್ವದಶಾದಲ್ಲಿ ಇದರ ಕಾರ್ಯ. ಈ ಸ್ವಾತಂತ್ರ್ಯದಿಂದ ಅಹಂ ಮಮತಾದಿಗಳ ಬಿಡಿಸಿ, ಸರ್ವವೂ ಈಶಾಧೀನವೆಂದು ತಿಳಿಸಿ, ತದೇಕಧ್ಯಾನದಿಂದ ಯುಕ್ತನನ್ನಾಗಿ ಮಾಡುತ್ತಾನಾದ್ದರಿಂದ, ಸರ್ವಸ್ವಾತಂತ್ರ್ಯ ಎಂತ ಹೆಸರು. ೪) ಜೀವರ ಸ್ವರೂಪಗತ ಸ್ವಾತಂತ್ರ್ಯಗತ ಪರಮಾತ್ಮನ ಸ್ವರೂಪಸ್ವಾತಂತ್ರ್ಯ ಎಂದರೆ, ಇದರ ಕಾರ್ಯ ಲಿಂಗಭಂಗಾನಂತರ ಜೀವನ ಸ್ವರೂಪಭೂತಗತ (ಸ್ವರೂಪಭೂತಸ್ವಾತಂತ್ರ್ಯ

ಗತ) ಪರಮಾತ್ಮನ ಸ್ವತಂತ್ರಗುಣದ ಕಾರ್ಯ, ಪೃಥಕ್ಕಾಗಿ ಮೋಕ್ಷದಲ್ಲಿ ಕಾರ್ಯ ಮಾಡುವುದಾಗುತ್ತದೆ. ದತ್ತಸ್ವಾತಂತ್ರ್ಯಗುಣದ ವಿಚಾರವಾಯಿತು. ಸ್ವಗತ ಸ್ವಾತಂತ್ರ್ಯ, ಸರ್ವಸ್ವಾತಂತ್ರ್ಯ ಗುಣವಿಭಾಗದ ವಿಚಾರ, ಆಯಾ ಸಂಧಿಗಳಲ್ಲಿ ವಿವರವಾಗಿ ಹೇಳಲ್ಪಡುತ್ತದೆ.

**ಸತ್ಯಲೋಕಾಧಿಪನೊಳಗೆ ಐ ।**
**ವತ್ತೆರಡು ಪವಮಾನನೊಳು ನಾ ।**
**ಲ್ವತ್ತುಮೇಲೆಂಟಧಿಕ ಶಿವನೊಳಗಿಟ್ಟನಿಪ್ಪತ್ತು ॥**
**ಚಿತ್ತಜೇಂದ್ರರೊಳೈದಧಿಕದಶ ।**
**ತತ್ತ್ವಮಾನಿಗಳೆನಿಪ ಸುರರೊಳು ।**
**ಹತ್ತು ಈರೈದಖಿಳಜೀವರೊಳಿಟ್ಟ ನಿರವದ್ಯ ॥ ೨ ॥**

ಇನ್ನೂ ದತ್ತಸ್ವಾತಂತ್ರ್ಯ ವಿಚಾರ ಹೇಳತಾರೆ.

ಸತ್ಯಲೋಕಾಧಿಪನೊಳಗೆ–ಬ್ರಹ್ಮದೇವನೊಳಗೆ, ಐವತ್ತೆರಡು–ಐವತ್ತೆರಡು, ಪವಮಾನನೊಳು–ವಾಯುದೇವನೊಳು, ನಾಲ್ವತ್ತು ಮೇಲೆ-ನಾಲ್ವತ್ತಕ್ಕೆ ಮೇಲೆ, ಎಂಟಧಿಕ–ಅಧಿಕ ಎಂದರೆ ನಾಲ್ವತ್ತೆಂಟು ಗುಣ ವಾಯುದೇವರಲ್ಲಿ, ಶಿವನೊಳಗೆ–ಉಮಾಪತಿಯಾದ ರುದ್ರದೇವರಲ್ಲಿ, ಇಪ್ಪತ್ತು–ಇಪ್ಪತ್ತು, ಇಟ್ಟನು – ಇಡುವನಾದ. ನಿರವದ್ಯ – ದೋಷ ದೂರನಾದ ಶ್ರೀ ನಾರಾಯಣದೇವರು, ಚಿತ್ತಜ–ಮನ್ಮಥ, ಇಂದ್ರರೊಳು–ಇಂದ್ರ ಇವರುಗಳಲ್ಲಿ, ದಶ–ಹತ್ತು, ಇದರಮೇಲೆ, ಐದಧಿಕ–ಐದು ಅಧಿಕ ಎಂದರೆ ಹದಿನೈದು ಇಂದ್ರ ಕಾಮರಲ್ಲಿ, ತತ್ತ್ವಮಾನಿಗಳೆನಿಪ–ತತ್ತ್ವಾಭಿಮಾನಿಗಳೆನಿಸತಕ್ಕ, ಮೇಲೆ ಹೇಳಿದವರು ಹೋಗತಾ ಉಳಿದ ಮುಖ್ಯಾಮುಖ್ಯ ತತ್ತ್ವಮಾನಿಗಳಾದ ಶತಸ್ಥರ ಪರ್ಯಂತ ದೇವತೆಗಳು, ಪುಷ್ಕರನ ಪರ್ಯಂತ ಕರ್ಮಜರು, ಏತಾದೃಶ ತತ್ತ್ವಾಭಿಮಾನಿಗಳೆಂದು ಎನಿಸುವ, ಸುರರೊಳು–ದೇವತೆಗಳಲ್ಲಿ, ಹತ್ತು–ಹತ್ತು, ಈರೈದು–ಎರಡು ಐದುಗಳು, (ಹತ್ತುಗುಣ), ಅಖಿಲ ಜೀವರೊಳು–ಇಪ್ಪತ್ತುನಾಲ್ಕು ಕೋಟಿ ದೇವಗಂಧರ್ವರ ಪರಿಯಂತ ಆಜಾನಜ ದೇವತೆಗಳು, ಆಜಾನಜರಲ್ಲಿ ಸೇರಿದ ನೂರು ಕಡಿಮೆ ನೂರು ಕೋಟಿ ಋಷಿಗಳು, ಮಾನುಷ ಗಂಧರ್ವರಾರಭ್ಯ ತೃಣಾಂತ ಮುಕ್ತಿಯೋಗ್ಯರು, ಏತಾದೃಶ ಅಖಿಲ ಜೀವರೊಳು, ಇಟ್ಟ–ಹತ್ತು ಗುಣ ಇಡೋವನಾಗಿದ್ದಾನೆಂದು ತಾತ್ಪರ್ಯ.

**ಕಲಿ ಮೊದಲುಗೊಂಡಖಿಳ ದಾನವ ।**
**ರೊಳಗೆ ನಾಲ್ವತ್ತೈದು ಈ ಪರಿ ।**
**ತಿಳಿದುಪಾಸನೆಮಾಡು ಮರೆಯದೆ ಪರಮಭಕುತಿಯಲಿ ॥**
**ಇಳೆಯೊಳಗೆ ಸಂಚರಿಸು ಲಕುಮೀ ।**
**ನಿಲಯನಾಳಾಳೆಂದು ಸರ್ವ ।**
**ಸ್ಥಳಗಳಲಿ ಸಂತೈಸುತಿಪ್ಪನು ಗೆಳೆಯನಂದದಲಿ ॥ ೩ ॥**

ಇನ್ನೂ ದತ್ತಸ್ವಾತಂತ್ರ್ಯ ವಿಭಾಗವೇ ಹೇಳತಾರೆ :–

ಕಲಿ ಮೊದಲುಗೊಂಡು – ಮುಕ್ತಿಯೋಗ್ಯರು ಉತ್ತಮರು, ಇವರಲ್ಲಿ ಪುರಂಜನ ಎಂಬುವ, ಆ ಗಣದ ತೃಣಜೀವಾಪೇಕ್ಷಯಾ, ನೀಚನು. ನಿತ್ಯಸಂಸಾರಿಗಳಲ್ಲಿ, ಇವ ಶ್ರೇಷ್ಠನು. ತಮೋಯೋಗ್ಯರು, ಅಧಮರು. ಇವರಲ್ಲಿ ಆ ಗಣದ ತೃಣಜೀವಾ ಪೇಕ್ಷಯಾ ನೀಚನು ; ತಮೋಯೋಗ್ಯರಲ್ಲಿ ಶ್ರೇಷ್ಠನಾದಂಥಾ ಕಲಿಯೇ ಆರಂಭಮಾಡಿ, ದಾನವ–ತೃಣಾಂತದವರಿಗೂ ಭಗವದ್ದ್ವೇಷಿಗಳಾದ ದೈತ್ಯರು, ಅಖಿಳರೊಳಗೆ–ಸಮಸ್ತರಾದ ನಿತ್ಯಸಂಸಾರಿಗಳು, ತಮೋಯೋಗ್ಯರು, ಈ ಉಭಯರೂ ಪರಮಾತ್ಮನ ದ್ವೇಷಿಗಳೇವೆ. ದೈತ್ಯರು ಪೂರ್ಣ ದ್ವೇಷಿಗಳು, ನಿತ್ಯಸಂಸಾರಿಗಳು ಮಿಶ್ರ ದ್ವೇಷಿಗಳು, ಅಂತು ಈ ಉಭಯರಲ್ಲಿ, ನಾಲ್ವತ್ತೈದು – ಕಲಿ ಆರಂಭಮಾಡಿ ತೃಣಾಂತದವರಿಗೂ, ಪುರಂಜನ ಆರಂಭಮಾಡಿ ತೃಣಾಂತದವರಿಗೂ, ಈ ಯಾವತ್ತರಲ್ಲೂ, ನಾಲ್ವತ್ತೈದು ಗುಣ ಇಡೋವ ನಾದ. ಅಂತು ಮೊತ್ತ ವಿವರ, ನಿತ್ಯಸಂಸಾರಿಗಳ ವಿಭಾಗವಿಚಾರ ನಾಲ್ಕನೇ ಶ್ಲೋಕದಲ್ಲಿ ಅದೆ,

ದೇವರು ತನ್ನ ಸ್ವಾಖ್ಯಸ್ವಾತಂತ್ರ್ಯ ನಾನ್ನೂರು ಗುಣ ಜೀವರಲ್ಲಿ ಇಡೋ ಕ್ರಮ :–

ದೇವರು ತನ್ನಲ್ಲಿ ಇಟ್ಟುಕೊಂಡು ಇರೋದು ೧೩೨-೩/೪, ಇದರಲ್ಲಿ

| | |
|---|---|
| ಸೃಷ್ಟ್ಯಾದಿ ಕಾರ್ಯಗಳಿಗೆ ಕಾರಣವಾದದ್ದು | ೧೨೯-೩/೪ |
| ಸ್ವಗತ ಸ್ವಾತಂತ್ರ್ಯವಿಭಾಗಕ್ಕೆ | ೧ |
| ಸರ್ವಸ್ವಾತಂತ್ರ್ಯವಿಭಾಗಕ್ಕೆ | ೧ |
| ರಮಾದೇವಿಯರ ಕೂಡ ಅಂಗಸಂಗ ಕಾರ್ಯಕ್ಕೆ | ೧ |
| | ೧೩೨-೩/೪ |
| ರಮಾದೇವಿಯರಲ್ಲಿ ಸೃಷ್ಟಿಗೆ ಕಾರಣವಾದದ್ದು | ೬೬-೧/೪ |
| ರಮಾದೇವಿಯರು ಪರಮಾತ್ಮನಾದ ತನ್ನ ಅಂಗಸಂಗ ವ್ಯಾಪಾರ ನಡೆಸತಕ್ಕ ಕಾರ್ಯಕ್ಕೆ. | ೧ |
| | ೬೭-೧/೪ |
| ಬ್ರಹ್ಮದೇವರಲ್ಲಿ ಸೃಷ್ಟ್ಯಾದಿ ಕಾರ್ಯಕ್ಕಾಗಿ : ಇದರ ಅಂಶವೇ ಸರಸ್ವತೀದೇವಿಯರಲ್ಲಿ. | ೫೨ |
| ವಾಯುದೇವರಲ್ಲಿ ಇಟ್ಟಿದ್ದು : | ೪೮ |

ಬ್ರಹ್ಮದೇವರಲ್ಲಿ ೫೨ ಆದರೂ, ಬ್ರಹ್ಮದೇವರಿಗೂ, ವಾಯುದೇವರಿಗೂ ಸಾಧನ ನ್ಯೂನಾಧಿಕ್ಯದಿಂದ, ಬ್ರಹ್ಮದೇವರಕಿಂತಲೂ ವಾಯುದೇವರು, ಪದಪ್ರಯುಕ್ತ ದಿಂದ ಕಿಂಚಿತ್ ಅಸ್ಪಷ್ಟದಿಂದ ಬ್ರಹ್ಮದೇವರ ೫೨ ಗುಣವು, ವಾಯುದೇವರ ೪೮ ಗುಣಕ್ಕೆ ಸಾಮ್ಯವಾಗುತ್ತದೆ. ಆದ್ದರಿಂದ, ೪೮ ಎಂತ ಪ್ರಯೋಗ. ಇದರ

ಅಂಶವೇ ಭಾರತೀದೇವಿಯರಲ್ಲಿ ಯಾವತ್ತೂ ಋಜುಗಳಿಗೆ, ಅವರ ಪತ್ನೇರಿಗೆ ವಾಯುದೇವರಲ್ಲಿ ಇಟ್ಟ ಗುಣದೊಳಗೆ, ಅಂಶ ವಿಭಾಗಮಾಡಿ ತಾರತಮ್ಯಾನುಸಾರ ಇಡೋವನಾಗಿದ್ದಾನೆ.

ರುದ್ರಗಣದಲ್ಲಿ : ೨೦

(ರುದ್ರ ಶಬ್ದದಿಂದ ಶೇಷದೇವರೂ ಗ್ರಾಹ್ಯ.) ಶೇಷಗಣ, ಗರುಡಗಣ, ಇವರಲ್ಲಿ ಇಪ್ಪತ್ತು. (ಈ ಗಣದವರ ಪತ್ನೇರು ಸಹಾ ಗ್ರಾಹ್ಯ.) ಯಾವತ್ತೂ ಇವರಲ್ಲಿ ಇಪ್ಪತ್ತರ ಅಂಶವೇ ಇಡೋವನಾಗಿದ್ದಾನೆ. ತಾರತಮ್ಯಾನುಸಾರ ಸಾಧನೆ, ಅವಶಿಷ್ಟದಿಂದ ಸ್ಪಷ್ಟತ್ವದಲ್ಲಿ ಭೇದ.

ಇಂದ್ರಕಾಮರ ಗಣದಲ್ಲಿ ವಿಭಾಗ ಪೂರ್ವೋಕ್ತಪ್ರಕಾರವೇ ಸಮನ್ವಯವು : ೧೫

ತತ್ತ್ವದೇವತೆಗಳು : ೧೦

ಅವರ ಪತ್ನಿಯರು, ಸಹ ಎಂದರೆ, ಮ್ಯಾಲೆ ಹೇಳಿದ ಬ್ರಹ್ಮಾದಿಗಳ ಸಹಿತ ಒಂಬತ್ತು ಕೋಟಿ ತತ್ತ್ವದೇವತೆಗಳು. ಅವರಲ್ಲಿ ಉಕ್ತರು ಹೋಗತಾ ಉಳದವರಲ್ಲಿ, ಹತ್ತು. ಈ ಹತ್ತರಲ್ಲೇ ಅಂಶವಿಭಾಗ ಮಾಡಿ ಇಡೋವನಾಗಿದ್ದಾನೆ.

ಮುಕ್ತಿಯೋಗ್ಯರಲ್ಲಿ : ೧೦

ಎಂದರೆ, ೨೪ ಕೋಟಿ ಆಜಾನಜರು. ಅವರಲ್ಲಿ ಸೇರಿದ ನೂರು ಕಡಿಮೆ, ನೂರು ಕೋಟಿ ಋಷಿಗಳು. ಮಾನುಷ ಗಂಧರ್ವರಾರಭ್ಯ ತೃಣಾಂತ, ಏತಾದೃಶರಾದ ಮುಕ್ತಿಯೋಗ್ಯರಲ್ಲಿ ಈ ಹತ್ತರಲ್ಲೇ ಅಂಶವಿಭಾಗಮಾಡಿ ಇಡೋವನಾಗಿದ್ದಾನೆ.

ಕಲ್ಯಾದಿ ನಿತ್ಯಸಂಸಾರಿಗಳಲ್ಲಿ : ೪೫

ಇದರನ್ನೇ ಅಂಶವಿಭಾಗಮಾಡಿ ಇಡೋವನಾಗಿದ್ದಾನೆ.

೪೦೦

ಇದರಲ್ಲಿ ಸಂಪೂರ್ಣಾಂಶಕ್ಕೆ ಅಧಿಕಾರಿಗಳು ಕೆಲವರು, ಒಂದು ಗುಣಾಂಶಕ್ಕೆ ಅಧಿಕಾರಿಗಳು ಕೆಲವರು, ಎರಡಕ್ಕೆ ಅಧಿಕಾರಿಗಳು ಕೆಲವರು, ಈ ಪ್ರಕಾರ ಜೀವರ ಸ್ವರೂಪಗತ ಅನಾದಿ ಸ್ವಾತಂತ್ರ್ಯತಾರತಮ್ಯಾನುಸಾರ, ಅಂಶ ವಿಭಾಗಮಾಡಿ ಇಡೋವನಾಗಿದ್ದಾನೆ. ಅದರಲ್ಲಿ ಸ್ಪಷ್ಟತ್ವತಾರತಮ್ಯವು ಇರೋದಾಗಿ ಅದೆ. ಇದರ ವಿವರ ಶಕ್ಯವಲ್ಲ. ಅಂತು, ಆಯಾ ಜೀವರ ಸ್ವರೂಪ ವಿವಕ್ಷಯಾ ದೇವರಸಹಿತ ೪೦೦ ಆಗತದೆ. ಅಧಿಕ ಆಗೋದಿಲ್ಲ. ೪೦೦, ವಿವಕ್ಷಯಾ ಎರಡು ಪ್ರಕಾರವು. ಪೂರ್ವೋಕ್ತ ಸ್ವಾತಂತ್ರ್ಯ ಸರ್ವಶಕ್ತಿ ಉಳ್ಳದ್ದಾದಕಾಲಕ್ಕೂ ಅಧಿಷ್ಠಾನಯೋಗ್ಯತಾನುಸಾರ ಕಾರ್ಯ ನಡಿಸುತ್ತದೆ. ಈ ಪರಿ ತಿಳಿದು–ಈ ಪ್ರಕಾರ ತಿಳಿದು, ಮರೆಯದೆ–ನಾನು ಅಸ್ವತಂತ್ರನಾದವ, ಈಶಾಧೀನನಾದವ, ಪ್ರತಿಕ್ಷಣದಲ್ಲಿ ಬಿಂಬಕ್ರಿಯಾದ್ವಾರಾ ಸರ್ವಕಾರ್ಯ ಮಾಡತಾನೆ ಎಂಬುವದು, ನಿನ್ನಲ್ಲೇನು, ಅನ್ಯವಾದ ಚರಾಚರದಲ್ಲೇನು ಮರಿಯಧಾಂಗೆ ಅನುಸಂಧಾನಮಾಡತಾ, ಪರಮಭಕುತಿಯಲಿ–ಅತ್ಯಂತ ಭಕ್ತಿಯಿಂದ, ಉಪಾಸನೆಮಾಡು–ನಿನ್ನ ಹೃದಯಾಕಾಶದಲ್ಲಿ ಪರಮಾತ್ಮನ

ಧ್ಯಾನೋಪಾಸನಮಾಡು. ಲಕ್ಷ್ಮೀನಿಲಯನ–ರಮಾದೇವಿಯರಿಗೆ ಆಶ್ರಯಭೂತನಾದ ಪರಮಾತ್ಮನ್ನ, ಸರ್ವಸ್ಥಳಗಳಲ್ಲಿ ಚಿಂತಿಸುತ್ತ (ಈ ಪರಮಾತ್ಮ), ಆಳ್ಕಾಳೆಂದು–ನಮ್ಮನ್ನು ಸಂರಕ್ಷಿಸಲಿ ಎಂದು ಪ್ರಾರ್ಥಿಸುತ್ತಾ, ಇಳೆಯೊಳಗೆ–ಈ ಭರತಖಂಡ ಭೂ ಪ್ರದೇಶದಲ್ಲಿ, ಸಂಚರಿಸು–ಸಂಚಾರಮಾಡೋವನಾಗು. ಈ ಪ್ರಕಾರ ಸಂಚರಿಸಿದರೆ ಸರ್ವತ್ರಗತನಾದ ಶ್ರೀಪರಮಾತ್ಮ ಆಯಾಸ್ಥಳಗಳಲ್ಲಿ ನಿನಗೆ ಬರತಕ್ಕ, ಆಪತ್ತು ದೋಷಗಳ, ಗೆಳೆಯನಂದ ದಲಿ–ಆಪತ್ಕಾಲದ ಸ್ನೇಹಿತನಂತೆ, ಸರ್ವಸ್ಥಳಗಳಲಿ–ಸರ್ವಪ್ರದೇಶದಲ್ಲಿ, ಸಂತೈಸುತಿಪ್ಪನು–ರಕ್ಷಿಸುತ್ತಾ ಇರುತ್ತಾನೆ. ಇದರಲ್ಲಿ ನಾನಾಪ್ರಕಾರ ವಿಚಾರಗಳು ಇರೋವಾಗಿ ಅವೆ. ಮುಖ್ಯ, ಸ್ವಾತಂತ್ರ್ಯ ವಿಭಾಗವಮಾಡಿ ಇಟ್ಟದ್ದಕ್ಕೆ, ಪರಮಾತ್ಮ ಪೂರ್ಣ ಸ್ವತಂತ್ರ, ಜೀವರು ಅಸ್ವತಂತ್ರರೆಂಬ ಮುಖ್ಯತತ್ತ್ವಗಳು, ಎರಡೂ ಅವಶ್ಯ ತಿಳಿಯಬೇಕು ಎಂತ ತಾತ್ಪರ್ಯ.

**ಅವನಿಪ ಸ್ವಾಮಿತ್ವ ಧರ್ಮವ ।**
**ಸ್ವವಶಮಾತ್ಯರಿಗಿತ್ತು ತಾ ಮ ।**
**ತ್ತವರ ಮುಖದಲಿ ರಾಜಕಾರ್ಯವ ಮಾಡಿಸುವ ತೆರದಿ ॥**
**ಕವಿಭಿರೀಡಿತ ತನ್ನ ಕಳೆಗಳ ।**
**ದಿವಿಜ ದಾನವ ಮಾನವರೊಳಿ ।**
**ಟ್ಟವಿರತ ಗುಣತ್ರಯಜ ಕರ್ಮವ ಮಾಡಿ ಮಾಡಿಸುವ ॥ ೪ ॥**

ಪರಮಾತ್ಮ ಸ್ವಾತಂತ್ರ್ಯವಿಭಾಗವಮಾಡಿ ಇಟ್ಟದ್ದು, ದೇವರ ಸ್ವರೂಪಭೂತಗಳೆಂದು ಹೇಳತಾರೆ.

ಅವನಿಪ–ಭೂಮಿಯನ್ನ ಪಾಲನೆಮಾಡತಕ್ಕ ರಾಜನ ರಾಜ್ಯಗತ ಸರ್ವಪ್ರಾಣಿಗಳು, ಅವರವರಿಗೆ ರಾಜ, ಪ್ರತ್ಯೇಕ ಅಧಿಕಾರಗಳ ಕೊಡದೇ ಇದ್ದರೂ, ಸ್ವವಶ–ರಾಜನಾದವನಿಗೆ ಪ್ರಜೆಗಳು ವಶವರ್ತಿಗಳಾಗೇ ಇರುತ್ತಾರೆ, ತನ್ನ ಅಧೀನರಲ್ಲ ಎಂತ ತಾತ್ಪರ್ಯವಲ್ಲ. ಸ್ವಾಮಿತ್ವ–ತನ್ನ ರಾಜ್ಯದಲ್ಲಿ ತನ್ನ ಯಜಮಾನತ್ವ, ತನ್ನ ರಾಜ್ಯಗತ ಸರ್ವಪ್ರಾಣಿಗಳಲ್ಲಿ ನೈಜವಾಗಿ ಇರೋದಾಗಿ ಅದೆ. ಧರ್ಮವ–ರಾಜನಾದವ ಪೂರ್ವೋಕ್ತಪ್ರಕಾರ ತನ್ನಲ್ಲಿ ಇರತಕ್ಕ ಸ್ವಾಮಿತ್ವ ಎನತಕ್ಕ ಶಾಸನಮಾಡತಕ್ಕ ಧರ್ಮವನ್ನ, ಅಮಾತ್ಯರಿಗಿತ್ತು–ಕೆಲವ ರನ್ನು ಮಂತ್ರಿಗಳನ್ನಾಗಿ ಮಾಡಿಕೊಂಡೂನೂ, ಕೆಲವರನ್ನು ಭೃತ್ಯರನ್ನಾಗಿ ಮಾಡಿ ಕೊಂಡೂನೂ, ಅವರಿಗೆ ಪ್ರತ್ಯೇಕಪ್ರತ್ಯೇಕವಾಗಿ ತನ್ನಲ್ಲಿ ಇರತಕ್ಕ ಸ್ವಾಮಿತ್ವಾಧಿಕಾರ ವನ್ನು, ವಾಕ್ಯಗಳೆಂಬ ಶಬ್ದದ್ವಾರಾ ಅವರಿಗೆ ತಿಳಿಸಿ, ಅವರ ಕರ್ಣಪುಟದಿಂದ ಒಳಗೆ ಪ್ರವೇಶಮಾಡಿಸಿ ಅವರಲ್ಲಿ ಇಡೋವನಾಗಿದ್ದಾನೆ. ಇವರು ತತ್ಪೂರ್ವದಲ್ಲಿ ರಾಜಾಧೀನರೇ. ಅಂಥಾವರಲ್ಲಿ ರಾಜನ ಧರ್ಮ ಪ್ರವೇಶವಾಗಿ ಅದೆ. ಆದರೂ, ಅದರ ಮೇಲೆ ರಾಜನ ಕಾರ್ಯ ಮಾಡೋದಕ್ಕಾಗಿ ಎರಡನೇದಾದ ಸ್ವಾಮಿತ್ವಪ್ರವೇಶವು. ಈ ಪ್ರಕಾರ ತನ್ನ ಸ್ವಾಮಿತ್ವ ಹೊಂದಿದವರು ಅವರವರು ರಾಜಾಜ್ಞೆ ಇಲ್ಲದೆ, ತಮ್ಮ ತಮ್ಮ ಇಚ್ಛಾನುಸಾರ ಪ್ರವರ್ತಿಸುತ್ತಾರಾ ಎಂದರೆ, ತಾ–ಈ ಪ್ರಕಾರ ಅವರವರಲ್ಲಿ ಅವರವರ ಯೋಗ್ಯತಾನುಸಾರ ತನ್ನ ಸ್ವಾಮಿತ್ವ ಇಟ್ಟ ರಾಜನಾದ ತಾನು, ಮತ್ತು–ಪ್ರತಿಕ್ಷಣದಲ್ಲಿ ಪ್ರತಿದಿನದಲ್ಲೂನೂ,

ಮತ್ತು ದಾವ ದಾವ ರಾಜಕಾರ್ಯಗಳು ಆಗಬೇಕೋ ಆ ಕಾರ್ಯಗಳ, ಭೃತ್ಯರಾದವರು ಮಾಡೋ ಉದ್ದಿಶ್ಯ, ಪುನಃ ಅಗಾಗ್ಗೆ ತನ್ನ ಆಜ್ಞಾ ಶ್ರವಣೇಂದ್ರಿಯ ದ್ವಾರಾ ಅವರ ಹೃದಯ ಪ್ರವೇಶಮಾಡಿಸಿ, ಅವರ ಮುಖದಲಿ–ಆ ಭೃತ್ಯರಾದವರ ದ್ವಾರಾ, ರಾಜ–ತನ್ನ ರಾಜ್ಯಕ್ಕೆ ಸ್ವಾಮಿಯಾದ ರಾಜನು, ಕಾರ್ಯವ ಅವರವರ ದೇಹೇಂದ್ರಿಯಗಳಿಂದ ವ್ಯಾಪಾರವ, ಮಾಡಿಸುವ–ಮಾಡಿಸೋವನಾಗತಾನೆ. ತದ್ವ್ಯತಿರಿಕ್ತ, ಅಧಿಕಾರ ಹೊಂದಿದವ ದಾವ ಕಾರ್ಯ ಮಾಡೋದಕ್ಕೂ ಸಮರ್ಥನಲ್ಲದೆ, ಅಧಿಕಾರ ಹೊಂದಿ ರಾಜಾಜ್ಞಾ ನಿರೀಕ್ಷಿಸುತ್ತಾ ಇರಬೇಕು. ರಾಜಾಜ್ಞಾ ಆಯಿತೆಂದರೆ ವ್ಯಾಪಾರ ಮಾಡತಾನೆ. ತೆರದಿ–ಈ ರಾಜ, ಭೃತ್ಯರ ದೃಷ್ಟಾಂತದೋಪಾದಿಯಲ್ಲಿ, ಕವಿಭಿರೀಡಿತ–ಜ್ಞಾನಿಗಳಾದ ಬ್ರಹ್ಮಾದಿಗಳಿಂದ ಸ್ತುತ್ಯನಾದ, ಹದಿನಾಲ್ಕು ಲೋಕಕ್ಕೆ ರಾಜನಾದ ಶ್ರೀ ನಾರಾಯಣದೇವರು, ಇವನ ರಾಜ್ಯವಾದ ಹದಿನಾಲ್ಕು ಲೋಕಗತ ಪ್ರಾಣಿಗಳಲ್ಲಿ, ಇವನ ಸ್ವಾಮಿತ್ವ ನೈಜವಾಗಿ ಅದೆ. ಎಲ್ಲಿ ಎಂದರೆ, ಆಯಾ ಜೀವರ ಅನಾದಿಸ್ವರೂಪಗತ ಸ್ವಾತಂತ್ರ್ಯಗುಣ ಬಿಂಬವಾಗಿ ಅನಾದ್ಯನಂತ ಕಾಲಕ್ಕೂ ಅವಿಯೋಗವಾಗಿ ಅದೆ. ಇಂಥಾ ತನ್ನ ಸ್ವಾಮಿತ್ವ ಜೀವರಲ್ಲಿ ನೈಜವಾಗಿ ಇರೋದಾಗಿ ಅದೆ. ಆ ಸ್ವಾಮಿತ್ವದ ಕಾರ್ಯ, ಜೀವರ ಸ್ವರೂಪ ಅಭಿವ್ಯಕ್ತಿ ಕಾಲದಲ್ಲಿ ಪ್ರಯೋಜಕವು. ತ್ರಿಗುಣಾತ್ಮಕ ಸ್ಥೂಲದೇಹ ಕಾರ್ಯಗಳಲ್ಲಿ ಅದು ಪ್ರಯೋಜನ ಮಾಡೋದಿಲ್ಲ. ಅದರ ನೇಮ ಹಾಂಗೇವೇ. ಆದ್ದರಿಂದ ಸ್ಥೂಲದೇಹ ಕಾರ್ಯಗಳ ಮಾಡೋ ನಿಮಿತ್ತ, ತನ್ನ ಕಳೆಗಳ–ನಾರಾಯಣನಾದ ತಾನು, ತನ್ನ ಸ್ವಕೀಯವಾದ ಸ್ವಾತಂತ್ರ್ಯಾಖ್ಯ ಕಳೆಗಳ ಎಂದರೆ, ಸ್ವತಂತ್ರವಿಭಾಗ ವಿಶೇಷಗಳು ಪೂರ್ವೋಕ್ತ ಪ್ರಕಾರ ನಾನ್ನೂರು ಕಳೆಗಳ ತೆಗೆದು, ತನ್ನಲ್ಲಿ, ರಮಾದೇವಿಯರಲ್ಲಿ ಇನ್ನೂರು ಕಳಾಸಾಂಕೇತ ಗುಣಗಳು ಹೋಗತಾ ಉಳಿದ ಇನ್ನೂರು ಒಳಗೆ, ದಿವಿಜ–ನೂರಐವತ್ತೈದು ಬ್ರಹ್ಮಾದಿ ತೃಣಾಂತ ಮುಕ್ತಿಯೋಗ್ಯರಲ್ಲಿ, ದಾನವಮಾನವರೊಳು–ನಲವತ್ತೈದು ದೈತ್ಯರಲ್ಲಿ, ನಿತ್ಯ ಸಂಸಾರಿಗಳಲ್ಲಿ, ಈ ಉಭಯಸಮೂಹರೊಳಗೆ, ಅಂತು ನಾನ್ನೂರು ಕಳೆಗಳ, ಇಟ್ಟು–ಈ ತ್ರಿವಿಧರಲ್ಲಿ ಇಡೋವನಾಗಿ ಎಂದರೆ, ಜೀವನ ಸ್ವರೂಪಭೂತಸ್ವಾತಂತ್ರ್ಯಗತ ತನ್ನ ಸ್ವಾತಂತ್ರ್ಯಗುಣದಲ್ಲಿ ವಿಭಾಗಮಾಡಿದ್ದರನ್ನ ಇಟ್ಟು, ಎರಡರಿಂದಲೂ ಸಹಿತನಾಗಿ ಜೀವನಲ್ಲಿ ಇದ್ದು, ಅವಿರತ–ವಿಯೋಗರಹಿತನಾಗಿ, ಗುಣತ್ರಯಜ–ಮೂಲ ಜಡಪ್ರಕೃತಿಯಾದ ಗುಣತ್ರಯಗಳಿಂದ ಜನಿತವಾದ ಸ್ಥೂಲದೇಹದಿಂದ ಆಗತಕ್ಕ, ಕರ್ಮವ–ತ್ರಿಗುಣಜನಿತ ತ್ರಿವಿಧ ಕರ್ಮಗಳ, ಮಾಡಿ–ಸ್ಥೂಲದೇಹದಲ್ಲಿ, ತದಾಕಾರದಿಂದ ಪ್ರಕಾಶತೋ ವ್ಯಾಪ್ತನಾದ ಜೀವನಲ್ಲಿ, ದೇಹದಲ್ಲಿ ತದಾಕಾರನಾದ ಬಿಂಬನಾಗಿ ಇದ್ದು, ಬಿಂಬಕ್ರಿಯಾ ತಾನು ಮಾಡಿ, ಮಾಡಿಸುವ–ತನ್ನ ಕ್ರಿಯಾದ್ವಾರಾ ದೇವತಾಕ್ರಿಯಾ, ತದ್ದ್ವಾರಾ ಜೀವನ ಕ್ರಿಯಾ, ತದ್ದ್ವಾರಾ ದೇಹಕ್ರಿಯಾ, ಈ ಪ್ರಕಾರ ಮಾಡಿಸೋವನಾಗತಾನೆ. ಅಧಿಕಾರ ಹೊಂದಿದ ಭೃತ್ಯ, ರಾಜಾಜ್ಞಾ ಹೊರತು ರಾಜಕಾರ್ಯ ಕಿಂಚಿತ್ತಾದರೂ ಮಾಡೋದಕೆ ಸಮರ್ಥನಲ್ಲ. ತದ್ವತ್, ಜೀವನಾದವನಲ್ಲಿ ಸ್ವತಂತ್ರಾಧಿಕಾರ ಪ್ರವೇಶಮಾಡಿ ಇದ್ದರೂ, ಸ್ವತಃ ಪ್ರವೃತ್ತಿ ಇಲ್ಲ ಎಂಬ ಮಾತ್ರಕ್ಕೆ ದೃಷ್ಟಾಂತವೆಂದು ತಾತ್ಪರ್ಯ.

ಪ್ರಮಾಣ :–

ಯಥಾ ರಾಜಾ ನಿಜಾಮಾತ್ಯಾನ್ದತ್ವಾ ಸ್ವಾತಂತ್ರ್ಯಮಾತ್ಮನಃ ।
ಕಾರ್ಯೇ ನಿಯೋಜ್ಯ ತತ್ರತ್ಯಾನ್ ಗುಣದೋಷಾಂಶ್ಚ ಪೃಚ್ಛತಿ ॥
ಬ್ರಹ್ಮಾಣಂ ಚ ತಥಾ ಪ್ರಾಣಂ ತಥಾನ್ಯಾನ್ ತತ್ತ್ವದೇವತಾಃ ।
ದೇಹೇ ನಿಯೋಜಯಾಂಚಕ್ರೇ ತಥಾ ಕಲ್ಯಾದಿಕಾನ್ ಸುರಾನ್ ॥
ತತ್ತತ್ಕಾರ್ಯಕೃತೌ ಶಕ್ತಿಃ ಸ್ವಾತಂತ್ರ್ಯಂ ಹಿ ಪುರಸ್ಕೃತಂ ।
ಶಕ್ತ್ಯಾ ಸ್ವದತ್ತಯಾಽಮಾತ್ಯೈಃ ಕೃತೇ ಕಾರ್ಯೇ ಸ ತುಷ್ಯತಿ ॥
ಸತ್ಯಾಂ ಶಕ್ತೌ ಕಾರ್ಯನಾಶೇ ಸ್ವಾಜ್ಞಾಮುಲ್ಲಂಘ್ಯ ವರ್ತತೇ ।
ಕುಪಿತ್ವಾ ದಂಡಯತ್ಯೇವಂ ತಥಾ ಕ್ರೀಡತ್ಯಯಂ ಹರಿಃ ॥
ನಿಯಂತೃತ್ವೇನ ಸರ್ವತ್ರ ತಿಷ್ಠನ್ ಜೀವೇಷು-ಸರ್ವದಾ ।
ಸ್ವಸ್ಮಿನ್ನರ್ಧಂ ಸ್ವತಂತ್ರತ್ವಂ ಸಮಾಧಾಯ ತದರ್ಧಕಂ ॥
ವಿಭಜ್ಯ ಶತಧಾ ಭೂಯೋಽಷ್ಟಚತ್ವಾರಿಂಶದಂಶಕಾನ್ ।
ಪ್ರಾಣೇ ಸ್ವಾತಂತ್ರ್ಯಮಾದಾಯ ದ್ವಿಪಂಚಾಶಚ್ಚ ವೇಧಸಿ ॥
ಪಾದಂ ಚತುರ್ಥಂ ಶತಧಾ ವಿಭಜ್ಯ ದಶಭಾಗಕಾನ್ ।
ಜೀವೇ ಸ್ವಾತಂತ್ರ್ಯಮಾದಾಯ ತತೋ ವಿಂಶತಿಭಾಗಕಾನ್ ॥
ಅಹಂಕಾರಾತ್ಮಕೇ ರುದ್ರೇ ತಥಾ ಬುಧೌ ನಿಧಾಯ ಚ ।
ಮನೋದೇವೇ ತತಶ್ಚಕ್ರೇ ಭಾಗಾನ್ ಪಂಚದಶೈವ ತು ॥
ತತ್ವದೇವೇ ದಶಾಂಶಶ್ಚ ಸ್ವಾತಂತ್ರ್ಯಂ ವಿದಧೇ ಹರಿಃ ।
ಪಂಚಚತ್ವಾರಿಂಶದಂಶಾನ್ ಕಲಿಮುಖ್ಯೇಷ್ವಧಾತ್ಸ್ವಯಂ ॥
ಈಶಸ್ವಾತಂತ್ರ್ಯಭಾಗೇಷು ಮಾಯಾಭಾಗಸ್ತೃತೀಯಕಃ ।
ಸ ಹಿ ಸರ್ವಜಗನ್ಮಾತಾ ಮೂಲಪ್ರಕೃತಿದೇವತಾ ॥
ಬ್ರಹ್ಮಾದಿದೇವಪಾಪಾನಿ ತೂಲವದ್ದಹತೇ ಹರಿಃ ।
ತದಾಜ್ಞಾಯಾ ಪ್ರವೃತ್ತತ್ವಾನ್ನ ತೇಷಾಂ ಪರಾಭವಃ ॥
ಪುಣ್ಯಕರ್ಮಸಹಾಯಾ ಯೇ ಪುಣ್ಯಾತ್ಮಾನಸ್ತು ಮಾನವಾಃ ।
ದೈತ್ಯಭಾಗಗತಾತ್ಪುಣ್ಯಾತ್ತೇಭ್ಯೋಂಶಂ ದದತೇ ಹರಿಃ ॥

ಎಂತ ತಾತ್ಪರ್ಯ.

**ಪುಣ್ಯಪಾಪಗಳೀ ತೆರದಿ ಕಾ ।**
**ರುಣ್ಯಸಾಗರ ದೇವದಾನವ ।**
**ಮಾನವರೊಳಿಟ್ಟವರ ಫಲವ್ಯತ್ಯಾಸವನೆ ಮಾಡಿ ॥**
**ಬನ್ನಬಡಿಸುವ ಭಕ್ತಿಹೀನರ ।**
**ಸನ್ನುತ ಸುಕರ್ಮಗಳ ತೆಗೆದು ಪ್ರ ।**
**ಪನ್ನರಿಗೆ ಕೊಟ್ಟವರ ಸುಖಬಡಿಸುವನು ಸುಭುಜಾಹ್ವ ॥ ೫ ॥**

ಸ್ಥಿತಿಕಾಲಾಪೇಕ್ಷಯಾ ಮೋಕ್ಷದಲ್ಲಿ ಫಲವ್ಯತ್ಯಾಸ ಮಾಡತಾನೆ ಎಂತ ಹೇಳತಾರೆ.

ಕಾರುಣ್ಯಸಾಗರ–ಆಯಾ ಪ್ರಾಣಿಗಳು ಸಾಧನೆ ಪೂರ್ತಿ ಮಾಡಿಕೊಂಡು ಅವರವರ ಸ್ವರೂಪಗತಿ ಐದೋವದಕ್ಕೋಸ್ಕರ ಕರುಣಾಸಮುದ್ರನಾದ ನಾರಾಯಣದೇವರು, ಈ ತೆರದಿ–ಈ ಪೂರ್ವೋಕ್ತ ಪ್ರಕಾರ, ದೇವ–ಬ್ರಹ್ಮದೇವರಾರಭ್ಯ ತೃಣಾಂತ ಮುಕ್ತಿಯೋಗ್ಯ ಜೀವರು, ದಾನವ–ಭಗವಂತನ ದ್ವೇಷಮಾಡತಕ್ಕ ಸ್ವರೂಪಸ್ವಭಾವವುಳ್ಳ ದೈತ್ಯರು. ಮಾನವರೊಳಿಟ್ಟು – ಪುರಂಜನ ಆರಂಭಮಾಡಿ ತೃಣಾಂತ ನಿತ್ಯಸಂಸಾರಿ ಜೀವರು, ಸ್ವರೂಪದಲ್ಲೇ ಸುಖದುಃಖ ಮಿಶ್ರವುಳ್ಳವರೆಂದು ತಾತ್ಪರ್ಯ. ತನ್ನ ಸ್ವಕೀಯವಾದ ಸ್ವಾತಂತ್ರ್ಯ ವಿಭಾಗಮಾಡಿ ಇವರೊಳಗೆ ಇಟ್ಟು, ಪುಣ್ಯಪಾಪಗಳ–ಸ್ಥಿತಿಕಾಲದಲ್ಲಿ ಅವರವರ ಅನಾದಿ ಜಡಕರ್ಮಗಳ ಅನುಸರಿಸಿ, ಸ್ಥೂಲದೇಹದಿಂದ ಪುಣ್ಯಪಾಪ ಕರ್ಮಗಳನ್ನು ತ್ರಿವಿಧರಿಂದಲೂ ಮಾಡಿಸಿ, ಅವರ–ಆಯಾ ತ್ರಿವಿಧಜೀವರ, ಫಲ–ಸ್ವರೂಪಕ್ಕೆ ಅನುಸರಿಸಿ ಫಲಗಳ, ಸಾಧನೆ ಕಾಲದಲ್ಲೇ ಕೊಡದೆ, ವ್ಯತ್ಯಾಸವನೆ ಮಾಡಿ–ಅದಕ್ಕೆ ಅನ್ಯಥಾವಾಗಿ ಮಾಡಿ, ಬನ್ನಬಡಿಸುವ–ತ್ರಿವಿಧ ಜೀವರನ್ನೂ ದುಃಖಬಡಿಸೋವನಾಗತಾನೆ. ಸ್ಥಿತಿ ಕಾಲದ ಕರ್ಮವನ್ನನುಸರಿಸಿದ ಸುಖದುಃಖಾದಿಗಳು ತ್ರಿವಿಧರಿಗೆ ಇರುತ್ತವೆ. ಲಿಂಗ ಭಂಗಾನಂತರ ಸ್ಥಿತಿಕಾಲದ ಕರ್ಮವನ್ನನುಸರಿಸಿದ, ಸುಖ ಫಲಭೋಗದೋಪಾದಿಯಲ್ಲಿ ಫಲಗಳ ಕೊಡದೆ, ಅದರನ್ನ ವ್ಯತ್ಯಾಸಮಾಡಿ ಭಕ್ತರಿಗೆ ಸುಖ, ದ್ವೇಷಿಗಳಿಗೆ ದುಃಖ, ಮಿಶ್ರರಿಗೆ ಮಿಶ್ರಫಲ ಕೊಡುತ್ತಾನೆ. ಸನ್ನುತ–ಸರ್ವೋತ್ತಮನೆಂದು ಭಕ್ತರಿಂದ ಛಂದಾಗಿ ನುತನಾದ ನಾರಾಯಣದೇವರು ಸ್ಥಿತಿಕಾಲದಲ್ಲಿ, ಭಕ್ತಿಹೀನರ–ಪರಮಾತ್ಮನ್ನ ಸರ್ವೋತ್ತಮನೆಂದು ತಿಳಿಯದೆ ಇರುವ ತಮೋಯೋಗ್ಯ ನಿತ್ಯಸಂಸಾರಿಗಳ, ಸುಕರ್ಮಗಳ ತೆಗೆದು–ಅನಾದಿ ಕರ್ಮವನ್ನನುಸರಿಸಿ ಮಾಡಿದ ಪುಣ್ಯ ಕರ್ಮಗಳ ತೆಗೆದುಕೊಂಡು, ಪ್ರಪನ್ನರಿಗೆ ಕೊಟ್ಟು–ತನ್ನ ಭಕ್ತರಾದ ಆಯಾ ಪ್ರಾಣಿಗಳ ಸ್ಥೂಲದೇಹಗತ ತತ್ತ್ವ ದೇವತೆಗಳಿಗೆ ಕೊಟ್ಟು, ಅವರ ಸುಖ ಬಡಿಸುವ–ಆ ತತ್ತ್ವ ದೇವತೆಗಳನ್ನ ಸುಖಪಡಿಸೋವನಾಗತಾನೆ. ತದ್ಗತ, ಸು–ಸಮಿಾಚೀನಗಳಾದ, ಭುಜ–ತನಗೆ ಭೋಜನಕ್ಕೆ ಯೋಗ್ಯಗಳಾದ ತನ್ನ ಸ್ವಾಖ್ಯಗಳ ತಾನು ಭುಂಜಿಸಿ, ಆಹ್ವ–ಸುಭುಜ ಎಂತ ಕರಿಸೋವನಾಗತಾನೆ. ತದ್ವತ್, ಭಕ್ತರ ಪಾಪಗಳ ದೈತ್ಯರಿಗೆ ಕೊಟ್ಟು ದುಃಖಪಡಿಸೋವನಾಗತಾನೆ. ದೈತ್ಯರಿಗೆ ಪುಣ್ಯ ಉಳಿಯೋದಿಲ್ಲವಾ ಎಂದರೆ, ಅದನ್ನ ಮುಂದಿನ ಶ್ಲೋಕದಲ್ಲಿ ಹೇಳತಾರೆ.

**ಮಾಣಿಕವ ಕೊಂಡಂಗಡಿಯೊಳಜಿ ।**
**ವಾನ ಕೊಟ್ಟಾಪುರುಷನ ಸಮಾ ।**
**ಧಾನ ಮಾಡುವ ತೆರದಿ ದೈತ್ಯರು ನಿತ್ಯದಲಿ ಮಾಳ್ಪ**
**ದಾನಯಜ್ಞಾದಿಗಳ ಫಲ ಯಜ ।**
**ಮಾನ ತಾನಪಹರಿಸಿ ಅಸಮಿಾ ।**
**ಚೀನ ಸುಖಗಳ ಕೊಟ್ಟು ಅಸುರರ ಮುತ್ತರನು ಮಾಳ್ಪ ॥ ೬ ॥**

ಭಗವದ್ದ್ವೇಷಿಗಳು ಅಪಕ್ವದಶಾದಲ್ಲಿ ಮಾಡಿದ ಪುಣ್ಯದೊಳಗೆ ನಿಲ್ಲತಕ್ಕ ಪುಣ್ಯಭಾಗ ಹೇಳತಾರೆ.

ಅಂಗಡಿಯೊಳು–ಅನೇಕ ವಿಧವಾದ ದಿನಸುಗಳ ಅಂಗಡಿಯಲ್ಲಿ ಇಟ್ಟುಕೊಂಡು ವ್ಯಾಪಾರ ಮಾಡತಕ್ಕ ಪುರುಷ, ಮಾಣಿಕವ ಕೊಂಡು–ಉತ್ತಮವಾದ ಮಾಣಿಕ್ಯವನ್ನು ಅನ್ಯಪುರುಷನಿಂದ ತಾನು ತೆಗೆದುಕೊಂಡು, ತನ್ನ ಅಂಗಡಿಯಲ್ಲಿ ಇರತಕ್ಕ, ಅಜಿವಾನ ಕೊಟ್ಟು–ಸ್ವಲ್ಪ ಬೆಲೆಯುಳ್ಳ ಓಮುವನ್ನ ಸ್ವಲ್ಪ ಕೊಟ್ಟು, ಆ ಪುರುಷನ–ಮಾಣಿಕ್ಯವನ್ನ ಕೊಟ್ಟ ಪುರುಷನ್ನ, ಸಮಾಧಾನ ಮಾಡುವ–ಮಾತುಗಳಿಂದ ಸಮಾಧಾನ ಮಾಡಿ, ಅಲ್ಪವಾದ ಅಜಿವಾನದಿಂದ ಪರಿಯವಸಾನ ಮಾಡೋವನಾಗತಾನೆ. ತೆರದಿ–ಈ ವರ್ತಕನೋಪಾದಿಯಲ್ಲಿ, ಅಸುರರ ದೇಹವೆಂಬ ಅಂಗಡಿ ಮನಿಯಲ್ಲಿ ನಾನಾ ವಿಧವಾದ ಸುಖ ದುಃಖಗಳೆಂಬೋ ಸರಕುಗಳು ಇಟ್ಟುಕೊಂಡು ವ್ಯಾಪಾರ ಮಾಡತಕ್ಕ, ಯಜಮಾನ–ಧಣಿಯಾದ ಪರಮಾತ್ಮನೆಂಬೋ ವರ್ತಕನು, ದೈತ್ಯರು–ವರ್ತಕಸದೃಶನಾದ ಪರಮಾತ್ಮಗೆ ಅನ್ಯರಾದ ದೈತ್ಯರು, ನಿತ್ಯದಲಿ ಮಾಳ್ಪ–ಪ್ರತಿದಿನದಲ್ಲಿ ಮಾಡತಕ್ಕ, ದಾನಯಜ್ಞಾದಿಗಳ–ದಾನವೇನು, ಯಜ್ಞಾದಿ ಪುಣ್ಯಕರ್ಮಗಳೇನು, ಇವುಗಳಿಂದ ಜನಿತಗಳಾದ, ಫಲ–ರತ್ನಕ್ಕೆ ಸದೃಶವಾದ ಉತ್ತಮ ಫಲಗಳ, ತಾನಪಹರಿಸಿ–ವರ್ತಕಸದೃಶನಾದ ಪರಮಾತ್ಮ ಪೂರ್ವೋಕ್ತ ರತ್ನದೋಪಾದಿಯಲ್ಲಿ ದೈತ್ಯರಲ್ಲಿ ಇದ್ದದ್ದು, ಅವರಿಗೆ ದಕ್ಕಗೊಡದೆ ತಾನು ಸ್ವೀಕಾರ ಮಾಡಿ, ಅಸಮೀಚೀನ–ರತ್ನದ ಬೆಲೆಗೆ ಓಮು ಹ್ಯಾಂಗೆ ಯೋಗ್ಯವಲ್ಲವೊ ಹಾಂಗೆ, ದಾನ ಯಜ್ಞಾದಿಗಳಿಗೆ ಯೋಗ್ಯವಲ್ಲದ ಅಲ್ಪವಾದ ಅಸಮೀಚೀನಗಳಾದ, ಸುಖಗಳ ಕೊಟ್ಟು–ತಾನು ಅಪಹರಿಸಿದ್ದಕ್ಕೆ ಪ್ರತ್ಯಾಮ್ನಾಯ, ಅಲ್ಪ ಸುಖಗಳ ಕೊಟ್ಟು ಅಷ್ಟು ಮಾತ್ರದಿಂದ ಸಂತೋಷಪಟ್ಟ ಇಂಥಾ, ಅಸುರರ–ದೈತ್ಯರನ್ನ, ಮತ್ತರನು ಮಾಳ್ಪ–ಮಹಾ ಉನ್ಮತ್ತರನ್ನ ಮಾಡಿ ಅಜ್ಞಾನಾಂಧಕಾರ ಅಧಿಕ ಮಾಡಿ ಅವರ ಸ್ವರೂಪ ಯೋಗ್ಯತಾನುಸಾರ ಖೇದಬಡಿಸುವ. ಪುಣ್ಯಫಲ ಸಮಗ್ರ ಅಪಹರಿಸದೆ ಸ್ವಲ್ಪ ಉಳಿಸಿ, ಭೋಗಕ್ಕೆ ಕೊಡತಾನೆ. ಅಪಹರಿಸೋಣ, ಕೊಡೋಣ ಎಂಬುದು ವಾಯು, ಗಂಧ ಅಪಹಾರಮಾಡಿ ಸರ್ವಪ್ರಾಣಿಗಳ ನಾಸಿಕೇಂದ್ರಿಯಕ್ಕೆ ತಂದುಕೊಟ್ಟೋಪಾದಿಯಲ್ಲಿ ಎಂತ ತಾತ್ಪರ್ಯ.

**ಏಣಲಾಂಛನನಮಲಕಿರಣ ಕ್ರ ।**
**ಮೇಣ ವೃದ್ಧಿಯನೈದಿ ಲೋಗರ ।**
**ಕಾಣಗೊಡದಿಹ ಕತ್ತಲೆಯ ಭಂಗಿಸುವ ತೆರದಂತೆ ॥**
**ವೈನತೇಯಾಂಸಗನ ಮೂರ್ತಿ ।**
**ಧ್ಯಾನವುಳ್ಳ ಮಹಾತ್ಮರಿಗೆ ಸು ।**
**ಜ್ಞಾನ ಭಕ್ತ್ಯಾದಿಗಳು ವರ್ಧಿಸಿ ಸುಖವ ಕೊಡುತಿಹವು ॥ ೭ ॥**

ಅನುಸಂಧಾನಪೂರ್ವಕ ಭಗವದ್ಭಕ್ತರು ಕರ್ಮಗಳ ಮಾಡಿ, ಭಗವದರ್ಪಣ ಮಾಡಿದವರಿಗೆ ಆಗತಕ್ಕ ಫಲ ಹೇಳತಾರೆ.

ಏಣಲಾಂಛನನ–ಜಿಂಕೆಯೋಪಾದಿಯಲ್ಲಿ ಚಿನ್ಹೆ ಉಳ್ಳ ಚಂದ್ರನ, ಅಮಲಕಿರಣ–ನಿರ್ಮಲವಾದಂಥಾ ಶಾಂತಕರವಾದಂಥಾ ಕಿರಣಗಳು, ಕ್ರಮೇಣ–ಶುಕ್ಲಪಕ್ಷ ಪ್ರತಿಪದಾರಭ್ಯ ಪೌರ್ಣಿಮಾವರಿಗೂ, ದಿನಕ್ರಮೇಣ, ವೃದ್ಧಿಯನೈದಿ–ತೇಜೋಬಾಹುಳ್ಯದಿಂದ ಅಭಿವೃದ್ಧಿಯನ್ನೈದಿ ಪೌರ್ಣಿಮಾ ದಿನದಲ್ಲಿ ಸಂಪೂರ್ಣ ತೇಜೋಯುಕ್ತವಾಗತವೆ. ತಮ್ಮ ಪ್ರಕಾಶದಿಂದ, ಲೋಗರ ಕಾಣಗೊಡದಿಹ–ದಿನಕ್ರಮದಿಂದ, ತೇಜೋಬಾಹುಳ್ಯದಿಂದ ಯುಕ್ತವಾಗತಾ, ತಮ್ಮ ಉದಯಾತ್ಪೂರ್ವದಲ್ಲಿ ಇರತಕ್ಕ ಪ್ರಾಣಿಗಳ ನೇತ್ರಕ್ಕೆ ದಾವುದೂ ಕಾಣಿಸದೆ ಇರುವ, ಕತ್ತಲೆಯ ಭಂಗಿಸುವ–ಅಂಧಕಾರವನ್ನ ಪರಿಹಾರ ಮಾಡುವ, ತೆರದಂತೆ–ಈ ಚಂದ್ರನ ಕಿರಣಗಳೋಪಾದಿಯಲ್ಲಿ, ಮುಕ್ತಿಯೋಗ್ಯರಲ್ಲಿ, ವೈನತೇಯ–ವಿನುತಾದೇವಿಯ ಪುತ್ರ ಗರುಡದೇವರ, ಅಂಸಗನ–ವಾಹನವಾಗಿ ಉಳ್ಳ ಶ್ರೀ ನಾರಾಯಣ ದೇವರ, ಧ್ಯಾನ–ಅಸಂಪ್ರಜ್ಞಾತ ಸಮಾಧಿಯುಕ್ತನಾಗಿ ಬಹಿಃ ದೃಷ್ಟಿ ಇಲ್ಲದೆ, ತನ್ನ ಹೃದಯಾಕಾಶದಲ್ಲಿ ಪರಮಾತ್ಮನ್ನ ಮನೋದೃಷ್ಟಿಯಿಂದ ನೋಡಿ, ಮೂರ್ತಿ–ಜೀವಾಂತರ್ಗತನಾದ ಬಿಂಬನ್ನ, ಸ್ವರೂಪದಲ್ಲಿ ನೈಜವಾಗಿ ಲಿಂಗಭಂಗವಾಗೋವರಿಗೂ, ಸ್ವರೂಪ ಸಿದ್ಧವಾದ ಈ ಉಪಾಸನಾ, ಸ್ವರೂಪದಲ್ಲಿ ಮಾಡಸತಾ ಇರತಾನೆ. ಪ್ರತಿಬಂಧಕಸಾಮಗ್ರಿಯಿಂದ ಬಾಹ್ಯದಲ್ಲಿ ವ್ಯಕ್ತವಾಗೋದಿಲ್ಲ. ವುಳ್ಳ–ಇಂಥಾ ಜ್ಞಾನಸ್ವರೂಪ ಸ್ವಭಾವದಲ್ಲಿ ಉಳ್ಳ, ಮಹಾತ್ಮರಿಗೆ–ಮಹಾತ್ಮರಾದ, ಭಗವದ್ಭಕ್ತಿ ಸ್ವರೂಪದಲ್ಲಿ ಉಳ್ಳವರಿಗೆ, ಸುಜ್ಞಾನ–ಸ್ವರೂಪಗತ ಹರಿಸರ್ವೋತ್ತಮ, ವಾಯುಜೀವೋತ್ತಮ, ತಾರತಮ್ಯ ಪಂಚಭೇದ ಸತ್ಯ ಎನತಕ್ಕ ಈ ಸುಜ್ಞಾನವೇನು, ಭಕ್ತ್ಯಾದಿಗಳು–ಭಕ್ತಿ ಏನು, ವೈರಾಗ್ಯವೇನು, ವರ್ಧಿಸಿ–ಚಂದ್ರಕಿರಣಗಳು ದಿನದಿನ ಅಭಿವೃದ್ಧಿ ಆಗೋಪಾದಿಯಲ್ಲಿ ಬಿಂಬಮೂರ್ತಿ, ಅಭಿವೃದ್ಧಿ ಮಾಡತಾ ಅಂಧಕಾರವೆಂಬ ಬಾಹ್ಯ ಪ್ರತಿಬಂಧಕದಿಂದ ಪ್ರಾಪ್ತವಾದ ಅಜ್ಞಾನಾಂಧಕಾರವನ್ನ ಕ್ರಮಾತ್ ಪರಿಹಾರಮಾಡಿ, ಸುಖವ ಕೊಡುತಿಹವು–ಚಂದ್ರಕಿರಣಗಳು ಹ್ಯಾಂಗೆ ಸುಖ ಕೊಡತವೋ, ತದ್ವತ್, ಸ್ವರೂಪಭೂತ ಜ್ಞಾನಭಕ್ತ್ಯಾದಿಗಳು ಪರಮಾತ್ಮನಿಂದ ಅಭಿವೃದ್ಧಿಯಾಗಿ, ತದ್ದ್ವಾರಾ ಅಂಧಕಾರ ಪರಿಹಾರಮಾಡಿ, ಸ್ವರೂಪ ಸುಖ ವ್ಯಕ್ತಮಾಡಿಕೊಡೋವಾಗತವೆ. ತದ್ವ್ಯತಿರಿಕ್ತ ಭಗವದ್ದ್ವೇಷಿಗಳಿಗೆ ಕೃಷ್ಣಪಕ್ಷದ ಚಂದ್ರನೋಪಾದಿಯಲ್ಲಿ, ಜ್ಞಾನಭಕ್ತಿಹೀನರನ್ನಾಗಿ ಮಾಡಿ, ತಮೋದುಃಖ ಐದಿಸೋವಾಗತವೆ. ಪೂರ್ವೋಕ್ತ ಸುಜ್ಞಾನ ಅಭಿವ್ಯಕ್ತಿಯಾಗಿ ತದ್ದ್ವಾರಾ ಬಾಹ್ಯದಲ್ಲಿ ಸತ್ಕರ್ಮಾನುಷ್ಠಾನಗಳ ಮಾಡಿ, ಭಗವದರ್ಪಣ ಮಾಡಿ, ಚಂದ್ರಕಿರಣಗಳೋಪಾದಿಯಲ್ಲಿ ಲಿಂಗಭಂಗವಾಗೋವರಿಗೂ, ಅಜ್ಞಾನಪರಿಹಾರಪೂರ್ವಕ ಜ್ಞಾನಭಕ್ತಿಗಳಿಂದ ಅಭಿವೃದ್ಧಿಯಾಗುತ್ತಾ ಇರತಾರೆ.

**ಜನಪನರಿಕೆಯ ಚೋರ ಪಗಲೊಳು ।**
**ಧನವ ಕದ್ದೊಯ್ದಾಯಲವನವ ।**
**ಗುಣಗಳೆಣಿಸದೆ ಪೊರೆವ ಕೊಡದಿರೆ ಶಿಕ್ಷಿಸುವ ತೆರದಿ ॥**

**ಅನುಚಿತೋಚಿತಕರ್ಮ ಕೃಷ್ಣಾ ।**
**ರ್ಪಣವೆನಲು ಕೈಗೊಂಡು ತನ್ನರ ।**
**ಮನೆಯೊಳಿಟ್ಟಾನಂದಬಡಿಸುವ ಮಾಧವಾನತರ ॥ ೮ ॥**

ದ್ವಂದ್ವ ಕರ್ಮವನ್ನು ಅರ್ಪಿಸಿದವರನ್ನ ರಕ್ಷಿಸತಾನೆ ಎಂತ ಹೇಳತಾರೆ.

ಜನಪನರಿಕೆಯ– ಜನಪನ–ತನ್ನ ರಾಜ್ಯಗತ ಜನಗಳ, ತನ್ನ ಶಾಸನದಿಂದ ಪಾಲನಿ ಮಾಡತಕ್ಕ ರಾಜನ ವಶವರ್ತಿಗಳಾದ ಚೋರ ಜನರು, ಅರಿಕೆಯ–ರಾಜ ತನ್ನ ಆಜ್ಞಾದಿಂದ ಚೋರತ್ವಮಾಡಿ, ಧನ ತಂದುಕೊಡೆಂದು ಆಜ್ಞಾಮಾಡತಾನೆ. ಇಂಥಾ ಆಜ್ಞಾದಿಂದ ಚೋರರು, ಪಗಲೊಳು–ಹಗಲಿನಲ್ಲಿ ನಿರ್ಭಯರಾಗಿ, ಚೋರ–ಕಳ್ಳತನ ಮಾಡತಕ್ಕ ಪುರುಷ, ಧನವ ಕದ್ದು–ಅನ್ಯರಲ್ಲಿ ಇರತಕ್ಕ ಧನವನ್ನ ಚೌರ್ಯಮಾಡಿ, ಒಯ್ದು–ಆ ಧನವನ್ನು ತೆಗೆದುಕೊಂಡು ಹೋಗಿ, ಈಯಲು–ರಾಜನಾದವನಿಗೆ ಕೊಟ್ಟರೆ, ಅವನ–ಆ ಚೌರ್ಯಮಾಡಿದ ಪುರುಷನ, ಅವಗುಣಗಳ–ರಾಜಾಜ್ಞಾದಿಂದ ಮಾಡಿದ ಕಾರ್ಯಗಳ ದೋಷತ್ವೇನ, ಎಣಿಸದೆ–ಎಣಿಸದೆ, ಒಳ್ಳೇ ಕಾರ್ಯವೆಂತ ತಿಳಿದು, ಪೊರೆವ–ಸಂರಕ್ಷಣೆ ಮಾಡೋವನಾಗತಾನೆ, ಶಿಕ್ಷಿಸೋದಿಲ್ಲ. ಕೊಡದಿರೆ–ರಾಜಾಜ್ಞಾದಿಂದ, ಚೋರತ್ವ ಮಾಡಿ ತಂದ ದ್ರವ್ಯವನ್ನು ರಾಜಗೆ ಕೊಡದೇ ಇದ್ದರೆ, ಶಿಕ್ಷಿಸುವ–ಚೋರತ್ವ ಮಾಡಿದ್ದು ದೋಷ ಎಂತ ತಿಳಿದು ಶಿಕ್ಷೆಮಾಡತಾನೆ. ತೆರದಿ–ಈ ರಾಜನೋಪಾದಿಯಲ್ಲಿ, ಈ ಹದಿನಾಲ್ಕು ಲೋಕಕ್ಕೆ ರಾಜನಾದವ ಪರಮಾತ್ಮ. ಅವನ ವಶವರ್ತಿಗಳು ಸರ್ವ ಪ್ರಾಣಿಗಳು. ಸ್ಥೂಲ ದೇಹಾಖ್ಯ ಪ್ರತಿ ಪಟ್ಟಣದಲ್ಲೂ ವಿದ್ಯಮಾನರಾದ ಪ್ರತಿಯೊಂದು ಜೀವರಲ್ಲೂ ಬಿಂಬನಾಗಿ, ಒಂದೊಂದೇ ರೂಪದಿಂದ ಅವರವರಿಗೆ ರಾಜನಾಗಿದ್ದಾನೆ. ಆ ಜೀವರು ರಾಜಾಜ್ಞಾಧಾರಕರಾಗಿ ಇದ್ದಾರೆ. ಇವರ ಅಂತರ್ಗತನಾದ ಬಿಂಬಸಾಂಕೇತನಾದ ರಾಜನಕ್ರಿಯಾದಿಂದ ಪ್ರತಿಬಿಂಬನಾದ ಜೀವನ ಕ್ರಿಯಾ, ಜೀವನ ದ್ವಾರಾ ಸ್ಥೂಲದೇಹಕ್ರಿಯಾ ಆಗತದೆ. ಭಗವದಾಜ್ಞಾದಿಂದ ತದಧೀನನಾದ, ಪ್ರತಿಬಿಂಬ ಮಾಡಿದ, ಅನುಚಿತ–ಪಾಪ ಕರ್ಮಗಳು, ಉಚಿತ–ಪುಣ್ಯಕರ್ಮಗಳು, ಕರ್ಮ–ಈ ಉಭಯ ಕರ್ಮಗಳು, ಕೃಷ್ಣಾರ್ಪಣವೆನಲು–ಚೋರ ಕಳ್ಳತನಮಾಡಿದ ದ್ರವ್ಯ ರಾಜಗೆ ಕೊಟ್ಟಂತೆ, ಮಹಾರಾಜನಾದ ಬಿಂಬನ ಆಜ್ಞಾದಿಂದ ಮಾಡಿದ ಧನಸಾಂಕೇತವಾದ ಕರ್ಮಗಳ, ಕೃಷ್ಣಸಾಂಕೇತ ಬಿಂಬಗೆ 'ಅರ್ಪಣೆ' ಎಂತ ಅಂದು ಅವಗೆ ಕೊಟ್ಟರೆ, ಕೈಗೊಂಡು–ಅದರನ್ನ ಸ್ವಿಕಾರಮಾಡಿ, ಮಾಧವ–ಲಕ್ಷ್ಮೀಪತಿಯಾದ ಶ್ರೀ ನಾರಾಯಣದೇವರು, ಆನತರ–ಸ್ವರೂಪಸ್ವಭಾವದಲ್ಲಿ ಛಂದಾಗಿ ಸರ್ವೋತ್ತಮನೆಂದು ತಿಳಿದು, ವಂದನ ಮಾಡತಕ್ಕ ಅನಾದಿಸ್ವಭಾವವುಳ್ಳ ದ್ವಂದ್ವಕರ್ಮ ಅರ್ಪಿಸತಕ್ಕ ತನ್ನ ಭಕ್ತರ, ತನ್ನರಮನೆಯೊಳು–ತನ್ನ ವೈಕುಂಠಾದಿ ಧಾಮತ್ರಯದೊಳು, ಇಟ್ಟು–ಲಿಂಗಭಂಗ ಐದಿಸಿ ಇಟ್ಟು, ಆನಂದ ಬಡಿಸುವ–ಆಯಾ ಜೀವರ ಸ್ವರೂಪಾನಂದದಿಂದ ಅವರವರನ್ನ ಸುಖಪಡಿಸತಾನೆ. ಚೌರ್ಯದ್ರವ್ಯ ಕೊಡದವನ, ರಾಜ ಹ್ಯಾಂಗೆ ಶಿಕ್ಷಿಸತಾನೋ ತದ್ವತ್ ಕರ್ಮಗಳ ಅರ್ಪಿಸದಂಥಾ, ತಮೋಯೋಗ್ಯ

ನಿತ್ಯಸಂಸಾರಿಗಳನ್ನ ಅಂಧಂತಮಸ್ಸಿನಲ್ಲಿ ಇಟ್ಟು ಅವರವರ ಸ್ವರೂಪವನುಸರಿಸಿದ ದುಃಖಾದಿ ಗಳಿಂದ ದುಃಖಪಡಿಸೋವನಾಗತಾನೆ ಎಂತ ತಾತ್ಪರ್ಯ.

**ಅನ್ನದನ್ನಾದನ್ನನಾಮಕ ।**
**ಮುನ್ನೆ ಪೇಳ್ದ ಪ್ರಕಾರ ಜೀವರೊ ।**
**ಳನ್ನರೂಪ ಪ್ರವೇಶಗೈದವರವರ ವ್ಯಾಪಾರ ॥**
**ಬನ್ನಬಡದಲೆ ಮಾಡಿ ಮಾಡಿಸಿ ।**
**ಧನ್ಯರಿವರಹುದೆಂದೆನಿಸಿ ತ್ರೈ ।**
**ಗುಣ್ಯವರ್ಜಿತ ತತ್ತದಾಹ್ವಯನಾಗಿ ಕರೆಸುವನು ॥ ೯ ॥**

ದ್ವಂದ್ವ ಕರ್ಮಗಳ ಬಿಂಬನೇ ಸ್ಥೂಲದೇಹದಿಂದ ಮಾಡಿಸತಾನೆಂದು ಹೇಳತಾರೆ.

ಅನ್ನದ–ಸ್ಥೂಲದೇಹಕ್ಕೆ ಉಪಚಯವಾಗತಕ್ಕ ಅನ್ನವನ್ನ, ಅನಿರುದ್ಧ ಅನ್ನಾಧಿಷ್ಠಾನದಲ್ಲಿ ಇದ್ದು ಕೊಡತಕ್ಕವ. ಅನ್ನಾದ–(ಅದ) ಭಕ್ಷಣೇ. ಸ್ಥೂಲದೇಹದ ಮುಖದ್ವಾರಗತನಾಗಿ ಅನ್ನ ಭಕ್ಷಿಸತಕ್ಕವ, ಪ್ರದ್ಯುಮ್ನ. ಮುನ್ನೆ–ಇದಕ್ಕೆ ಪೂರ್ವದಲ್ಲಿ ಪಿತೃಗಣಸಂಧಿಯಲ್ಲಿ, ಪೇಳ್ದ ಪ್ರಕಾರ–ಪೇಳಿದೋಪಾದಿಯಲ್ಲಿ, ಅನ್ನನಾಮಕ–ಅನ್ನ ನಾಮದಿಂದ ಇದ್ದಾನೆ. ಅದರ ವಿವರ: – ೧) ದೇವತೆಗಳಿಗೆ ಸ್ವಾಹಾಖ್ಯ ಅನ್ನ; ವಾಸುದೇವ, 'ಸ್ವಾಹಾ' ನಾಮದಿಂದ ಇದ್ದಾನೆ. ೨) ಪಿತೃದೇವತೆಗಳಿಗೆ ಸ್ವಧಾಖ್ಯ ಅನ್ನ; ಸಂಕರ್ಷಣ, 'ಸ್ವಧಾ' ನಾಮದಿಂದ ಇದ್ದಾನೆ. ೩) ಮಾನುಷರಿಗೆ ಫಲಾಖ್ಯ ಅನ್ನ; ಪ್ರದ್ಯುಮ್ನ, 'ಫಲ' ನಾಮದಿಂದ ಇದ್ದಾನೆ. ೪) ಪಶುಗಳಿಗೆ ತೃಣಾಖ್ಯ ಅನ್ನ; ಅನಿರುದ್ಧ, 'ತೃಣ' ನಾಮದಿಂದ ಇದ್ದಾನೆ. ಈ ಪ್ರಕಾರ, ಅನ್ನನಾಮದಿಂದ ಪರಮಾತ್ಮ ಇರೋವನಾಗಿದ್ದಾನೆ. ಜೀವರೊಳು–ಪೂರ್ವೋಕ್ತ ಸ್ಥೂಲದೇಹಕ್ಕೆ ಸೇರತಕ್ಕ ಚತುರ್ವಿಧ ಅನ್ನವನ್ನ, ಸ್ಥೂಲದೇಹದ್ವಾರಾ ಭೋಜನಮಾಡತಕ್ಕ, ಸ್ಥೂಲದೇಹಾಕಾರದಂತೆ ವ್ಯಾಪ್ತರಾದ ತ್ರಿವಿಧರೊಳು ಬಿಂಬನಾಗಿದ್ದು, ಭೋಜನಾದಿ ಇಚ್ಛಾಗಳ ಪ್ರೇರಿಸಿ, ಅನ್ನರೂಪ–ಅನ್ನದಲ್ಲಿ ಅನ್ನರೂಪನಾಗಿ, ಅನ್ನದಿಂದ ಅವಿಯೋಗನಾಗಿ ಜಡಾನ್ನಸಹಿತನಾಗಿ, ಪ್ರವೇಶಗೈದು–ತನ್ನ ಕ್ರಿಯಾದ್ವಾರಾ, ಜೀವನ ಕ್ರಿಯಾದ್ವಾರಾ, ಸ್ಥೂಲದೇಹದ ಕ್ರಿಯಾದ್ವಾರಾ, ಆಯಾ ಜೀವರ ಸ್ಥೂಲದೇಹದ ಮುಖದ್ವಾರದಿಂದ, ಸ್ಥೂಲದೇಹದ ಒಳಗೆ ಪ್ರವೇಶಮಾಡಿ ಆಯಾ ಸ್ಥೂಲದೇಹಗಳಿಗೆ ಜಡರಸ ಉಪಚಯಮಾಡಿ, ತನ್ನ ಸ್ವಾಖ್ಯ ತಾನು ಸ್ವೀಕಾರಮಾಡಿ, ಜಡರಸ ಜೀವರಿಗೆ ಉಪಚಯವಲ್ಲದ ಕಾಲಕ್ಕೂ, ದೇಹಾಭಿಮಾನದಿಂದ 'ನಾನು ಉಂಡೆ' ಎಂಬ ಜ್ಞಾನ ಪ್ರೇರಿಸಿ ತದ್ದ್ವಾರಾ, ಅವರ ಸಂತೋಷಪಡಿಸಿ, ಈ ಪ್ರಕಾರದಿಂದ ಅನ್ನ ರೂಪದಿಂದ ಪ್ರವೇಶಮಾಡಿ, ಸ್ಥೂಲೇಂದ್ರಿಯಾದಿಗಳಲ್ಲಿ ಬಿಂಬನಾಗಿದ್ದು, ಅವರವರ ವ್ಯಾಪಾರ–ಆಯಾ ಪ್ರಾಣಿಗಳ ಸ್ಥೂಲದೇಹೇಂದ್ರಿಯಾದಿಗಳಿಂದ ಮಾಡತಕ್ಕ ಕೆಲಸಗಳ, ಅವರ ದ್ವಾರಾ ಬಿಂಬನಾದ ಪರಮಾತ್ಮ, ಬನ್ನಬಡದಲೆ–ಆಯಾಸಪಡದಲೆ, ತ್ರೈಗುಣ್ಯ

ವರ್ಜಿತ–ಪ್ರಾಕೃತ ತ್ರಿಗುಣಗಳಿಂದ ದೂರನಾದ ಶ್ರೀದೇವರು, ತತ್ತದಾಹ್ವಯನಾಗಿ– ಆಯಾ ಇಂದ್ರಿಯನಾಮದಿಂದ, ಇಂದ್ರಿಯಾಕಾರದಿಂದ, ಸ್ಥೂಲೇಂದ್ರಿಯಗಳಲ್ಲಿದ್ದು, ಮಾಡಿ ಮಾಡಿಸಿ–ಬಿಂಬಕ್ರಿಯಾದ್ವಾರಾ ಸ್ಥೂಲದೇಹೇಂದ್ರಿಯಾದಿಗಳಿಂದ ದ್ವಂದ್ವ ಕರ್ಮ ಗಳ ಮಾಡಿ, ಮಾಡಿಸಿ, ಇವರು–ಈ ಪ್ರಕಾರ ಬಿಂಬಕ್ರಿಯಾದ್ವಾರಾ, ಪ್ರತಿಬಿಂಬಕ್ರಿಯಾ ಆಗತದೆ ಎಂದು ತಿಳಿದು ಅಹಂ ಮಮತಾದಿಗಳ ತ್ಯಜಿಸಿ, ಪೂರ್ವೋಕ್ತಪ್ರಕಾರ, ದ್ವಂದ್ವ ಕರ್ಮಗಳ ಅರ್ಪಿಸತಕ್ಕ ಈ ಅಧಿಕಾರಿಗಳು, ಧನ್ಯರು–ಸಂಸಾರ ಸಮುದ್ರ ದಾಟಿ ಕೃತಾರ್ಥರು ಎಂತಲೂ, ಅಹುದು–ನಿಶ್ಚಯವೆಂತಲೂ, ಎಂದೆನಿಸಿ–ದೇಹಗತ ತತ್ತ್ವ ದೇವತೆಗಳಿಂದಲೂ, ಭಗವದ್ಭಕ್ತರುಗಳಿಂದಲೂ, ಅನಿಸಿದವನಾಗಿ, ಕರೆಸುವನು–ದೇಹಾಂ ತರ್ಗತನಾಗಿ ಬಿಂಬ ಎಂತ ಹೇಳಿಸಿಕೊಳ್ಳಲ್ಪಡತಾನೆ. ಮತ್ತು ಇಂಥಾ ಅಧಿಕಾರಿ, ದೇವತೆ ಗಳಿಂದಲೂ, ಜ್ಞಾನಿಗಳಿಂದಲೂ, ಮಾನುಷರಿಂದಲೂ ಧನ್ಯ ಎಂತ ಕರಿಸೋವನಾಗತಾನೆ, ಎಂತ ತಾತ್ಪರ್ಯ.

**ಸಲಿಲಬಿಂದು ಪಯೋಬ್ಧಿಯೊಳು ಬೀ ।**
**ಳಲು ವಿಕಾರವನೈದಬಲ್ಲುದೆ ।**
**ಜಲವು ತದ್ರೂಪವನೆ ಐದುವುದೆಲ್ಲಕಾಲದಲಿ ॥**
**ಕಲಿಮಲಾಪಹನರ್ಚಿಸುವ ಸ ।**
**ತ್ಕುಲಜರ ಕುಕರ್ಮಗಳು ತಾನಿ ।**
**ಷ್ಕಲುಷಕರ್ಮಗಳಾಗಿ ಪುರುಷಾರ್ಥಗಳ ಕೊಡುತಿಹವು ॥ ೧೦ ॥**

ಭಗವದ್ಭಕ್ತರ ದುಷ್ಕರ್ಮಗಳು ಸುಕರ್ಮಗಳಾಗುತ್ತವೆ ಎಂತ ಹೇಳತಾರೆ.

ಸಲಿಲಬಿಂದು – ಉದಕ ಬಿಂದು, ಪಯೋಬ್ಧಿಯೊಳು – ಕ್ಷೀರ ಸಮುದ್ರದೊಳಗೆ, ಬೀಳಲು–ಬಿದ್ದರೆ, ವಿಕಾರವನು–ಉದಕ ಬಿಂದು ಸಂಬಂಧದಿಂದ ಕ್ಷೀರ ಸಮುದ್ರಗತ ಕ್ಷೀರ, ವಿಕಾರವು ಎಂದರೆ, ತನ್ನ ಶುಭ್ರವರ್ಣ ಹೋಗಿ ಜಲಬಿಂದು ವರ್ಣದೋಪಾದಿಯಲ್ಲಿ ವಿಕಾರವ, ಐದಬಲ್ಲುದೇ–ಐದೋದಕ್ಕೆ ಆಗೋದೇ, ಅರಿಯೋದೆ? ಅರಿಯಲಾರದು, ಜಲಬಿಂದುವತ್ ವರ್ಣವಿಶಿಷ್ಟವಾಗದೆ ಶುಭ್ರವರ್ಣವಾಗೇ ಇರುತ್ತದೆ ಎಂತ ತಾತ್ಪರ್ಯ. ಜಲವು–ಕ್ಷೀರ ಸಮುದ್ರಗತ ಕ್ಷೀರದಲ್ಲಿ ಬಿದ್ದ ಬಿಂದೋದಕವು, ತದ್ರೂಪವನೆ ಐದುವದು– ಆ ಕ್ಷೀರದೋಪಾದಿಯಲ್ಲಿ ತಾನೂನೂ ಶುಭ್ರವಾದ ರೂಪ ಐದೋದಾಗತದೆ. ಇದರೋ ಪಾದಿಯಲ್ಲಿ, ಕಲಿಮಲಾಪಹನ–ಕ್ಷೀರಸಮುದ್ರದಲ್ಲಿ ಬಿದ್ದ ಜಲವನ್ನ ಆ ಕ್ಷೀರ, ತದ್ದೋಷ ಪರಿಹಾರ ಮಾಡಿ ಕ್ಷೀರವನ್ನ ಮಾಡಿದಂತೆ, ಕಲಿಮಲವೆನತಕ್ಕ ಉದಕಬಿಂದು ಸದೃಶವಾದ ದೋಷಗಳ ಅಪಹರಿಸತಕ್ಕ ಕ್ಷೀರಸಮುದ್ರಸದೃಶನಾದ ಪರಮಾತ್ಮ, ಎಲ್ಲ ಕಾಲದಲಿ– ಸರ್ವಕಾಲದಲ್ಲಿ, ಅರ್ಚಿಸುವ–ಮರಿಯದೆ ಸರ್ವ ಶುಭಾಶುಭ ಕರ್ಮಗಳಲ್ಲಿ ಕರ್ಮಕ್ಕೆ ಕಾರಣಭೂತವಾದ ದೇಹೇಂದ್ರಿಯಾದಿಗಳಲ್ಲಿ ಭಗವಂತನ ಚಿಂತಿಸುತ್ತಾ, ಬಿಂಬಕ್ರಿಯಾ ಪ್ರತಿಬಿಂಬಕ್ರಿಯಾ ತಿಳಿಯುತ್ತಾ, ಹೃದಯಗತ ಬಿಂಬನಲ್ಲಿ ಪೂರ್ವೋಕ್ತ ಅಧಿಷ್ಠಾನಗತ

ಭಗವದ್ರೂಪಗಳ, ಐಕ್ಯಚಿಂತನಾರೂಪದಿಂದ ನಿಸ್ಪೃಹನಾಗಿ ಅರ್ಚನಿ ಮಾಡುವ, ಸತ್ಕುಲಜರ–ನಿರ್ದುಷ್ಟಗಳಾದ ಶ್ರೀ ಮಧ್ವಾಚಾರ್ಯರ ಶಾಸ್ತ್ರವೋಹದಿಂದ ಉತ್ಪನ್ನವಾದ ಜ್ಞಾನವುಳ್ಳವರು ದಾರೋ ಅವರು, ಸತ್ಕುಲಜರೆಂದು ತಾತ್ಪರ್ಯ. ಉಕ್ತ ಪ್ರಕಾರ ಅರ್ಚನಿ ಮಾಡುವ ಇಂಥಾ ಭಗವದ್ಭಕ್ತರ, ಕುಕರ್ಮಗಳು–ದೋಷ ಕರ್ಮಗಳು, ತಾ– ತಾನು ಮಾಡಿದ ಅನುಸಂಧಾನ ಬಲದಿಂದ, ನಿಷ್ಕಲುಷ ಕರ್ಮಗಳಾಗಿ–ಕ್ಷೀರಸಮುದ್ರ ದಲ್ಲಿ ಬಿದ್ದ ಉದಕ, ಹ್ಯಾಂಗೆ ಕ್ಷೀರತ್ವ ಐದಿತೋ ಹಾಂಗೆ ಕ್ಷೀರಸಮುದ್ರಕ್ಕೆ ಸದೃಶನಾದ ಪರಮಾತ್ಮಗೆ, ಪಾಪಕರ್ಮಗಳೆಂಬ ಉದಕ ಬಿಂದುಗಳು ಸೇರಸೋಣದರಿಂದ, ಇವೂನೂ ದೋಷರಹಿತ ಪುಣ್ಯಕರ್ಮಗಳಾಗಿ, ಪುರುಷಾರ್ಥಗಳ – ಅಧಿಕಾರಿಯಾದ ಪುರುಷಗೆ ಭಗವದ್ದರ್ಶನಾಖ್ಯ ಪ್ರಯೋಜನಕ್ಕೆ ನಿರ್ಮೂಲವಾಗಿ ಮಾರ್ಗಗಳ, ಕೊಡುತಿಹವು– ತೋರಿಸಿಕೊಡುತ್ತಾ ಇರೋವಾಗುತ್ತವೆ.

**ಮೊಗದೊಳಗೆ ಮೊಗವಿಟ್ಟು ಮುದ್ದಿಸಿ ।**
**ಮುಗುವಿನಂ ಬಿಗಿದಪ್ಪಿ ಸ್ನೇಹದಿ ।**
**ತೆಗೆದು ತನ್ನ ಸ್ತನಗಳುಣಿಸುವ ಜನನಿಯಂದದಲಿ ॥**
**ಅಗಣಿತಾತ್ಮನು ತನ್ನ ಪಾದಾ ।**
**ಬ್ಜಗಳ ಧೇನಿಪ ಭಕ್ತಜನರಿಗೆ ।**
**ಪ್ರಘಟಿಕನು ತಾನಾಗಿ ಸೌಖ್ಯಗಳೀವ ಸರ್ವತ್ರ ॥ ೧೧ ॥**

ಪೂರ್ವೋಕ್ತ ಪ್ರಕಾರ ಅರ್ಚಿಸತಕ್ಕವರಿಗೆ, ತನ್ನ ಅಪರೋಕ್ಷ ಕೊಡತಾನೆ ಎಂತ ಹೇಳತಾರೆ.

ಜನನಿಯು–ತಾಯಿಯಾದವಳು, ಸ್ನೇಹದಿ–ತನ್ನಲ್ಲಿ ಅತ್ಯಂತ ಪ್ರೀತಿಯಲ್ಲಿರುವ, ತನ್ನ–ತನ್ನ ಗರ್ಭದಲ್ಲಿ ಜನನವಾದ, ಮಗುವಿನಂ–ಶಿಶುವನ್ನು, ತೆಗೆದು–ಕರಗಳಿಂದ ಎತ್ತಿ ಕೊಂಡಂಥಾವಳಾಗಿ, ಮೊಗದೊಳಗೆ–ಶಿಶುವಿನ ಮುಖದಲ್ಲಿ, ಮೊಗವಿಟ್ಟು–ತನ್ನ ಮುಖ ವನ್ನಿಟ್ಟು, ಮುದ್ದಿಸಿ–ಮುದ್ದು ಇಟ್ಟುಕೊಂಡವಳಾಗಿ, ಬಿಗಿದಪ್ಪಿ–ಸಂತೋಷದಿಂದ ತಾಯಿ ಆಲಿಂಗನ ಮಾಡಿ, ಸ್ತನಗಳ–ಕ್ಷೀರಯುಕ್ತವಾದ ಸ್ತನಗಳ, ಉಣಿಸುವ–ಶಿಶುವಿಗೆ ಕ್ಷೀರ, ಸ್ತನಗಳ ದ್ವಾರಾ ಉಣಸತಾಳೆ. ಅಂದದಲಿ–ಈ ತಾಯಿಯೋಪಾದಿಯಲ್ಲಿ, ಅಗಣಿತ– ಗಣಿತದಿಂದ ರಹಿತವಾದ ಜೀವರ ಸೃಷ್ಟಿ ಮಾಡಿದ, ಆತ್ಮನು – ಶ್ರೀ ಪರಮಾತ್ಮನು ಲೋಕಕ್ಕೆ ಜನನಿಸಾಂಕೇತನು. ತನ್ನ–ಪರಮಾತ್ಮನಾದ ತನ್ನ ಗರ್ಭದಿಂದ ಪಡೆದ ತಾಯಿಯೆಂದು ತಿಳದು, ದಾರಾಪುತ್ರ ಧನಧಾನ್ಯಾದಿಗಳಲ್ಲಿ ಅಭಿಮಾನ ಬಿಟ್ಟು, ಪಾದಾಬ್ಜಗಳ–ದೇವರ ಪಾದಕಮಲಗಳ, ಧೇನಿಪ–ಗುರುಮುಖದಿಂದ ಕೇಳಿದ ಪರಮಾ ತ್ಮನ ಆಕಾರ, ವಾಸನಾದಿಂದ ಮನಸಾ ಪ್ರತಿಮಾ ನಿರ್ಮಾಣ ಮಾಡಿ ಧ್ಯಾನ ಮಾಡ ತಕ್ಕ, ಭಕ್ತಜನರಿಗೆ–ಭಕ್ತರಾದ ಜನರಿಗೆ ತನ್ನ ವಿಷಯಕವಾದ ಜ್ಞಾನಭಕುತಿಗಳೆಂಬ ಸ್ತನಗಳ ದ್ವಾರಾ, ಆನಂದಾಖ್ಯ ಕ್ಷೀರ ಉಣಿಸಿ, ಸರ್ವತ್ರ–ದೇಹೇಂದ್ರಿಯಾದಿ ಸರ್ವತ

ವ್ಯಾಪ್ತನಾದ ಪರಮಾತ್ಮನು, ಪ್ರಘಟಕನು ತಾನಾಗಿ–ಛಂದಾಗಿ ಘಟಸಾಂಕೇತವಾದ ದೇಹದಲ್ಲಿ ವಿದ್ಯಮಾನನಾದ ಪರಮಾತ್ಮನು ತನಗೆ ತಾನೇ ಪ್ರತ್ಯಕ್ಷನಾಗಿ ಆಲಿಂಗನ ಕೊಟ್ಟು, ಸೌಖ್ಯಗಳೀವ–ಮುಕ್ತ ಸ್ಥಾನದಲ್ಲಿ ಸ್ವರೂಪೇಂದ್ರಿಯಗಳಿಂದ ಭೋಗಮಾಡ ತಕ್ಕ ಸೌಖ್ಯಗಳ ಅಭಿವ್ಯಕ್ತಿ ಮಾಡಿಕೊಡೋವನಾಗತಾನೆ.

**ತೋಟಿಗನು ಭೂಮಿಯೊಳು ಬೀಜವ ।**
**ನಾಟಬೇಕೆಂದೆನುತ ಹಿತದಲಿ ।**
**ಮೋಟೆಯಿಂ ನೀರೆತ್ತಿ ಸಸಿಗಳ ಸಂತೈಸುವಂತೆ ॥**
**ಪಾಟುಬಡದಲೆ ಜಗದಿ ಜೀವರ ।**
**ಘೋಟಕಾಸ್ಯನು ಸೃಜಿಸಿ ಯೋಗ್ಯತೆ ।**
**ದಾಟಗೊಡದಲೆ ಸಲಹುತಿಪ್ಪನು ಸರ್ವಕಾಲದಲಿ ॥ ೧೨ ॥**

ಸೃಷ್ಟಿ ಮಾಡಿದ ಪರಮಾತ್ಮ, ಯೋಗ್ಯತಾನುಸಾರ ಕಾಪಾಡತಾನೆ ಎಂತ ಹೇಳತಾರೆ.

ತೋಟಿಗನು–ಪೈರು ಮಾಡತಕ್ಕವನು, ಹಿತದಲಿ–ಪ್ರೇಮದಿಂದ, ಭೂಮಿಯೊಳು–ಭೂಮಿಯಲ್ಲಿ, ಬೀಜವ–ಧಾನ್ಯ ಬೀಜಗಳ, ನಾಟಬೇಕೆಂದೆನುತ–ಬಿತ್ತಿ ಪೈರುಗಳನ್ನು ನಾಟಿ ಪೈರು ಅಭಿವೃದ್ಧಿಗೆ ಬರಬೇಕು ಎಂತ, ಮೋಟೆಯಿಂ ನೀರೆತ್ತಿ–ಬಾವಿಯಲ್ಲಿರುವ ಜಲವನ್ನ ಕಪಿಲೆಯಿಂದ ಅಥವಾ ಏತದಿಂದ ನೀರನ್ನ ಮ್ಯಾಲಕ್ಕೆ ತಂದು ಆ ಪೈರುಗಳಿಗೆ ಆಹಾರ ರೂಪವಾದ ಉದಕವನ್ನ ಕೊಟ್ಟಂಥಾವನಾಗಿ, ಸಸಿಗಳ–ಪೈರುಗಳನ್ನು ತೋಟಿಗ ನಾದವನು, ಸಂತೈಸುವಂತೆ–ಸಂರಕ್ಷಣೆ ಮಾಡುವೋಪಾದಿಯಲ್ಲಿ, ಘೋಟಕಾಸ್ಯನು–ಶ್ರೀ ಹಯಗ್ರೀವದೇವರು, ಪಾಟುಬಡದಲೆ–ನಾನಾ ಪ್ರಕಾರ ತೋಟಿಗನೋಪಾದಿಯಲ್ಲಿ ಪ್ರಯಾಸ ಪಡಧಾಂಗೆ, ಜಗದಿ–ಹದಿನಾಲ್ಕು ಲೋಕಗಳೆಂಬೋ ಭೂಮಿಯಲ್ಲಿ ಪೂರ್ವ ದಲ್ಲೇ ಅವರವರ ಆಹಾರವೆಂಬ ಉದಕ ಸದೃಶವಾದ ಆಹಾರವನ್ನ ಕಲ್ಪಿಸಿ, ಬೀಜ ಬಿತ್ತೋ ದಕ್ಕೆ ನೀರನ್ನ ಭೂಮಿಯಲ್ಲಿ ಇಟ್ಟೋಪಾದಿಯಲ್ಲಿ ಇಟ್ಟು, ಜೀವರ–ಬೀಜಸದೃಶರಾದ ಜೀವರು, ಆ ಕಲ್ಪದಲ್ಲಿ ಅಸೃಜ್ಯರಾಶಿಯಿಂದ ತೆಗೆದವರು. ನಾಟೋ ಪೈರಿಗೆ ಸದೃಶರಾದ ಇದುವರಿವಿಗೆ ಸೃಜ್ಯರಾದ, ಕೆಲವು ಸಾಧನಿ ಆಗಿ ಅವಶಿಷ್ಟ ಸಾಧನಿ ಉಳ್ಳವರು, ಇಂಥಾ ಉಭಯವಿಧ ಜೀವರ, ಸೃಜಿಸಿ–ನಾಟೋಣ, ಬಿತ್ತೋಣ ಸದೃಶವಾದ ಭೂಮಿಯಲ್ಲಿ ಸೃಷ್ಟಿಮಾಡಿ, ಯೋಗ್ಯತೆ–ಪೈರಿನ ಯೋಗ್ಯತಾತಾರತಮ್ಯ ಹ್ಯಾಂಗೋ, ಹಾಂಗೆ ಅವರವರ ಯೋಗ್ಯತಾನು ಇರೋದಾಗಿ ಅದೆ. ಈ ಅನಾದಿ ಜೀವರ ಯೋಗ್ಯತಾವನ್ನು, ದಾಟಗೊಡದಲೆ–ದಾಟಿಹೋಗಧಾಂಗೆ ಅವರವರ ಯೋಗ್ಯತಾನುಸಾರ, ಪರಮಾತ್ಮ ಅವರವರ ಸ್ವರೂಪಕ್ಕೆ ಅನುಸರಿಸಿದ, ಅವರವರಿಗೆ ಹೇತುವಾದ, ತ್ರಿವಿಧ ಜೀವರಲ್ಲಿ ತ್ರಿವಿಧ ವಾದ ಜ್ಞಾನದಲ್ಲಿ ತಾನಿದ್ದು, ಪ್ರಾಕೃತಾನ್ನಗಳಿಂದ ದೇಹವನ್ನ ಕಾಪಾಡುತ್ತ, ಸರ್ವ ಕಾಲದಲಿ–ಸದಾ ಸರ್ವಕಾಲದಲ್ಲಿ ಅವಿಯೋಗನಾದ ಜೀವಾಂತರ್ಗತನಾದ ಬಿಂಬರೂಪಿ

ಪರಮಾತ್ಮ, ಸಲಹುತಿಪ್ಪನು–ತೋಟಿಗನು ಪೈರುಗಳ ಯೋಗ್ಯತಾನುಸಾರ ಸಲಹಿದೋಪಾದಿಯಲ್ಲಿ ಸಂರಕ್ಷಣ ಮಾಡತಾನೆಂದು ತಾತ್ಪರ್ಯ.

**ಭೂಮಿಯೊಳು ಜಲವಿರೆ ತೃಷಾರ್ತನು ।**
**ತಾ ಮರೆದು ಮೊಗವೆತ್ತಿ ಎಣ್ದೆಸೆ ।**
**ವ್ಯೋಮಮಂಡಲದೊಳಗೆ ಕಾಣದೆ ಮಿಡುಕುವಂದದಲಿ ॥**
**ಶ್ರೀಮನೋರಮ ಸರ್ವರಂತ ।**
**ರ್ಯಾಮಿಯಾಗಿರೆ ತಿಳಿಯದನುದಿನ ।**
**ಭ್ರಾಮಕರು ಭಜಿಸುವರು ಭಕುತಿಯಲನ್ಯದೇವತೆಯ ॥ ೧೩ ॥**

ಉತ್ತಮಾಧಿಷ್ಠಾನದಲ್ಲಿ ಭಗವತ್ಪೂಜಾ ಮಾಡಬೇಕೆಂದು ಹೇಳತಾರೆ.

ತೃಷಾರ್ತನು–ನೀರಡಕಿಯಿಂದ ಯುಕ್ತನಾದ, ಪುರುಷನು, ಭೂಮಿಯೊಳು–ಭೂಮಿಯಲ್ಲಿ, ಜಲವಿರೆ–ದಾಹ ಶಮನಮಾಡತಕ್ಕ ದಿವ್ಯವಾದ ಉದಕ ಇರಲಾಗಿ, ತಾ ಮರೆದು–ತೃಷಾರ್ತನಾದ ಪುರುಷ, ಜಲವಿರತಕ್ಕ ಪ್ರದೇಶವನ್ನು ಮರೆತು, ಮೊಗವೆತ್ತಿ–ತನ್ನ ಮುಖವನ್ನೇ ಮ್ಯಾಲಕ್ಕೆ ಎತ್ತಿದವನಾಗಿ, ಎಣ್ದೆಸೆ–ಅಷ್ಟದಿಕ್ಕುಗಳ, ವ್ಯೋಮಮಂಡಲದ–ಆಕಾಶ ಮಂಡಲ, ಅಂತು ಒಂಬತ್ತು ದಿಕ್ಕುಗಳ ನೋಡುತ್ತಾ, ಅಲ್ಲಿಯು ಉದಕವನ್ನು ಹುಡುಕುತ್ತಾ, ಒಳಗೆ ಕಾಣದೆ–ಒಂಬತ್ತು ದಿಕ್ಕಿನೊಳಗೂ ಕಾಣದೆ, ಮಿಡುಕುವಂದದಲಿ – ದಾಹದಿಂದ ಅತ್ಯಂತ ಪೀಡಿತನಾಗಿ ದುಃಖಿಸೋವನಾಗುತ್ತಾನೆ. ಇದರೋಪಾದಿಯಲ್ಲಿ, ಶ್ರೀ ಮನೋರಮ–ಲಕ್ಷ್ಮೀದೇವೇರಿಗೆ ಮನೋಹರನಾದ ಉದಕ ಸದೃಶನಾದ ಪರಮಾತ್ಮ, ಸರ್ವರ–ಉದಕಕ್ಕೆ ಆಶ್ರಯಭೂತವಾದ ಭೂಮಿಸದೃಶರಾದ, ಸಮಸ್ತರಾದ, ಎಂದರೆ ಜೀವೋತ್ತಮರಾದ, ಬ್ರಹ್ಮಾದಿ ದೇವತೆಗಳಾದ ಸರ್ವರ, ಅಂತರ್ಯಾಮಿಯಾಗಿರೆ – ಅಂತರ್ಯಾಮಿಯಾಗಿರಲಾಗಿ, ಸಂಸಾರದುಃಖಾಖ್ಯ ದಾಹದಿಂದ ಪೀಡಿತನಾದ ಪುರುಷ, ಏತಾದೃಶ ದಾಹಶಾಂತಿಗಾಗಿ ಉದಕಸದೃಶನಾದ ಪರಮಾತ್ಮ ಇರತಕ್ಕ ಸ್ಥಾನವನ್ನ ಹುಡುಕದೆ, ಭ್ರಾಮಕರು–ಅಜ್ಞಾನರೂಪವಾದ ಅಹಂ ಮಮತಾ ಎಂಬ ಚಕ್ರದಲ್ಲಿ ತಗುಲಿ ಸಂಚರಿಸತಕ್ಕವರು, ತಿಳಿಯದೆ–ಸಂಸಾರದುಃಖಾಖ್ಯ ದಾಹಪೀಡಾಪರಿಹಾರಕ ಉದಕಸದೃಶನಾದ ಪರಮಾತ್ಮನ ಬಿಟ್ಟು, ಅನುದಿನ–ಪ್ರತಿದಿನ ದಲ್ಲೂ, ಅನ್ಯ–ಜಲವಿರತಕ್ಕ ಭೂಮಿಯ ಬಿಟ್ಟು, ಜಲವಿಲ್ಲದ ಪೂರ್ವೋಕ್ತ ಅನ್ಯವಾದ ದಿಕ್ಕುಗಳ, ತೃಷಾರ್ತ, ಜಲವನ್ನ ಹುಡುಕಿದಂತೆ ಅನ್ಯ ದೇವತೆಗಳಾದ ಬ್ರಹ್ಮಾದಿ ಉತ್ತಮ ದೇವತೆಗಳ ಅಂತರ್ಯಾಮಿಯಾದ ಪರಮಾತ್ಮನ್ನ ಬಿಟ್ಟು, ನವದಿಕ್ಕು ಸದೃಶರಾದ, ದೇವತೆಯ–ಬ್ರಹ್ಮಾದಿ ದೇವತೆಗಳ, ಭಕುತಿಯಲಿ–ಅತ್ಯಂತ ಭಕುತಿಯಿಂದ, ಭಜಿಸುವರು–ಭಜಿಸೋವರಾಗುತ್ತಾರೆ.

**ವಿಶೇಷಾರ್ಥ :**–ಸರ್ವಕಾಲದಲ್ಲಿ ಎಂದರೆ, ಸೃಷ್ಟಿ, ಸ್ಥಿತಿ, ಮೋಕ್ಷ, ಈ ಕಾಲ ತ್ರಯದಲ್ಲಿ ಎಂತ ತಾತ್ಪರ್ಯ. ಮುಕ್ತಿಯೋಗ್ಯರು, ತಮೋಯೋಗ್ಯರು, ನಿತ್ಯಸಂಸಾರಿ

ಗಳು ಎಂತ ಜೀವರು ತ್ರಿವಿಧರಾಗಿ ಇರೋರಾಗಿದ್ದಾರೆ. ಮುಕ್ತಿಯೋಗ್ಯರ ಸ್ವರೂಪ, ಸುಖಸ್ವರೂಪ; ಇದು ಸರ್ವರಿಗೂ ಸಮಾನವಾಗಿ ಇಲ್ಲ, ತಾರತಮ್ಯಾನುಸಾರ ಅಧಿಕ ನ್ಯೂನಗಳಾಗಿ ಅದೆ. ಅದರಂತೆ ಸುಖಭೋಗವೂನೂ, ಅಧಿಕ ನ್ಯೂನಗಳಾಗಿ ಕೊಟ್ಟು ಪಾಲಿಸುತ್ತಾನೆ ಹೊರ್ತು, ಎಲ್ಲರಿಗೂ ಸಮಾನವಾಗಿ ಸುಖ ಕೊಟ್ಟು ಪಾಲಿಸೋದಿಲ್ಲ. ತದ್ವತ್, ದುಃಖರೂಪವುಳ್ಳ ತಮೋಯೋಗ್ಯರಿಗೂ, ನಿತ್ಯಸಂಸಾರಿಗಳಿಗೂ ಅತಏವ ಏಕ ಪ್ರಕಾರ ಪಾಲನೆ ಮಾಡದೆ, ಭಿನ್ನಭಿನ್ನವಾಗಿ ಪಾಲನೆ ಮಾಡತಾನೆಂದು ತಿಳಿಯಬೇಕು.

**ತಾ||** ಭೂಮಿಸದೃಶ ಚರಾಚರವು, ಉದಕಸದೃಶ ಪರಮಾತ್ಮ ಆದರೂ, ಭೂಮಿಯಲ್ಲಿ ಉದಕ ಎಂಬುದು ಸರ್ವತ್ರ ಅದೆ. ಲೋಗರು ಆ ಎಲ್ಲಾ ಉದಕವನ್ನೂ ಪಾನ ಮಾಡೋದಿಲ್ಲ. ಚಂಡಾಲನ ಮನಿಯಲ್ಲಿ ದಿವ್ಯಗಂಧೋದಕವದೆ, ಬ್ರಾಹ್ಮಣ ಪಾನ ಮಾಡೋದಕ್ಕೆ ಯೋಗ್ಯವಲ್ಲ. ಬ್ರಾಹ್ಮಣನ ಮನಿಗತ ಉದಕ ಪಾನಕ್ಕೆ ಯೋಗ್ಯ ಹ್ಯಾಂಗೋ, ಹಾಂಗೆ ಭಗವದ್ಭಕ್ತರಾದ ದೇವತಾಂತರ್ಗತನಾದ, ಉದಕಸದೃಶನಾದ ಪರಮಾತ್ಮ ಗ್ರಾಹ್ಯ. ತದನ್ಯ ಗಾಹ್ಯವಲ್ಲೆಂದು ತಾತ್ಪರ್ಯ. ಉತ್ತಮಾಧಿಷ್ಠಾನದಲ್ಲಿ ಭಗವಂತನ ತಿಳದು ಪೂಜಿಸಿದರೆ, ತದ್ದ್ವಾರಾ ಸಂಸಾರಾಖ್ಯ ದುಃಖರೂಪದ ಶಾಂತಿ ಮಾಡತಾನೆ. ನೀಚಾಧಿಷ್ಠಾನದಲ್ಲಿ ಅಂತರ್ಗತನ್ನ ತಿಳಿದೂ ಕೂಡ ಭಜಿಸಕೂಡದು ಎಂತ ತಾತ್ಪರ್ಯ.

**ವಿಶೇಷಾರ್ಥ :–** ಫಲ ಕೊಡತಕ್ಕ ಪರಮಾತ್ಮ ನೀಚನಲ್ಲವಾದ್ದರಿಂದ, ನೀಚಾಧಿಷ್ಠಾನದಲ್ಲಿ ಪರಮಾತ್ಮನ ಭಜಿಸಿದರೆ ಉತ್ತಮಫಲ ಕೊಡಲಿ ಎಂದರೆ, ಪರಮಾತ್ಮ ಫಲ ಕೊಡಬೇಕಾದರೆ ತಾನು ಸಾಕ್ಷಾತ್ತಾಗಿ ಕೊಡೋದಿಲ್ಲ, ಅಧಿಷ್ಠಾನದ್ವಾರಾನೇ ಫಲ ಕೊಡತಾನಾದ್ದರಿಂದ, ಅಧಿಷ್ಠಾನ ನೀಚವಾದರೆ ಫಲವೂ ನೀಚವೇ. ಆದಕಾರಣ, ನೀಚಾಧಿಷ್ಠಾನಗತ ಪರಮಾತ್ಮನ ಪೂಜಾ ಕೂಡದು. ಪರಮಾತ್ಮ ಇದ್ದಾನೆ ಎಂದು ಮಾತ್ರ ತಿಳಿಯಬೇಕು. ವಿಷ್ಣುಭಕ್ತರಾದ ಅನ್ಯ ದೇವತೆಗಳ ಅಂತರ್ಗತನ ತಿಳಿಯದೆ, ಆ ದೇವತೆಗಳನ್ನ ಮಾತ್ರ ಭಜಿಸಿದರೆ ತೃಷಾರ್ತನೋಪಾದಿಯಲ್ಲಿ ಇಷ್ಟಾರ್ಥ ಸಿದ್ಧಿಸೋದಿಲ್ಲ ಎಂತ ತಾತ್ಪರ್ಯ. ತೃಷಾರ್ತಗೆ ಸದೃಶ ಅಧಿಕಾರಿ, ಆಕಾಶದೋಪಾದಿಯಲ್ಲಿ ವಿಷ್ಣುಭಕ್ತರಾದ ದೇವತೆಗಳು, ಭೂಮಿಯಲ್ಲಿ ವಿದ್ಯಮಾನವಾದ ಜಲಕ್ಕೆ ಸದೃಶನಾದವ ಪರಮಾತ್ಮ. ಈ ಪ್ರಕಾರ ಸರ್ವೋತ್ತಮ ಪರಮಾತ್ಮನೆಂದು ತಿಳಿದು, ವಿಷ್ಣುಭಕ್ತರ ಅಂತರ್ಗತ ಪರಮಾತ್ಮನ ಚಿಂತಿಸಿ, ಭಜನ ಮಾಡಬೇಕೆಂತ ತಾತ್ಪರ್ಯ.

**ಮುಖ್ಯಫಲ ವೈಕುಂಠ ಮುಖ್ಯಾ ।**
**ಮುಖ್ಯಫಲ ಮಹರಾದಿಲೋಕಾ ।**
**ಮುಖ್ಯಫಲ ವೈಷಯಿಕವೆಂದರಿದತಿಭಕುತಿಯಿಂದ ॥**

**ರಕ್ಕಸಾರಿಯ ಭಜಿಸುತಲಿ ನಿ।**
**ರ್ದುಃಖನಾಗು ನಿರಂತರದಿ ನೂರಿ।**
**ಪೊಕ್ಕನರ ಬಿಡ ಭಕ್ತವತ್ಸಲ ಭಾರತೀಶಪಿತ ॥ ೧೪ ॥**

ಶ್ರೀಪರಮಾತ್ಮ ಕೊಡತಕ್ಕ ಫಲಗಳು ಮೂರು ಎಂತ ಹೇಳತಾರೆ.

ಮುಖ್ಯಫಲ–ಉತ್ತಮವಾದ ಮುಖ್ಯಫಲ ಒಂದು, ಮುಖ್ಯಾಮುಖ್ಯಫಲ–ಮುಖ್ಯ ಫಲ, ಅಮುಖ್ಯಫಲ ಎರಡೂ ಸೇರಿದ ಫಲ ಒಂದು, ಅಮುಖ್ಯಫಲ–ಮ್ಯಾಲಿನ ಎರಡಕ್ಕೂ ಸೇರದ ಅನ್ಯವಾದ ಅಮುಖ್ಯಫಲ ಒಂದು, ಅಂತೂ ಮೂರು ಫಲಗಳು. ಅಂತರ್ಗತನಾದ ಪರಮಾತ್ಮ ಅಧಿಷ್ಠಾನಗಳ ದ್ವಾರಾ ಫಲ ಕೊಡತಾನೆ. ಪರಮಾತ್ಮನ ವ್ಯತಿರಿಕ್ತ ಅಧಿಷ್ಠಾನ ರಾದ ದೇವತೆಗಳು ಫಲಪ್ರದಾನಕ್ಕೆ ಸ್ವತಂತ್ರರಲ್ಲ. ವೈಕುಂಠ–ಲಿಂಗಭಂಗನಾಗಿ ವೈಕುಂಠ ಲೋಕ ಸೇರಿ ಸ್ವರೂಪಾನಂದವನ್ನು ಭೋಗಮಾಡೋ ಫಲ ದಾವದದೆ ಅದೇ ಅಧಿಕಾರಿಗೆ ಮುಖ್ಯಫಲ. ಈ ಫಲ ಹೊಂದಿದವಗೆ ಪುನಶ್ಚ ಜನ್ಮವಿಲ್ಲ. ಇಂಥಾ ಫಲ ಹೊಂದ ಬೇಕಾದರೆ ಮುಖ್ಯವಾದ ಸಾಧನಕರ್ಮ ದಾವದೆಂದರೆ, ಅಹಂಮಮತಾದಿಗಳನ್ನು ತ್ಯಾಗ ಮಾಡಿ, ಜ್ಞಾನ, ಭಕ್ತಿ, ವೈರಾಗ್ಯಗಳಿಂದ ಹೃದಯಾಕಾಶದಲ್ಲಿ ಪರಮಾತ್ಮನ ಧ್ಯಾನಮಾಡಿ, ಅಪರೋಕ್ಷೀಕರಿಸಿಕೊಂಬೋದು ದಾವದದೋ ಅದೇ. ಇಂಥಾ ಕರ್ಮದಿಂದ ವೈಕುಂಠ ಲೋಕ ಪ್ರಾಪ್ತವಾಗತದೆ. ಮಹರಾದಿಲೋಕ–ಮಹರಾದಿ ಲೋಕಗಳಲ್ಲಿ ವಾಸವಾಗಿ ಇರೋಣ ದಾವದದೆ, ಇದೇ ಮುಖ್ಯಾಮುಖ್ಯಫಲ; ಜನ್ಮಕ್ಕೆ ಬಾರದೇ ಲಿಂಗಭಂಗ ವಿಲ್ಲದೇ ಇರೋಣ ಅಮುಖ್ಯಫಲ; ಈ ರೀತ್ಯಾ ಎರಡೂ ಏಕಕಾಲದಲ್ಲಿ ಇರೋಣವೇ ಮುಖ್ಯಾಮುಖ್ಯ ಫಲ. ಸ್ಥೂಲದೇಹದಲ್ಲಿ ಭಗವದಪರೋಕ್ಷಾನಂತರ ಅತಿಶಯವಾದ ಧ್ಯಾನೋಪಾಸನಾದಿ ಕರ್ಮಫಲದಿಂದ ಜನ್ಮಕ್ಕೆ ಕಾರಣವಾದ ಕರ್ಮ ನಾಶನವಾಗಿ, ಕರ್ಮಸಾಧನಿ ಪೂರ್ತಿಯಾಗಿ ಜನನರಹಿತನಾಗಿ, ಜ್ಞಾನಸಾಧನಪ್ರದೇಶವಾದ ಮಹರಾದಿ ಲೋಕಗಳಲ್ಲಿ ಲಿಂಗಭಂಗದವರಿಗೂ, ಜ್ಞಾನರೂಪವಾದ ಧ್ಯಾನೋಪಾಸನಾಕರ್ಮ ಅತಿ ಶಯವಾಗಿ ಮಾಡತಾ ಇರೋಣ, ವೈಷಯಿಕವು–ಭರತಖಂಡಭೂಮಿ, ಸ್ವರ್ಗ, ನರಕ, ಈ ಮೂರರಲ್ಲಿ ಸಂಚರಿಸುತ್ತಾ ಇರೋಣ ದಾವದದೆ ಇದೇ ವೈಷಯಿಕ ಫಲವು. ಪ್ರಾಕೃತ ವಿಷಯಗಳ ಭೋಗದಾಸೆಯಿಂದ ಸಕಾಮನಾಗಿ, ಅಹಂಮಮತಾದಿಂದ ಯುಕ್ತನಾಗಿ, ಪರಮಾತ್ಮನ ವಿಸ್ಮೃತಿಯಿಂದ, ಭೋಗದಾಸೆಯಿಂದ, ನಾನಾವಿಧ ಸತ್ಕರ್ಮ ದುಷ್ಕರ್ಮ ಸಾಧನಗಳಿಂದ ಆಗತಕ್ಕದ್ದು ವೈಷಯಿಕ ಫಲವು.

**ಮುಕ್ತಿ** – ಲಿಂಗಭಂಗಾನಂತರ ಆಗತಕ್ಕದ್ದು, ಆವಾಸಸ್ಥಾನ ವೈಕುಂಠ.

**ಜೀವನ್ಮುಕ್ತಿ**– ಲಿಂಗದೇಹ ಇರಲಾಗಿ ಆಗತಕ್ಕದ್ದು, ಮಹರಾದಿಲೋಕ ಆವಾಸ.

**ಅಮುಕ್ತಿ**– ಸಂಸಾರದಶಾದಲ್ಲಿ ಆಗತಕ್ಕದ್ದು, ಭೂ, ಭುವ, ಸ್ವರ್ಗ, ನರಕಗಳಲ್ಲಿ ಆವಾಸ.

ಈ ಪ್ರಕಾರ, ಎಂದರಿದು–ಅಧಿಕಾರಿ ಆದವಗೆ ಪ್ರಥಮತಃ ಸಂಸಾರಾವಸ್ಥಾ, ನಂತರ ಜೀವನ್ಮುಕ್ತಾವಸ್ಥಾ, ನಂತರ ಮುಕ್ತಾವಸ್ಥಾ ಎಂತ ಅವಸ್ಥಾತ್ರಯಗಳು ಸರ್ವ ಅಧಿಕಾರಿಗಳಿಗೆ ಉಂಟು ಎಂತ ಅರಿತವನಾಗಿ, ಅತಿಭಕುತಿಯಿಂದ–ಅಹಂಮಮತಾದಿಗಳ ತ್ಯಜಿಸಿ, ನಿಸ್ಪೃಹನಾಗಿ ಮಹಾತ್ಮ್ಯೆಜ್ಞಾನಪೂರ್ವಕ, ಸುದೃಢ ಸ್ನೇಹರೂಪವಾದ ಅತಿಭಕ್ತಿಯಿಂದ, ರಕ್ಕಸಾರಿಯ–ರಾಕ್ಷಸರುಗಳಿಗೆ ಶತ್ರುವಾದ ಶ್ರೀದೇವರ ವಾಸನಾರೂಪದಿಂದ, ಭಜಿಸುತಲಿ–ಹೃದಯಾಕಾಶದಲ್ಲಿ ಮಾನಸಪೂಜಾದಿಂದ ಭಜನಮಾಡತಾ, ನಿರ್ದುಃಖನಾಗು–ದುಃಖಕ್ಕೆ ಕಾರಣವಾದ ಅಹಂಮಮತಾದಿಗಳ ತ್ಯಜಿಸಿ ಸುಖಿ ಆಗು. ಭಾರತೀಶಪಿತ–ಭಾರತೀರಮಣ ವಾಯುದೇವರಿಗೆ ತಂದಿಯಾದ, ಭಕ್ತವತ್ಸಲ–ತನ್ನ ಪೂರ್ವೋಕ್ತಪ್ರಕಾರ ನಂಬಿದ ಭಕ್ತರಲ್ಲಿ ವಾಂಛಲ್ಯವುಳ್ಳ ಶ್ರೀ ಸಂಕರ್ಷಣರೂಪೀ ಪರಮಾತ್ಮ, ನಿರಂತರದಿ–ಸದಾ ಸರ್ವ ಕಾಲವೂ, ಮೊರೆ ಪೊಕ್ಕವರ–ತನ್ನನ್ನೇ ಮೊರೆಹೊಂದಿದವರ, ಬಿಡ–ನರಕಾದಿ ಲೋಕಗಳಲ್ಲಿ ಬಿಡದೆ ಅವುಗಳಿಂದ ದೂರಮಾಡಿ ರಕ್ಷಿಸುತ್ತಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :**–ಭಾರತೀಶಪಿತ ಎಂದರೆ, ಭಾರತೀದೇವೇರಿಗೆ ಪತಿಯಾದ ವಾಯುದೇವರ ಸೃಷ್ಟಿಸಿದವನೆಂತಲೂ, ವಾಯುದೇವರಿಂದ ಜಗತ್ಕಾರ್ಯಗಳ ನಡಸತಾನೆ ಎಂತಲೂ ತಾತ್ಪರ್ಯ. ಆದ್ದರಿಂದ ಯಾವ ಫಲ ಇವಗೆ ಪ್ರಾಪ್ತಿ ಆಗಬೇಕಾದರೂ ಭಾರತೀರಮಣಮುಖ್ಯಪ್ರಾಣಾಂತರ್ಗತನಾಗಿ ಚರಾಚರ ಸರ್ವಜಗತ್ತಿಗೆ ತಂದಿಯಾದ ಪರಮಾತ್ಮನ ಭಜಿಸಬೇಕು. ಭಗವದ್ಭಕ್ತರು ದೇವತೆಗಳ ಭಜಿಸಿದ ಕಾಲಕ್ಕೂ, ಅಲ್ಲಲ್ಲಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪರಮಾತ್ಮನ್ನ ತಿಳದು, ಭಜನಿ ಮಾಡಬೇಕು ಎಂತ ತಾತ್ಪರ್ಯ.

**ವ್ಯಾಧಿಯಿಂ ಪೀಡಿತ ಶಿಶುವಿಗೆ ಗು ।**
**ಡೋದಕವ ನೆರದದಕೆ ಔಷಧ ।**
**ತೇದು ಕುಡಿಸುವ ತಾಯಿಯೋಪಾದಿಯಲಿ ಸರ್ವಜ್ಞ ॥**
**ಬಾದರಾಯಣ ಭಕ್ತಜನಕೆ ಪ್ರ ।**
**ಸಾದರೂಪಕನಾಗಿ ಭಾಗವ ।**
**ತಾದಿಯಲಿ ಪೇಳಿದನು ಧರ್ಮಾರ್ಥಗಳೆ ಫಲವೆಂದು ॥ ೧೫ ॥**

ಧರ್ಮಾರ್ಥಕಾಮಗಳು ಫಲವೆಂದು ಹೇಳೋದಕ್ಕೆ ಕಾರಣ ಹೇಳತಾರೆ. ಅಂದರೆ, ಮೋಕ್ಷವೇ ಮುಖ್ಯ ಫಲವಾದ ಮ್ಯಾಲೆ ಧರ್ಮಾರ್ಥಕಾಮಫಲ ಏಕೆ ಹೇಳಬೇಕು, ಮೋಕ್ಷಫಲ ಒಂದೇ ಹೇಳಿದರೆ ಸಾಕು ಎಂದರೆ, ಅದರನ್ನ ಹೇಳತಾರೆ.

ವ್ಯಾಧಿಯಿಂ ಪೀಡಿತ ಶಿಶುವಿಗೆ–ರೋಗಾದಿಗಳಿಂದ ಪೀಡಿತನಾಗಿರುವ ಕೂಸಿಗೆ, ಔಷಧ ತೇದು–ಪ್ರಾಪ್ತವಾದ ರೋಗನಿವಾರಣೆಗೆ ತಾಯಿಯಾದವಳು, ಔಷಧ ತೇದು ತಂದು ಜಿಹ್ವೆಗೆ ಅರುಚಿಯಾಗಿ ರೋಗನಿವಾರಣೆ ಮಾಡತಕ್ಕದ್ದಾಗಿ ಇರತಕ್ಕ ಔಷಧ ಕೂಸು ಕುಡಿಯೋ ಉದ್ದಿಶ್ಯ, ಅದಕೆ–ಆ ತಂದಿರುವ ಔಷಧಕ್ಕೆ, ಗುಡೋದಕವ–ಬೆಲ್ಲದ

ನೀರನ್ನು, ನೆರೆದು-ಸೇರಿಸಿ, ಸಿಹಿಯಾಗಿರುತ್ತದೆಂದು ರುಚ್ಯುತ್ಪಾದನಿ ಉಂಟುಮಾಡಿ ಮೆಲ್ಲಗೆ ಉಪಾಯದಿಂದ, ಕುಡಿಸುವ-ತಾಯಿ ಕುಡಿಸೋವಳಾಗುತ್ತಾಳೆ. ಈ ಪ್ರಕಾರ ಕುಡಿಸುವ, ತಾಯಿಯೋಪಾದಿಯಲಿ-ತಾಯಿ ಸದೃಶನಾಗಿ, ಸರ್ವಜ್ಞ-ಮಹಾಪ್ರಳಯೋದಕಸದೃಶ ವಾದ ಜ್ಞಾನವುಳ್ಳ ಸರ್ವೋತ್ತಮರಾದ, ಸರ್ವ ಸಜ್ಜನರಿಗೆ ಮಾತೃಸ್ಥಾನಾಪನ್ನರಾದ, ಶ್ರೀ ಭಗವದಂಶಭೂತರಾದ (ಅವತಾರರಾದ), ಬಾದರಾಯಣ-ಶ್ರೀ ವೇದವ್ಯಾಸದೇವರು, ತನ್ನ ಪುತ್ರರಾದ ತ್ರಿವಿಧ ಜೀವರೊಳು, ತನ್ನ ಧಿಕ್ಕಾರಮಾಡಿ ತನಗೆ ದೂರರಾದ ದುಷ್ಟ ಪುತ್ರರಾದ ದೈತ್ಯರ ವ್ಯತಿರಿಕ್ತ, ತನ್ನನ್ನೇ ನಂಬಿ ಇರತಕ್ಕ ಸ್ವರೂಪಸ್ವಭಾವವುಳ್ಳ ಸತ್ಪುತ್ರ ರಾದ, ಭಕ್ತಜನಕೆ-ತನ್ನ ಭಕ್ತರಾದ ಅಧಿಕಾರಿಗಳಿಗೆ, ಅಹಂಮಮತಾದಿಂದ ಸಹಿತವಾದ ಪ್ರಾಕೃತ ವಿಷಯಗಳ ಭೋಗೇಚ್ಛಾರೂಪವಾದ ರೋಗ ಪರಿಹಾರಕ್ಕಾಗಿ, ಭಾಗವತಾದಿ ಯಲಿ-ಔಷಧರೂಪವಾದ ಭಾಗವತ, ಭಾರತಾದಿ ಶಾಸ್ತ್ರ ಪುರಾಣಗಳ ಮಾಡೋವ ರಾದರು. ಇದರಲ್ಲಿ ವಿಷಯಭೋಗೇಚ್ಛಾವುಳ್ಳವರಿಗೆ ಅರುಚಿಕರವಾದ ಜ್ಞಾನ, ಭಕುತಿ, ವೈರಾಗ್ಯಾಖ್ಯರಸ ಇರೋಣದರಿಂದ, ವಿಷಯಾಶಾವುಳ್ಳವರಿಗೆ ರುಚಿ ತೋರದೆ ತ್ಯಾಗ ಮಾಡತಾರೆ. ತನ್ನಿಮಿತ್ತ ಭಾಗವತಾದಿಯಲ್ಲಿ, ಪ್ರಸಾದರೂಪಕನಾಗಿ-ತನ್ನ ಭಕುತರು ದಾವರೀತಿಯಿಂದಾದರೂ ಭಾಗವತಾಖ್ಯ ಔಷಧ ಪಾನಮಾಡಬೇಕೆಂಬ, ಅನುಗ್ರಹ ಯುಕ್ತವಾದ ಪ್ರಸಾದರೂಪನಾಗಿ, ಧರ್ಮಾರ್ಥಗಳೆ-ಔಷಧದಲ್ಲಿ ಗುಡೋದಕ ಸೇರಿ ಅದೆ ಎಂತ ಹೇಳಿದೋಪಾದಿಯಲ್ಲಿ, ಐಹಿಕವಾದ ವಿಷಯಾದಿ ಭೋಗಗಳಿಗೆ ಸಾನುಕೂಲವಾದ ಧರ್ಮಾರ್ಥಕಾಮಸಿದ್ಧಿಗಳು, ಭಾಗವತ ಶ್ರವಣದಿಂದ ಪಾನಮಾಡಿದರೆ, ಆಗತವೆ ಎಂತ, ಅಧಿಕಾರಿಗಳು ಶ್ರವಣಮಾಡೋ ನಿಮಿತ್ತ, ಫಲವೆಂದು-ಧರ್ಮಾರ್ಥಕಾಮಗಳೇ ಫಲ ವೆಂದು, ಪೇಳಿದನು-ವೇದವ್ಯಾಸದೇವರು ಹೇಳೋವರಾದರು. ಈ ಕಾರಣದಿಂದ ಕೇಳಿ ದರೆ, ತದ್ದ್ವಾರಾ ಸಂಸಾರಾಖ್ಯ ರೋಗ ಪರಿಹಾರವಾಗಿ, ಸುಖರೂಪವಾದ ಸ್ವರೂಪಾ ನಂದವನ್ನ ಐದೋವನಾಗತಾನೆ ಎಂತ ತಾತ್ಪರ್ಯದಿಂದ ಹೇಳೋವರಾದರು. ನೆಲ್ಲಿಗಾಗಿ ನೆಲ್ಲು ಬಿತ್ತಿದರೆ, ಹುಲ್ಲೂನೂ ಕೂಡ ಪ್ರಾಪ್ತವಾದಂತೆ, ಭಾಗವತಾದಿ ಪುರಾಣ ಶ್ರವಣ ದಿಂದ ಐಹಿಕ ಪಾರತ್ರಿಕ ಎರಡೂ ಉಂಟು. ಭಾಗವತಾದಿ ಪುರಾಣಗಳ ಶ್ರವಣದಿಂದ ಮುಖ್ಯ ಫಲ ವೈಕುಂಠವೇ ಹೊರ್ತು, ಐಹಿಕವಾದ ಧರ್ಮಾರ್ಥಕಾಮಗಳು ಅಲ್ಲವೆಂದು ತಾತ್ಪರ್ಯ.

**ವಿಶೇಷಾರ್ಥ :** – ತಾಯಿಗೆ ಸದೃಶರಾದ ಶ್ರೀ ವೇದವ್ಯಾಸದೇವರು, ಅನಾದಿ ಸ್ವರೂಪದಲ್ಲಿ ದಾಸೋಹಂ ಎಂಬ ಭಕ್ತಿಸ್ವಭಾವವುಳ್ಳ ಜನಕ್ಕೆ ಪ್ರಾಪ್ತವಾಗಿ ಇರತಕ್ಕ ಅಹಂಮಮತಾ ಎಂಬ ರೋಗನಿವಾರಣಾರ್ಥ, ಜ್ಞಾನ ಭಕುತಿ ವೈರಾಗ್ಯಗಳೆಂಬೋ ಔಷಧವನ್ನ, ಶಾಸ್ತ್ರವೆಂಬೋ ಬಟ್ಟಲಿನಲ್ಲಿ ಹಾಕಿ ಕುಡಿಯಲಿಕ್ಕೆ ಕೊಡಲು, ಒಲ್ಲೆನೆಂಬ ಅನಾದಿ ಭಕ್ತರಾದ ತನ್ನ ಪುತ್ರರಿಗೆ ಅನುಗ್ರಹರೂಪವಾಗಿ ರುಚ್ಯುತ್ಪಾದನ ಉಂಟು ಮಾಡಿದ ಔಷಧ, ಕೂಸಿನ ವ್ಯಾಧಿ ಪರಿಹಾರಮಾಡಿದೋಪಾದಿಯಲ್ಲಿ, ಜ್ಞಾನ, ಭಕುತಿ, ವೈರಾಗ್ಯವೆಂಬ ಔಷಧ, ಅಹಂಮಮತಾದಿ ರೋಗ ಪರಿಹಾರಮಾತಕ್ಕದ್ದು. ಆದರೂ,

ವಿಷಯಭೋಗಗಳಿಗೆ ಅನಿಷ್ಟಕರ ಎಂತ ಭಕ್ತರಾದವರೂ ತಿಳಿದೂನು, ಆ ಔಷಧವನ್ನು ಕುಡಿಯೋದಿಲ್ಲವಾದ್ದರಿಂದ, ಔಷಧವನ್ನು ಕುಡಿಯಬೇಕಾದರೆ ರುಚ್ಯುತ್ಪಾದನಾರ್ಥ ಶ್ರೀ ಬಾದರಾಯಣದೇವರು ಭಾಗವತಾದಿಯಲ್ಲಿ ಧರ್ಮಾರ್ಥಕಾಮಗಳು ಫಲವೆಂದು ಹೇಳಿದರು.

**ದೂರದಲ್ಲಿಹ ಪರ್ವತ ಘನಾ ।**
**ಕಾರ ತೋರ್ಪುದು ನೋಳ್ಪ ಜನರಿಗೆ ।**
**ಸಾರೆಗೈಯಲು ಸರ್ಪವ್ಯಾಘ್ರಗಳಿಂದ ಭಯವಿಹುದು ॥**
**ಘೋರತರ ಸಂಸಾರಸೌಖ್ಯಾ ।**
**ಸಾರತರವೆಂದರಿದು ನಿತ್ಯ ರ ।**
**ಮಾರಮಣನಾರಧಿಸುವರದರಿಂದ ಬಲ್ಲವರು ॥ ೧೬ ॥**

ಸಂಸಾರದಲ್ಲಿ ಬಹು ಕಷ್ಟವಿದೆ ಎಂತಲೂ, ಅದು ಹೇಯವೆಂತಲೂ ಹೇಳತಾರೆ.

ದೂರದಲ್ಲಿಹ–ಬಹಳ ದೂರದಲ್ಲಿರತಕ್ಕ, ಪರ್ವತ–ಪರ್ವತ, ನಾನಾ ವಿಧವಾದ ನಿಮ್ನೋನ್ನತಿಗಳಿಂದ ಕಂಟಕಾದಿಗಳಿಂದಲೂ, ನಾನಾ ವಿಧವಾದ ಶಿಲಾದಿಂದಲೂ, ಸರ್ಪ ವ್ಯಾಘ್ರಗಳಿಂದಲೂ ನೈಜವಾಗಿ, ಮಹಾ ಭಯಂಕರದಿಂದ ಸಹಿತವಾದದ್ದು, ಆದ ಕಾಲಕ್ಕೂ, ನೋಳ್ಪ ಜನರಿಗೆ–ಆ ಪರ್ವತದಲ್ಲಿ ಪ್ರವೇಶ ಮಾಡದೆ ದೂರದಿಂದ ನೋಡುವವರಿಗೆ, ಘನಾಕಾರ ತೋರ್ಪದು–ಮೇಘದೋಪಾದಿಯಲ್ಲಿ ನಿಮ್ನೋನ್ನತಿರಹಿತವಾಗಿ ನುಣ್ಣಗೆ ತೋರತದೆ. ತದ್ಗತ ಪೂರ್ವೋಕ್ತ ದೋಷಗಳು ತೋರೋದಿಲ್ಲ. ಇಂಥಾ ಪರ್ವತದಲ್ಲಿ ಪ್ರಜರು ಸಂಚಾರ ಮಾಡೋ ಛಲೋ ಮಾರ್ಗವೂ ಇರೋದಾಗಿ ಅದೆ. ಸಾರೆಗೈಯಲು–ದೂರದಿಂದ ನೋಡಿದ ಪುರುಷ ತನ್ನ ಕಣ್ಣಿಗೆ ರಮಣೀಯವಾಗಿ ತೋರಿದ ಆಶಾದಿಂದ, ಆ ಪರ್ವತದ ಸಮೀಪಕ್ಕೆ ಹೋದರೆ, ಸರ್ಪ ವ್ಯಾಘ್ರಗಳಿಂದ–ಹಾವು, ಹುಲಿ ಕಂಟಕಾದಿಗಳಿಂದ ಯುಕ್ತವಾದ ತನ್ನ ನೈಜವನ್ನ ತೋರಿಸಿ, ಭಯವಿಹುದು–ಭಯಂಕರವಾಗಿ ತೋರೋದಾಗತದೆ. ಇದರೋಪಾದಿಯಲ್ಲಿ, ಸಂಸಾರ–ದಾರಾಪುತ್ರಾದಿಗಳ ಸಮೂಹಸಂಸಾರವೆಂಬೋ ಪರ್ವತದಲ್ಲಿ, 'ಅಹಂಮಮತಾ' ಎಂಬ ಸರ್ಪವ್ಯಾಘ್ರಗಳು, ಅರಿಷಡ್ವರ್ಗಗಳೆಂಬ ಕಂಟಕಗಳು, ಸಕಾಮವೆಂಬ ದೊಡ್ಡ ಶಿಲಾಗಳು, ಈಷಣತ್ರಯಗಳು, ಇವುಗಳಿಂದ ಸಹಿತವಾಗಿ ಅದೆ. ಇದರಲ್ಲಿ ನಿಸ್ಪೃಹವೆಂಬ, ಸಂಚಾರಕ್ಕೆ ಯೋಗ್ಯವಾದ ಮಾರ್ಗವೂ ಅದೆ. ಇಂಥಾ ಸಂಸಾರಾಖ್ಯ ಪರ್ವತವನ್ನ, ಅದರಲ್ಲಿ ಪ್ರವೇಶ ಮಾಡದೆ ದೂರದಿಂದ ನೋಡೋವಗೆ, ಸೌಖ್ಯ–ದಾರಾಪುತ್ರರು, ಧನಧಾನ್ಯಾದಿಗಳಿಂದ ಸಂಸಾರ ಮಾಡತಕ್ಕವರಿಗೆ ಮಹಾಸೌಖ್ಯವೆಂದು ತೋರೋದಾಗತದೆ, ಪರ್ವತ ಘನಾಕಾರ ತೋರಿದಂತೆ, ಘೋರತರ–ಇಂಥಾ ಸಂಸಾರದಲ್ಲಿ ಪ್ರವೇಶ ಮಾಡಿದರೇನೆ ಕೇವಲ ಕಷ್ಟಕರವಾದ ಅಹಂಮಮತಾದಿ ಸರ್ಪವ್ಯಾಘ್ರಾದಿಗಳಿಂದಲೂ ಬಾಧಿತನಾಗಿ ಐಹಿಕದಲ್ಲಿ, ಹಾಗೂ ಪಾರತ್ರಿಕದಲ್ಲಿ ಅತಿ ಕಷ್ಟತರವಾದ ದುಃಖಗಳ ಐದೋವನಾಗತಾನೆ. ಆದ್ದರಿಂದ,

ಅಸಾರತರವೆಂದರಿದು–ಬ್ರಹ್ಮಾದಿ ತೃಣಾಂತ ಎಲ್ಲಾ ಜೀವರಿಗೂ ಲಿಂಗದೇಹ ಇರೋ ವರಿಗೂ ಸಂಸಾರ ಬಿಟ್ಟದ್ದಲ್ಲ. ಆದರೂ ಈ ಪ್ರಾಕೃತ ಸಂಸಾರ ಕೇವಲ ನಶ್ವರ ಎಂತ ಅರಿತವನಾಗಿ ಅಹಂಮಮತಾ ಎಂಬ ಸರ್ಪ, ವ್ಯಾಘ್ರಗಳಿಗೆ ಸಿಕ್ಕದೆ ಅರಿಷಡ್ವರ್ಗಗಳೆಂಬ ಕಂಟಕಗಳಿಗೆ ವಶನಾಗದೆ ಸಕಾಮವೆಂಬ ಮಾರ್ಗನಿರೋಧಿಯಾದ ದೊಡ್ಡ ದೊಡ್ಡ ಶಿಲಾಗಳು ಇರತಕ್ಕ ಮಾರ್ಗ ನಡಿಯದೆ, ಈಷಣತ್ರಯದಲ್ಲಿ ಅಭಿಮಾನ ಮಾಡದೆ, ಸಂಚಾರಕ್ಕೆ ಯೋಗ್ಯವಾದ ನಿಸ್ಪೃಹವೆಂಬ ಮಾರ್ಗವನ್ನು ಕಂಡು, ನಿತ್ಯ–ಪ್ರತಿದಿನದಲ್ಲೂ, ರಮಾರಮಣನ–ಲಕ್ಷ್ಮೀಪತಿಯಾದ ಶ್ರೀ ನಾರಾಯಣದೇವರ, ಆರಾಧಿಸುವರು–ಆರಾಧನ ರೂಪವಾದ ಗಮನಾಗಮನಗಳಿಂದ ಸಂಸಾರಾಖ್ಯ ಪರ್ವತವನ್ನ ದಾಟೋವರಾಗಬೇಕು. ಸಂಸಾರಾಖ್ಯ ಪರ್ವತ ದಾಟಬೇಕೆಂಬುವರೆಲ್ಲಾ ಈ ಪ್ರಕಾರ ತಿಳಿದು, ಪರಮಾತ್ಮನ್ನ ಆರಾಧಿಸುತ್ತಾರೆ. ಅದರಿಂದ ಬಲ್ಲವರು–ಇಂಥಾ ಸಂಸಾರಾಖ್ಯ ಪರ್ವತದ ಮರ್ಮ ಬಲ್ಲವರು, ಪೂರ್ವೋಕ್ತ ನಿಸ್ಪೃಹ ಮಾರ್ಗದಿಂದ ದಾಟತಾರೆ, ಅನ್ಯಮಾರ್ಗದಿಂದ ದಾಟೋದಿಲ್ಲ ಎಂತ ತಾತ್ಪರ್ಯ.

**ಕೆಸರಘಟಗಳ ಮಾಡಿ ಬೇಸಿಗೆ ।**
**ಬಿಸಿಲೊಳಿಟ್ಟೊಣಗಿಸಿದರದು ಘನ ।**
**ರಸವ ತುಂಬಲುಬಹುದೆ ಸರ್ವಸ್ವತಂತ್ರ ತಾನೆಂಬ ॥**
**ಪಶುಪನರನೇನೇನು ಮಾಳ್ಪಾ ।**
**ನಶನದಾನಸ್ನಾನಕರ್ಮಗ ।**
**ಳೊಸರಿ ಪೋಪುವು ಬರಿದೆ ದೇಹಾಯಾಸವನೆ ಕೊಟ್ಟು ॥ ೧೭ ।**

ಅಹಂಮಮತಾದಿಗಳಿಂದಲೂ, ಅಹಂ ಕರ್ತಾ ಎಂಬೋಣದರಿಂದಲೂ ಮಾಡಿದ ಪುಣ್ಯಕರ್ಮಗಳು ನಾಶವಾಗಿ, ಅಧಿಕಾರಿಗಳಿಗೆ ದುಃಖಗಳ ಕೊಡತವೆ ಎಂತ ಹೇಳತಾರೆ.

ಕೆಸರ–ಮಣ್ಣು ಉದಕ ಮೇಳನದಿಂದ ಕೆಸರು ಮಾಡಿ, ಘಟಗಳ ಮಾಡಿ–ಗಡಿಗೆ ಗಳ ಮಾಡಿ, ಅದರನ್ನ, ಬೇಸಿಗೆ–ಕೇವಲ ತೀಕ್ಷ್ಣವಾದ ದಿನಗಳ, ಬಿಸಿಲೊಳಿಟ್ಟು–ಬಿಸಿಲಿನಾಗೆ ಇಟ್ಟು, ಒಣಗಿಸಿದರೆ–ಛಂದಾಗಿ ಒಣಗಿಸಿದರೆ, ಅದು–ಆ ಗಡಿಗೆ ಒಣಗಿ ಘಟ್ಟಿ ಆಗತದೆ. ಅದರನ್ನ ಅಗ್ನಿಯಲ್ಲಿ ಸುಟ್ಟು ಛಂದಾಗಿ ಘಟ್ಯಾಗಿ ಮಾಡದೆ, ಘನ ರಸವ–ಮೇಘದಿಂದ ಪ್ರಾಪ್ತವಾದ ಉದಕವನ್ನ, ತುಂಬಲುಬಹುದೆ–ತುಂಬಿದರೆ ಘಟ ನಷ್ಟವಾಗಿ, ತದ್ಗತ ಉದಕವೂ ಹೋಗೋದಾಗಿ, ಘಟ ಮಾಡಿದ ಪ್ರಯಾಸವೂ, ನೀರು ತುಂಬಿದ ಪ್ರಯಾಸವೂ ವೃಥಾ ನಷ್ಟವಾಗೋದಾಗತದೆ. ತದ್ವತ್ ಒಣಗಿದ ಘಟವನ್ನ ಅಗ್ನಿಸಂಸ್ಕಾರವಿಲ್ಲದೇನೆ, ಘಟ ಕರಗಧಾಂಗೂನೂ, ಘಟದಲ್ಲಿ ನೀರು ನಿಲ್ಲೋಹಾಂಗೂನೂ ಮಾಡತೇನೆ ಎಂದು ಅಗ್ನಿಸಂಸ್ಕಾರವನ್ನು ಬಿಟ್ಟು, ಹಸೀ ಗಡಿಗ್ಯಾಗೆ ನೀರು ತುಂಬೋಣದ ರಿಂದ ದಾವ ಫಲ ಪ್ರಾಪ್ತಿಯೋ, ಅದರಂತೆ, ಅಗ್ನಿಸದೃಶನಾದ ಪರಮಾತ್ಮ ಚರಾಚರ ನಿರ್ವಾಹದಲ್ಲಿ ಸರ್ವಸ್ವತಂತ್ರನೆಂಬೋದ ಮರೆತು, ಸರ್ವಸ್ವತಂತ್ರ–ಸರ್ವಸ್ವತಂತ್ರನಾದ

ಪರಮಾತ್ಮನ ಅನ್ಯಾಧೀನವಲ್ಲದ ಸ್ವಾತಂತ್ರ್ಯ, ತನ್ನಲ್ಲಿ ಆರೋಪಣೆ ಮಾಡಿಕೊಂಡು, 'ಅಹಂಮಮತಾ'ದಿಂದ ಯುಕ್ತನಾಗಿ, ತಾನೆಂಬ–ದೇಹೇಂದ್ರಿಯಾದಿಗಳಿಂದ ಮಾಡತಕ್ಕ ಸರ್ವಕರ್ಮಗಳನ್ನೂ, ಪರಮಾತ್ಮ ತನ್ನ ಕ್ರಿಯಾ ದ್ವಾರಾ ಮಾಡಸತಾನೆಂತ ತಿಳಿಯದೆ, ತಾನೇ ಮಾಡತೇನೆ ಎಂತ (ತಿಳಿಯುವ) ಅನ್ನುವ, ಪಶುಪ–ದನಗಳನ್ನು ಮೇಯಿಸತಕ್ಕ ಮೂಢ ಮತ್ತು ಅವನೇ ಅಜ್ಞಾನಿ ಎಂತಲೂ ಅರ್ಥ. ಇದರಿಂದ ನರಕಾದ್ಯನರ್ಥಗಳ ಅನುಭವಮಾಡತಕ್ಕವ, ನರನೇನೇನು ಮಾಳ್ಪ–ಇಂಥಾ ಮನುಷ್ಯ ಏನೇನು ಮಾಡತಕ್ಕ, ಅಶನ–ಅನ್ನದಾನವೇನು, ಪದಸಂಧಿಪ್ರಯುಕ್ತ ಅನಶನವ್ರತವೇನು, ದಾನ–ಸತ್ಪಾತ್ರದಲ್ಲಿ ದಾನಗಳೇನು, ಸ್ನಾನ–ಅನೇಕ ತೀರ್ಥಸ್ನಾನಗಳೇನು, ತಥಾ ಭಗವತ್ಪೂಜಾದಿಗಳೇನು, ಕರ್ಮಗಳು – ಇನ್ನೂ ಅನೇಕ ಸತ್ಕರ್ಮಗಳೇನು (ಇವುಗಳೆಲ್ಲ), ದೇಹಾಯಾಸವನೆ ಕೊಟ್ಟು–ಪೂರ್ವೋಕ್ತ ಘಟನಿರ್ಮಿತ ದೇಹಾಯಾಸವತ್ ಪ್ರಯಾಸಪಟ್ಟು ಮಾಡಿದ ಕರ್ಮಗಳು ದೇಹಕ್ಕೆ ಬಹಳ ಕಷ್ಟವನ್ನು ಕೊಟ್ಟು, ಬರಿದೆ–ಫಲವಿಲ್ಲದೆ, ಬರೀದಾಗಿ, ಒಸರಿ ಪೋಪುವು–ಹಸಿ ಗಡಿಗಿಗತ ನೀರೂ ಹೋಗಿ ಆ ಗಡಿಗಿ ವ್ಯರ್ಥವಾಗಿಹೋದಂತೆ ಹೋಗೋವಾಗತವೆ. ಆದ್ದರಿಂದ, ಅಹಂಮಮತಾದಿಗಳ ತ್ಯಜಿಸಿ, ಅಲ್ಪ ಕರ್ಮ ಮಾಡಿ ದರೂ ಮಹತ್ತರ ಫಲ ಕೊಡೋವಾಗತವೆ. ಅಹಂಬುದ್ಧಿಯಿಂದಲೂ ಸರ್ವಕರ್ಮಕರ್ತ ನಾನೆಂಬ ಜ್ಞಾನದಿಂದಲೂ ಮಾಡಿದ ಕರ್ಮ, ಘಟ, ನೀರು ಎರಡೂ ಹೋದಂತೆ ಫಲ ವಿಲ್ಲದೇನೆ ದುಃಖಪ್ರಾಪ್ತಿಯಾಗತದೆ ಎಂತ ತಾತ್ಪರ್ಯ.

**ವಿಶೇಷಾರ್ಥ :**–ಹಸೀಗಡಿಗೆ ಒಳಗಿನ ನೀರು ಸೋರಿಹೋದಂತೆ, ಇವ ಮಾಡಿದ ಸತ್ಕರ್ಮಕ್ಕೆ ಫಲಗಳು ಪ್ರಾಪ್ತವಾಗದೆ, ದೇಹಾಯಾಸ ಉಳಿಯುತ್ತದೆ ಹೊರ್ತು, ಮಾಡಿದ ಸತ್ಕರ್ಮ ಬರೀದಾಗೋಣವಲ್ಲದೆ, ಪರಮಾತ್ಮನಲ್ಲಿ ಇರತಕ್ಕ ಸರ್ವಸ್ವಾತಂತ್ರ್ಯ, ತನ್ನಲ್ಲಿ ಆರೋಪಣೆ ಮಾಡಿಕೊಂಬೋಣದರಿಂದ ಸತ್ಕರ್ಮ, ದುಷ್ಕರ್ಮ ಎರಡೂ ಪಾಪಫಲವೇ ಕೊಡೋವಾಗತವೆ. ಸತ್ಕರ್ಮವೇ ಶೇಷ ಉಳಿಯದ ಮ್ಯಾಲೆ, ಫಲ ಹ್ಯಾಂಗೆ ಕೊಡತದೆ ಎಂದರೆ ಭೂಮಿಯಲ್ಲಿ ವಿದ್ಯಮಾನವಾದ ಕೆಂಡವನ್ನು ಅಲ್ಲಿ ಇಲ್ಲದಂತೆ ಮಾಡಿದರೆ ಅದರ ಶಾಖ (ಉಷ್ಣ), ಭೂಮಿಯನ್ನ ಆಶ್ರಯಮಾಡಿ ಇರ್ತದೆ. ತದ್ವತ್, ಪುಣ್ಯಗಳು ಸ್ರವಿಸಿಹೋದರೂ ಈ ದೃಷ್ಟಾಂತದಿಂದ ಕ್ವಚಿತ್ ಇರೋದಾಗಿ ಇರ್ತದೆ. ಅದದು ಫಲ ಕೊಡೋದಾಗತದೆ. ಕರ್ಮ, ಜಡ. ತತ್ಫಲಗಳ ಉಣಿಸತಕ್ಕ ಪರಮಾತ್ಮ ಪಾಪಫಲವೇ ಉಣಿಸತಾನೆ. ಅಸ್ವತಂತ್ರ ಜೀವನಾದಮ್ಯಾಲೆ ಅಂಥಾ ಪ್ರೇರಣೆ ಏಕೆ ಮಾಡಬೇಕೆಂದರೆ, ಈಶ್ವರನಿಂದ ರಚಿತವಲ್ಲದ ಅನಾದಿಕರ್ಮವನ್ನನುಸರಿಸಿ, ಪ್ರೇರಣಮಾಡತಾನೆ. ಹೀಂಗೆ ಹೇಳಿದರೆ ಕರ್ಮಾಧೀನತ್ವ ಪರಮಾತ್ಮಗೆ ಬಂತು. ಅನ್ಯಾಧೀನತ್ವ ಪರಮಾತ್ಮಗೆ ದೋಷವಾಯಿ ತಲ್ಲಾ ಎಂದರೆ, ಕರ್ಮ, ಜಡ. ಪರಮಾತ್ಮ, ಚೇತನ. ಜಡಪದಾರ್ಥ, ಚೇತನನಾದ ಪರಮಾತ್ಮನ ಅಧೀನಮಾಡಿಕೋತದೆ ಎಂಬೋದು ಅಸಂಭಾವಿತವಲ್ಲವೆ? ಆದ್ದರಿಂದ ಕೂಡೋದಿಲ್ಲ. ಆದಕಾರಣ ಪರಮಾತ್ಮ ತಾನಾಗೆ ಅದರ ಅಧೀನನಾಗಿ ಇದ್ದಾನೆ ಎಂತ

ಹೇಳಬೇಕು. ಆ ಪ್ರಕಾರ ತಾನೇ ಜಡಕರ್ಮಾಧೀನನಾಗಿ ಇರೋದಕ್ಕೆ ಸ್ವಪ್ರಯೋಜನ ಏನೂ ಕಾಣೋದಿಲ್ಲ. ಆ ಜಡಕರ್ಮಕ್ಕಾದರೂ ಏನಾದರೂ ಪ್ರಯೋಜನವು ಉಂಟಾ ಎಂದರೆ, ಜಡವಾದ್ದರಿಂದ ಅದಕ್ಕೆ ಏನೂ ಪ್ರಯೋಜನವಿಲ್ಲಾ. ದಾವ ವಿಧದಿಂಲೂ ಪರಮಾತ್ಮ ದೋಷಿ ಆಗೋದಿಲ್ಲ. ಅದರ ಅನಾದಿ ಕರ್ಮವನ್ನನುಸರಿಸಿ ಪ್ರೇರಿಸೋದಕ್ಕೆ ಕಾರಣವೇನೆಂದರೆ ಆಯಾ ಜೀವರ ಅನಾದಿ ಕರ್ಮ ಎಂಬುದು, "ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ" ಎಂಬ ಪ್ರಮಾಣಾನುಸಾರ ಆಯಾ ಜೀವರ ಅನಾದಿ ಕರ್ಮ, ಆಯಾ ಜೀವರ ಭೋಜನಾನಂತರವೇ ಸ್ವರೂಪ ವ್ಯಕ್ತವಾಗಿ ವೈಕುಂಠ ಸೇರಬೇಕು. ತದ್ವ್ಯತಿರಿಕ್ತ, ಕೂಡೋದಿಲ್ಲ. ಆಯಾ ಜೀವರು, ಆಯಾ ಕರ್ಮಗಳ ಸ್ವತಂತ್ರತ್ವೇನ ಭೋಜನಮಾಡಿ ಪರಿಹಾರ ಮಾಡಿಕೊಳ್ಳಬಹುದಲ್ಲಾ ಎಂದರೆ, ಜೀವರು ಅಸ್ವತಂತ್ರರು, ಅಂದರೆ ಪರಾಧೀನ ಸ್ವಾತಂತ್ರ್ಯ ಉಳ್ಳವರು. ಸ್ವಾಧೀನಸ್ವತಂತ್ರರು ಎಂತ ಹೇಳೋಣವೆಂದರೆ, ಈಶಸಾಮ್ಯ ಬರೋದಾಗತದೆ. ಮತ್ತು ಅಸ್ವಾತಂತ್ರ್ಯ ಸ್ವಾಧೀನದಿಂದ ಭೋಜನಮಾಡಿದ ಕಾಲಕ್ಕೂ 'ಅಹಂ ಕರ್ತಾ' ಎಂಬ ಕರ್ಮ ಕೆಲವು ಕಾಲದವರಿಗೂ ಭೋಜನ ಮಾಡಿಯೆತೀರಬೇಕು. ಅನಾದಿ ಕರ್ಮದಲ್ಲಿ ಅಂಥಾದ್ದು ಒಂದು ದುಷ್ಕರ್ಮ ಇರೋದಾಗಿ ಇದೆ. ಹಾಂಗೆ ಇರೋಣದರಿಂದ ಹ್ಯಾಂಗಾದರೂ 'ಅಹಂ ಕರ್ತಾ' ಎಂಬ ಜ್ಞಾನ ಉಂಟುಮಾಡಿ ಕೊಡತಕ್ಕ ಕರ್ಮ, ಜೀವನನ್ನ ಬಿಟ್ಟದ್ದಲ್ಲಾ. ಆ ಕರ್ಮ, ಜೀವಗೆ ಭೋಜನಮಾಡಸತಾನೆ, ಅಸ್ವತಂತ್ರನಾದಕಡಿಯಿಂದ ಅನಾದಿ ಕರ್ಮ ಭೋಗಕ್ಕೆ ಕೊಡದೇನೆ, ಉದ್ಧಾರ ಯಾಕೆ ಮಾಡಬಾರದು ಎಂದರೆ, ತೃಣಜೀವನ್ನ ಚತುರ್ಮುಖಬ್ರಹ್ಮನನ್ನಾಗಿ ಯಾಕೆ ಮಾಡಬಾರದು? ಎಂತ ಪ್ರಶ್ನೆ ಮಾಡಿದರೆ, ಉತ್ತರ ಉಂಟೆ? ಅದು ಅಧಿಕಪ್ರಸಂಗವಾಗಲಿಲ್ಲವೆ? ಮತ್ತು ಅನಾದಿ ಸ್ವರೂಪ ಕುದರಿಯಾಗಿರತಕ್ಕ ಜೀವನ್ನ, ಮನುಷ್ಯಜೀವನ್ನಾಗಿ ಯಾಕೆ ಮಾಡಬಾರದು ಎಂತ ಪ್ರಶ್ನೆ ಮಾಡಿದರೆ ಉತ್ತರ ಉಂಟೇ? ಇದೂ ಸಹ ಹಾಂಗೇ ಅಸಂಭಾವಿತ ಪ್ರಶ್ನೆಯಲ್ಲವೆ? ಮತ್ತು ಪರಮಾತ್ಮ ತನ್ನ ಆನಂದಕ್ಕೆ ಸಮಾನವಾದ ಆನಂದ, ಮೋಕ್ಷದಲ್ಲಿ ಯಾವತ್ತೂ ಪ್ರಾಣಿಗಳಿಗೆ ಕೊಡಬಾರದ್ಯಾಕೆ? ಎಂಬ ಈ ತರಹ ಪ್ರಶ್ನೆ ಮಾಡಬಹುದೆ? ಇವೆಲ್ಲಾ ಪರಮಾತ್ಮನಲ್ಲಿ ದೋಷಗಳಾದೀತೆ? ಎಂದೆಂದಿಗೂ ಆಗಲಾರವು, ಅನಾದಿಯಿಂದ ಅದರದರಲ್ಲಿ ಕ್ಲೃಪ್ತಗಳು ಅಂಥಾವೇ. ಜೀವನೇನು, ಜೀವನ ಅನಾದಿ ಕರ್ಮವೇನು, ಜೀವನ ಯೋಗ್ಯತಾ ಏನು, ಇವು ಯಾವತ್ತೂ ಈಶ್ವರನಿಂದ ರಚಿತವಲ್ಲ. ಅವು ಅನಾದಿಯಿಂದ ಹಾಗೇ ಇರತಕ್ಕವೆ. ಅನ್ಯಥಾ ಮಾಡೋ ಸಾಮರ್ಥ್ಯ ಪರಮಾತ್ಮಗೆ ಇದ್ದ ಕಾಲಕ್ಕೂ ಅಂಥಾ ಇಚ್ಛಾ ಮಾಡೋದಿಲ್ಲ. ಜೀವಗೆ ಸ್ವಾಧೀನಕರ್ತೃತ್ವ ಇದ್ದರೆ, ಬೇಕಾದ್ದು ಮಾಡಿಕೊಂಬ. ಅಂಥಾದ್ದು ಇಲ್ಲದೆ ಇರೋಣದರಿಂದಲೆ ಅನಾದಿ ಕರ್ಮ ಭೋಗಕ್ಕೆ ಸಂಬಂಧ ಪಡೋವನಾಗಿದ್ದಾನೆ. ಆದ್ದರಿಂದಲೆ ಜೀವ ಅಸ್ವತಂತ್ರ, ಪರಮಾತ್ಮ ಸ್ವತಂತ್ರ ಎಂಬುದು ಸಿದ್ಧವು.

ಉದಕಸಾಮ್ಯ, ಪುಣ್ಯ; ಹಸೀ ಘಟಕ್ಕೆ ಸಾಮ್ಯ, ಸ್ವತಂತ್ರ ಕರ್ತೃ ಎಂಬುದು; ಮೃತ್ತಿಕೆಗೆ ಸಾಮ್ಯ, ಅಧಿಕಾರಿ; ಕುಲಾಲಗೆ ಸಾಮ್ಯ, ಪರಮಾತ್ಮ; ಬಿಸಿಲಿಗೆ ಸಾಮ್ಯ, ಅನಾದಿಕರ್ಮ; ಉದಕ ಪ್ರವಿಸೋದಕ್ಕೆ ಸಾಮ್ಯ, ಪುಣ್ಯಫಲ ಪ್ರವಿಸಿ ಹೋಗೋಣ

ಎಂತ, ತಿಳಿಯಬೇಕು. ಜೀವ ಅಸ್ವತಂತ್ರ, ಪರಮಾತ್ಮ ಸ್ವಾಧೀನಸ್ವತಂತ್ರ ಎಂಬುದಕ್ಕೂ ಬಿಂಬಕ್ರಿಯಾ ವ್ಯತಿರಿಕ್ತ ಪ್ರತಿಬಿಂಬಕ್ರಿಯಾ ಆಗೋದಿಲ್ಲ ಎಂಬುದಕ್ಕೂ ಶಾಂಡಿಲ್ಯತತ್ತ್ವ ಪ್ರಮಾಣ :–

"ಪ್ರಕೃತಿಸ್ಥಾ ಇಮೇ ಜೀವಾಃ ಸ್ವಾನುರೂಪಗುಣೇರಿತಾಃ | ಸ್ವಾನುರೂಪಕ್ರಿಯಾಃ ಕೃತ್ವಾ ಪ್ರಪದ್ಯಂತೇ ನಿಜಾಂ ಗತಿಮ್ || ತತ್ರ ಯಃ ಸದ್ಗತಿಂ ಪ್ರಾಪ್ತುಂ ಪುಮಾನಿಚ್ಛತಿ ಚೇತ್ತದಾ | ವರ್ಣಾಶ್ರಮೋಚಿತೇಷ್ವೇವ ಪ್ರಯತೇತ ಸುಕರ್ಮಸು || ಕರ್ತಾ ಕಾರಯಿತಾ ವಿಷ್ಣುರಿತಿ ಯದ್ಯಪಿ ಸಮ್ಮತಮ್ | ಸ್ವಾತಂತ್ರ್ಯಾತ್ಸರ್ವಕರ್ತೃತ್ವಾತ್ ಹರಿರ್ಯತ್ನವತಾಂ ನೃಣಾಮ್ || ಕಾರಯಿತ್ವಾ ಪ್ರೇರಯಿತ್ವಾ ಕೃತ್ವಾ ಕರ್ಮ ಚ ತತ್ಫಲಮ್ | ದದಾತಿ ಸದೃಶಾಕಾರಂ ನಾನ್ಯಥಾ ತು ಕಥಂಚನ || ಕರ್ತುಮಿಚ್ಛೋಃ ಸದಾ ವಿಷ್ಣುಃ ಕರ್ತಾ ಕಾರಯಿತಾ ಸದಾ | ಸ್ವಯಂ ಗಂತುಮಶಕ್ತಸ್ಯ ಪಾತುಮಿಚ್ಛೋಃ ಸ್ತನಂ ಶಿಶೋಃ || ಕರ್ತೃತ್ವಂ ಮಾತುರೇವಾಸೀತ್ ತದಧೀನಸ್ತದಾಶ್ರಯಃ | ತತ್ಕರ್ತೃತಾ ತದಾಧೀನಾ ತಥಾ ಜೀವಸ್ಯ ಕರ್ತೃತಾ || ಯಥಾ ಪ್ರಕೃತಿಜೀವಾನಾಂ ಇಚ್ಛಾ ಸಂಜಾಯತೇ ತದಾ | ಯಥೇಚ್ಛತಿ ತಥಾ ವಿಷ್ಣುಃ ಜೀವಂ ಕಾರಯತೇ ಧ್ರುವಮ್ || ಪಿಪೀಲಿಕಾಂತಾ ಬ್ರಹ್ಮಾದ್ಯಾ ಜೀವಾ ಯೇ ಚಾಂಡಗೋಚರಾಃ | ತೇಷು ಕೋಪಿ ಕ್ವಚಿತ್ಕ್ವಾಪಿ ನ ಕರ್ತುಂ ಕ್ಷಮತೇ ನರಃ || ಯದಾಶ್ನಾತಿ ತದಾಶ್ನಾತಿ ಯದಾ ವಕ್ತಿ ತದೈವ ಸಃ | ಯದಾ ಜಿಘ್ರತಿ ಜಿಘ್ರಾತಿ ತದಾ ಜೀವಃ ಪರಾನುಗಃ || ಯದಾ ಗಚ್ಛತಿ ವಾ ದೇವಸ್ತದಾ ಗಚ್ಛತಿ ದೇಹಭೃತ್ | ಶೃಣೋತಿ ಚ ಯದಾ ಬ್ರಹ್ಮಾ ತದಾ ಜೀವಃ ಶೃಣೋತಿ ಚ || ಯದೈವಂ ಸ್ಪೃಶತೇ ಕಿಂಚಿತ್ ತದಾಯಂ ಸ್ಪೃಶತೇ ಜನಃ | ಕಿಮತ್ರ ಬಹುನೋಕ್ತೇನ ನಾಕೃತಂ ಕ್ರಿಯತೇ ಜನೈಃ || ಏವಂ ಕರ್ತರಿ ದೇವೇಶೇ ಕರ್ತಾಹಮಿತಿ ಮನ್ಯತೇ | ತೇನ ಸಂಸರತೇ ಜೀವೋ ದುಃಖೀ ಜನ್ಮಸು ಜನ್ಮಸು || ಏವಂ ವಿದ್ವಾನ್ ವಿನೀತಃ ಸನ್ ನಿಃಸ್ಪೃಹಶ್ಚ ಫಲೇಷು ಚ | ಅನುಧ್ಯಾಯನ್ ಸದಾ ವಿಷ್ಣೋಃ ಸ್ವಾತಂತ್ರ್ಯಂ ಸರ್ವಕರ್ತೃತಾಮ್ || ಫಲದತ್ವಂ ತದೀಶತ್ವಂ ಕುರ್ಯಾತ್ಕರ್ಮ ವಿಚಕ್ಷಣಃ | ಅನುಷ್ಠಾತಾ ತಪಸ್ವೀ ಚ ಸರ್ವಧರ್ಮಪರೋಪಿ ವಾ || ವಿನಾ ಯದರ್ಪಣಂ ಸಮ್ಯಕ್ ಫಲಂ ನಾಪ್ನೋತ್ಯಸಂಶಯಮ್ | ದೇಹಿನಾಂ ಯಾಃ ಪ್ರವರ್ತಂತೇ ಪ್ರಾತರಾರಭ್ಯ ಯಾಃ ಕ್ರಿಯಾಃ || ತಾಶ್ಚ ವಿಷ್ಣ್ವರ್ಪಣಂ ಕುರ್ವನ್ ಕರ್ಮಪಾಶೈರ್ವಿಮುಚ್ಯತೇ | ಸೇವಾರ್ಥಂ ಭಗವಾನ್ವಿಷ್ಣುಃ ದೇಶಕಾಲಕ್ರಿಯಾಶ್ರಯಾನ್ || ಸೃಷ್ಟವಾನ್ ಭಗವಾನಾದೌ ತಸ್ಮಾತ್ ಪರಿಚರೇನ್ನಿಜಮ್ | ಇತಿ ಸಂಕಲ್ಪ್ಯ ಚೋತ್ಥಾಯ ಸರ್ವಕರ್ಮ ಸಮಾಚರೇತ್ || ವಿಷ್ಣೋರರ್ಥೇ ಕರಿಷ್ಯಾಮಿ ಚಾಹರಾಮಿ ದದಾಮಿ ಚ | ನಾತ್ಮಾರ್ಥಮಿತಿ ವೈ ಕ್ವಾಪಿ ವದೇತ್ಕರ್ಮ ಕರೋತಿ ಯಃ ||" ಇತಿ ಶಾಂಡಿಲ್ಯತತ್ತ್ವೇ, ಪಂಚದಶಾಧ್ಯಾಯೇ.

ಪರಮಾತ್ಮ ಸ್ವತಂತ್ರ, ಜೀವ ಅಸ್ವತಂತ್ರ, ಆದ್ದರಿಂದ ಪರಮಾತ್ಮನ ಕ್ರಿಯಾ ದ್ವಾರಾ, ಜೀವನ ಕ್ರಿಯಾ ನಡಿಯುತ್ತದೆ. ಇಲ್ಲದಿದ್ದರೆ, ಇಲ್ಲಾ ಎಂತ ತಿಳದು ಪ್ರಾತಃ ಕಾಲದಾರಭ್ಯ ಮಾಡಿದ ಯಾವತ್ತೂ ಕರ್ಮಗಳ, ಭಗವದರ್ಪಣೆ ಮಾಡಿ ಅಹಂ ಮಮತಾದಿಗಳ ತ್ಯಾಗ ಮಾಡಿ, ನಿರ್ಲಿಪ್ತನಾಗಿ ಇರಬೇಕೆಂಬ ತಾತ್ಪರ್ಯವು.

ಬ್ಯಾಸಗಿ ಬಿಸಿಲು ಸದೃಶ, ಜೀವ ; ಅಗ್ನಿಸದೃಶ, ಪರಮಾತ್ಮ ;

ಘಟಸದೃಶ ಸ್ವಾತಂತ್ರ್ಯಗಳು ಎರಡು —

(೧) ಜೀವಸದೃಶ ಬ್ಯಾಸಗೀ ಬಿಸಿಲಲ್ಲಿ ಒಣಗಿಸಿದ ಘಟ ಒಂದು.

(೨) ಪರಮಾತ್ಮಸದೃಶ ಅಗ್ನಿಯಿಂದ ಸುಡಲ್ಪಟ್ಟ ಘಟ ಇನ್ನೊಂದು.

ಜೀವಸದೃಶ ಬ್ಯಾಸಗೀ ಬಿಸಿಲಿನಲ್ಲಿ ಒಣಗಿದ, ಸ್ವಾತಂತ್ರ್ಯಸದೃಶ ಘಟದ ಸಾಮರ್ಥ್ಯ, ಉದಕ ಸಂಬಂಧವಾದರೆ ಕರಗತವೆ.

ಪರಮಾತ್ಮಸದೃಶವಾದ, ಅಗ್ನಿಸಂಬಂಧವಾದ, ಸ್ವಾತಂತ್ರ್ಯಸದೃಶವಾದ ಘಟ, ಉದಕ ಸಂಬಂಧವಾದರೆ ಕರಗೋದಿಲ್ಲ.

ಇದರಿಂದ ಸಾಮರ್ಥ್ಯ ಅನಾದಿಯಿಂದ ಇಂಥಾದ್ದಾಗಿಯದೆ. ಇದನರಿಯದೆ ಪರಮಾತ್ಮನ ಸ್ವಾತಂತ್ರ್ಯಕ್ಕೆ ಸದೃಶವಾದ ಘಟದಂತೆ, ಜೀವನ ಸ್ವಾತಂತ್ರ್ಯಕ್ಕೆ ಸದೃಶವಾದ ಘಟವೂನೂ ಎಂತ ತಿಳದು, ಸುಡಲ್ಪಟ್ಟ ಘಟದಲ್ಲಿ ಉದಕ ತುಂಬಿದಂತೆ, ಸುಡದೆ ಒಣಗಿಸಿದ ಘಟವನ್ನ ಇದೂನೂ ಸುಟ್ಟ ಘಟವೆ ಅಂತ ಆರೋಪಣೆ ಮಾಡಿಕೊಂಡು ನೀರು ತುಂಬಿದರೆ, ಆ ಘಟದಲ್ಲಿ ಸುಕರ್ಮವೆಂಬ ಉದಕ ನಿಲ್ಲಲಾರದು, ಎಂತ ತಾತ್ಪರ್ಯ. ಸುಕರ್ಮ ಏನೇನೂ ನಿಲ್ಲೋದಿಲ್ಲವಾ ಎಂದರೆ ಇದಕ್ಕೆ ಸಮಾಧಾನ. ಭೂಮಿ ಆಕ್ರಮಿಸಿದ ಅಗ್ನಿಶಾಖದೋಷಾದಿಯಲ್ಲಿ ಕ್ವಚಿತ್ ನಿಂತಿರ್ತದೆ, ಎಂತ ಹಿಂದೆ ಹೇಳಿದ್ದೇವೆ. ಅಹಂ ಕರ್ತಾ ಎಂತ ಮಾಡಿದ ದುಷ್ಕರ್ಮ ಕೂಡಾ ಇರದೇ ಸ್ರವಿಸಿ ಹೋಗಬೇಕಾಯಿತಲ್ಲಾ ಎಂದರೆ, ಸುಕರ್ಮ ದುಷ್ಕರ್ಮ ಎಂತ ಎರಡು. ಸುಕರ್ಮ ಫಲಕ್ಕೆ ಉದಕ ದೃಷ್ಟಾಂತ ಕೊಟ್ಟು ಇರೋಣದರಿಂದ, ದುಷ್ಕರ್ಮಕ್ಕೆ ತದನ್ಯ ದೃಷ್ಟಾಂತವೇ ತೆಗೆದುಕೋಬೇಕು. ತದನ್ಯಗಳು ಸ್ರವಿಸಿಹೋಗದೆ ಇರತಕ್ಕ ಧಾನ್ಯಾದಿ ದ್ರವ್ಯಗಳು ಹಸೀ ಘಟದಲ್ಲಿ ಹಾಕೋಣದರಿಂದ, ಸ್ರವಿಸಿ ಹೋಗೋದಿಲ್ಲ. ತದ್ವತ್ ಪಾಪಕರ್ಮಫಲ ಸ್ರವಿಸಿಹೋಗದೆ ನಿಲ್ಲೋದಾಗತದೆ ಎಂತ ತಿಳಿಯಬೇಕು. ಆದ್ದರಿಂದ, ಅಹಂ ಸ್ವಾಧೀನಕರ್ತಾ ಎಂತ ತಿಳಿಯದೆ ಪರಾಧೀನಕರ್ತಾ ಎಂತ ತಿಳಿಯಬೇಕು. "ನ ಹಿ ದೃಷ್ಟಾಂತೇ ಸರ್ವಸಾಮ್ಯಂ" ಎಂಬ ಪ್ರಮಾಣವನ್ನ ಅನುಸರಿಸಬೇಕಾದ ಮಟ್ಟಿಗೆ ದೃಷ್ಟಾಂತ ತೆಗೆದುಕೋಬೇಕು ಎಂತ ತಾತ್ಪರ್ಯ.

**ಎರಡು ದೀಕ್ಷೆಗಳಿಹವು ಬಾಹ್ಯಾಂ ।**
**ತರವೆನಿಪ ನಾಮುದಲಿ ಬುಧರಿಂ ।**
**ದರಿತು ದೀಕ್ಷಿತನಾಗು ದೀರ್ಘದ್ವೇಷಗಳ ಬಿಟ್ಟು ॥**
**ಹರಿಯೆ ಸರ್ವೋತ್ತಮ ಕ್ಷರಾಕ್ಷರ ।**
**ಪುರುಷಪೂಜಿತಪಾದ ಜನ್ಮಾ ।**
**ದ್ಯರವಿದೂರ ಸುಖಾತ್ಮ ಸರ್ವಗನೆಂದು ಸ್ಮರಿಸುತಿರು ॥ ೧೮ ॥**

ಅನುಗ್ರಹ ಪಡಿಯಬೇಕಾದ ಅಧಿಕಾರಿಗೆ ದೀಕ್ಷಾದ್ವಯಗಳು ಇರಬೇಕೆಂತ ಹೇಳತಾರೆ.

ಬಾಹ್ಯ – ಬಹಿಃ, ಸರ್ವರ ದೃಷ್ಟಿಗೆ ಕಾಣತಾ ಇರತಕ್ಕ ದೀಕ್ಷಾ ಎಂತಲೂ, ಅಂತರವು–ಗೂಢವಾಗಿ ತನ್ನ ಮನಸ್ಸಿನಲ್ಲಿ ಇರತಕ್ಕ ದೀಕ್ಷಾ ಎಂತಲೂ, ಎನಿಪ–ಎನತಕ್ಕ, ನಾಮದಲಿ–ಹೆಸರಿನಿಂದ, ಎರಡು ದೀಕ್ಷೆಗಳು–ಎರಡು ವಿಧವಾದ ನೇಮಗಳು, ಇಹವು–ಇರೋವಾಗಿ ಅವೆ. ಬುಧರಿಂದರಿತು–ಈ ಎರಡು ವಿಧವಾದ ದೀಕ್ಷಾ ಮಾಡತಕ್ಕ ಕರ್ಮವನ್ನ ಜ್ಞಾನಿಗಳಿಂದ ತಥಾ ಜ್ಞಾನೋಪದೇಶ ಗುರುಗಳಿಂದ ಛಂದಾಗಿ ಅರಿತವನಾಗಿ, ದೀಕ್ಷಿತ ನಾಗು–ನೇಮದಿಂದ ಯುಕ್ತನಾಗು (ಬಾಹ್ಯದೀಕ್ಷಾ ದಾವದೆಂದರೆ), ದೀರ್ಘ ದ್ವೇಷಗಳ ಬಿಟ್ಟು–ಶ್ರೀಮದಾಚಾರ್ಯರ ಸಚ್ಛಾಸ್ತ್ರಕ್ಕೆ ವಿರುದ್ಧವಾದ ಸೋಹಂ ಉಪಾಸಕವಾದ ಇನ್ನೂ ಅನೇಕ ದುಶ್ಶಾಸ್ತ್ರ ಪ್ರವಚನಾಧಿಕಾರಿಗಳಾದ ತಮೋಯೋಗ್ಯರ ಸಹವಾಸಾದಿ ಗಳು, ವ್ರತಾನುಷ್ಠಾನಾದಿ ಕರ್ಮಗಳಿಗೆ ವಿರುದ್ಧವಾದ ದುಷ್ಕರ್ಮಗಳು, ಸ್ನಾನ, ನಾಮ ಧಾರಣಾದಿ ಸತ್ಕರ್ಮರಹಿತರಾದ ಅಶುಚಿಯಿಂದ ಯುಕ್ತರಾದವರ ಸಹವಾಸಾದಿಗಳು ಮಾಡದೆ ಬಿಟ್ಟು (ಅಂತರ ದೀಕ್ಷಾ ದಾವದೆಂದರೆ) ಹರಿಯೆ ಸರ್ವೋತ್ತಮ–ಸೃಷ್ಟ್ಯಾದ್ಯಷ್ಟ ಕರ್ತೃತ್ವವುಳ್ಳ ಶ್ರೀ ನಾರಾಯಣದೇವರು ಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರಾಪೇಕ್ಷಯಾ ಉತ್ತಮನೆಂತಲೂ ( ಈ ಪರಮಾತ್ಮ), ಕ್ಷರಾಕ್ಷರಪುರುಷಪೂಜಿತಪಾದ – ರಮಾ ಬ್ರಹ್ಮಾದಿಗಳಿಂದ ಪೂಜಾ ಮಾಡಿಸಿಕೊಳ್ಳಲ್ಪಟ್ಟ ಪಾದಗಳು ಉಳ್ಳವನೆಂತಲೂ, ಇನ್ನೂ ಶ್ರೀ ನಾರಾಯಣದೇವರು, ಜನ್ಮಾದ್ಯರವಿದೂರ–ಜನನಮರಣ ದೋಷ ದೂರನೆಂತಲೂ, ಸುಖಾತ್ಮ–ಜ್ಞಾನಾನಂದಾದಿಗಳೆ ಸ್ವರೂಪವಾಗಿ ಉಳ್ಳವನೆಂತಲೂ, ಸರ್ವಗನು–ಸರ್ವ ಸ್ಥಳದಲ್ಲೂ ವ್ಯಾಪ್ತನೆಂತಲೂ (ಇನ್ನೂ), ಎಂದು ಸ್ಮರಿಸುತಿರು–ಶ್ರೀ ಭಾರತೀಶರಾದ ವಾಯುದೇವರು ಜೀವೋತ್ತಮರೆಂತಲೂ, ತಾರತಮ್ಯ ಪಂಚಭೇದ ಸತ್ಯವೆಂತಲೂ, ಅಹಂ ಜ್ಞಾನರಹಿತನಾಗಿ ಜ್ಞಾನ ಭಕುತಿ ವೈರಾಗ್ಯದಿಂದ ಯುಕ್ತನಾಗಿ ವಿಷಯಾದಿಗಳಲ್ಲಿ ನಿಸ್ಪೃಹ ನಾಗಿ ಹೃದಯಾಕಾಶದಲ್ಲಿ ವಾಸನಾಮಯ ಪ್ರತೀಕವನ್ನ ನಿಲ್ಲಿಸಿ, ಮಾನಸಪೂಜಾ ಮಾಡತಾ ಶ್ರೀಹರಿಯ ಕರುಣಾರಸವನ್ನ ಪಾನಮಾಡತಾ ತಾನು ಅಸ್ವತಂತ್ರಜ್ಞಾನವುಳ್ಳವ ನಾಗಿ "ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಪರಸ್ಮೈ ಸನ್ನಿವೇದಯೇತ್" ಎಂತ ಅನುಸಂಧಾನಯುಕ್ತನಾದ ಜನ್ಮ ಸಾರ್ಥಕ್ಯಜ್ಞಾನವೆ, ಅಂತರ ದೀಕ್ಷಾ ಎಂತ ಹೆಸರು. ಈ ಎರಡು ದೀಕ್ಷಾವುಳ್ಳ ಅಧಿಕಾರಿಗೆ ಶ್ರೀ ಪರಮಾತ್ಮನ ಅನುಗ್ರಹವಾಗುತ್ತದೇ ಹೊರ್ತು, ಅನ್ಯರಿಗೆ ಆಗೋದಿಲ್ಲ ಎಂತ ತಾತ್ಪರ್ಯ.

ಪರಮಾತ್ಮ ದೋಷದೂರ ಎಂತಲೂ, ಜೀವ ದೋಷಬದ್ಧ ಎಂತಲೂ ಉಕ್ತ ವಾಗಿ ಅದೆ. ಪರಮಾತ್ಮ ಚಿದಾನಂದಸ್ವರೂಪ ಉಳ್ಳವನು. ಜೀವನೂ ಚಿದಾನಂದ ಸ್ವರೂಪ ಉಳ್ಳವನೇ, ಉಭಯರೂ ಚಿದಾನಂದರಾದಮ್ಯಾಲೆ ಪರಮಾತ್ಮ ದೋಷ ದೂರ ಎಂತಲೂ, ಜೀವ ದೋಷಯುಕ್ತನೆಂತಲೂ ಹೇಳೋಣ ಹ್ಯಾಂಗೆ ಕೂಡತದೆ, ಮತ್ತು ಕರ್ಮ ಎಂಬುದು ಜೀವ, ಪರಮಾತ್ಮರು ಉಭಯರೂ ಸೇರಿ ಮಾಡಿದ ಕರ್ಮವು ಉಭಯರಿಗೂ ಲೇಪವಾಗಬೇಕು. ಜೀವಗೆ ಮಾತ್ರ ಲೇಪ ಹ್ಯಾಂಗೆ, ಪರಮಾತ್ಮಗೆ

ಏಕೆ ಇಲ್ಲದೆ, ಹೋಯಿತು? ಉಭಯತ್ರರೂ ಚಿದಾನಂದಸ್ವರೂಪರೇವೇ. ಮತ್ತು ಜೀವ ಅಸ್ವತಂತ್ರನಾದಕಡಿಯಿಂದ ಲೇಪ ಉಂಟು ಎಂದರೆ ದುರ್ಬಲನಾದ ಅಸ್ವತಂತ್ರ ನಾದ ಜೀವಗೆ ಸ್ವತಂತ್ರನಾದ ಬಲಿಷ್ಠನಾದ ಪರಮಾತ್ಮ ದುಃಖಾದಿಗಳ ಉಣಸತಾನೆ, ಎಂತ ಹೇಳಬೇಕು. ಏಕೆಂದರೆ, ಬಲಿಷ್ಠನಾದಪ್ರಯುಕ್ತ ಉಣಸತಾನೆ ಎಂತ ಹೇಳ ಬೇಕು. ಬಲಿಷ್ಠನಾದವ ದುರ್ಬಲನ ದುಃಖ ಬಡಿಸೋಣ, ಸಾಮರ್ಥ್ಯ ವಿಶೇಷದಲ್ಲಿ ಸೇರಲಿಲ್ಲಾ. ತನ್ನ ಸಮಾನೀಕನ್ನ ತಾನು ದುಃಖಬಡಿಸಿದರೆ ಅವ ಸಾಮರ್ಥ್ಯವಂತ ಎಂತ ಕರಿಸತಾನೆ. ಆದ್ದರಿಂದ, ಈ ಜೀವನ್ನ ದುಃಖಬಡಿಸೋಣ ಪರಮಾತ್ಮಗೆ ಸಾಮರ್ಥ್ಯದಲ್ಲಿ ಸೇರಲಿಲ್ಲ. ಪರಮಾತ್ಮನಲ್ಲಿ ದೋಷ ಪ್ರಾಪ್ತವಾಗತದೆ. ಮತ್ತು ಜೀವನೂ ನಿತ್ಯ. ಪರಮಾತ್ಮನೂ ನಿತ್ಯ. ಉಭಯರೂ ಚಿದಾನಂದರು. ಆದ್ದರಿಂದ ನಿತ್ಯತ್ವದಲ್ಲಿ ಸಾಮ್ಯ ಬರೋದಾಯಿತು. ಪರಮಾತ್ಮ ಅಸದೃಶ ವಸ್ತು ಆಗಲಿಲ್ಲಾ, ನಿರ್ದೋಷ ವಸ್ತೂನೂ ಆಗಲಿಲ್ಲಾ ಎಂತ ಆಕ್ಷೇಪ ಬಂದರೆ ಸಮಾಧಾನ :– ಪರಮಾತ್ಮ ದೋಷದೂರ ; ಜೀವ ದೋಷಯುಕ್ತ. ಹ್ಯಾಂಗೆಂದರೆ, ತೃಣಜೀವ ಆರಂಭಮಾಡಿ ಬ್ರಹ್ಮಾಂತವರಿಗೂ, ಜೀವ ರೇನು, ಅವರಿಗೆ ಸುತ್ತ ಕಟ್ಟಲ್ಪಟ್ಟ ಅನಾದಿ ಲಿಂಗಶರೀರವೇನು, ತದ್ಗತ ಅನಾದಿ ಕರ್ಮ ವೇನು, ಇವು ಈಶ್ವರನಿಂದ ರಚಿತವಲ್ಲ. ಅವರವರಿಗೆ ಅನಾದಿಯಿಂದ ಇದ್ದದ್ದೆ ಸರಿ. ಜೀವನ ಸ್ವರೂಪಕ್ಕೆ ಅನ್ಯಥಾವಾದ ಪೂರ್ವೋಕ್ತ ದೋಷದಿಂದ ಜೀವ, ಕಟ್ಟಿಸಿಕೊಳ್ಳ ಲ್ಪಟ್ಟು ಇದ್ದಾನೆ. ಆದ್ದರಿಂದ ಜೀವ ಅನಾದಿಯಿಂದ ದೋಷಯುಕ್ತನಾದ, ದೋಷಬದ್ಧ ನಾದ ಪ್ರಯುಕ್ತ, ಇಂಥಾ ದೋಷ ಪರಮಾತ್ಮಗೆ ಅನಾದಿಯಿಂದ ಇಲ್ಲವಾದಕಡಿಯಿಂದ ಪರಮಾತ್ಮ ನಿರ್ದೋಷಿ ಎಂತಲೂ, ಜೀವ ದೋಷಿ ಎಂತಲೂ, ಕರಿಸಿದವರಾದರು.

**ಆಕ್ಷೇಪ :–** ಲಿಂಗದೇಹಾಖ್ಯ ದೋಷ ಇರೋವರಿಗೂ ಜೀವ, ದೋಷಿಯೇ ಖರೆ. ಪರಮಾತ್ಮನಂತೆ ನಿರ್ದೋಷಿ ಆಗಬ್ಯಾಡಾ. ದೋಷವೆನಿತಕ್ಕ ಲಿಂಗದೇಹ, ತತ್ಕರ್ಮ ಭಂಗವಾದ ವ್ಯಾಲೆ ನಿರ್ದೋಷಿ ಎಂತ ಕರಿಸತಾನೆ. ಆಗ್ಗೆ ಪರಮಾತ್ಮಗೆ ಸದೃಶವಾದ ನಿರ್ದೋಷತ್ವ ಉಂಟಾಗಲಿ ಎಂದರೆ, ಆಗ್ಗೆ ನಿರ್ದೋಷಿ ಆಗಲಾರ. ದಾವಾಗ್ಯೂ ದೋಷಯುಕ್ತನೇವೇ. ಹ್ಯಾಂಗೆಂದರೆ, ಜೀವನು ಪರಮಾತ್ಮನಂತೆ ನಿರ್ದೋಷ ಸ್ವರೂಪ ಉಳ್ಳವನಲ್ಲ. ಯದ್ಯಪಿ, ವಿವಕ್ಷಾಭೇದದಿಂದ ಜೀವ ನಿರ್ದೋಷಿ ಎಂಬುದು ಖರೇವೆ. ಆದರೂ ಪರಮಾತ್ಮನ ನಿರ್ದೋಷ ಸ್ವರೂಪಕ್ಕೂ, ಜೀವನ ನಿರ್ದೋಷ ಸ್ವರೂಪಕ್ಕೂ ತಾರತಮ್ಯ ಉಂಟು. ಜೀವನಾದವ ವಿವಕ್ಷಾಭೇದದಿಂದ ನಿರ್ದೋಷ ಸ್ವರೂಪ ಉಳ್ಳವ. ಆ ವಿವಕ್ಷಾಭೇದ ಎಂಥಾದ್ದೆಂದರೆ ಪರಮಾತ್ಮನಂತೆ ಜೀವ ನಿರ್ದೋಷಿ ಆಗಿದ್ದಲ್ಲಿ, ದೋಷಯುಕ್ತವಾದ ಲಿಂಗದೇಹದಿಂದಲೂ, ತದ್ಗತ ದೋಷಯುಕ್ತ ವಾದ ಅನಾದಿ ಕರ್ಮದಿಂದಲೂ ವಶನಾಗಿ ಇರಲಾರ. ಯದ್ಯಪಿ ನಿರ್ದೋಷಸ್ವರೂ ಪವೆ. ಆದರೂ ಇಂಥಾ ದೋಷ ಒಂದು ಇರೋದಾಗಿ ಅದೆ. ಅದು ದಾರು ಮಾಡಿದ್ದು ಎಂದರೆ, ದಾರೂ ಮಾಡಿದ್ದಲ್ಲ. ಸ್ವಯಮಾಗೆ ಅನಾದಿಯಿಂದ ಇರೋದಾಗಿ ಅದೆ.

ಇಂಥಾದ್ದು ಪರಮಾತ್ಮಗೆ ಇಲ್ಲವಾದ ಕಡಿಯಿಂದ, ಜೀವನ ನಿರ್ದೋಷತ್ವಕ್ಕೆ, ಪರಮಾತ್ಮನ ನಿರ್ದೋಷತ್ವಕ್ಕೆ ವೈಲಕ್ಷಣ್ಯವದೆ. ಆದ್ದರಿಂದ ಲಿಂಗಭಂಗಾನಂತರದಲ್ಲಿ ಕೂಡಾ ಜೀವ, ಪರಮಾತ್ಮಗೆ ಸಾಮ್ಯವಾದ ನಿರ್ದೋಷಿ ಆಗೋದಿಲ್ಲ. ಜೀವನಲ್ಲಿ ಜೀವಶಬ್ದವಾಚ್ಯನಾಗಿನ್ನೂ, ಕರ್ಮದಲ್ಲಿ ಕರ್ಮಶಬ್ದವಾಚ್ಯನಾಗಿನ್ನೂ, ಲಿಂಗದಲ್ಲಿ ಲಿಂಗಶಬ್ದವಾಚ್ಯನಾಗಿನ್ನೂ, ಅದರದರಲ್ಲಿ ಪರಮಾತ್ಮ ತನ್ನ ಅಭಿನ್ನವಾದ ರೂಪಗಳಿಂದ ತದಾಕಾರನಾಗಿ, ವ್ಯಾಪ್ತನಾಗಿ ಇರೋವನಾಗಿದ್ದಾನೆ. ಕರ್ಮಾಂತರ್ಗತ, ಜೀವಾಂತರ್ಗತ, ಲಿಂಗಾಂತರ್ಗತ, ಭಗವದ್ರೂಪಗಳಿಗೆ ಪರಸ್ಪರ ಅಭೇದವು. ಜೀವಭುಕ್ತ ಕರ್ಮದಲ್ಲಿ, ಪರಮಾತ್ಮನ ಸ್ವರೂಪ ಭೂತ ಕರ್ಮ ಏವಂ ರೀತಿಯಾಗಿ ಬಿಂಬರೂಪಿಯಾಗಿ, ಪರಮಾತ್ಮ ಇರೋವನಾಗಿ ಇದ್ದಾನೆ. ಪರಮಾತ್ಮ ಉಣಸತಾನೆ ಎಂದರೆ, ತನ್ನ ಸ್ವಾಭಿನ್ನಕರ್ಮ ತಾನುಂಡು, ಜೀವಗೆ ಜಡ ಕರ್ಮ ಭೋಜನ ಮಾಡಸತಾನೆ. ಮೋಕ್ಷದಲ್ಲಿ ಜೀವನ ಸ್ವರೂಪಭೂತಕರ್ಮ ಭೋಜನ ಮಾಡಿಸಿ, ತದ್ಗತ ಸ್ವಾಖ್ಯಕರ್ಮ ತಾನೇ ಭೋಜನ ಮಾಡತಾನೆ. ಇದೇವೇ ಪರಮಾತ್ಮ ಉಂಡು ಉಣಸತಾನೆ, ಎಂಬದರ ತಾತ್ಪರ್ಯ. ಬಿಂಬಕ್ರಿಯಾ ದ್ವಾರಾ ಪ್ರತಿಬಿಂಬಕ್ರಿಯಾ ಎಂತ ತಿಳಿಯಬೇಕು; ಅಷ್ಟೇ ಹೊರ್ತು ಜೀವ ಭುಕ್ತ, ಪರಮಾತ್ಮಗೆ ಭುಕ್ತವಿಲ್ಲ, ಬಲಿಷ್ಠನಾದ ಪರಮಾತ್ಮ ದುರ್ಬಲನಾದ ಜೀವಗೆ ಪ್ರಾಕೃತಕರ್ಮ ಭೋಜನಮಾಡಿಸಿ ದುಃಖಪಡಿಸೋಣವೆಂಬುದು ಪರಮಾತ್ಮಗೆ ದೋಷವಲ್ಲವೆ, ಎಂದರೆ ದೋಷವಲ್ಲ. ಅನಾದಿಕರ್ಮಗ್ರಂಥಿ ಎಂಬುದು ಬಿಚ್ಚಬೇಕಾದರೆ ಜೀವನ ಕಡಿಯಿಂದ ಬಿಚ್ಚಿಸಬೇಕು. ಬಹುಗಂಟುಗಳಿಂದ ಯುಕ್ತವಾಗಿ ಇರೋದಾಗಿ ಅದೆ. ಕರ್ಮಗ್ರಂಥಿಗಳು ಅನೇಕವಾದಕಡಿಯಿಂದ, ಜೀವನ ದ್ವಾರಾ ಒಂದೊಂದೇ ಬಿಂಬಕ್ರಿಯಾ ದ್ವಾರಾ ಬಿಚ್ಚಿಸೋವನಾಗತಾನೆ. ಆ ಬಿಚ್ಚೋಣ ಎಂಬುದು ಅನಾದಿಯಿಂದ ಜೀವನಕಡಿಯಿಂದ ಪರಮಾತ್ಮ ಬಿಚ್ಚಿಸತಕ್ಕದ್ದು ಎಂತ ಸಿದ್ಧವು. ಆ ನೇಮವೂ ಈಶ್ವರನಿಂದ ರಚಿತವಲ್ಲ. ಅದೂ ಅನಾದಿಸಿದ್ಧವೇ ಆದ್ದರಿಂದ ಭೋಗರೂಪದಿಂದ ಕರ್ಮದ ಗ್ರಂಥಿಯನ್ನು ಜೀವನಕಡಿಯಿಂದ ಪರಮಾತ್ಮ ಬಿಚ್ಚಿಸೋವನಾಗತಾನೆ. ಅಷ್ಟೇ ಹೊರ್ತು, ಪರಮಾತ್ಮ ತಾನು ಬಲಿಷ್ಠನಾದ್ದರಿಂದ ದುರ್ಬಲರನ್ನ ದುಃಖಪಡಿಸಬೇಕೆಂದು ಕರ್ಮಭೋಗ ಕೊಟ್ಟವನಲ್ಲ, ಮತ್ತು ಬಿಂಬಕ್ರಿಯಾದ್ವಾರಾ, ಜೀವನ ಕ್ರಿಯಾ ದ್ವಾರಾ, ಜೀವನ ಕರ್ಮಗಂಟುಗಳನ್ನ ಜೀವನಕಡಿಯಿಂದ ಬಿಚ್ಚಿಸಿ ಮೋಕ್ಷವನ್ನ ಕೊಡತಾನಾದಕಡಿಯಿಂದ ನಿರ್ದೋಷತ್ವವೂ, ದಯಾಳುತ್ವವೂ ಪರಮಾತ್ಮಗೆ ಸಿದ್ಧಿಸೋದಾಯಿತು. ಜೀವ ನಿತ್ಯ, ಪರಮಾತ್ಮ ನಿತ್ಯ ಎಂತ ನಿತ್ಯತ್ವಕ್ಕೆ ಸಾಮ್ಯ ಬಂತಲ್ಲಾ ಎಂದರೆ, ಬರಲಿಲ್ಲ. ಜೀವಾಂತರ್ಗತನಾದ ಪರಮಾತ್ಮ ಜೀವನ್ನ ಬಿಟ್ಟು ಪ್ರತ್ಯೇಕನಾದರೆ, ಜೀವನ ನಿತ್ಯತ್ವಕ್ಕೆ ಹಾನಿ ಬರೋದಾಗತದೆ. ಆದ್ದರಿಂದ ಜೀವಾಂತರ್ಗತನಾಗಿ ಇರತಕ್ಕ ಪರಮಾತ್ಮ, ಜೀವನ್ನ ಬಿಟ್ಟು ವಿಯೋಗನಾಗದೆ ಅವಿಯೋಗನಾಗಿ ಇರೋದಕ್ಕೆ ಇದು ಕಾರಣವು. ಆದ್ದರಿಂದ, ಜೀವನ ನಿತ್ಯತ್ವ ಈಶಾಧೀನವಾದ್ದರಿಂದ ಪರಮಾತ್ಮನ ನಿತ್ಯತ್ವಕ್ಕೂ, ಜೀವನ ನಿತ್ಯತ್ವಕ್ಕೂ ಸದೃಶವಾಗಲಾರದು. ಜೀವನ ನಿತ್ಯತ್ವಾಪೇಕ್ಷಯಾ ಪರಮಾತ್ಮನ ನಿತ್ಯತ್ವ

ಅಧಿಕವಾದದ್ದು ಎಂತ ಈ ರೀತ್ಯಾ ತಿಳಿಯಬೇಕು. ಜೀವನ್ನ ಬಿಟ್ಟು ಇರತಕ್ಕ ಪರಮಾತ್ಮನ ರೂಪಗಳು ಅನೇಕವವೆ, ಪರಮಾತ್ಮನ್ನ ಬಿಟ್ಟು ಇರತಕ್ಕ ಜೀವರುಗಳು ದಾರೂ ಇಲ್ಲ. ಆದ್ದರಿಂದ ಜೀವ ಪರಮಾತ್ಮರ ನಿತ್ಯತ್ವದಲ್ಲಿ ಪರಮಾತ್ಮನ ನಿತ್ಯತ್ವವೇ ಶ್ರೇಷ್ಠವಾಯಿತು. ಪರಮಾತ್ಮನ ನಿತ್ಯತ್ವ ಎಂಬುದು ಇನ್ನೊಂದರಿಂದ ಸ್ಥಾಪನವಾದದ್ದಲ್ಲ, ಸ್ವತಃವಾಗಿ ಸ್ವಾಧೀನ ನಿತ್ಯತ್ವ ಉಳ್ಳದ್ದು. ತದ್ವತ್, ಜೀವನ ಚಿದಾನಂದವೆಂಬುದು ಪರಮಾತ್ಮನ ಚಿದಾನಂದ ದಿಂದ ಸ್ಥಾಪನವಾಗಬೇಕೇ ಹೊರತು, ತದ್ವ್ಯತಿರಿಕ್ತ ಕೂಡೋದಿಲ್ಲ. ಆದ್ದರಿಂದ ಜೀವನ ಚಿದಾನಂದತ್ವಕ್ಕಿಂತಲೂ ಪರಮಾತ್ಮನ ಚಿದಾನಂದತ್ವ ಅತ್ಯಂತ ಶ್ರೇಷ್ಠ. ತದ್ವತ್, ಜೀವನ ಸ್ವರೂಪಭೂತಗಳು ಯಾವತ್ತೂ, ಪರಮಾತ್ಮನ ಸ್ವರೂಪಭೂತಗಳಾಪೇಕ್ಷಯಾ ದುರ್ಬಲಗಳಾದವು, ಅವರತ್ವವುಳ್ಳವು ಎಂತ ತಿಳಿಯಬೇಕು. ಈ ಪ್ರಕಾರ ಜೀವ ಪರಮಾತ್ಮರಿಗೆ, ಸರ್ವವಿಷಯದಿಂದಲೂ ನ್ಯೂನಾಧಿಕ್ಯಗಳು ತಿಳಿಯಬೇಕು. ಇತ್ಯಾದಿ ಕಾರಣಗಳಿಂದ ಪರಮಾತ್ಮ ಸ್ವತಂತ್ರ, ಸರ್ವೋತ್ತಮ ಎಂತ ಕರಿಸಿದ. ಜೀವನಾದರೋ ಅಸ್ವತಂತ್ರ, ಅವರ, ಎಂತ ಕರಿಸೋವನಾದ. ಈ ಕ್ರಮ ತೃಣಜೀವರಿಂದ ಅರಂಭಮಾಡಿ ಲಕ್ಷ್ಮ್ಯಂತವರಿಗೂ ತಾರತಮ್ಯಾನುಸಾರ ಇದೇರೀತಿಯಿಂದ ತಿಳಿಯಬೇಕು. ಆದ್ದರಿಂದ ಪರಮಾತ್ಮ, ನಿರ್ದೋಷಿ. ಜೀವ, ದೋಷಿ ಎಂತ ಕರಿಸುತಾನೆ. ಜೀವರಲ್ಲಿ ಇರತಕ್ಕ ಅಸ್ವಾತಂತ್ರ್ಯಾದಿ ದೋಷಗಳು ಪರಮಾತ್ಮನಲ್ಲಿ ಇಲ್ಲ. ಪರಮಾತ್ಮನಲ್ಲಿ ಇರತಕ್ಕ ಸ್ವಾಧೀನ ಸ್ವಾತಂತ್ರ್ಯಾದಿಗಳು ನಿರ್ದೋಷಗಳು, ಇಂಥಾದ್ದು ಜೀವನಲ್ಲಿ ಇಲ್ಲವಾದ್ದರಿಂದಲೇ, ಜೀವ ದೋಷಿ, ಪರಮಾತ್ಮ ನಿರ್ದೋಷಿ ಎಂಬುದು ಸಿದ್ಧವು. ಈ ಪ್ರಕಾರ ತ್ರಿವಿಧ ಜೀವ ರಲ್ಲೀನೂ ಅವರವರ ಸ್ವರೂಪ ಯೋಗ್ಯತಾನುಸಾರ ಅನ್ವಯಮಾಡಿಕೋಬೇಕು.

ಪ್ರಮಾಣ :– "ದೇಹನಾಶವತ್ ದೇಹಿನಾಶೆ ಪುರುಷಾರ್ಥಾನುಪಪತ್ತಿರಿತಿ | ತತ್ರಾಹ | ದೇಹೀತಿ | ದೇಹದೇಹಿನೋರ್ಮಧ್ಯೇ ದೇಹೀ ಶಾಶ್ವತಃ | ಅಭಿಮಾನಮಂತರೇಣ ಜನ್ಮನಾಶರಹಿತಃ | ತಥಾ ಕಾಲತ್ರಯೇಪ್ಯೇಕಪ್ರಕಾರಃ | ಕಥಮಿವ ಅರ್ಥ ಇವ | ಮೋಕ್ಷ ಲಕ್ಷಣಪುರುಷಾರ್ಥ ಇವ | ತರ್ಹಿ ಬ್ರಹ್ಮಸಾಮ್ಯಮಾಯಾತಮಿತ್ಯಸ್ಯಾಪ್ಯೇತದೇವೋತ್ತರಂ | ದೇಹ್ಯರ್ಥಃ ಜೀವಾಖ್ಯಪದಾರ್ಥಃ ಅಶಾಶ್ವತ ಏವ ಅನಿತ್ಯ ಏವ | ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ | ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ || ಇತ್ಯಾದೇಃ ಜೀವನಿತ್ಯತ್ವಸ್ಯ ಶ್ರೀ ನಾರಾಯಣಾಧೀನತ್ವೇನ ಉಪಚರಿತತ್ವಾತ್ | ಹರೇ ರೇವ ನಿರುಪಚರಿತನಿತ್ಯತ್ವಂ | ಅತಃ ತಯೋರ್ನ ಸಾಮ್ಯಮಿತ್ಯರ್ಥಃ || "

ಪೂರ್ವೋಕ್ತಗಳು ಯಾವತ್ತೂ, ಪರಮಾತ್ಮ ಅನುಗ್ರಹಮಾಡಿ ವಾಸಮಾಡಿ ಕೊಂಡು ಇದ್ದರೇ, ಎಲ್ಲಾನೂ ನಿತ್ಯವಾಗಿ ಇರ್ತದೆ. ಪರಮಾತ್ಮ ವಿಯೋಗನಾದರೆ, ಎಲ್ಲಾನೂ ನಾಶವಾಗತದೆ. ಆದ್ದರಿಂದ, ನಾಶವಾಗಬಾರದು ಎಂತ ಅವಿಯೋಗನಾಗಿ ಜೀವನಲ್ಲಿ, ಇನ್ನೂ ಅನೇಕ ನಾಶರಹಿತವಾದ ಪದಾರ್ಥಗಳಲ್ಲಿ ವಾಸಮಾಡಿಕೊಂಡು ಇದ್ದಾನೆ. ಅತ ಏವ ಈ ಕಾರಣದಿಂದ, ಜೀವಗೆ ನಿತ್ಯತ್ವ ಪ್ರಾಪ್ತವಾಯಿತು. ಜೀವ,

ಶಾಶ್ವತ. ಇವ ಶಾಶ್ವತನಾದ ಪರಮಾತ್ಮನೋಪಾದಿಯಲ್ಲಿ ನಿತ್ಯ. ಇವ ನಿತ್ಯನಾಗಿ ಇರ್ತಾನೆ. ಏಕೆಂದರೆ, ಜೀವನ ನಿತ್ಯತ್ವಕ್ಕೆ ನಾರಾಯಣನ ಅಧೀನದಿಂದ ಉಪಚರಿತ ವಾಗೋಣದರ ದೆಸೆಯಿಂದ, ಜೀವ ನಿತ್ಯತ್ವದೋಪಾದಿಯಲ್ಲಿ ಇರ್ತಾನೆ; ಪರಮಾತ್ಮ ನಪ್ಪಂತೆ ನಿತ್ಯನಲ್ಲ. ಪರಮಾತ್ಮ ನಿರುಪಮುಚರಿತ, ನಿತ್ಯನಾದವನು. "ಅತಃ ತಯೋರ್ನ ಸಾಮ್ಯಮಿತ್ಯರ್ಥಃ" ಆದ್ದರಿಂದ ಜೀವ, ಪರಮಾತ್ಮ ಉಭಯರಿಗೂ ಪರಸ್ಪರ ಸಾಮ್ಯ ಬರಲಿಲ್ಲ. ಜೀವ, ಪರಮಾತ್ಮರಿಗೆ ಸರ್ವವಿಷಯದಿಂದಲೂ ಇಂಥಾ ಭೇದ ತಿಳಿಯಬೇಕು.

ಪ್ರಮಾಣ :– "ದೇಹೇನ ದೇಹಿನೋ ರಾಜನ್ ದೇಹಾದ್ದೇಹೋಭಿಜಾಯತೇ | ಬೀಜಾದೇವ ಯಥಾ ಬೀಜಂ ದೇಹಾದರ್ಥವ ಶಾಶ್ವತಃ || ಅಸ್ಯ ವ್ಯಾಖ್ಯಾನಂ ಪಿತೃ ದೇಹೇನ ಸಂಯುಕ್ತಾತ್ ಮಾತೃದೇಹಾತ್ ದೇಹಿನಃ ಉತ್ಪದ್ಯಮಾನಸ್ಯ ಪುತ್ರಲಕ್ಷಣಸ್ಯ ಜೀವಸ್ಯ ದೇಹಃ ಅಭಿಜಾಯತೇ | ಅತ್ರ ದೃಷ್ಟಾಂತಮಾಹ ಬೀಜಾದಿತಿ | ಬೀಜಾತ್ ಫನಸಾದಿಲಕ್ಷಣಾತ್ | ಜಲತೇಜಆದಿಲಕ್ಷಣಸಾಮಗ್ರೀಸಂವೃತಾತ್ ಅಂಕುರಾಖ್ಯಂ, ವೃಕ್ಷಬೀಜಶರೀರಂ ತೇನ ಸಹ ಜಾಯತೇ | ತಸ್ಮಾತ್ ಯುಕ್ತಜಲಾದ್ಯಾತ್ ಫನಸಾತ್ ಫನಸಾದಿಬೀಜಾಂತರಮುತ್ಪದ್ಯತೇ | ತಸ್ಮಾಚ್ಚೇತಿ ಕಾರ್ಯಪರಂಪರಾ ನ ಚೈವಮನ ವಸ್ಥಾ | ಮೂಲಕಾರ್ಯಸ್ಯ ಪ್ರಕೃತ್ಯಾತ್ಮಕತ್ವಾತ್ | ತಥಾಪಿ ಮಾತೃವಿಕಾರಶುಕ್ಲಶೋಣಿತ ಸಂಬಂಧೇ ಕಲಿಕಾಲಾದಿಲಕ್ಷಣಕಾರ್ಯಂ ಅಭಿಮಾನಜೀವೇನ ಸಹ ಜಾಯತೇ | ತಸ್ಮಾತ್ ಪರಿಣತಾವಯವಾತ್ ಸ್ತ್ರೀಪುರುಷಭೂತಾತ್ ರೇತ ಆದಿಕ್ರಮೇಣ ಕಾರ್ಯಾಂತರಂ ಜಾಯತ ಇತಿ | ಅನೇನ ಕ್ರಮೇಣ ಭಗವಾನ್ ಭೂತೈಃ ಸೃಷ್ಟಿಂ ಕರೋತಿ | ಸ್ಥಿತಿ ಸಂಹಾರಯೋರೇವಮೂಹ್ಯಂ | ತದದೃಷ್ಟೇಶ್ವರವಶಾತ್ ತಸ್ಮಾತ್ ಸರ್ವಾಣಿ ಕಾರ್ಯಾಣಿ ಕಾನಿಚಿತ್ ಆಹಾತ್ಯ ಆತ್ಮನಾ | ನಾರಾಯಣಾಯ | ತಾನಿ ಕಾನಿಚಿತ್ ಪರಂಪರಯಾ ತದಧೀನಾನಿ | ತತ್ರಾಪಿ ವಿಶೇಷಸ್ತು ಪ್ರಮಾಣಾದವಗಂತವ್ಯಃ | ನನು ದೇಹನಾಶವತ್ ದೇಹಿನಾಶೇ ಪುರುಷಾರ್ಥಾನುಪಪತ್ತಿಃ | ತತ್ರಾಹ | ದೇಹೀತಿ | ದೇಹದೇಹಿನೋರ್ಮಧ್ಯೇ ದೇಹೀ ಶಾಶ್ವತಃ ||" ಅವಶಿಷ್ಟಪ್ರಮಾಣಭಾಗ ಮ್ಯಾಲೆ ಉದಹರಿಸಿದೆ. ಭಾಗವತವಚನ.

ಜೀವ, ಬದ್ಧ ಎಂಬುದಕ್ಕೆ ಪ್ರಮಾಣ :– "ಜ್ಞಾನೇಂದ್ರಿಯೈಶ್ಚ ಮನಸಾ ಸತ್ತ್ವಂ ಬಧ್ನಾತಿ ಪೂರುಷಂ | ರಜಃ ಕರ್ಮೇಂದ್ರಿಯೈರ್ನಿತ್ಯಂ ಶರೀರೇಣ ತಮಸ್ತಥಾ | ಅಂತರಂ ಯತ್ತ ಕರ್ತೃತ್ವಂ ತತ್ಸರ್ವೇಣಾಭಿಮನ್ಯತೇ | ರಜಸಾತ್ವಭಿಮನ್ಯೇತ | ಕರಣೈಃ ಕರ್ಮ ಕಾರಣೈಃ | ಶಾರೀರಂ ವೇದನಾದ್ಯಂ ತು ತಮಸಾಹ್ಯಭಿಮನ್ಯತೇ || ಅಕರ್ತಾ ಕರಣೈ ರ್ಹೀನಃ ಶರೀರೇಣ ವಿವರ್ಜಿತಃ | ನಿತ್ಯಜ್ಞಾನಸ್ವರೂಪೋಽಸೌ ಗುಣೈರೇವಾಭಿಮನ್ಯತೇ || ಏವಂ ಜೀವಃ ಪರೇಣೈವ ಪ್ರೇರಿತಸ್ಸಂವೃತಂ ವ್ರಜೇತ್ || ನ ಪರಸ್ಸಂಸ್ಮೃತಿಂ ಕ್ವಾಪಿ ಸ್ವಾತಂತ್ರ್ಯಾದಧಿಕತ್ವತಃ | ಏವಂ ಜೀವಪರೌ ಭಿನ್ನೌ ಕಿಮನ್ಯಚ್ಛ್ರೋತುಮಿಚ್ಛಸಿ || ಇತಿ ಪಾದ್ಮೇ" ಭಾಗವತ ತಾ|| ೨ನೇ ಅಧ್ಯಾಯ.

ಈ ಪ್ರಮಾಣದಿಂದ ಜೀವ ಪರಮಾತ್ಮರಿಗೆ ಭೇದ ಎಂಬುದು ಸಿದ್ಧವು. ಆದ್ದರಿಂದ ಜೀವ ದೋಷಿ, ಪರಮಾತ್ಮ ನಿರ್ದೋಷಿ ಎಂತ ತಿಳಿಯಬೇಕು.

**ಹೇಯವಸ್ತುಗಳಿಲ್ಲ ಊಪಾ ।**
**ದೇಯವಸ್ತುಗಳಿಲ್ಲ ನ್ಯಾಯಾ ।**
**ನ್ಯಾಯಧರ್ಮಗಳಿಲ್ಲ ದ್ವೇಷಾಸೂಯೆ ಮೊದಲಿಲ್ಲ ॥**
**ತಾಯಿತಂದೆಗಳಿಲ್ಲ ಕಮಲದ ।**
**ಳಾಯತಾಕ್ಷನೆ ಎನಲು ಈಸುವ ।**
**ಕಾಯಿಯಂದದಿ ಮುಣುಗಗೊಡದೆ ಭವಾಬ್ಧಿ ದಾಟಿಸುವ ॥ ೧೯ ॥**

ಪೂರ್ವೋಕ್ತ ಶ್ರೀ ಪರಮಾತ್ಮನ್ನ ಈ ಪ್ರಕಾರ ತಿಳಿದವಗೆ ಸಂಸಾರಸಮುದ್ರ ಶ್ರೀ ದೇವರು ದಾಟಿಸಿ ಸುಖಕೊಟ್ಟು ಕಾಪಾಡತಾನೆ ಎಂತ ಹೇಳತಾರೆ.

ಹೇಯವಸ್ತುಗಳಿಲ್ಲ–ಈ ಲೋಕದಲ್ಲಿ ಸುಗಂಧ, ದುರ್ಗಂಧ ಅನೇಕ ವಿಧವಾದ ಪದಾರ್ಥಗಳು ಎಷ್ಟು ಅವೋ ಅಷ್ಟರಲ್ಲೂ ಶ್ರೀ ಪರಮಾತ್ಮ ವ್ಯಾಪ್ತನಾಗಿ ಇದ್ದಾನೆ. ಆಯಾ ವಸ್ತುಗತ ದೋಷಗಳು ಪರಮಾತ್ಮಗೆ ಲೇಪವಿಲ್ಲ. ಊಪಾದೇಯವಸ್ತುಗಳಿಲ್ಲ– ಸಕಲ ಪದಾರ್ಥಗಳ ಸೃಷ್ಟಿಗೆ ಉಪಾದಾನಭೂತವಾದ ಮೂಲ ಜಡಪ್ರಕೃತಿ ದೆಶೆಯಿಂದ ಉಪಾದೇಯರೂಪದಿಂದ ಪರಿಣಮಿತವಾದ ಜಗತ್ತಿನಲ್ಲಿ ವ್ಯಾಪ್ತನಾಗಿ ಇದ್ದಾನೆ. ತದ್ಗತ ನಾನಾ ವಿಧವಾದ ಗುಣಗಳೇನು, ಅದಕ್ಕೆ ಆಗತಕ್ಕ ಭೇದಾಭೇದಾದಿಗಳೇನು ಇವು ಗಳಿಂದ ಜನಿತ ಸುಖದುಃಖಗಳ ಲೇಪವಿಲ್ಲ. ನ್ಯಾಯಾನ್ಯಾಯ ಧರ್ಮಗಳಿಲ್ಲ–ನ್ಯಾಯ ವಾದ ಪುಣ್ಯಕರ್ಮಗಳಲ್ಲಿ, ಅನ್ಯಾಯವಾದ ಪಾಪಕರ್ಮಗಳಲ್ಲಿ ಇರೋವನಾಗಿ ಇದ್ದಾನೆ. ಧರ್ಮಾಧರ್ಮಗಳಲ್ಲಿದ್ದರೂ, ತಲ್ಲೇಪವಿಲ್ಲ, ತಾಯಿತಂದೆಗಳಿಲ್ಲ–ಶ್ರೀ ಪರಮಾತ್ಮಗೆ ಪೂರ್ವಿಕ ರಾದ ಜನನೀಜನಕರು ಇಲ್ಲ. ಜೀವಾಂತರ್ಗತನಾಗಿ ಜೀವನಕೂಡಾ ಪಿತೃ ಶರೀರದಶಿ ಯಿಂದಾ ಮಾತೃಶರೀರದಲ್ಲಿ ಆವಾಸನಾಗಿ ಇದ್ದ ಕಾಲಕ್ಕೂ ಗರ್ಭಯಾತನಾದಿಗಳ ಲೇಪ ವಿಲ್ಲ. ದ್ವೇಷಾಸೂಯೆ ಮೊದಲಿಲ್ಲ–ತಮೋಯೋಗ್ಯರಲ್ಲಿ ಸ್ವರೂಪಭೂತವಾದ ದ್ವೇಷದಲ್ಲಿ ಬಿಂಬನಾಗಿ ಅವರಲ್ಲಿ ತಾನು ದ್ವೇಷ ಮಾಡತಕ್ಕವನಲ್ಲ. ನಿತ್ಯಸಂಸಾರಿಗಳಲ್ಲಿ ಉದಾ ಸೀನ ರೂಪವಾದ ಅಸೂಯದಲ್ಲಿ ಬಿಂಬನಾಗಿ, ಅವರಲ್ಲಿ ತಾನು ಉದಾಸೀನ ಮಾಡ ತಕ್ಕವನಲ್ಲ. ಹಾಂಗೇ ಮುಕ್ತಿಯೋಗ್ಯರಲ್ಲಿ ಸ್ವರೂಪಭೂತ ಸ್ನೇಹದಲ್ಲಿ ಬಿಂಬನಾಗಿ ಇದ್ದಕಾಲಕ್ಕೂ, ಅದರದರ ಲೇಪವಿಲ್ಲ. ಏಕೆ ಎಂದರೆ, ಅವರವರ ಸ್ವರೂಪವೇ ಅಂಥಾದ್ದು. ಆದ್ದರಿಂದ, ತಲ್ಲೇಪ ಎಂಬುದು ಇಲ್ಲಾ. ಎಲ್ಲಾದಕ್ಕೂ ಬಾಧ್ಯಪಡದೆ ನಿರ್ಲಿಪ್ತನಾಗಿ ಇದ್ದಾನೆ. ಈ ಪೂರ್ವೋಕ್ತಗಳು ಸರ್ವದಿಂದಲೂ ಲೇಪಿತನಾದವ ಜೀವ ಎಂತಲೂ, ಪರಮಾತ್ಮ ಎಂಥಾವನೆಂತಲೂ ತಿಳದು, ಮಾಹಾತ್ಮ್ಯಜ್ಞಾನಪೂರ್ವಕ ಸುದೃಢ ಸ್ನೇಹದಿಂದ, ಕಮಲದಳಾಯತಾಕ್ಷನೆ–ಪುಂಡರೀಕಪತ್ರಾಯತ ನೇತ್ರಉಳ್ಳವನೇ ಗತಿ, ಎನಲು–ಸ್ವಾಮಿಭೃತ್ಯನ್ಯಾಯದಿಂದ ಅನ್ಯರು ದಾರೂ ಗತಿಯಿಲ್ಲ ಎಂತ ತ್ರಿಕರಣ ಶುದ್ಧಿಪೂರ್ವಕ ಅವನ ಪಾದವನ್ನು ನಂಬಿದರೆ, ಈಸುವ ಕಾಯಿಯಂದದಿ–ಅತಿ ಗಂಭೀರ ವಾದ ಜಲದಲ್ಲಿ ಈಸತಕ್ಕ ಪುರುಷ, ಸೋರೇಕಾಯೀನ ಕಟ್ಟಿಕೊಂಡು ಜಲದಲ್ಲಿ ಪ್ರವೇಶ

ಮಾಡಿ ಈಸತಾ ಇದ್ದರೆ, ಹ್ಯಾಂಗೆ ತಾನು ಮುಣಗದೆ ಇರತಾನೊ, ಈ ಸೋರೇಕಾಯಿ ಸದೃಶನಾದ ಪರಮಾತ್ಮನಲ್ಲಿ ಅನುಸಂಧಾನಪೂರ್ವಕ ಭಕ್ತಿ ಉಳ್ಳವಗೆ, ಭವಾಬ್ಧಿ–ಸಂಸಾರವೆಂಬ ಸಮುದ್ರದಲ್ಲಿ, ಮುಣುಗಗೊಡದೆ–ಮುಣುಗೋ ಹಾಂಗೆ ಮಾಡದೆ, ದಾಟಿಸುವ–ಅಂತ್ಯದಲ್ಲಿ ಜೀವನ್ಮುಕ್ತಿಸದೃಶವಾದ ದಡವನ್ನು ಸೇರಿಸಿ ಬ್ರಹ್ಮನ ಸಹ ಯೋಗ್ಯವಾದ ಸ್ವರೂಪಾನಂದವನ್ನ ಕೊಡತಾನೆ.

**ಮಂದನಾದರು ಸರಿಯೆ ಗೋಪೀ ।**
**ಚಂದನ ಶ್ರೀಮುದ್ರೆಗಳ ನಲ ।**
**ವಿಂದೆ ಧರಿಸುತ ಶ್ರೀತುಲಸಿಪದ್ಮಾಕ್ಷಸರಗಳನು ॥**
**ಕಂಧರದ ಮಧ್ಯದಲಿ ಧರಿಸಿ ಮು ।**
**ಕುಂದ ಶ್ರೀ ಭೂರಮಣ ತ್ರಿಜಗ ।**
**ದ್ವಂದ್ಯ ಸರ್ವಸ್ವಾಮಿ ಮಮ ಕುಲದೈವವೆನೆ ಪೊರೆವ ॥ ೨೦ ॥**

ಬಾಹ್ಯರೂಪವಾದ ದೀಕ್ಷಾಯುಕ್ತನಾಗಿ ಶ್ರೀಪರಮಾತ್ಮನ್ನ ಕೊಂಡಾಡು ಎಂತ ಹೇಳತಾರೆ. ಅಂತರ್ದೀಕ್ಷಾ ಇಲ್ಲದೆ ಬಾಹ್ಯದೀಕ್ಷಾ ಮಾತ್ರವೇ ಇದ್ದವ, ಸಂಸಾರಸಮುದ್ರ ದಾಟೋ ಕ್ರಮ ಹ್ಯಾಂಗೆಂದರೆ, ಅಂತರ್ದೀಕ್ಷಾದಿಂದಲೇ ದಾಟಬೇಕು, ಬಾಹ್ಯದೀಕ್ಷಾದಿಂದ ದಾಟಲಾರ ಎಂತ ಹೇಳತಾರೆ.

ಮಂದನಾದರು ಸರಿಯೆ–ಅಂತರ್ದೀಕ್ಷಾದಲ್ಲಿ ಅಜ್ಞಾನಿಯಾಗಿ ಮೂಢನಾಗಿ ಇದ್ದರೂ ಸರಿಯೆ, ಬಾಹ್ಯ ದೀಕ್ಷಾದಲ್ಲಿ ವಿಧ್ಯುಕ್ತಪ್ರಕಾರ ಕ್ರಮಗಳ ತಿಳಕೊಳ್ಳದೆ ಅಜ್ಞಾನಯುಕ್ತನಾಗಿದ್ದರೂ ಸರಿಯೆ, ಗೋಪೀಚಂದನ–ಗೋಪೀಚಂದನದಿಂದ ದ್ವಾದಶ ನಾಮಗಳ ಧರಿಸಿ, ಶ್ರೀಮುದ್ರೆಗಳ–ಶ್ರೀ ವಿಷ್ಣುಪ್ರೀತಿಕರವಾಗಿ ಪಂಚ ಅವಿದ್ಯಾಪರಿಹಾರಕವಾದ, ಶ್ರೀ ಪರಮಾತ್ಮನ ಆಯುಧಗಳಾದ, ಚಕ್ರ, ಶಂಖ, ಗದಾ, ಪದ್ಮ, ನಾರಾಯಣ ಎಂಬತಕ್ಕ ಪಂಚ ಮುದ್ರೆಗಳ, ಗೋಪೀಚಂದನದಿಂದ, ಅಂಗಗಳಲ್ಲಿ ಉಕ್ತಪ್ರಕಾರದಿಂದ, ನಲವಿಂದೆ–ಅತ್ಯಂತ ಶ್ರದ್ಧಾಭಕುತಿಯಿಂದ, ಹಾಂಗೂ ಸಂತೋಷದಿಂದ, ಧರಿಸುತ–ಪ್ರತಿದಿನದಲ್ಲೂ ಧಾರಣಿಮಾಡತಾ ಹಾಂಗೆ, ಕಂಧರದಮಧ್ಯದಲಿ–ಕಂಠಮಧ್ಯದಲ್ಲಿ ಶ್ರೀ ಪರಮಾತ್ಮಗೆ ಪ್ರೀತಿಯಾದ, ಶ್ರೀತುಲಸಿ–ಶ್ರೀತುಲಸೀಕಾಷ್ಠನಿರ್ಮಿತ ಮಣಿಮಾಲವೇನು, ಪದ್ಮಾಕ್ಷ–ಪದ್ಮದಲ್ಲಿ ಜನಿತ ಬೀಜದ ಮಾಲವೇನು, ಸರಗಳನು–ಈ ಮಾಲಾಗಳನ್ನು, ಧರಿಸಿ–ಧಾರಣಮಾಡಿದವನಾಗಿ, ದೇವರನ್ನ ಸ್ತೋತ್ರಮಾಡಬೇಕು. ಏನೆಂತಂದರೆ, ಶ್ರೀ–ಶ್ರೀ ದೇವೇರಿಗೆ, ಭೂ–ಭೂ ದೇವೇರಿಗೆ, ರಮಣ–ಪತಿಯಾದವನೇ, ಮುಕುಂದ–ಮೋಕ್ಷ ಪ್ರದನಾದವನೇ, ತ್ರಿಜಗದ್ವಂದ್ಯ–ತ್ರಿ–ಮೂರಾದಂಥಾ, ಜಗತ್–ಬ್ರಹ್ಮಾದಿ ಪುಷ್ಕರಾಂತ ನವಕೋಟಿ ದೇವತೆಗಳು, ಅಜಾನಜರು ದೇವಗಂಧರ್ವಾಂತ ಇಪ್ಪತ್ತುನಾಲ್ಕು ಕೋಟಿ ದೇವತೆಗಳು, ಮಾನುಷಗಂಧರ್ವರಾರಭ್ಯ ತೃಣಾಂತ ನಿರಂಶರು, ಅಂತು ಈ ತ್ರಿವಿಧ

ಜಗತ್ತಿನ ದೆಸೆಯಿಂದ, ವಂದ್ಯ–ವಂದ್ಯನಾದವನೇ, ದ್ವೇಷಿಗಳಾದ ಅಸುರರ ಶಿಕ್ಷಾಮಾಡತಕ್ಕವನೇ, ಸರ್ವಸ್ವಾಮಿ–ರಮಾಬ್ರಹ್ಮಾದಿ ತೃಣಾಂತ ತ್ರಿವಿಧರಾದ ಸರ್ವರಿಗೂ ಸ್ವಾಮಿಯಾದವನೇ, ಅಂತರ್ನಿಯಾಮಕನಾದವನೇ, ಮಮ ಕುಲದೈವವೆನೆ–ನನಗೂ, ನನ್ನ ಕುಲದವರಾದ ಭಕ್ತರ ಸಮೂಹಕ್ಕೂ ಕುಲದೈವ ಎಂತ ಸ್ಮರಣೆ ಮಾಡಿದರೆ, ಪೊರೆವ–ತನ್ನ ಪಾದ ನಂಬಿದವ ಎಂತ ತಿಳಿದವನಾಗಿ, ಶ್ರೀ ಪರಮಾತ್ಮ, ಶುದ್ಧವಾದ ಜ್ಞಾನ, ಭಕುತಿ, ವೈರಾಗ್ಯಗಳ ಕೊಟ್ಟು ಸಂರಕ್ಷಣ ಮಾಡತಾನೆ. ಆದ್ದರಿಂದ ನಾವು ಮುದ್ರೆಗಳಿಂದ ಅಲಂಕೃತನಾಗಿ ಪ್ರಾರ್ಥನೆ ಎಂಬ ಬಾಹ್ಯದೀಕ್ಷಾ, ಆದಿಯಲ್ಲಿ ಮಾಡತಾ ಬಂದರೆ, ಅಂತರ್ದೀಕ್ಷಾಕ್ಕೆ ಶ್ರೀ ದೇವರು ಪ್ರೇರಣೆ ಮಾಡತಾರೆಂದು ತಾತ್ಪರ್ಯ.

**ಪ್ರಾಯಧನಮುದದಿಂದ ಜನರಿಗೆ ।**
**ನಾಯಕಪ್ರಭುವೆಂಬಿ ಪೂರ್ವದಿ ।**
**ತಾಯಿಪೊಟ್ಟೆಯೊಳಿರಲು ಪ್ರಭುವೆಂದೇಕೆ ಕರೆಯರಿಲ್ಲೈ ॥**
**ಕಾಯ ನಿನ್ನನು ಬಿಟ್ಟುಪೋಗಲು ।**
**ರಾಯ ನೀನೆಂಬುವ ಪ್ರಭುತ್ವ ಪ ।**
**ಲಾಯನವನೈದಿತು ಸಮೀಪದಲಿದ್ದರದು ತೋರು ॥ ೨೧ ॥**

ಐಹಿಕ ಭೋಗಗಳು ಅಶಾಶ್ವತ ಎಂತ ಹೇಳತಾರೆ.

ಪ್ರಾಯ–ತಾಯಿ ಉದರದಿಂದ ಜನನವಾದ ಅನಂತರ ಕಾಲವಿಳಂಬದ ಮ್ಯಾಲೆ ಯೌವನ ಪ್ರಾಪ್ತವಾದರೆ ಆಗ, ಜನರಿಗೆ–ಯೌವನರಾದ ಸ್ತ್ರೀಜನರಿಗೆ, ನಾಯಕ–ಯಜಮಾನ ಎಂತಲೂ, ಧನಮುದದಿಂದ–ದ್ರವ್ಯದಿಂದ ಸಹಿತವಾದ ಮುದದಿಂದ ಸಹಿತನಾಗಿ ಜನಸಮೂಹದಿಂದ, ಪ್ರಭುವು–ದೇಶಾಧಿಪತಿ ಎಂತಲೂ, ಎಂಬಿ–ಎನಿಸಿಕೊಂಬಿ, ಪೂರ್ವದಿ–ನಾಯಕ, ಪ್ರಭು ಎಂಬುದು ಜನನಾನಂತರ, ಮಧ್ಯಕಾಲದಲ್ಲಿ ಬಂದದ್ದು. ಇದಕ್ಕೆ ಪೂರ್ವಾವಸ್ಥಾವಾದ, ತಾಯಿಪೊಟ್ಟೆಯೊಳಿರಲು–ಮಾತೃಗರ್ಭದಲ್ಲಿ ಇದ್ದು ನಾನಾವಿಧವಾದ ಗರ್ಭಯಾತನಾ ಪಡತಾ ಇರೋಕಾಲದಲ್ಲಿ, ಪ್ರಭುವೆಂದು–ಪ್ರಭು ಎಂತಲೂ, ನಾಯಕ ಎಂತಲೂ, ಏಕೆ ಕರೆಯರಿಲ್ಲೈ–ಏತಕ್ಕೋಸ್ಕರ ಕರೆಯೋದಿಲ್ಲ ? ಆಗ್ಗೆ ನಾಯಕತ್ವವೂ ಇಲ್ಲ, ಪ್ರಭುತ್ವವೂ ಇಲ್ಲವಾದ್ದರಿಂದ ಕರಿಯೋದಿಲ್ಲ. ಕಾಯ ನಿನ್ನನು ಬಿಟ್ಟು–ಎಲೋ ಪ್ರಾಣಿ, ಈ ದೇಹಗತ ಜೀವ ನಿನ್ನ ಶರೀರವನ್ನು ಬಿಟ್ಟು, ಪೋಗಲು–ಪ್ರತ್ಯೇಕವಾಗಿ ಹೋದರೆ, ಎಂದರೆ ಮೃತನಾದರೆ, ರಾಯ ನೀನೆಂಬುವ–ರಾಯ ನೀನೆಂತಲೂ, ಪ್ರಭು ಎಂತಲೂ, ನಾಯಕ ಎಂತಲೂ ಎನತಕ್ಕ, ಪ್ರಭುತ್ವ–ರಾಜತ್ವವೇನು, ಯಜಮಾನತ್ವವೇನು, ಪಲಾಯನವನೈದಿತು–ಓಡಿಹೋಗೋದಾಯಿತು. ನಂತರ ಪ್ರೇತ ಎಂಬ ನಾಮ ಬಂತು. ಅದು–ಪ್ರಭುತ್ವ, ನಾಯಕತ್ವಗಳಾದ ಎರಡೂ, ಸಮೀಪದಲಿ–ತಾಯಿಗರ್ಭದಲ್ಲಿ ಇದ್ದಾಗೇ ಆಗಲಿ, ಮರಣಾನಂತರದಲ್ಲಿ ಆಗಲಿ, ನಿನ್ನ ಸಮೀಪದಲ್ಲಿ, ಇದ್ದರೆ–ಇದ್ದದ್ದೇ ಖರೆ

ಆದರೆ, ಆ ಎರಡು ಕಾಲದಲ್ಲಿ, ತೋರು–ತೋರಿಸೋವನಾಗು, ಎಂದರೆ, ಆ ನಾಯಕತ್ವ, ಪ್ರಭುತ್ವ ಎರಡೂ ಸಮೀಪದಲ್ಲಿ ಇರೋದಿಲ್ಲ ಎಂತ ತಾತ್ಪರ್ಯ.

**ವಿಶೇಷಾರ್ಥ :–** ದ್ರವ್ಯವೇನು, ಪ್ರಾಯವೇನು, ಪ್ರಭುತ್ವವೇನು, ಇವೇ ಮೊದಲಾದ ಐಹಿಕಸಂಬಂಧಗಳು ದಾವವವೆ, ಅವು ಯಾವತ್ತೂ ಇಚ್ಛಾದಿಂದ ಬಂದವು. ದೇಹ ಬಿಡೋ ಕಾಲಕ್ಕೆ ಇವು ಯಾವತ್ತೂ ಬಿಟ್ಟುಹೋಗತಕ್ಕವು. ಹುಟ್ಟುತ್ತಾ ಸಂಗಾತ ಬಂದದ್ದಲ್ಲ, ಹೋಗತಾ ಸಂಗಾತ ಬರೋದಲ್ಲ. ಹುಟ್ಟತಾ ಸಂಗಾತ ಬಂದ ದೇಹವೇ ಕೊನೀಗೆ ಸಂಗಾತ ಬಾರದ ವ್ಯಾಲೆ, ಕಡೀದು ಸಂಗಾತ ಬಂದೀತೇ ? ಬರಲಾರದು. ಆದ್ದರಿಂದ ಕೊನೆಗಾಲಕ್ಕೆ ಸಂಗಾತ ಬಾರದೆ ಇರುವ ದೇಹದ ಅಭಿಮಾನವೇನು, ಐಹಿಕ ಸಂಬಂಧಪಟ್ಟ ದಾರಾಪುತ್ರಾದಿಗಳೇನು, ಐಹಿಕಸಂಬಂಧ ದ್ರವ್ಯ ಸುಖಾದಿಗಳೇನು, ಐಹಿಕಸಂಬಂಧವಾದ ಯಾವತ್ತರಲ್ಲೂ ಅಭಿಮಾನ ತ್ಯಾಗಮಾಡಿ ಇವುಗಳೇ ತಾರಕವೆಂಬ ಬುದ್ಧಿಯನ್ನ ಮರೆತವನಾಗಿ, ಕಾಲತ್ರಯದಲ್ಲಿ ಸಂಗಾತ ಇದ್ದು ಕಾಪಾಡತಕ್ಕ ಪರಮಾತ್ಮ ನಲ್ಲಿ ಅಂತರ್ದೀಕ್ಷಾಯುಕ್ತನಾಗಿ ವಿಷಯಭೋಗಾಭಿಮಾನ ತ್ಯಾಗಮಾಡಿ, ಸರ್ವಾಭಿ ಮಾನವನ್ನೂ ಪರಮಾತ್ಮನ ಪಾದದಲ್ಲಿ ಇಡಬೇಕೆಂದು ತಾತ್ಪರ್ಯವು.

**ವಾಸುದೇವೈಕಪ್ರಕಾರದಿ ।**
**ಈಶನೆನಿಸುವ ಬ್ರಹ್ಮ ರುದ್ರ ಶ ।**
**ಚೀಶ ಮೊದಲಾದಮರರೆಲ್ಲರು ದಾಸರೆನಿಸುವರು ॥**
**ಈ ಸುಮಾರ್ಗವ ಬಿಟ್ಟು ಸೋಹಮು ।**
**ಪಾಸನೆಯು ಗೈವ ನರ ದೇಹಜ ।**
**ದೈಹಿಕ ಕ್ಲೇಶಗಳು ಬರಲವನೇಕೆ ಬಿಡಿಸಿಕೊಳ ॥ ೨೨ ॥**

ತಾರತಮ್ಯ ಪಂಚಭೇದಗಳೇ ಸತ್ಯ ಎಂತಲೂ, ಇನ್ನೂ, ಅಭಿಮಾನ ತ್ಯಾಗ ಮಾಡೋಣವೇ ಪ್ರಯೋಜನವಲ್ಲ, ಸಮೀಚೀನ ಜ್ಞಾನ ಬೇಕು ಎಂತಲೂ ಹೇಳತಾರೆ.

ವಾಸುದೇವ–ಗುಣಪೂರ್ಣನಾದ ಸರ್ವೋತ್ತಮನಾದ ವಾಸುದೇವ, ಏಕಪ್ರಕಾರದಿ– ಅನಾದ್ಯನಂತಕಾಲಕ್ಕೂ, ಒಂದೇ ಪ್ರಕಾರ ನ್ಯೂನಾಧಿಕ್ಯದಿಂದ ರಹಿತನಾದವ ಎಂತಲೂ, ಈಶನೆನಿಸುವ–ಚರಾಚರಕ್ಕೆ ಸ್ವಾಮಿ ಎಂತಲೂ, ಸರ್ವೋತ್ತಮ ಎಂತಲೂ, ಅನ್ಯಾಧೀನ ನಲ್ಲ ಎಂತಲೂ, ಸಮಸ್ತರಿಂದ ಕರಿಸೋವನಾಗತಾನೆ, ಬ್ರಹ್ಮ ರುದ್ರ ಶಚೀಶ–ರಮಾ, ಬ್ರಹ್ಮ, ರುದ್ರ, ಇಂದ್ರ ಇವರೇ, ಮೊದಲಾದಮರರೆಲ್ಲರು–ಅಕ್ಷರರಾದ, ಅಸ್ವತಂತ್ರ ಚೇತನರೊಳಗೆ ಬ್ರಹ್ಮಗೆ ಉತ್ತಮರಾದ, ಮೊದಲುಸಂಖ್ಯಾದಿಂದ ಪಠಿತರಾದ ರಮಾ ದೇವೇರು, ತದನ್ಯರಾದ ಬ್ರಹ್ಮಾದಿ ತೃಣಾಂತ ಮುಕ್ತಿಯೋಗ್ಯ ಜೀವರು, ಅಮರ ಶಬ್ದ ದಿಂದ ಅಷ್ಟೂ ಗ್ರಾಹ್ಯ, ದಾಸರೆನಿಸುವರು–ಪರಮಾತ್ಮನಿಂದಲೂ ಚರಾಚರಗಳಿಂದಲೂ ಭೃತ್ಯರು, ಎಂತ ಅನಿಸೋವರಾಗತಾರೆ. ವಾಸುದೇವ ಹ್ಯಾಂಗೆ ಈಶನೋ, ಅದರಂತೆ

ಅನಾದ್ಯನಂತಕಾಲಕ್ಕೂ ನ್ಯೂನಾಧಿಕ್ಯಗಳಿಲ್ಲದೆ ಏಕಪ್ರಕಾರ ಮುಕ್ತಿಯೋಗ್ಯರು ದಾಸರೆಂತಲೇ ಎನಿಸೋವರಾಗತಾರೆ. ಉಭಯರಿಗೆ ಇದು ಎರಡೂ ದಾವಾಗ್ಯೂ ಕೆಡೋದಿಲ್ಲ. ಈ ಸುಮಾರ್ಗವ–ಈ ಸಮೀಚೀನಮಾರ್ಗವ, ಸ್ವರೂಪದಲ್ಲಿ, ಬಾಹ್ಯದಲ್ಲಿ ಇರತಕ್ಕ ಜೀವರು, ಮ್ಯಾಲೆ ಉಕ್ತರಾದವರ ಬಿಟ್ಟು–ದಾಸೋಹಂ ಎಂಬುದ ಬಿಟ್ಟು, ಸೋಹಂ–ಗುಣಪೂರ್ಣ, ಸರ್ವೋತ್ತಮ, ಸರ್ವಸ್ವತಂತ್ರ, ಬ್ರಹ್ಮ, ನಾನೇ ಎಂತಲೂ ಅನ್ಯ ದೇವತಿ ಬ್ಯಾರೆ ಇಲ್ಲಾ ಎಂತಲೂ, ಅಸಮೀಚೀನವಾದ ಮಾರ್ಗ, ಸ್ವರೂಪದಲ್ಲಿ, ಬಾಹ್ಯದಲ್ಲಿ ವಿದ್ಯಮಾನಗಳಾಗಿ, ಉಪಾಸನೆಯ ಗೈವ–ಉಪಾಸನಾಮಾಡತಕ್ಕ ಭಗವದ್ದ್ವೇಷಿ ತಮೋಯೋಗ್ಯ, ಇಂಥಾ ಜೀವರು ಕೆಲವರು, ಇವರಲ್ಲಿ ನಿತ್ಯಸಂಸಾರಿಗಳು ಅಂತರ್ಭೂತರೆ. ಪರಮಾತ್ಮ ತನ್ನ ಸರ್ವೋತ್ತಮತ್ವ, ಸರ್ವಸ್ವಾಮಿತ್ವ, ಸೋಹಂ ಉಪಾಸಕರಾದ ಇವರಲ್ಲಿ ಪ್ರಚೋದನಮಾಡಿ, ಬುದ್ಧಿಭೇದ ಮಾಡೋದಿಲ್ಲ. ಜೀವರೇನು, ಅವರವರ ಸ್ವಭಾವವೇನು, ಜ್ಞಾನವೇನು, ಈಶ್ವರನಿಂದ ರಚಿತವಲ್ಲ. ಇದು ಅನಾದಿ ನೇಮ. ಆದ್ದರಿಂದ ಇದ್ದದ್ದರನ್ನ ಅಭಿವ್ಯಕ್ತಿಮಾಡತಾನೆ. ನರ–ತಾನೇ ಈಶ್ವರ ಎನತಕ್ಕದ್ದೇ ನಿಶ್ಚಯವಾದರೆ, ಅಹಂ ಬ್ರಹ್ಮ ಎನತಕ್ಕ ಮನುಷ್ಯನು, ದೇಹಜ–ದೇಹಸಂಬಂಧವಾದ ದೇಹಕ್ಕೆ ಪ್ರಾಪ್ತವಾದ ರೋಗಾದಿ ಅನೇಕ ದುಃಖಕರವಾದ ಉಪದ್ರವಗಳೇನು, ದೈಶಿಕ–ದೇಶಕ್ಕೆ ಅರಸಾದ ರಾಜನಿಂದ ಪ್ರಾಪ್ತವಾದ ದುಃಖಕರವಾದ ದಂಡನಾದಿ ಉಪದ್ರವಗಳೇನು, ಕ್ಲೇಶಗಳು–ಇಂಥಾ ಅನೇಕ ವಿಧ ದುಃಖಗಳು, ಬರಲು–ಪ್ರಾಪ್ತವಾಗಲು, ಅವನ್ನ ಅನುಭವಿಸುತಾನೆ. ಅವನ–ಆ ಯಾವತ್ತೂ ದುಃಖಗಳನ್ನ, ಏಕೆ ಬಿಡಿಸಿಕೊಳ–ಏತಕ್ಕೋಸ್ಕರ ಬಿಡಿಸಿಕೊಂಬೋದಿಲ್ಲ, ಎಂದರೆ, ಜೀವರ ಯೋಗ್ಯತಿ ಅನುಸರಿಸಿ ಸುಖದುಃಖಾದಿಗಳು ಈಶನಿಂದ ಕೊಡಲ್ಪಡತವೆ. ಅದರನ್ನ ತಿರಸ್ಕರಿಸಲಿಕ್ಕೆ ಜೀವರು ಶಕ್ತರಲ್ಲ. ತ್ರಿವಿಧ ಜೀವರಿಗೂ ಅನ್ಯನಾದವ ಈಶ ಬ್ಯಾರೆ, ಅವಗೆ ಸರ್ವರೂ ಭೃತ್ಯರು. ಸ್ವರೂಪಯೋಗ್ಯತಾನುಸಾರ ವಿಪರೀತ ವ್ಯವಹಾರವೆಂದು ತಾತ್ಪರ್ಯ. ತಾರತಮ್ಯ ಪಂಚಭೇದ, ಹರಿ ಸರ್ವೋತ್ತಮ, ವಾಯು ಜೀವೋತ್ತಮ ಎಂಬುದು ಪ್ರತ್ಯಕ್ಷಾದಿಗಳಿಂದ ಸಿದ್ಧವು.

**ವಿಶೇಷಾರ್ಥ :–** ಲೋಕದಲ್ಲಿ ಮಾರ್ಗಗಳು ಎರಡು. ಸುಮಾರ್ಗ, ದುರ್ಮಾರ್ಗ ಎಂದು. ಸುಮಾರ್ಗ ದಾವದೆಂದರೆ, ಮೋಕ್ಷಪ್ರದನಾದ, ಸರ್ವತ್ರ ವ್ಯಾಪ್ತನಾದ, ಗುಣಪೂರ್ಣನಾದ ವಾಸುದೇವರೂಪಿ ಪರಮಾತ್ಮ, ವಿಚ್ಛಿತ್ತಿ ಇಲ್ಲದಂತೆ ಅನಾದ್ಯನಂತಕಾಲಕ್ಕೂ ಪ್ರಜರ ಪಾಲನೆಮಾಡತಕ್ಕ ಸ್ವಾಮಿ ಎಂತಲೂ, ಈ ಪರಮಾತ್ಮಗೆ ರಮಾ ಬ್ರಹ್ಮಾದಿ ದೇವತೆಗಳು ನೀತರಾದ ಭೃತ್ಯರೆಂತಲೂ (ಪರಮಾತ್ಮ ನೀತಸ್ವಾಮಿತ್ವ ಉಳ್ಳವ, ಹಾಂಗೆ ಅನಂತಾನಂತ ಭಗವದ್ರೂಪಗಳು ಎಂತ ತಾತ್ಪರ್ಯ) ತಿಳಕೊಂಬೋ ಜ್ಞಾನಾನುಸಂಧಾನ ಮಾರ್ಗ ದಾವದದೆ ಇದೇ ಸುಮಾರ್ಗ, ಇನ್ನೂ ಪರಮಾತ್ಮನ ಪಾದಸಂದರ್ಶನವಾಗಿ ಕಡೆಯಲ್ಲಿ ಸುಖಪಡತಕ್ಕ ಉತ್ತಮವಾದ ಜ್ಞಾನಮಾರ್ಗವು. ಮೇಲೆ ಹೇಳಿದಂಥಾ ಮಾರ್ಗವನ್ನ ಅನುಸರಿಸದೆ ಅಭಿಮಾನ ತ್ಯಾಗ ಮಾಡೋಮಾತ್ರದಿಂದ ಸದ್ಗತಿ ಆಗಲಾರದು.

ದುರ್ಮಾರ್ಗ ದಾವದೆಂದರೆ, ಸೋಹಂ ಉಪಾಸನೆಗೈವ ಮಾರ್ಗವು. ಗುಣಪೂರ್ಣ ನಾದ ನಿರ್ದೋಷನಾದ ಪರಮಾತ್ಮನು ನಾನೇವೇ ಎಂತಲೂ, ನನಗೆ ಅನ್ಯನಾದ ಪರಮಾತ್ಮ ಬ್ಯಾರೆ ಇಲ್ಲ ಎಂತಲೂ, ಎಂದಿಗೂ ದೇವರಾಧೀನನಾಗೋದಿಲ್ಲ ಎಂತಲೂ, ಉಪಾಸನಮಾಡತಕ್ಕದ್ದು ದುರ್ಮಾರ್ಗ. ದೇವರು ತಾನೇ ಆದಪಕ್ಷದಲ್ಲಿ, ದೇಹಕ್ಕೆ ಸಂಬಂಧವಾದ ರೋಗಾದಿ ಉಪದ್ರವಗಳೇನು, ಶಿಕ್ಷಾದಿಗಳೇನು, ಇವನ್ನು ಯಾಕೆ ಬಿಡಿಸಿ ಕೊಳ್ಳದೆ ಅನುಭವಿಸುತ್ತಾನೆ ?

**ಆ ಪರಬ್ರಹ್ಮನಲಿ ತ್ರಿಜಗ ।**
**ದ್ವ್ಯಾಪಕತ್ವ ನಿಯಾಮಕತ್ವ ।**
**ಸ್ಥಾಪಕತ್ವ ವಶತ್ವ ಈಶತ್ವಾದಿಗುಣಗಳಿಗೆ ॥**
**ಲೋಪವಿಲ್ಲೇಕಪ್ರಕಾರ ಸ್ವ ।**
**ರೂಪವೆನಿಪುವು ಸರ್ವಕಾಲದಿ ।**
**ಪೋಪುವಲ್ಲವು ಜೀವರಿಗೆ ದಾಸತ್ವದೋಪಾದಿ ॥ ೨೩ ॥**

ದೇವರಲ್ಲಿ ಇರತಕ್ಕ ಗುಣಗಳ ಹೇಳತಾರೆ.

ಆ ಪರಬ್ರಹ್ಮನಲ್ಲಿ – ಪೂರ್ವೋಕ್ತನಾದ, ಸರ್ವೋತ್ತಮನಾದ, ಚತುರ್ಮುಖ ಬ್ರಹ್ಮಗೆ ಅನ್ಯನಾದ ಬ್ರಹ್ಮನಲ್ಲಿ, ಬ್ರಹ್ಮಶಬ್ದವಾಚ್ಯನಾದ ವಿಷ್ಣುವಿನಲ್ಲಿ, ಅಂದರೆ ನಾರಾಯಣದೇವರಲ್ಲಿ, ತ್ರಿಜಗದ್ವ್ಯಾಪಕತ್ವ–ಹದಿನಾಲ್ಕುಲೋಕಗಳ ಒಳ ಹೊರಗೂ, ಬ್ರಹ್ಮಾಂಡದ ಒಳ ಹೊರಗೂ ಮತ್ತು ತ್ರಿವಿಧ ಜೀವರ ಅಂತರ್ಬಹಿಃ ಏನು ತತ್ತದಾಕಾರ ದಿಂದ ವ್ಯಾಪಕತ್ವವೂ, ನಿಯಾಮಕತ್ವ–ಅವರವರ ಸ್ವರೂಪಯೋಗ್ಯತಾನುಸಾರ ಈಶ್ವರ ನಿಂದ ರಚಿತವಲ್ಲದ ಅನಾದಿಕರ್ಮಾನುಸಾರ ಸ್ವರೂಪದಲ್ಲಿ, ಬಾಹ್ಯಸ್ಥೂಲದೇಹದಲ್ಲಿ ನಿಯಾಮಕತ್ವ, ಸ್ಥಾಪಕತ್ವ–ಅವತಾರಗಳ ಮಾಡಿ ಧರ್ಮಸ್ಥಾಪಕತ್ವವೇನು, ಬ್ರಹ್ಮಾಂಡ ಸೃಷ್ಟಿಮಾಡಿ, ಅದರಲ್ಲಿ ಜೀವರ ಸೃಷ್ಟಿಮಾಡಿ, ಸಾಧನ ಪೂರ್ತಿಮಾಡಿಸಿ, ಲಿಂಗಭಂಗ ಐದಿಸಿ, ಅವರಿಗೆ ಯೋಗ್ಯವಾದ ಸ್ಥಾನಗಳಲ್ಲಿ ಆವಾಸರಾಗಿರುವಂತೆ, ಸ್ಥಾಪಕತ್ವ, ವಶತ್ವ–ಚರಾಚರಗಳ ತನ್ನ ವಶದಲ್ಲಿ ಇಟ್ಟುಕೊಂಡು ಇರುವದೂನೂ, ತನ್ನ ವಶ ತಾನೇ ಆಗಿ ಇರೋಣವೇನು, ಈಶತ್ವ – ಸರ್ವಸ್ವಾಮಿತ್ವವೇನು, ಆದಿ – ಇವೇ ಮೊದಲಾದ, ಗುಣಗಳಿಗೆ–ಅಸದೃಶವಾದ ಅನೇಕ ಗುಣಗಳಿಗೆ, ಲೋಪವಿಲ್ಲ–ಅನಾದ್ಯನಂತಕಾಲಕ್ಕೂ ನ್ಯೂನಾಧಿಕ್ಯಗಳಿಲ್ಲ. ಏಕಪ್ರಕಾರ–ಒಂದೇ ಪ್ರಕಾರ ಇರೋವಾಗಿ ಅವೆ. ಈ ಗುಣಗಳು, ಸ್ವರೂಪವೆನಿಪುವು – ಶ್ರೀ ಪರಮಾತ್ಮನ ಸ್ವರೂಪಭೂತಗಳೆಂದು, ಈ ಪರಮಾತ್ಮಗೆ ಅಭಿನ್ನ ಎಂತಲೂ ಎನಿಸೋವಾಗಿ ಅವೆ. ಪೋಪುವಲ್ಲವು–ಇವು ಪರಮಾತ್ಮನ್ನ ಬಿಟ್ಟು ಹೋಗೋದಿಲ್ಲ, ಇದಕ್ಕೆ ದೃಷ್ಟಾಂತ, ಜೀವರಿಗೆ–ತ್ರಿವಿಧ ಜೀವರಿಗೆ, ಸರ್ವಕಾಲದಿ– ಅನಾದ್ಯನಂತಕಾಲದಲ್ಲಿ ದಾಸತ್ವ ಎಂಬುದು ಹ್ಯಾಂಗೆ ಹೋಗೋದಿಲ್ಲವೊ, ದಾಸತ್ವ ದೋಪಾದಿ – ಈ ದಾಸತ್ವದೋಪಾದಿಯಲ್ಲಿ ಈಶತ್ವಾದಿ ಗುಣಗಳು ಪರಮಾತ್ಮನಲ್ಲಿ

ಇರೋದು, ಹೋಗೋದಿಲ್ಲ; ಈಶನ ಗುಣಗಳು ದಾಸರಿಗೆ ಬರೋದಿಲ್ಲ; ದಾಸರ ಗುಣಗಳು ಈಶಗೆ ಬರೋದಿಲ್ಲ; ದಾಸರ ಗುಣಗಳು ಅಪೂರ್ಣಗಳು; ಈಶನ ಗುಣಗಳು ಪೂರ್ಣಗಳು; ಈ ಎರಡೂ ಸರ್ವಕಾಲದಲ್ಲಿ ನ್ಯೂನಾಧಿಕ್ಯಗಳು ಆಗೋದಿಲ್ಲ.

**ವಿಶೇಷಾರ್ಥ :–** ಈಶನಾದವ ಎಂದಿಗೂ ದಾಸನಾಗೋದಿಲ್ಲ. ದಾಸನಾದವ ಎಂದಿಗೂ ಈಶನಾಗೋದಿಲ್ಲ. ಆದ್ದರಿಂದ ಈಶನಲ್ಲಿ ವಿದ್ಯಮಾನಗಳಾದ ಪೂರ್ವೋಕ್ತ ಗುಣಗಳು 'ಸೋಹಂ' ಎಂತ ಉಪಾಸನಮಾಡತಕ್ಕ ಪುರುಷನಲ್ಲಿ ಇಲ್ಲವಾದಕಾರಣ 'ತಾನೇ ದೇವರು' ಎಂತ ಅಂಬೋಣ ಕುಮಾರ್ಗವಾಯಿತು. ಕುಮಾರ್ಗಕ್ಕೆ ಕುತ್ಸಿತ ವಾದ ಅಂಧಂತಮಸ್ಸೇ ಪ್ರಾಪ್ತಿ. ಆದ್ದರಿಂದ ಸುಮಾರ್ಗ ಆಚರಿಸಿ ಸದ್ಗತಿ ಹೊಂದಬೇಕೆಂತ ತಾತ್ಪರ್ಯ. 'ಸೋಹಂ' ಉಪಾಸನಮಾಡತಕ್ಕವನು ದೈತ್ಯನು.

**ನಿತ್ಯನೂತನ ನಿರ್ವಿಕಾರ ಸು ।**
**ಹೃತ್ತಮ ಪ್ರಣವಸ್ಥ ವರ್ಣೋ ।**
**ತ್ಪತ್ತಿಕಾರಣ ವಾಙ್ಮನೋಮಯ ಸಾಮಗಾನರತ ॥**
**ದತ್ತ ಕಪಿಲ ಹಯಾಸ್ಯ ರೂಪದಿ ।**
**ಪೃಥಕ್ಪೃಥಕ್ ಜೀವರೊಳಗಿದ್ದು ಪ್ರ ।**
**ವರ್ತಿಸುವನವರವರ ಯೋಗ್ಯತೆ ಕರ್ಮವನುಸರಿಸಿ ॥ ೨೪ ॥**

ಜೀವರ ಯೋಗ್ಯತಾನುಸಾರ ಪರಮಾತ್ಮ ಪ್ರವರ್ತಿಸತಾನೆ ಎಂತ ಹೇಳತಾರೆ.

ನಿತ್ಯ–ಬ್ರಹ್ಮಾದಿ ಜೀವರೋಪಾದಿಯಲ್ಲಿ ಪ್ರತಿ ಪ್ರತೀ ಕಲ್ಪಕಾಲಕ್ಕೆ ಬ್ಯಾರೆ ಬ್ಯಾರೆ ಪರಮಾತ್ಮ ಎಂತ ಇಲ್ಲದೆ, ಅನಾದ್ಯನಂತಕಾಲಕ್ಕೂ ಒಬ್ಬನಾಗೇ ಇರತಕ್ಕವ ಪರಮಾತ್ಮ; ಮತ್ತು ಜೀವಾಂತರ್ಗತನಾಗಿ ಅವಿಯೋಗನಾಗಿ ಜೀವಗೆ ನಿತ್ಯತ್ವ ಸ್ಥಾಪನಮಾಡಿದವ; ಜೀವನ ನಿತ್ಯತ್ವಕ್ಕೆ ನಿತ್ಯಬಿಂಬನಾದವ. ನೂತನ–ನೂತನಕರಗಳಾದ ಅತ್ಯಾಶ್ಚರ್ಯ ವ್ಯಾಪಾರಗಳ ರಮಾದೇವೇರಿಗೆ, ಜೀವರಿಗೆ ತೋರಿಸಿ ಆನಂದದಲ್ಲಿ ಮುಣುಗಿಸತಕ್ಕವ, ನೂತನವಾಗಿ ತೋರೋವ, ನಿರ್ವಿಕಾರ–ಜೀವಾಂತರ್ಗತನಾಗಿ ಅವಿಯೋಗನಾಗಿ ಇದ್ದ ಕಾಲಕ್ಕೂ ಪ್ರತಿಬಂಧಕಸಾಮಗ್ರಿಗಳಿಂದ ಜೀವರೋಪಾದಿಯಲ್ಲಿ ಸುಖದುಃಖಾದಿಗಳಿಗೆ ಸಂಬಂಧಪಡದೆ ತದ್ಭಿನ್ನನಾಗಿ, ವಿಕಾರವಿಲ್ಲದೆ ಇರತಕ್ಕವ, ಸುಹೃತ್ತಮ– ಸು–ಸಮೀಚೀನ ಗಳಾದ, ಹೃ–ಹೃದಯಾಕಾಶದಲ್ಲಿ ಭಕ್ತ್ಯಾದಿಗಳಿಂದ ಪ್ರತ್ಯಕ್ಷವಾಗಿ ಧ್ಯಾನಮಾಡುವ ಭಗವದ್ಭಕ್ತರಿಗೆ, ಉತ್ತಮ–ಶ್ರೇಷ್ಠರಾದ ಜೀವೋತ್ತಮರಾದ ಬ್ರಹ್ಮವಾಯುಗಳಿಗಿಂತಲೂ ಸರ್ವೋತ್ತಮನಾದವ, ಪ್ರಣವಸ್ಥ–ಓಂಕಾರಾಂತರ್ಗತನಾಗಿ ಓಂಕಾರವಾಚ್ಯನಾದವ, ಮತ್ತು ಓಂಕಾರಗತ, ವರ್ಣ–ಅಕಾರಾದಿ ಅಕ್ಷರಗಳ, ಉತ್ಪತ್ತಿಕಾರಣ–ಉತ್ಪತ್ತಿಗೆ ಕಾರಣ ನಾಗಿ ಆಯಾ ವರ್ಣಗಳ ಉತ್ಪತ್ತಿಮಾಡಿ, ಆಯಾ ವರ್ಣಾಂತರ್ಗತನಾಗಿ ವರ್ಣವಾಚ್ಯ ನಾಗಿ ಇರತಕ್ಕವ, ವಾಙ್ಮನೋಮಯ–ವಾಗಿಂದ್ರಿಯದಲ್ಲಿ ಇದ್ದು ವಾಙ್ಮಯ ಎಂತಲೂ,

ಮನೋ ಇಂದ್ರಿಯಗಳಲ್ಲಿದ್ದು ಮನೋಮಯ ಎಂತಲೂ ಕರಿಸಿ, ಮನೋವಾಗಿಂದ್ರಿಯ ಗಳಿಂದ ವರ್ಣಾತ್ಮಕವಾದ ಅನೇಕವಿಧ ಮಾತುಗಳ, ವೇದಶಾಸ್ತ್ರಗಳ ನುಡಿಸತಕ್ಕವ, ಸಾಮಗಾನರತ–ಸಾಮವೇದದಿಂದ ಗಾನಮಾಡತಕ್ಕ ಮುಕ್ತರಲ್ಲಿ ಆಸಕ್ತಿ ಉಳ್ಳವ, ಸಾಮ ಗಾನದಲ್ಲೂ ಪರಮಪ್ರೀತನಾದವ, ಪೃಥ್‌ಪೃಥಕ್–ಅನಾದಿಸ್ವರೂಪ ಸ್ವಭಾವ ಬ್ಯಾರೆ ಬ್ಯಾರೆ ಆದ, ಜೀವರೊಳಗೆ–ಮುಕ್ತಿಯೋಗ್ಯ, ನಿತ್ಯಸಂಸಾರಿ, ತಮೋಯೋಗ್ಯ, ಈ ತ್ರಿವಿಧ ಜೀವರೊಳಗೆ, ದತ್ತ–ದತ್ತಾತ್ರೇಯ ರೂಪದಿಂದ ಮುಕ್ತಿಯೋಗ್ಯರಲ್ಲಿ, ಕಪಿಲ– ಕಪಿಲರೂಪದಿಂದ ನಿತ್ಯಸಂಸಾರಿಗಳಲ್ಲಿ, ಹಯಾಸ್ಯ–ಹಯಗ್ರೀವರೂಪದಿಂದ ತಮೋ ಯೋಗ್ಯರಲ್ಲಿ, ರೂಪದಿ–ಆಯಾ ರೂಪದಿಂದ, ಇದ್ದು–ಆಯಾ ಜೀವರಲ್ಲಿ ಇದ್ದು, ಅವ ರವರ–ಆ ತ್ರಿವಿಧಜೀವರ, ಯೋಗ್ಯತೆ–ಅನಾದಿಸ್ವರೂಪಸ್ವಭಾವದ ಯೋಗ್ಯತಿ, ಕರ್ಮವ– ಅನಾದಿ ಜಡಕರ್ಮವ, ಅನುಸರಿಸಿ–ಎರಡರನ್ನ ಅನುಸರಿಸಿ, ಪ್ರವರ್ತಿಸುವ–ತ್ರಿವಿಧ ಜೀವರ ಸ್ಥೂಲದೇಹದ್ವಾರಾ ಮಾಡತಕ್ಕ ಜೀವಕೃತ ಕರ್ಮಗಳ, ಬಿಂಬಕ್ರಿಯಾ ದ್ವಾರಾ ತಾನು, ಪ್ರವರ್ತಿಸುವನು–ನಂತರ ಜೀವನ ದ್ವಾರಾ ದೇಹದಿಂದ ಪ್ರವರ್ತಿಮಾಡಿಸುವ. ಈ ಪ್ರಕಾರ ಪೂರ್ವೋಕ್ತ ರೂಪಗಳಿಂದ ವ್ಯಾಪಾರಗಳ ಮಾಡತಾನೆ. ಈ ರೂಪತ್ರಯ ಗಳು ಸ್ವರೂಪಯೋಗ್ಯತಾನುಸಾರ ಜ್ಞಾನಪ್ರದರೂಪಗಳು. ವೇದವತ್, ಸೂತ್ರವತ್ ಎಂತ ತಾತ್ಪರ್ಯ.

**ಶ್ರುತಿಗಳಾತನ ಮಾತು ವಿಮಲ ।**
**ಸ್ಮೃತಿಗಳಾತನ ಶಿಕ್ಷೆ ಜೀವ ।**
**ಪ್ರತತಿ ಪ್ರಕೃತಿಗಳೆರಡು ಪ್ರತಿಮೆಗಳೆನಿಸಿಕೊಳುತಿಹವು ॥**
**ಇತರ ಕರ್ಮಗಳಿಲ್ಲ ಲಕುಮಿಾ ।**
**ಪತಿಗೆ ಪೂಜೆಗಳೆಂದು ಸ್ಮರಿಸುತ ।**
**ಚತುರವಿಧ ಪುರುಷಾರ್ಥಗಳ ಬೇಡದಿರು ಸ್ವಪ್ನದಲಿ ॥ ೨೫ ॥**

ನಿಷ್ಕಾಮಕರ್ಮ ಮಾಡಬೇಕು ಎಂತ ಹೇಳತಾರೆ.

ಶ್ರುತಿಗಳು–ಅಪೌರುಷೇಯವಾದ ವೇದದಲ್ಲಿ ಹೇಳತಕ್ಕದ್ದು, ಆತನ ಮಾತು– ವೇದಪುರುಷನಾದ ಶ್ರೀ ಪರಮಾತ್ಮನ ಮಹಾಮಹಾತ್ಮೆಗಳು ಹೇಳತವೆ. ಏನಂತ ಹೇಳ ತವೆ ಎಂದರೆ, ಶ್ರೀಹರಿ ಸರ್ವೋತ್ತಮ, ಗುಣಪೂರ್ಣ, ನಿರ್ದೋಷ, ಸೃಷ್ಟ್ಯಾದ್ಯಷ್ಟ ಕರ್ತೃ, ಸರ್ವತಂತ್ರಸ್ವತಂತ್ರ ಎಂತಲೂ, ಜೀವಪ್ರತತಿ–ಶ್ರೀ ಪರಮಾತ್ಮನಿಂದ ಸೃಜ್ಯರಾದ ಜೀವರ ಸಮೂಹವೇನು, ಪ್ರಕೃತಿಗಳು–ಪೃಥಿವ್ಯಾದಿ ಪ್ರಕೃತಿಸಾಂಕೇತವಾದ ಪಂಚಭೂತ ಗಳ ಸಮೂಹವೇನು, ಎರಡು–ಈ ಜೀವಜಡಗಳು, ಪ್ರತಿಮೆಗಳು–ಪರಮಾತ್ಮನ ಆವಾಸಕ್ಕೆ ಅಧಿಷ್ಠಾನಭೂತವಾದ ಪ್ರತಿಮಾಗಳು ಎಂತಲೂ, ಎನಿಸಿಕೊಳುತಿಹವು–ಎನ್ನಿಸಿಕೊಳ್ಳುತ್ತಾ ಇರೋವಾಗಿ ಅವೆ. ಅಪೌರುಷೇಯವಾದ ವೇದಗಳು ಈಶ್ವರನಿಂದ ರಚಿತವಲ್ಲ, ಅನಾದಿಯು. ವಿಮಲ–ನಿರ್ದೋಷವಾದ ವೇದಗತ ಅರ್ಥಗಳ, ನಿರ್ದೋಷರಾದ ಶ್ರೀ

ವೇದವ್ಯಾಸದೇವರು, ಸ್ಮೃತಿಗಳು–ವ್ಯಾಖ್ಯಾನರೂಪವಾದ ಪುರಾಣಗಳು ಭಾಷಾತ್ರಯ ಗಳಿಂದ ಎಂದರೆ ದರ್ಶನ, ಗುಹ್ಯ ಮತ್ತು ಸಮಾಧಿ ಭಾಷಾಗಳಿಂದ ವೇದಕ್ಕೆ ಅವಿರುದ್ಧ ವಾದ ಸನ್ಮಾರ್ಗರೂಪವಾದ ಸಾಧನಮಾರ್ಗಗಳ ಹೇಳಿದ್ದಾರೆ. ಆದ್ದರಿಂದ, ಆತನ ಶಿಕ್ಷೆ– ವಿಧಿನಿಷೇಧಗಳ ತೋರಿಸಿಕೊಟ್ಟು, ಆಚರಿಸತಕ್ಕದ್ದು ಇದು, ಅಚರಿಸಕೂಡದ್ದು ಇದು, ಎಂತ ಶಿಕ್ಷಾರೂಪವಾಗಿ ಪರಮಾತ್ಮ, ತನ್ನ ಆಜ್ಞಾರೂಪವಾದ ಶಾಸನವನ್ನ ಪುರಾಣಗಳಲ್ಲಿ ಹೇಳಿ ಇರೋಣದರಿಂದ, ಸ್ಮೃತಿಗಳು ಆತನ ಶಿಕ್ಷಾರೂಪವಾದುವು ಎಂತ ಕರಿಸೋವಾದುವು. ಆದ್ದರಿಂದ, ಶಿಕ್ಷಾರೂಪವಾದ ಸ್ಮೃತಿಗಳಿಂದಲೇ ಅನುಸಂಧಾನಕ್ರಮಗಳು ಯಾವತ್ತೂ ತಿಳಿಯಬೇಕು ಎಂತ ತಾತ್ಪರ್ಯ. ಇದು ಪೌರುಷೇಯ. ಇತರ ಕರ್ಮಗಳೆಲ್ಲ–ದೇವರ ಪೂಜಾ, ಸ್ನಾನ, ಸಂಧ್ಯಾವಂದನ, ಜಪ, ಹೋಮ, ತೀರ್ಥಯಾತ್ರಾದಿಗಳು ಪ್ರತೀತದಲ್ಲಿ ಪುಣ್ಯಕರ್ಮಗಳಾಗೇ ಅವೆ. ತದ್ವ್ಯತಿರಿಕ್ತ ಇತರವಾದ ದಾರಾಪುತ್ರಾದಿಗಳ ಪೋಷಣ, ಆತ್ಮಸುಖ, ಮೊದಲಾದ ಈ ಕರ್ಮಗಳು ಪ್ರತೀತದಲ್ಲಿ ಇತರ ಕರ್ಮಗಳಾಗಿ ಅವೆ. ಈ ಉಭಯವಿಧ ಕರ್ಮಗಳು ಯಾವತ್ತೂ, ಲಕುಮೀಪತಿಗೆ–ಲಕ್ಷ್ಮೀಪತಿಯಾದ ನಾರಾ ಯಣದೇವರಿಗೆ, ಪೂಜೆಗಳೆಂದು–ಪೂಜಾ ಎಂತಲೇ, ಸ್ಮರಿಸುತ–ಸ್ಮರಣೆಮಾಡುತ್ತಾ, ಎಂದರೆ, ಪ್ರತೀತ ಪುಣ್ಯಕರ್ಮಗಳೇನು, ತದಿತರ ಕರ್ಮಗಳೇನು, ಮನಾದಿ ಏಕಾದಶೇಂ ದ್ರಿಯಗಳಿಂದ ಆಗೋವಾಗತವೆ. ಅಹಂಮಮತಾದಿಗಳಿಂದ ರಹಿತನಾಗಿ, ನಿಸ್ಪೃಹನಾಗಿ ಕರ್ಮ ಮಾಡತಕ್ಕ ದೇಹೇಂದ್ರಿಯಾದಿಗಳಲ್ಲಿ ಇದ್ದು, ಕರ್ಮಗಳ ಮಾಡಿಸತಕ್ಕ ಆಯಾ ಇಂದ್ರಿಯಗತ ಪರಮಾತ್ಮನ್ನ ಸ್ಮರಿಸುತ್ತಾ, ಕರ್ಮಾಂತರ್ಗತ ಶ್ರೀ ದೇವರ ಇಂದ್ರಿಯಸ್ಥ ಪರಮಾತ್ಮನಲ್ಲಿ, ಇಂದ್ರಿಯಸ್ಥ ಪರಮಾತ್ಮನ್ನ, ಹೃದಯಾಕಾಶಗತ ಶ್ರೀ ಪರಮಾತ್ಮನಲ್ಲಿ ಐಕ್ಯಚಿಂತನ ರೂಪದಿಂದ ಧ್ಯಾನಮಾಡುತ್ತ ಕರ್ಮಗಳ ಯಾವತ್ತೂ ಈ ರೀತ್ಯಾ ಪೂಜೆ ಗಳೆಂದರ್ಪಿಸುತ, ಸ್ವಪ್ನದಲಿ–ಕನಸಿನಲ್ಲಿ ಆದರೂ, ಚತುರವಿಧ ಪುರುಷಾರ್ಥಗಳ– ಧರ್ಮಾರ್ಥಕಾಮಮೋಕ್ಷಗಳೆಂಬ (ಈ ನಾಲ್ಕು ವಿಧ ಪ್ರಯೋಜನಗಳು ಅಧಿಕಾರಿಯಾದ ಪುರುಷಗೆ ಮುಖ್ಯವಾದವು). ಇವನ್ನ, ಬೇಡದಿರು–ಫಲಾಪೇಕ್ಷೆಯಿಂದ ಯಾಚನಾ ಮಾಡಧಾಂಗೆ ಇರಬೇಕೆಂದು ತಾತ್ಪರ್ಯ.

**ವಿಶೇಷಾರ್ಥ :–** ಕರ್ಮಗಳ ಹ್ಯಾಂಗೆ ಅರ್ಪಿಸಬೇಕೆಂದರೆ, ಕರ್ಮಾಂತರ್ಗತ ಪರಮಾತ್ಮಗೂ, ಅಧಿಷ್ಠಾನಾಂತರ್ಗತ ಪರಮಾತ್ಮಗೂ ಐಕ್ಯ ಚಿಂತನಿ ಮಾಡೋಣವೆ, ಅರ್ಪಿಸೋಣ. ಕರ್ಮಗಳ ಯಾವತ್ತೂ ಪೂಜಾತ್ವೇನ ಅರ್ಪಿಸು ಎಂದರೆ, ಜಡ ಕರ್ಮ ಅರ್ಪಿಸು ಎಂತ ತಾತ್ಪರ್ಯವಲ್ಲ. ಪ್ರತಿಮಾಂತರ್ಗತ ಪರಮಾತ್ಮನಲ್ಲಿ ಕರ್ಮಾಂತರ್ಗತ ಪರಮಾತ್ಮನ್ನ ಒಂದಂಶದಿಂದ ತೆಗೆದುಕೊಂಡು ಮೇಳನರೂಪವಾದ ಅರ್ಪಣೆ ಮಾಡಬೇ ಕೆಂದು ತಾತ್ಪರ್ಯವು.

**ಭೂತಳಾಧಿಪನಾಜ್ಞಾಧಾರಕ ।**
**ದೂತರಿಗೆ ಸೇವಾನುಸಾರದಿ ।**
**ವೇತನವ ಕೊಟ್ಟವರ ಸಂತೋಷಿಸುವ ತೆರದಂತೆ ॥**

**ಮಾತರಿಶ್ವಪ್ರಿಯನು ಪರಮ ।**
**ಪ್ರೀತಿಪೂರ್ವಕ ಸದ್ಗುಣಂಗಳ ।**
**ಗಾಯಕರ ಸಂತೋಷಬಡಿಸುವ ಇಹಪರಂಗಳಲಿ ॥ ೨೬ ॥**

ಶ್ರೀ ಪರಮಾತ್ಮನ ಸೇವಾ, ದಾರು ದಾರು, ಹ್ಯಾಂಗೆ ಹ್ಯಾಂಗೆ ಮಾಡುತಾರೋ, ಆ ಸೇವಾಕರ್ಮಫಲವನುಸರಿಸಿ ಹಾಂಗೆ ಹಾಂಗೇ ಫಲ ಕೊಡತಾನೆ ಎಂದು ಹೇಳತಾರೆ.

ಭೂತಳಾಧಿಪನು–ಭೂಪಾಲಕನಾದ ರಾಜನು, ಆಜ್ಞಾಧಾರಕ–ತನ್ನ ಆಜ್ಞಾ ಧಾರಕರಾದ, ಅವರವರ ಯೋಗ್ಯತಾನುಸಾರ ಪ್ರೇರಿತವಾದ ಆಜ್ಞಾಕ್ಕೆ ವಶರಾದ ಅಸ್ವತಂತ್ರರಾದ, ದೂತರಿಗೆ–ಭೃತ್ಯರಾದವರಿಗೆ, ಸೇವಾನುಸಾರದಿ–ಅವರವರ ಯೋಗ್ಯ ತಾನುಸಾರ ಮಾಡಲ್ಪಟ್ಟ ಸೇವಾಕ್ಕೆ ಸಂತೋಷಪಟ್ಟವನಾಗಿ, ವೇತನವ ಕೊಟ್ಟು–ಜೀವ ನೋಪಾಯಕ್ಕೆ ಅನುಕೂಲವಾದ ಸಂಬಳಗಳ ಕೊಟ್ಟು, ಅವರ–ತನ್ನ ಭೃತ್ಯರಾದ ಜನರನ್ನ, ಸಂತೋಷಿಸುವ–ಸಂತೋಷಬಡಿಸೋವನಾಗತಾನೆ. ತೆರದಂತೆ–ಹ್ಯಾಂಗೋ ಇದರೋಪಾದಿಯಲ್ಲಿ, ಮಾತರಿಶ್ವಪ್ರಿಯನು – ಜೀವೋತ್ತಮರಾದ ವಾಯುದೇವರಿಗೆ ಸಖನು, ಹದಿನಾಲ್ಕುಲೋಕಕ್ಕೆ ರಾಜನಾದ ಶ್ರೀ ಪರಮಾತ್ಮ, ತನಗೆ ದೂತರಾದ ತ್ರಿವಿಧ ಜೀವರೊಳಗೆ ದಾರು ದಾರು, ಪರಮಪ್ರೀತಿಪೂರ್ವಕ–ಅತ್ಯಂತ ಅಂತಃಕರಣಪೂರ್ವಕ ವಾಗಿ, ಸದ್ಗುಣಂಗಳ–ಸರ್ವೋತ್ಕೃಷ್ಟವಾದ, ಮಂಗಳಕರಗಳಾದ ಗುಣಗಳ, ಗಾಯಕರ– ಗಾನಮಾಡತಕ್ಕವರ (ಎಂದರೆ, ಸ್ವರೂಪಸ್ವಭಾವ ಅನುಸರಿಸಿ ಸರ್ವರಿಗೆ ಪ್ರೇರಕ ಈಶ ನಾದ್ದರಿಂದ, ಮುಕ್ತಿಯೋಗ್ಯರು ಸಚ್ಚಿದಾನಂದ, ಸೃಷ್ಟ್ಯಾದ್ಯಷ್ಟಕರ್ತಾ, ಸರ್ವತಂತ್ರ ಸ್ವತಂತ್ರ ಎಂತ ಗಾನಮಾಡತಾರೆ. ತದನ್ಯರು ದುಃಸ್ವಭಾವರೂಪವಾದ ಗಾಯನ ಮಾಡ ತಕ್ಕವರು), ಭಕ್ತಿಮಾಡತಕ್ಕ ಸ್ವರೂಪವುಳ್ಳವರು, ಇಹಪರಂಗಳಲಿ–ಈ ಭೂಲೋಕದಲ್ಲಿ ಅಹಂಮಮತಾದಿಗಳ ಬಿಡಿಸಿ, ತಜ್ಜನಿತ ಸುಖಗಳ ಈ ಲೋಕದಲ್ಲಿ ಸುಸಾಧನೆ ಪೂರ್ತಿ ಆದನಂತರ ಜೀವನ್ಮುಕ್ತರನಮಾಡಿ, ಉತ್ತಮವಾದ ಮಹರಾದಿಲೋಕಗಳಲ್ಲೇನು ನಂತರ, ಲಿಂಗಭಂಗಾನಂತರ ವೈಕುಂಠಾದಿ ಲೋಕಗಳಲ್ಲೇನು ಇಟ್ಟು ಈ ಪ್ರಕಾರ, ಸಂತೋಷ ಬಡಿಸುವ–ಆನಂದ ಬಡಿಸುತಾನೆ. ತದನ್ಯರಿಗೆ, ಇದಕ್ಕೆ ವಿಪರೀತಾವಸ್ಥಾ ಕೊಡತಾನೆ. ಲೋಕದೃಷ್ಟಾಂತ ರಾಜನ ಸೇವಾನುಸಾರ ಭೃತ್ಯರು ಯಥಾಯೋಗ್ಯವಾಗಿ ಸೇವಾ ಮಾಡೋಣದರಿಂದ ರಾಜ ಸಂತುಷ್ಟನಾಗಿ ಫಲ ಕೊಟ್ಟಂತೆ, ಶ್ರೀ ಪರಮಾತ್ಮನ ಸೇವಾ ದಿಂದ ಜೀವರ ಯೋಗ್ಯತಾನುಸಾರ ಫಲ ಪ್ರಾಪ್ತಿ ಎಂತ ತಾತ್ಪರ್ಯ.

**ದೀಪ ದಿವದಲಿ ಕಂಡರಾದಡೆ ।**
**ಲೋಪಗೈಸುವರಾಕ್ಷಣ ಹರಿ ಸ ।**
**ಮೀಪದಲ್ಲಿರೆ ನಂದನಾಮ ಸುನಂದವೆನಿಸುವುವು ॥**
**ಔಪಚಾರಿಕವಲ್ಲ ಸುಜನರ ।**
**ಪಾಪಕರ್ಮವು ಪುಣ್ಯವೆನಿಪುದು ।**
**ಪಾಪಿಗಳ ಸತ್ಪುಣ್ಯಕರ್ಮವು ಪಾಪವೆನಿಸುವುವು ॥ ೨೭ ॥**

ಭಕ್ತರು ಮಾಡಿದ ಪಾಪ, ಪುಣ್ಯವಾಗತದೆ. ಅಭಕ್ತರು ಮಾಡಿದ ಪುಣ್ಯ, ಪಾಪವಾಗತದೆ ಎಂತ ಹೇಳತಾರೆ. ಪುಣ್ಯಕರ್ಮ, ಪಾಪ ದಾವ ರೀತೀಲಿ ಆಗತದೋ, ಪಾಪ ಕರ್ಮ, ಪುಣ್ಯ ದಾವ ರೀತೀಲಿ ಆಗತದೋ ಅದರ ವಿವರವೂನೂ, ಪಾಪ, ಪುಣ್ಯವಾಗ ಬೇಕಾದರೆ ಅದರ ಅನುಸಂಧಾನಕ್ರಮವೂನೂ, ಅದರಿಂದ ಆಗತಕ್ಕ ಮಹಾಫಲವೂನೂ ಇಂಥಾದ್ದು ಎಂದು ಈ ಶ್ಲೋಕದಿಂದ ಹೇಳತಾರೆ.

ಧರ್ಮೋ ಭವತ್ಯಧರ್ಮೋಽಪಿ ಕೃತೋ ಭಕ್ತೈಸ್ತವಾಚ್ಯುತ ||
ಪಾಪಂ ಭವತಿ ಧರ್ಮೋಽಪಿ ಯೋ ನ ಭಕ್ತೈಃ ಕೃತೋ ಹರೇ || ಇತಿ ಭಾರತೇ.

ದೀಪ–ದೀಪವನ್ನ, ದಿವದಲಿ–ಅಂಧಕಾರರಹಿತವಾದ ಸೂರ್ಯನ ಪ್ರಕಾಶ ಇರೋ ಕಾಲದಲ್ಲಿ, ಕಂಡರಾದಡೆ–ನೋಡಿದ್ದೇ ಆದರೆ, ಕಂಡಂಥಾ ಜನರು, ಆಕ್ಷಣ–ತಕ್ಷಣವೇ, ಲೋಪಗೈಸುವರು–ದೀಪದಿಂದ ಆಗತಕ್ಕ ಕಾರ್ಯವಿಲ್ಲ ಎಂತ ತಿಳಿದು, ದೀಪವನ್ನ ಆರಿಸೋವರಾಗುತ್ತಾರೆ. ಹರಿ–ಸರ್ವೋತ್ತಮನಾದ ಶ್ರೀ ಪರಮಾತ್ಮ, ಸಮಿಾಪದಲಿ–ಸೂರ್ಯನ್ನ ಹಗಲಿನಲ್ಲಿ ಪ್ರತ್ಯಕ್ಷವಾಗಿ ಕಂಡೋಪಾದಿಯಲ್ಲಿ ದೇಹಕ್ಕೆ ಸಮಿಾಪವಾದ ಹೃದಯಕಮಲದಲ್ಲಿ, ಇರೆ–ಸಾಧನಸಂಪತ್ತಿನಿಂದ ಪರಮಾತ್ಮನ್ನ ಪ್ರತ್ಯಕ್ಷೀಕರಿಸಿಕೊಂಡು ಅಧಿಕಾರಿಯಾದವ ಇದ್ದರೆ, ಈ ಅಧಿಕಾರಿಗೆ, ನಾಮ–ಶ್ರೀ ಭಗವನ್ನಾಮ, ನಂದ–ಆನಂದ ಕೊಡೋದಾಗತದೆ. ಐಹಿಕದಲ್ಲಿ ಸುಖ ಕೊಡತದೆ. ಸುನಂದವು ಇದೇ ಭಗವನ್ನಾಮ ಲಿಂಗಭಂಗ ಐದಿಸಿ ಸಮಿಾಚೀನವಾದ ಸ್ವರೂಪಾನಂದ ಅಭಿವ್ಯಕ್ತಿ ಮಾಡಿ, ಎನಿಸುವವು–ಭೋಜನಮಾಡತಕ್ಕದ್ದು ಎಂತ ಕರೆಸತದೆ. ಔಪಚಾರಿಕವಲ್ಲ–ಈ ಮಾತು ಮರ್ಯಾದಾರ್ಥ ಉಪಚಾರಕ್ಕಾಗಿ ಹೇಳಿದ ಮಾತಲ್ಲ, ಸತ್ಯವೆಂತ ತಾತ್ಪರ್ಯ. ಸುಜನರ ಪಾಪ ಕರ್ಮವು – ಇಂಥಾ ಭಗವದ್ಭಕ್ತರು ಅಪರೋಕ್ಷಾತ್ಪೂರ್ವದಲ್ಲಿ ಅಪರೋಕ್ಷಾರ್ಥವಾಗಿ ಸಾಧನಮಾಡತಾ ಇರತಕ್ಕ ಕಾಲದಲ್ಲಿ, ವಿಹಿತಕರ್ಮಗಳ ಬಿಡೋವರಾಗತಾರೆ, ಎಂದರೆ ಧ್ಯಾನಾಸಕ್ತರಾಗಿಬಿಡತಾರೆ. ಆದರೂ ಈ ಬಿಟ್ಟದ್ದು ದೋಷವಾಗೋದಿಲ್ಲ. ಸೂರ್ಯನ ಕಂಡನಂತರ ದೀಪ ಆರಿಸೋಣ–ದೋಷವಾಗೋದಿಲ್ಲ. ಅಂಧಕಾರದ ಬಾಧಾ ಇಲ್ಲ ಹ್ಯಾಂಗೋ ತದ್ವತ್, ಪುಣ್ಯವೆನಿಪುದು ಸೂರ್ಯಸದೃಶನಾದ ಪರಮಾತ್ಮನ್ನ ಹೃದಯ ಕಮಲದಲ್ಲಿ ಕಂಡಮ್ಯಾಲೆ ದೀಪಸದೃಶವಾದ ಪುಣ್ಯಕರ್ಮಗಳ ತ್ಯಾಗ ದಾವದದೆ ಆ ತ್ಯಾಗರೂಪವಾದ ದೋಷ, ದೋಷ ಎಂತ ಅನಿಸದೆ ಅದು ಪುಣ್ಯ ಎಂತ ಕರಿಸೋದಾಗತದೆ. ಪಾಪಿಗಳ–ಭಗವದ್ದ್ವೇಷಿಗಳಾದ ದೈತ್ಯರು ಮಾಡತಕ್ಕ ಸತ್ಪುಣ್ಯಕರ್ಮವು–(ಸಜ್ಜನರು ಮಾಡತಕ್ಕ ಪುಣ್ಯಕ್ಕೆ ಸದೃಶವಾದ) ಪುಣ್ಯಕರ್ಮ ಭಾವಶುದ್ಧಿ ಇಲ್ಲದೇನೆ 'ಅಹಂಕರ್ತ' ಎಂಬ ಜ್ಞಾನದಿಂದ ಮಾಡತಾರೆ. ಹಾಂಗೆ ಮಾಡಿದ ಸಮಿಾಚೀನ ಪುಣ್ಯಕರ್ಮಗಳು ಯಾವತ್ತೂ, ಪಾಪವೆನಿಸುವುವು – ಪಾಪಕರ್ಮಗಳೇ ಆಗಿ ದುಃಖಕರವಾಗುತ್ತವೆ. ಘೂಕಕ್ಕೆ (ಗೂಬೆಗೆ) ಸೂರ್ಯದರ್ಶನವಿಲ್ಲ. ಅದರ ಸಂಚಾರ, ರಾತ್ರಿಕಾಲ ಅಂಧಕಾರದಲ್ಲಿ. ಹಗಲಿನಲ್ಲಿ ಇತರ ಪಕ್ಷಿಗಳು ಸಂಚರಿಸಿದಂತೆ ಅದೂ ಸಂಚರಿಸಿದ ಕಾಲಕ್ಕೂ, ಹಗಲು

ಸಂಚರಿಸತಕ್ಕ ಪಕ್ಷಿಗಳು ಅಮಂಗಳವೆಂದು ಯಾರೂ ತಿಳಿಯುವುದಿಲ್ಲವಾಗಿ, ಅದನ್ನ ಘಾತಿಸೋದಿಲ್ಲ. ಆದರೆ ರಾತ್ರಿ ಸಂಚರಿಸತಕ್ಕ ಗೂಗಿನ್ನ ಘಾತಿಸುತ್ತಾರೆ. ಸಂಚಾರಸದೃಶ ಅಸುರರು ಮಾಡತಕ್ಕ ಪುಣ್ಯಕರ್ಮಕ್ಕೆ ಪಾಪಫಲವೇ ಆಗತದೆ ಎಂದು ತಾತ್ಪರ್ಯ, ಮತ್ತು ದೀಪ, ಪುಣ್ಯಸದೃಶವಾದುದ್ದು. ದೀಪ, ಸ್ಥಂಭಕ್ಕೆ ತನ್ನ ಬೆಳಕು ಕೊಡದೆ ಅಂಧಕಾರವೇ ಕೊಡೋದಾಗತದೆ. ತದ್ವತ್, ಅಸುರರು ಮಾಡಿದ ಪುಣ್ಯಕರ್ಮಗಳು ಪಾಪಗಳಾಗಿ ದುಃಖ ಕೊಡತವೆ ಎಂತ ತಾತ್ಪರ್ಯ. ಹೃದಯದಲ್ಲಿ ರೂಪವು ಧ್ಯಾನದಿಂದ ನೋಡತಾ ತದ್ಗತ ಪರಮಾತ್ಮನ್ನ, ಅನುಸಂಧಾನಪೂರ್ವಕ ಆನಂದೋದ್ರೇಕನಾಗಿ ನಾಮ ಉಚ್ಚಾರ ಮಾಡತಕ್ಕವನಿಗೆ, ಆ ನಾಮ ನಂದಸುನಂದ ಕೊಡೋದಾಗತದೆ ಎಂತ ತಾತ್ಪರ್ಯ.

**ವಿಶೇಷಾರ್ಥ :–** ಸೂರ್ಯಸದೃಶನಾದ ಪರಮಾತ್ಮನ್ನ, ಅಪರೋಕ್ಷದಲ್ಲಿ ಕಂಡ ಜ್ಞಾನಿಗಳು ದೀಪ ಸದೃಶವಾದ ಐಹಿಕ ಸುಖಗಳನ್ನ ತ್ಯಾಗಮಾಡಿ ಪಾರತ್ರಿಕ ಸುಖಪ್ರದ ನಾದ ಪರಮಾತ್ಮನೆಂಬ ಸೂರ್ಯನ ಪ್ರಕಾಶವೆಂಬ ಜ್ಞಾನ, ಭಕ್ತಿ, ವೈರಾಗ್ಯದ ಬೆಳಕಿನಲ್ಲಿ ವಿವೇಕವೆಂಬ ಚಕ್ಷುಸ್ಸಿನಿಂದ ಅವನ ಗುಣಗಳ ನೋಡುತ್ತಾ ಆನಂದದಿಂದ ಸಂಚರಿಸುತ್ತಾ ರಾದ್ದರಿಂದ, ಐಹಿಕ ಸುಖಗಳೆಂಬ ದೀಪವನ್ನ ತ್ಯಜಿಸಿ, ಸೂರ್ಯ ಸದೃಶನಾದ ಪರಮಾ ತ್ಮನ್ನ ಧ್ಯಾನಪೂರ್ವಕವಾಗಿ, ನಾಮೋಚ್ಚಾರಣ ಮಾಡಿ, ಆ ಬೆಳಕಿನಿಂದ ಪಾಪಗಳೆಂಬ ಅಂಧಕಾರ, ಪರಿಹರಿಸಿಕೊಂಬೋರೆಂಬ ತಾತ್ಪರ್ಯವು. ದೀಪವೆಂಬ ಪರಮಾತ್ಮನ್ನ ಕರದಲ್ಲಿ ಧರಿಸಿ ಅಂಧಕಾರವೆಂಬ ಪಾಪದಲ್ಲಿ ಪ್ರವೇಶ ಮಾಡಿದರೆ, ಅಂಧಕಾರದ ಬಾಧಕ ವಿಲ್ಲ. ದೀಪವೆಂಬ ಪರಮಾತ್ಮನ್ನ ಬಿಟ್ಟು, ಹುಟ್ಟಿದಂಥಾ ಸೂರ್ಯೋದಯ ಕಾಲದಲ್ಲಿ ಸಂಚಾರ ಮಾಡಿದರು ಎಂದರೆ, ಸೂರ್ಯೋದಯವೆಂಬ ಪುಣ್ಯದಲ್ಲಿ ಸಂಚಾರ ಮಾಡಿ ದರೂ, ಅವಗೆ ಅಂಧಕಾರವೇ ಪ್ರಾಪ್ತಿ. ತದ್ವತ್, ಸುಜನರ ಪಾಪಕರ್ಮವು ಪುಣ್ಯ ವಾಗಿನ್ನೂ, ಪಾಪಿಗಳ ಸತ್ಕರ್ಮ, ಪಾಪವಾಗಿನ್ನೂ ಫಲ ಕೊಡತದೆ ಎಂತ ತಾತ್ಪರ್ಯ.

**ಧನವ ಸಂಪಾದಿಸುವ ಪ್ರದ್ರಾ ।**
**ವಣಿಕರಂದದಿ ಕೋವಿದರ ಮನೆ ।**
**ಮನೆಗಳಲಿ ಸಂಚರಿಸು ಶಾಸ್ತ್ರಶ್ರವಣಗೋಸುಗದಿ ॥**
**ಮನನಗೈದುಪದೇಶಿಸುತ ದು ।**
**ರ್ಜನರ ಕೂಡಾಡದಿರು ಸ್ವಪ್ನದಿ ।**
**ಪ್ರಣತಕಾಮದ ಕೊಡುವ ಸೌಖ್ಯಗಳಿಹಪರಂಗಳಲಿ ॥ ೨೮ ॥**

ಶ್ರೀ ಭಗವದನುಗ್ರಹಾಖ್ಯ ಫಲ ಸಂಪಾದಿಸಬೇಕಾದರೆ, ಸಚ್ಛಾಸ್ತ್ರಶ್ರವಣ ಮಾಡ ಬೇಕು ಎಂತ ಹೇಳತಾರೆ.

ಧನವ ಸಂಪಾದಿಸುವ–ಧನವನ್ನು ಸಂಪಾದನೆ ಮಾಡಬೇಕೆಂಬ, ಪ್ರದ್ರಾವಣಿಕರ– ವರ್ತಕರಾದವರು ಗ್ರಾಮಾಂತರಗಳಿಗೆ ಹೋಗಿ ಅಲ್ಲಿರತಕ್ಕ ತಮ್ಮ ಲಾಭಕ್ಕೆ ಅನುಗುಣ

ರಾದ ಜನರುಗಳ ಮನಿಗಳಿಗೆ ಹೋಗಿ, ತಾವು ತಂದ ಸರಕುಗಳ ವಿಕ್ರಯ ಮಾಡಿ, ದ್ರವ್ಯ ಸಂಪಾದಿಸತಾರೆ. ಅಂದದಿ–ಈ ವರ್ತಕರೋಪಾದಿಯಲ್ಲಿ, ಕೋವಿದರ–ಅಧಿಕಾರಿ ಆದವ ಅನ್ಯಗ್ರಾಮಗತರಾದ ಜ್ಞಾನಿಗಳ, ಮನೆಮನೆಗಳಲಿ–ಮನಿಗಳಿಗೆ, ತಿರುಗಿ, ತಮ್ಮ ಸಂದೇಹಗಳ ಪರಿಹಾರ ಮಾಡತಕ್ಕ ಭಗವದ್ಭಕ್ತರ ಕಂಡು, ಸೇವಕವೃತ್ತಿರೂಪವಾದ ಕರ್ಮಾಖ್ಯ ಸರಕುಗಳ ಅವರಿಗೆ ಕೊಟ್ಟು, ಜ್ಞಾನಾಖ್ಯ ದ್ರವ್ಯ ಸಂಪಾದಿಸೋವರಾಗ ಬೇಕು. ಇಂಥಾ ಲಾಭಕ್ಕೋಸ್ಕರ ಸಚ್ಛಾಸ್ತ್ರ ಶ್ರವಣಮಾಡಬೇಕು. ಆದ್ದರಿಂದ, ಶಾಸ್ತ್ರ ಶ್ರವಣಗೋಸುಗದಿ–ಸಚ್ಛಾಸ್ತ್ರಶ್ರವಣಗೋಸ್ಕರವಾಗಿ, ಸಂಚರಿಸು–ಜ್ಞಾನಿಗಳ ಮನಿಗಳಿಗೆ ಸಂಚಾರಮಾಡಿ ಶ್ರವಣಮಾಡೋವನಾಗು. ಆ ಶ್ರವಣಮಾಡಿದ್ದರನ್ನ, ಮನನಗೈದು–ಮರಿಯದೆ ಸರ್ವದಾ ಮನನಮಾಡುತ್ತಾ ಅದರಂತೆ ಅನುಷ್ಠಾನಮಾಡುತ್ತಾ, ಉಪದೇಶಿಸುತ–ಅದರನ್ನ ಯೋಗ್ಯರಾದವರಿಗೆ ಉಪದೇಶಮಾಡುತ್ತಾ ಮತ್ತು ಬಹುಮಂದಿ ಕೋವಿದರ ಮನಿಗಳಿಗೆ ಸಂಚಾರಮಾಡಿ, ಅಲ್ಲಲ್ಲಿ, ಮಧುಮಕ್ಷಿಕ ಅನೇಕ ಪುಷ್ಪಗತ ಮಧು ಸಂಗ್ರಹಮಾಡಿದಂತೆ, ಅವರವರ ದ್ವಾರಾ ಭಗವತ್ತತ್ತ್ವಾತಿಶಯಗಳ ತಿಳಕೊಂಬೋಣ ವೆಂಬ ಲಾಭ ಸಂಪಾದಿಸುತ ಇರೋವನಾಗು. ಸ್ವಪ್ನದಿ–ಸ್ವಪ್ನದಲ್ಲಾದರೂ, ದುರ್ಜನರ–ಭಗವದ್ದ್ವೇಷಿಗಳಾದ ದೈತ್ಯರ, ಕೂಡಾಡದಿರು–ಸಹವಾಸ ಮಾಡದಿರು. ಹೀಂಗೆ ಇದ್ದರೆ, ಪ್ರಣತಕಾಮದ – ಪರಮಾತ್ಮ ಸರ್ವೋತ್ತಮ, ಸರ್ವತಂತ್ರಸ್ವತಂತ್ರನೆಂದು ತಿಳಿದು ಮನೋದೈನ್ಯರೂಪವಾದ ವಂದನಮಾಡತಕ್ಕ ಅಧಿಕಾರಿಗಳಿಗೆ, ತನ್ನ ಸಂದರ್ಶನಾಖ್ಯ ಮಹಾಫಲವನ್ನ ಕೊಟ್ಟು, ಇಹಪರಂಗಳಲಿ–ಈ ಲೋಕದಲ್ಲೇನು, ಸ್ವರ್ಗಾದಿ ಮಹಾ ಲೋಕಗಳಲ್ಲಿ, ಸೌಖ್ಯಗಳ–ಈ ಉಭಯವಾದ ಲೋಕಗಳಲ್ಲಿ ಅನೇಕ ಸುಖಗಳ, ಕೊಡುವ–ಕೊಡೋವನಾಗತಾನೆ. "ಜ್ಞಾನೇನೈವ ಪರಂ ಪದಂ ಯಾತಿ ತಸ್ಮಾದ್ವಿರಕ್ತಸ್ಸನ್ ಜ್ಞಾನ ಮೇವ ಸಮಾಶ್ರಯೇತ್" ಎಂತ ಇರುವದ್ದರಿಂದ ಶ್ರೀ ಭಗವದನುಗ್ರಹಾಖ್ಯ ಫಲ ಹೊಂದ ಬೇಕಾದರೆ ಗುರುಗಳ ದ್ವಾರಾ ಸಚ್ಛಾಸ್ತ್ರಶ್ರವಣ, ಮನನದಿಂದ ಜ್ಞಾನೋತ್ಪತ್ತಿ ಆಗಿ ನಂತರ, ಮಹಾನಂದವನ್ನು ಐದಬೇಕು ಎಂತ ತಾತ್ಪರ್ಯ.

**ಕಾರಕಕ್ರಿಯದ್ರವ್ಯವಿಭ್ರಮ ।**
**ಮೂರುವಿಧ ಜೀವರಿಗೆ ಬಹು ಸಂ ।**
**ಸಾರಕಿವು ಕಾರಣವೆನಿಸುವವು ಎಲ್ಲ ಕಾಲದಲಿ ॥**
**ದೂರಛಿಡಿಸಿ ಭ್ರಾಮಕತ್ರಯ ।**
**ವಾರಿಗೊಳಗಾಗದಲೆ ಸರ್ವಾ ।**
**ಧಾರಕನ ಚಿಂತಿಸುತಲಿರು ಸರ್ವತ್ರ ಮರಿಯದಲೆ ॥ ೨೯ ॥**

ಜ್ಞಾನವನ್ನ ಕೆಡಿಸತಕ್ಕ, ಸಂಸಾರಕ್ಕೆ ಕಾರಣಗಳಾದ ಭ್ರಾಮಕತ್ರಯಕ್ಕೆ ಒಳಗಾಗ ಬ್ಯಾಡಾ ಎಂತ ಹೇಳತಾರೆ. ಕಾರಕಕ್ರಿಯದ್ರವ್ಯ ಎಂದರೆ ಕಣ್ಣು ಮೊದಲಾದ ಜ್ಞಾನೇಂದ್ರಿಯಂಗಳ ಕರ್ತೃತ್ವಾಭಿಮಾನ, ಒಂದು, ಕ್ರಿಯವೆಂಬ ವಾಕ್ಕು ಮೊದಲಾದ

ಕರ್ಮೇಂದ್ರಿಯಗಳ ಕರ್ತೃತ್ವಾಭಿಮಾನ, ಒಂದು, ದ್ರವ್ಯವೆಂಬ ಪಂಚಭೂತಾತ್ಮಕ ದೇಹದ ಅಭಿಮಾನ, ಒಂದು. ಈ ಮೂರೂ "ಸಂಯಾತ್ಯಸ್ಯಾಶು ನಿರ್ವಾಣಂ ದ್ರವ್ಯಜ್ಞಾನ ಕ್ರಿಯಾಭ್ರಮಃ".

ಕಾರಕ—ಅಹಂ ಕರ್ತ, ನಾನು ಯಜಮಾನ ಎಂತಲೂ, ಕ್ರಿಯ—ಇಂದ್ರಿಯಜನ್ಯ ವ್ಯಾಪಾರಗಳು ತಾನು ಮಾಡತೇನೆ ಎಂತಲೂ, ದ್ರವ್ಯ—ಪಂಚಭೂತದಿಂದ ನಿರ್ಮಿತವಾದ ಶರೀರ, ಹಣ, ಭಂಗಾರ ಇವುಗಳು, ವಿಭ್ರಮು—ವಿಶೇಷಾಕಾರವಾದ ಅಜ್ಞಾನರೂಪವಾದ ಭ್ರಾಮಕತ್ರಯಗಳು, ಮೂರುವಿಧ ಜೀವರಿಗೆ—ಮುಕ್ತಿಯೋಗ್ಯ, ನಿತ್ಯಸಂಸಾರಿ, ತಮೋಯೋಗ್ಯರು, ಈ ಮೂರುವಿಧರಾದ ಜೀವರಿಗೆ, ಇವು—ಈ ಪೂರ್ವೋಕ್ತಕಾರಕ, ಕ್ರಿಯ, ದ್ರವ್ಯಗಳು ಮೂರೂ, ಬಹುಸಂಸಾರಕೆ—ನಾನಾವಿಧವಾದ ಜನ್ಮಗಳ ಧರಿಸಿ ತದ್ದ್ವಾರಾ, ಬಹುದುಃಖಗಳ ಅನುಭವಿಸಲಿಕ್ಕೆ, ಕಾರಣವೆನಿಸುವವು—ಕಾರಣವಾಗಿ ಅವೆ. ಇವೇನೆ ಮೋಕ್ಷಕ್ಕೆ, ಭಗವದನುಗ್ರಹಕ್ಕೆ ಪ್ರತಿಬಂಧಕವಾದುವು. ಆದ್ದರಿಂದ ಭ್ರಾಮಕತ್ರಯ—ಪೂರ್ವೋಕ್ತ ಭ್ರಾಮಕತ್ರಯವಾದ, ಮಾರಿಗೊಳಗಾಗದಲೆ—ಶತ್ರುಗಳಿಗೆ ಸಿಕ್ಕಧಾಂಗೆ ಅವನ್ನ ಬಿಟ್ಟು (ಮಾ + ಅರಿ ಎಂತ ಪದ), ಎಲ್ಲಕಾಲದಲಿ—ಸದಾ ಸರ್ವಕಾಲದಲ್ಲಿ, ದೂರ ಓಡಿಸಿ—ಅವನ್ನ ದೂರಮಾಡಿ, ಸರ್ವತ್ರ—ಚರಾಚರಸರ್ವತ್ರವ್ಯಾಪ್ತನಾದ, ಹೃದಯಗತ ಬಿಂಬನಾದ, ಸರ್ವಾಧಾರಕನ—ಸರ್ವಕ್ಕೂ ಆಧಾರಭೂತನಾದ ಪರಮಾತ್ಮನ್ನ, ಚಿಂತಿಸುತಲಿರು—ಮನಸ್ಸಿನಲ್ಲಿ ನೋಡುತ್ತಾ ಧ್ಯಾನಮಾಡುತ್ತಾ, ತಾನು ಅಸ್ವತಂತ್ರನೆಂತಲೂ, ಸರ್ವಕರ್ಮವೂ ಭಗವದಾಜ್ಞಾದಿಂದ ನಡೀತದೆ ಎಂತಲೂ, ಬಿಂಬಕ್ರಿಯಾ ಪ್ರತಿಬಿಂಬಕ್ರಿಯಾ, ತಿಳಿದು ಚಿಂತಿಸುತ್ತಾ ಇರೋವನಾಗು. ಮರಿಯದಲೆ—ಪೂರ್ವೋಕ್ತ ಪರಮಾತ್ಮನ್ನ ಮರೀಧಾಂಗೆ ಇರೋವನಾಗು ಎಂತ ತಾತ್ಪರ್ಯ.

**ಕರಣಕರ್ಮವ ಮಾಡಿದರೆ ವಿ ।**
**ಸ್ಮರಣೆಕಾಲದಿ ಮಾತುಗಳಿಗು ।**
**ತ್ತರವ ಕೊಡದಲೆ ಸುಮ್ಮನಿಪ್ಪನು ಜಾಗರಾವಸ್ಥೆ ॥**
**ಕರುಣಿಸಲು ವ್ಯಾಪಾರಮಾಡುವ ।**
**ಬರಲು ನಾಲ್ಕಾವಸ್ಥೆಗಳು ಪರಿ ।**
**ಹರಿಸಿಕೊಳನೇತಕೆ ಸ್ವತಂತ್ರನು ತಾನೆ ಎಂಬುವನು ॥ ೩೦ ॥**

ಸರ್ವ ಪ್ರಾಣಿಗಳೂ ಅಸ್ವತಂತ್ರರೆಂತ ಹೇಳತಾರೆ.

ಕರಣ—ಏಕಾದಶೇಂದ್ರಿಯಗಳ ದ್ವಾರಾ ಪರಮಾತ್ಮನ ವ್ಯತಿರಿಕ್ತ ಜೀವನೇನೇ, ಕರ್ಮಮಾಡಿದರೆ — ಆಯಾ ಇಂದ್ರಿಯಜನ್ಯ ಕಾರ್ಯರೂಪವಾದ ನೋಡೋಣ, ಕೇಳೋಣ ಮೊದಲಾದ ಕರ್ಮಗಳ ಮಾಡೋಣ ಒಬ್ಬನೇ ಆದರೆ, ವಿಸ್ಮರಣೆಕಾಲದಿ—ದೇಹದಲ್ಲಿ ಸ್ಮರಣೆ ಇಲ್ಲದ ಕಾಲವಾದ ನಿದ್ರಾಕಾಲದಲ್ಲಿ, ಮಾತುಗಳಿಗೆ—ತನ್ನನ್ನು ಕುರಿತು

ಕೇಳಿದ ಮಾತುಗಳಿಗೆ, ಉತ್ತರವ ಕೊಡದಲೆ–ಪ್ರತ್ಯುತ್ತರ ಕೊಡದೇನೆ, ಸುಮ್ಮನಿಪ್ಪನು–ಸುಮ್ಮನೆ ಇರೋವನಾಗತಾನೆ. ಜಾಗರವಸ್ಥೆ – ಶ್ರೀ ಪರಮಾತ್ಮನು, ನಿದ್ರಾಹೋಗಿ ಜಾಗ್ರದವಸ್ಥೆಯಾದ ಎಚ್ಚರಿಕೆ ಅವಸ್ಥಾ ಪ್ರಾಪ್ತವಾಗುವಂತೆ, ಕರುಣಿಸಲು–ಕರುಣಾ ಮಾಡಿದರೆ, ವ್ಯಾಪಾರಮಾಡುವ–ಇಂದ್ರಿಯಜನಿತ ವ್ಯಾಪಾರರೂಪವಾದ ಕರ್ಮಗಳ ಮಾಡುವ, ಕೇಳಿದ್ದಕ್ಕೆ ಪ್ರತ್ಯುತ್ತರಕೊಡುವ, ಸ್ವತಂತ್ರನು–ಪರಮಾತ್ಮನೋಪಾದಿಯಲ್ಲಿ ಜೀವನೂನೂ ಸ್ವಾಧೀನಸ್ವತಂತ್ರನಾದಲ್ಲಿ, ಹಾಂಗೆ ಸ್ವಾಧೀನ ಸ್ವತಂತ್ರ, ತಾನೆ ಎಂಬುವನು–ತಾನೇ ಎನತಕ್ಕ ಪುರುಷನು, ನಾಲ್ಕವಸ್ಥೆಗಳು ಬರಲು–ಜಾಗ್ರತಿ, ಸ್ವಪ್ನ, ಸುಷುಪ್ತಿ, ಮೂರ್ಛಾ ಎನತಕ್ಕ ನಾಲ್ಕು ಅವಸ್ಥೆಗಳು ಬರಲು, ಈ ನಾಲ್ಕು ಅವಸ್ಥೆಗಳು ಬಾರದಂತೆ, ಏತಕೆ–ಯನ್ನಿಮಿತವಾಗಿ, ಪರಿಹರಿಸಿಕೊಳನು – ಏಕೆ ಪರಿಹಾರ ಮಾಡಿ ಕೊಂಬೋದಿಲ್ಲ ?

**ತಾ॥** ಸರ್ವೇಂದ್ರಿಯ ವ್ಯಾಪಾರಕ್ಕೆ ಜೀವನು ಸ್ವತಂತ್ರನಲ್ಲ. ಶ್ರೀ ಪರಮಾತ್ಮ ಇಂದ್ರಿಯಾಂತರ್ಗತನಾಗಿ ಇದ್ದು ಇಂದ್ರಿಯಗಳದ್ವಾರಾ ಜೀವಗೆ ನಿಯಮನಮಾಡಿದರೆ, ತದ್ದ್ವಾರಾ ಇಂದ್ರಿಯವ್ಯಾಪಾರ. ತದ್ವ್ಯತಿರಿಕ್ತ ಇಂದ್ರಿಯಗಳಿಗೆ ವ್ಯಾಪಾರವಿಲ್ಲ ಎಂಬುದು, ಪೂರ್ವೋಕ್ತ ಪ್ರತ್ಯಕ್ಷ ದೃಷ್ಟಾಂತವೇ ಸಾಕ್ಷಿ. ಇದರಿಂದ ಪರಮಾತ್ಮ ಸರ್ವ ಸ್ವತಂತ್ರ, ಜೀವರು ಅವನ ಅಧೀನಸ್ವತಂತ್ರರೆಂದು ತಿಳಿದು, ಸರ್ವದಾ ಭಗವದುಪಾಸನೆ ಮಾಡಬೇಕೆಂತ ತಾತ್ಪರ್ಯ.

**ಯುಕ್ತಿಮಾತುಗಳಲ್ಲ ಶ್ರುತಿಸ್ಮೃ ।**
**ತ್ಯುಕ್ತಮಾತುಗಳಿವು ವಿಚಾರಿಸೆ ।**
**ಮುಕ್ತಿಗಿವು ಸೋಪಾನವೆನಿಪುವು ಪ್ರತಿಪ್ರತೀ ಪದವು ॥**
**ಭಕ್ತಿಪೂರ್ವಕ ಪಠಿಸುವವರಿಗೆ ।**
**ವ್ಯಕ್ತಿ ಕೊಡುವ ಸ್ವರೂಪಸುಖ ಪ್ರವಿ ।**
**ವಿಕ್ತರನೆ ಮಾಡುವನು ಭವಭಯದಿಂದ ಬಹುರೂಪ ॥ ೩೧ ॥**

ಈ ಗ್ರಂಥದಲ್ಲಿ ಹೇಳತಕ್ಕ ವಿಚಾರದಿಂದ ಅನುಷ್ಠಾನ ಮಾಡಿದವ ಮುಕ್ತನಾಗತಾನೆ ಎಂತ ಹೇಳತಾರೆ.

ಯುಕ್ತಿಮಾತುಗಳಲ್ಲ–ವೇದಪುರಾಣ ಇವುಗಳಿಗೆ ವಿರುದ್ಧವಾಗಿ ಬರೇ ಶುಷ್ಕ ಯುಕ್ತಿಗಳಿಂದ ಆಡಿದ ಮಾತುಗಳಲ್ಲ : ಅಂದರೆ, ತರ್ಕಯುಕ್ತಿಯೋಪಾದಿಯಲ್ಲಿ ಆಡಿದ ಮಾತುಗಳಲ್ಲ. ಇವು–ಈ ಗ್ರಂಥಗತ ಪದಗಳ ಮಾಡಿದ ನಾನು ಆಡಿದ ಮಾತುಗಳು ಯಾವತ್ತೂ, ಶ್ರುತಿ–ಅಪೌರುಷೇಯವಾದ ವೇದಗಳು, ಸ್ಮೃತಿ–ಈ ವೇದಗಳಿಗೆ ಅನುಸರಿಸಿದ ವೇದಾರ್ಥಗಳಿಂದ ಯುಕ್ತವಾದ ಶ್ರೀ ಭಗವದಂಶಭೂತರಾದ ಶ್ರೀ ಬಾದರಾಯಣದೇವರಿಂದ ಕೃತವಾದ, ಸ್ಮೃತಿಸಾಂಕೇತವಾದ ಪುರಾಣಗಳು, ಹಾಗೆ, ಶ್ರೀ ಮಧ್ವಾಚಾರ್ಯಕೃತ

ಸಚ್ಛಾಸ್ತ್ರಗಳು, ಉಕ್ತ – ಈ ಶಾಸ್ತ್ರಗಳಲ್ಲಿ ಹೇಳಿದ, ಮಾತುಗಳು – ವಾಕ್ಯಗಳೇ ಹೊರ್ತು, ತದ್ವ್ಯತಿರಿಕ್ತವಾದ ಮಾತುಗಳು ಒಂದೂ ಇದರಲ್ಲಿ ಇಲ್ಲ. ಇವು–ಈ ಮಾತು ಗಳು ಎಂಥಾವು, ಇದರಿಂದ ಆಗತಕ್ಕ ಫಲ ಎಂಥಾದ್ದು ಎಂತ, ವಿಚಾರಿಸೆ–ಪ್ರತ್ಯಕ್ಷಾದಿ ಗಳಿಂದ ಜ್ಞಾನಿಗಳಾದವರು ವಿಚಾರಮಾಡಲು, ಮುಕ್ತಿಗೆ–ಲಿಂಗದೇಹದಿಂದ ಮುಕ್ತ ನಾಗೋದಕ್ಕೆ, ನಂತರ ಪರಮಾತ್ಮನ ಶಾಶ್ವತ ಮಂದಿರವಾದ, ಸತ್ಯಲೋಕದ ಮ್ಯಾಲೆ ಇರತಕ್ಕ ವೈಕುಂಠಲೋಕ ಸೇರೋದಕ್ಕೆ, ಇವು–ಈ ಮಾತುಗಳು, ಸೋಪಾನವೆನಿಪುವು– ಪಾವಟಿಗಿ ಎಂತ ಅನಿಸೋವಾಗತವೆ. ಊರ್ಧ್ವಭಾಗಗತ ವೈಕುಂಠಮಂದಿರ ಸೇರಬೇಕಾದರೆ ಸೋಪಾನಮಾರ್ಗದಿಂದ ನಡೀಬೇಕೇ ಹೊರ್ತು, ಅನ್ಯ ಮಾರ್ಗವೇ ಇಲ್ಲ. ಸೋಪಾನ ಮಾರ್ಗದಲ್ಲಿ ಗಮನಕ್ರಿಯಾ ಎಂಬುದೆ, ತದನುಷ್ಠಾನವು. ಈ ಪ್ರಕಾರ ಸೋಪಾನ ಎಂತ ಕರಿಸೋದಾಗತದೆ. ಪ್ರತಿಪ್ರತೀ ಪದವು–ಈ ಗ್ರಂಥಗತ ಪ್ರತಿ ಪ್ರತೀಶ್ಲೋಕಗಳು, ಮಾತುಗಳು, ಭಕ್ತಿಪೂರ್ವಕ–ಈ ಶ್ಲೋಕಗಳಲ್ಲಿ ಇರುವ ಗರ್ಭೀಭೂತವಾದ ಅರ್ಥ ಮರ್ಮವ ಅರಿತು, ತಾರತಮ್ಯ ಪಂಚಭೇದದಿಂದ ಸಹಿತವಾಗಿ ಸರ್ವೋತ್ತಮನಾದ ಪರಮಾತ್ಮನಲ್ಲಿ ಅವಿಚ್ಛಿನ್ನವಾದ ಭಕ್ತಿ ಇಟ್ಟು, ಇಂಥಾ ಭಕ್ತಿಪೂರ್ವಕ, ಪಠಿಸುವವರಿಗೆ– ಅರ್ಥಾನುಸಂಧಾನದಿಂದ ಪಠನಮಾಡೋ ಅಧಿಕಾರಿಗಳಿಗೆ, ಬಹುರೂಪ–ದೇಹೇಂದ್ರಿ ಯಾದಿಗಳಲ್ಲಿ ಅನೇಕ ರೂಪಗಳಿಂದ ನಿಯಾಮಕನಾದ ಶ್ರೀ ಪರಮಾತ್ಮ, ಭವಭಯ ದಿಂದ–ಸಂಸಾರಸಾಂಕೇತವಾದ ಅಹಂಮಮತಾದಿಗಳಿಂದ ತಜ್ಜನ್ಯ ಜನನಮರಣದಿಂದ ಪ್ರಾಪ್ತವಾಗತಕ್ಕ ಭಯದಿಂದ, ಪ್ರವಿವಿಕ್ತರನೆ ಮಾಡುವನು – ಪ್ರಕರ್ಷೇಣ ಅಹಂ ಮಮತಾದಿಗಳಿಂದ ಲಿಪ್ತನಾಗದಂತೆ ಮಾಡಿ, ನಿಸ್ಪೃಹನ್ನಾಗಿ ಮಾಡುವನು, ತದ್ದ್ವಾರಾ ಸಾಧನೆ ಪೂರ್ತಿಮಾಡಿಸಿ, ಸ್ವರೂಪಸುಖ–ಲಿಂಗಭಂಗಾನಂತರ ಸ್ವರೂಪಸುಖ, ವ್ಯಕ್ತಿ ಕೊಡುವ–ವ್ಯಕ್ತಮಾಡಿ ಭೋಗಕ್ಕೆ ಕೊಡೋವನಾಗತಾನೆ.

**ಶ್ರೀನಿವಾಸನ ಸುಗುಣಮಣಿಗಳ ।**
**ಪ್ರಾಣಮತ ವಯುನಾಖ್ಯಸೂತ್ರದಿ ।**
**ಪೋಣಿಸಿದ ಮಾಲಿಕೆಯ ವಾಙ್ಮಯಂಗೆ ಸಮರ್ಪಿಸಿದ ॥**
**ಜ್ಞಾನಿಗಳ ದೃಗ್ವಿಷಯವಹುದ ।**
**ಜ್ಞಾನಿಗಳಿಗೆ ಅಸಹ್ಯ ತೋರ್ಪದು ।**
**ಮಾಣಿಕವ ಮರ್ಕಟನ ಕೈಯೊಳು ಕೊಟ್ಟ ತೆರನಂತೆ ॥ ೩೨ ॥**

ಈ ಕಾವ್ಯ ಎಂಬುದು ಜ್ಞಾನಿಗಳಿಗೆ ಸಹ್ಯವಾಗಿನ್ನು, ಅಜ್ಞಾನಿಗಳಿಗೆ ಅಸಹ್ಯ ವಾಗಿನ್ನು ತೋರತದೆ. ಎಂದರೆ ಜ್ಞಾನಿಗಳಿಗೆ ಶ್ಲಾಘ್ಯ, ಅಜ್ಞಾನಿಗಳಿಗೆ ಅಶ್ಲಾಘ್ಯ ಎಂತ ಹೇಳತಾರೆ.

ಪ್ರಾಣ–ಜೀವೋತ್ತಮರಾದ ವಾಯುದೇವರ ಅವತಾರರಾದ ಮಧ್ವಾಚಾರ್ಯ ರಿಂದ, ಮತ–ಶ್ರೀಹರಿ ಸರ್ವೋತ್ತಮನೆಂದು ಪ್ರಚುರವಾದ, ಶ್ರೀನಿವಾಸನ–ಶ್ರೀದೇವೇರನ್ನ

ತನ್ನ ವಕ್ಷಸ್ಥಳದಲ್ಲಿ ನಿವಾಸಿಯಾಗುಳ್ಳ ಗುಣಪೂರ್ಣನಾದ ಪರಮಾತ್ಮನ, ಸುಗುಣ- ಸರ್ವೋತ್ಕೃಷ್ಟವಾದ ಮಂಗಳಕರವಾದ ಗುಣಗಳೆಂಬ, ಮಣಿಗಳ-ಶ್ರೀಮಧ್ವಾಚಾರ್ಯರಿಂದ ಕೃತವಾದ ಸಚ್ಛಾಸ್ತ್ರವೆಂಬ ಸಮುದ್ರದಲ್ಲಿ ವಿದ್ಯಮಾನಗಳಾದ್ದರನ್ನ ವಾಕ್‌ಜಾಲಗಳಿಂದ ಹೊರಗೆ ತೆಗೆದು ಮಣಿಗಳ ಒಳಗೆ ಸರ್ವೋತ್ತಮ ಆಕಾಶವತ್ ನಿರ್ಲಿಪ್ತನೆಂಬ ಛಿದ್ರಾವ ಕಾಶವನ್ನ ಮಾಡಿ, ವಯುನಾಖ್ಯಸೂತ್ರದಿ-ಪ್ರಾಣದೇವರೆಂಬ ಸೂತ್ರದಿಂದ, ಪೋಣಿಸಿದ- ಈ ಪ್ರಕಾರದಿಂದ ಪೋಣಿಸಿದ, ಮಾಲಿಕೆಯ-ಗುಣರತ್ನಾಖ್ಯ ಮಾಲಾವನ್ನ, ವಾಙ್ಮಯಂಗೆ- ವಾಕ್ಯದಲ್ಲಿ ನಿಂತು ವಾಕ್ಯಗಳ ನುಡಿಸಿದ, ವಾಗಂತರ್ಗತ ವಾಙ್ಮಯನಾಮಕ ಪರಮಾತ್ಮಗೆ, ಸಮರ್ಪಿಸಿದ-ಸಮರ್ಪಣೆ ಮಾಡಿದ ಈ ಗ್ರಂಥಾಖ್ಯಮಾಲಾ, ಜ್ಞಾನಿಗಳ-ಭಗವದ್ಭಕ್ತ ರಾದ ಜ್ಞಾನಚಕ್ಷು ಉಳ್ಳವರ, ದೃಕ್-ದೃಷ್ಟಿಗೆ, ವಿಷಯವಹುದು-ಮಹಾಶ್ರೇಷ್ಠ ಎಂತ ತೋರೋದಾಗತದೆ. ಮರ್ಕಟನ ಕೈಯೊಳು-ಕೋತಿಹಸ್ತದಲ್ಲಿ, ಕೊಟ್ಟ-ಕೊಡಲ್ಪಟ್ಟ, ಮಾಣಿಕವ-ಮಾಣಿಕ್ಯವನ್ನು, ಇದರ ಮರ್ಮವನ್ನು ಅರಿಯದೆ ಕಚ್ಚಿ ತಿಂಬೋದಕ್ಕೆ ಸಾಧ್ಯವಾಗೋದೆ ಎಂದರೆ, ಅಸಾಧ್ಯವೆಂತ ತಾತ್ಪರ್ಯ. ತೆರನಂತೆ-ಮಾಣಿಕ್ಯ ಮರ್ಕಟ ದೋಪಾದಿಯಲ್ಲಿ, ಅಜ್ಞಾನಿಗಳಿಗೆ-ಭಗವನ್ಮಹಿಮಾ ತಿಳಿಯದ ಮರ್ಕಟಸದೃಶರಾದ ಜ್ಞಾನಶೂನ್ಯರಿಗೆ, ಅಸಹ್ಯ ತೋರ್ಪುದು-ಮಾಣಿಕ್ಯಸದೃಶವಾದ ಈ ಗ್ರಂಥ ಅನುಷ್ಠಾನಕ್ಕೆ ತಂದು ಭೋಗಮಾಡೋದಕ್ಕೆ ಯೋಗ್ಯತಾ ಸಾಲದೆ ಅಸಹ್ಯ ತೋರಿ ತ್ಯಾಗಮಾಡೋವ ರಾಗತಾರೆ. ಈ ಗ್ರಂಥ ಜ್ಞಾನಿಗಳಿಗೆ ಸಾಧ್ಯ, ಅಜ್ಞಾನಿಗಳಿಗೆ ಅಸಾಧ್ಯವೆಂತ ತಾತ್ಪರ್ಯ.

**ವಿಶೇಷಾರ್ಥ :-** ವಯುನಾಖ್ಯಸೂತ್ರದಿ ಪೋಣಿಸಿ 'ಅರ್ಪಿತ' ಎಂದರೆ, ಭಾರತೀ ರಮಣಮುಖ್ಯಪ್ರಾಣಾಂತರ್ಗತ ಶ್ರೀಪರಮಾತ್ಮಗೆ ಅರ್ಪಣೆಮಾಡಿದ್ದೇವು ಎಂತ ಗ್ರಂಥಕರ್ತೃ ಗಳ ತಾತ್ಪರ್ಯ. ಶ್ರೀ ವಾಯುದೇವರ ಅವತಾರರಾದ ಶ್ರೀ ಮಧ್ವಾಚಾರ್ಯರಿಂದ ರಚಿಸಲ್ಪಟ್ಟ ಸಚ್ಛಾಸ್ತ್ರವೆಂಬ ಸಮುದ್ರದಿಂದ ತೆಗಿಯಲ್ಪಟ್ಟ ಮಾಣಿಕ್ಯಸದೃಶವಾದ ಪದ ಗಳೆಂಬ ಮಣಿಗಳು, ವಾಯುಪ್ರಚುರವಾದಂಥ ಸೂತ್ರದಲ್ಲಿ ಪೋಣಿಸಿದ ಗುಣರತ್ನಾಖ್ಯ ಮಾಲಾವನ್ನ, ಸರ್ವಶಬ್ದವಾಚ್ಯನಾದ ಪರಮಾತ್ಮನು ನುಡಿಸಿದ ವಾಙ್ಮಯ ಪರಮಾತ್ಮಗೆ ಸಮರ್ಪಿಸಿರುತ್ತೇವೆ. ಈ ಮಾಲಾ ಜ್ಞಾನಿಗಳ ದೃಷ್ಟಿಗೆ ಮಹಾಶ್ರೇಷ್ಠ ಎಂತ ತೋರತದೆ. ಅಜ್ಞಾನಿಗಳಾದ ಎಂದರೆ, ಪಂಚಭೇದ ತಾರತಮ್ಯದಲ್ಲಿ ವಿರುದ್ಧಜ್ಞಾನವುಳ್ಳ ದೈತ್ಯರು, ಮರ್ಕಟದೋಪಾದಿಯಲ್ಲಿ ಈ ಮಾಲಾವನ್ನ ಅಂದರೆ ಜೀವರತ್ನಾಖ್ಯವಾದ ಈ ಗ್ರಂಥವನ್ನ ಪರಿಗ್ರಹಿಸಿ (ಕೇವಲ ಪ್ರಾಕೃತರೂಪವಾದ) ಫಲಗಳೆಂದು ಕಚ್ಚಿ ನೋಡಿ ಕಠಿಣವಾಗಿದೆ ಎಂದು ಅದರ ಮರ್ಮವರಿಯದೆ ಬಿಸಾಕಿಬಿಡುತ್ತಾರೆ. ಆದಕಾರಣ ಗ್ರಂಥಕರ್ತೃಗಳಾದ ಶ್ರೀಮಜ್ಜಗನ್ನಾಥದಾಸರಾಯರು ತಮ್ಮ ಗ್ರಂಥ ಜ್ಞಾನಿಗಳಿಗೆ ಸಮ್ಮತವಾಗಿರೋದೇ ಹೊರ್ತು ಅಜ್ಞಾನಿಗಳಿಗೆ ಅಸಮ್ಮತ ತೋರುವುದೆಂದು ಹೇಳತಾರೆ.

**ಶ್ರೀ ವಿಧೀರ ವಿಪಾಹಿಪೇಶ ಶ ।**
**ಚೀವರಾತ್ಮಭವಾರ್ಕ ಶಶಿ ದಿ ।**
**ಗ್ದೇವ ಋಷಿ ಗಂಧರ್ವ ಕಿನ್ನರ ಸಿದ್ಧ ಸಾಧ್ಯಗಣ ॥**

**ಸೇವಿತಪದಾಂಭೋಜ ತತ್ಪಾ ।**
**ದಾವಲಂಬಿಗಳಾದ ಭಕುತರ ।**
**ಕಾವ ಕರುಣಾಸಾಂದ್ರ ಲಕ್ಷ್ಮೀಹೃತ್ಕುಮುದಚಂದ್ರ ॥ ೩೩ ॥**

ಶ್ರೀ ಪರಮಾತ್ಮ ತನ್ನ ಪಾದಾವಲಂಬಿಗಳಾದವರನ್ನ ರಕ್ಷಿಸತಾನೆ ಎಂತ ಹೇಳತಾರೆ.

ಶ್ರೀ–ಲಕ್ಷ್ಮೀದೇವೇರು, ವಿಧಿ–ಬ್ರಹ್ಮದೇವರು, ಈರ–ವಾಯುದೇವರು, ವಿಪ–ಗರುಡದೇವರು, ಅಹಿಪ–ಶೇಷದೇವರು, ಈಶ–ರುದ್ರದೇವರು, ಶಚೀ–ಶಚೀದೇವರಿಗೆ, ವರ–ಗಂಡನಾದ ಇಂದ್ರದೇವರು, ಆತ್ಮಭವ–ಪರಮಾತ್ಮನ ಪುತ್ರನಾದ ಮನ್ಮಥ, ಕೃಷ್ಣ ಪುತ್ರ ಎಂತ ತಾತ್ಪರ್ಯ. ಅರ್ಕ–ಸೂರ್ಯ, ಶಶಿ–ಚಂದ್ರ, ದಿಗ್ದೇವ–ದಿಗಭಿಮಾನಿ ದೇವತೆಗಳು, ಋಷಿ ಗಂಧರ್ವ ಕಿನ್ನರ ಸಿದ್ಧ ಸಾಧ್ಯಗಣ–ಋಷಿಗಳು, ಗಂಧರ್ವರು, ಕಿನ್ನರರು, ಸಿದ್ಧರು, ಸಾಧ್ಯರು ಇವರೇ ಮೊದಲಾದ ದೇವಗಂಧರ್ವರೇ ಅಂತ್ಯವಾಗಿ ಇರುವ ದೇವತೆಗಳು ಆಜಾನಜದೇವತೆಗಳೆಂದು ಕರಿಸತಕ್ಕವರು, ದೇವಯೋನಿಜರೆಂದು ನಾಮಾಂಕಿತರು. ಗಣ–೧ ದೇವಗಣ, ೧ ಕರ್ಮಜಗಣ, ಈ ಎರಡೂ ಸೇರಿ ಒಂಬತ್ತು ಕೋಟಿ, ದೇವಯೋನಿಜರು ಇಪ್ಪತ್ತುನಾಲ್ಕು ಕೋಟಿ, ಅಂತು ಒಟ್ಟು ಮೂವತ್ತುಮೂರು ಕೋಟಿ ದೇವತಾಗಣದಿಂದ, ಸೇವಿತಪದಾಂಭೋಜ–ಸೇವಿತವಾದ ಪಾದಕಮಲಗಳು ಉಳ್ಳವ, ತತ್–ಈ ಪೂರ್ವೋಕ್ತ ದೇವತೆಗಳಿಂದ ಸೇವಿತನಾದ ಶ್ರೀ ಪರಮಾತ್ಮ, ಕರುಣಾಸಾಂದ್ರ–ಕರುಣಾಸಮೂಹ ಉಳ್ಳವ. ಲಕ್ಷ್ಮೀ–ಲಕ್ಷ್ಮೀದೇವೇರ, ಹೃತ್–ಹೃದಯಗತ ಮನವೆಂಬ, ಕುಮುದ–ಕುಮುದ ಪುಷ್ಪವನ್ನ ವಿಕಾಸಮಾಡೋದಕ್ಕೆ, ಚಂದ್ರ–ಚಂದ್ರಸದೃಶನಾದವ. ಇಂಥಾ ಪರಮಾತ್ಮ, ಪಾದಾವಲಂಬಿಗಳಾದ–ಅಹಂಮಮತಾದಿಗಳ ತ್ಯಜಿಸಿ ನಿಸ್ಪೃಹರಾಗಿ ಹೃದಯಾಕಾಶದಲ್ಲಿ ಭಗವನ್ಮೂರ್ತಿ ಧ್ಯಾನದಲ್ಲಿ ರತರಾಗಿ ಅನ್ಯವಿಷಯಗಳ ಅವಲಂಬನಮಾಡದೆ, ಪರಮಾತ್ಮನಾದ ತನ್ನ ಪಾದವನ್ನೇ ಅವಲಂಬನಮಾಡಿದ, ಭಕುತರ–ಭಕ್ತಜನರ, ಕಾವ–ತನ್ನ ಅಪರೋಕ್ಷ ಕೊಟ್ಟು ಆಗಾಮಿಸಂಚಿತಗಳ, ನಾಶ, ನಿರ್ಲೇಪಗಳ ಮಾಡಿ ಸಂರಕ್ಷಣೆಮಾಡತಾನೆ.

**ಆದರಿಸಿ ಗತಾಕ್ಷ ಭಾಷಾ ।**
**ಭೇದದಿಂದಲಿ ಕರೆಯಲದನು ನಿ ।**
**ಷೇಧಗೈದವಲೋಕಿಸದೆ ಬಿಡುವರೆ ವಿವೇಕಿಗಳು ॥**
**ಮಾಧವನ ಗುಣ ಪೇಳ್ವಪ್ರಾಕೃತ ।**
**ವಾದರೆಯು ಸರಿ ಕೇಳಿ ಪರಮಾ ।**
**ಹ್ಲಾದಬಡದಿಪ್ಪರೆ ನಿರಂತರ ಬಲ್ಲ ಕೋವಿದರು ॥ ೩೪ ॥**

ಅಂತರಂಗದಲ್ಲಿ ಜ್ಞಾನಶುದ್ಧರಾದವರು ಇದರನ್ನ ಕನ್ನಡಭಾಷಾ ಎಂತ ತ್ಯಾಗ ಮಾಡೋದಿಲ್ಲ ಎಂತ ಹೇಳತಾರೆ.

ಗತಾಕ್ಷ–ಪ್ರಾಕೃತವಾದ ಜಡಾಧಿಷ್ಠಾನಗಳ ನೋಡೋದರಲ್ಲಿ ಹೋಗಲ್ಪಟ್ಟ ನೇತ್ರ ಉಳ್ಳವನಾಗಿಯೂ, ಸರ್ವಾಧಿಷ್ಠಾನದಲ್ಲಿ ಅಂತರ್ಗತನಾದ ಪರಮಾತ್ಮನ್ನ ನೋಡತಕ್ಕ ಜ್ಞಾನನೇತ್ರ ಉಳ್ಳವನಾಗಿಯೂ ಇರುವ ಪುರುಷನು, ಆದರಿಸಿ – ಭಗವದ್ಭಕ್ತರಲ್ಲಿ ಪರಮಾದರಮಾಡಿ, ಭಾಷಾಭೇದದಿಂದಲಿ–ಸಂಸ್ಕೃತ ಭಾಷಾಕ್ಕೆ ಭೇದವಾದ ಪ್ರಾಕೃತ ಭಾಷೆಯಿಂದಲಿ, ಕರೆಯಲು–ಭಗವದ್ಭಕ್ತರಾದವರು ಕರಿಯೆ, ಅದನು–ಆ ಮಾತನ್ನ ಭಾಷಾಭೇದವೆಂದು, ನಿಷೇಧಗೈದು–ನಿಷೇಧಮಾಡಿ, ವಿವೇಕಿಗಳು–ಜ್ಞಾನಿಗಳಾದವರು, ಅವಲೋಕಿಸದೆ–ಭಾಷಾಭೇದದಿಂದ ಕರೆದ ಜ್ಞಾನಿಯಾದ ಆ ಪುರುಷನ ಅವಲೋಕನ ಮಾಡದೆ, ಬಿಡುವರೆ – ಬಿಡುವುದಿಲ್ಲ. ನೋಡೇನೋಡುತ್ತಾರೆ. ಅದರೋಪಾದಿಯಲ್ಲಿ, ಮಾಧವನ–ಲಕ್ಷ್ಮೀಪತಿಯಾದ ಶ್ರೀ ನಾರಾಯಣದೇವರ, ಗುಣ ಪೇಳ್ವ–ಕಲ್ಯಾಣಗುಣ ಗಳ ಪೇಳತಕ್ಕ ಅಧಿಕಾರಿ, ಮಿಶ್ರಜ್ಞಾನಿ, ಮಿಥ್ಯಾಜ್ಞಾನಿ ಅಲ್ಲದ, ತಾರತಮ್ಯ ಪಂಚಭೇದ ಜ್ಞಾನದಿಂದ ಯುಕ್ತನಾಗಿ, ಭಗವದ್ಭಕ್ತನಾಗಿ, ಭಕ್ತಿಪೂರ್ವಕ ಪರಮಾತ್ಮನ ಗುಣಗಳ ಪ್ರಾಕೃತಭಾಷಾದಿಂದ ಹೇಳತಾನೆ. ಇಂತಹ ಅಧಿಕಾರಿ ಹೇಳಿದ ಗುಣಕಥನ, ಪ್ರಾಕೃತವಾದ ರೆಯು ಸರಿ–ಪ್ರಾಕೃತಭಾಷಾದಲ್ಲಿ ಇದ್ದರೂ ಸರಿಯೇ, ಬಲ್ಲ ಕೋವಿದರು–ಉತ್ತಮಾಧಿಷ್ಠಾನ ಮುಖಜನ್ಯಗಳು ಶ್ರೇಷ್ಠ ಎಂತಲೂ, ತಾರತಮ್ಯ, ಪಂಚಭೇದವನ್ನ ಅನುಸರಿಸಿದ ಪ್ರಾಕೃತ ಭಾಷಾನೇ ಶ್ರೇಷ್ಠ ಎಂತಲೂ, ನೀಚರಾದ ಮಿಶ್ರಜ್ಞಾನಿ ಮಿಥ್ಯಾಜ್ಞಾನಿಗಳಿಂದ ರಚಿತ ವಾದ ಸಂಸ್ಕೃತಭಾಷಾವಾದಕಾಲಕ್ಕೂ, ಅವರವರ ಮನೋಭಾವ ವಿಪರೀತಜ್ಞಾನವನ್ನು ಅನುಸರಿಸಿ ಇರೋಣದರಿಂದ, ಅಂತಹವರಿಂದ ರಚಿತವಾದ ಭಗವನ್ಮಹಾತ್ಮೆ ಸಂಸ್ಕೃತ ಭಾಷಾದಿಂದ ಇದ್ದ ಕಾಲಕ್ಕೂ, ನಿಷೇಧ ಎಂತ ಈ ಪ್ರಕಾರ ತಿಳಿದ ಜ್ಞಾನಿಗಳು, ನಿರಂತರ– ಸರ್ವಕಾಲವೂ, ಕೇಳಿ–ಪ್ರಾಕೃತಭಾಷಾದಿಂದ ರಚಿತವಾದ ಪರಮಾತ್ಮನ ಮಹಾತ್ಮೆ ಕೇಳಿ, ಪರಮಾಹ್ಲಾದ–ಅತ್ಯಂತ ಸಂತೋಷವನ್ನ, ಬಡದಿಪ್ಪರೆ–ಹೊಂದದೆ ಇರುವರೆ ? ಹೊಂದೇ ಹೊಂದುತ್ತಾರೆ ಎಂತ ತಾತ್ಪರ್ಯ. ಹಾಂಗೆ ಹೊಂದದೆ ನಿರಾಕರಿಸತಕ್ಕವರು ಅವಿವೇಕಿಗಳು ಎಂತ ತಾತ್ಪರ್ಯ.

**ವಿಶೇಷಾರ್ಥ :**– ಗುಡವನ್ನ ಭಾಷಾಭೇದದಿಂದ ಬೆಲ್ಲವೆಂತ ಕರದಮಾತ್ರಕ್ಕೆ ಗುಡ ಎಂತ ಕರೆದವರಿಗೆ ಸಿಹಿಯಾಗಿನ್ನೂ, ಬೆಲ್ಲ ಎಂತ ಕರೆದವರಿಗೆ ಕಹಿಯಾಗಿನ್ನೂ ಫಲ ಕೊಡತವ ? ತದ್ವತ್ ಭಾಷಾಭೇದದಿಂದ ಕರದ ಕಾಲಕ್ಕೂ ಸಿಹಿಯಾದ ಫಲವನ್ನೇ ಕೊಡತದೆ. ಮೆಣಸಿನಕಾಯಿನ ಸಂಸ್ಕೃತಭಾಷಾದಿಂದ ಗುಡ ಎಂತ ಕರದು, ಪ್ರಾಕೃತ ಭಾಷಾದಿಂದ ಮೆಣಸಿನಕಾಯಿ ಎಂದು ಕರದಮಾತ್ರಕ್ಕೆ ಸಂಸ್ಕೃತಭಾಷಾದಿಂದ ಗುಡ ಎಂತ ಕರದನೆಂದು ಸಿಹಿ ಫಲವು ಕೊಟ್ಟೀತೇ ? ಖಾರದ ಫಲವೇ ಕೊಡೋದಾಗತದೆ. ಆದ್ದರಿಂದ ಭಾಷಾದಿಂದಲೆ ಶುಭಾಶುಭ ಫಲಗಳಲ್ಲ. ದಾವ ಭಾಷಾವಾದರೂ ವಿವಕ್ಷಾವಸ್ತು ನಿರ್ದೋಷವಸ್ತುವಾಗಿ ಇದ್ದಲ್ಲಿ ಶುಭ ಫಲವೇ ಕೊಡತದೆ. ಆದ್ದರಿಂದ ಭಾಷಾನೇಮ ಎಂಬುದು ಕೆಲಸವಿಲ್ಲ. ಪರಮಾತ್ಮನ ವಿಷಯ ಹೇಳತಕ್ಕ ಗ್ರಂಥ ಪ್ರಾಕೃತವಾದರೂ ಗ್ರಾಹ್ಯವೆಂತಲೇ ಸಿದ್ಧವು. ಮತ್ತು ಕ್ಷೀರ ಕ್ಷರಕೊಂಬುವಗೆ, ಕ್ಷೀರ ವಿವಕ್ಷಾನೇ ಹೊರ್ತು

ಗೋವಿನ ವಿವಕ್ಷಾವಲ್ಲ. ಕರೀ ಗೋವು ಆದರೇನು, ಬಿಳೀ ಗೋವು ಆದರೇನು. ಕರೀ ಗೋವು ನಿಷಿದ್ಧ ಎಂತಲೂ, ಬಿಳೀ ಗೋವು ನಿಷಿದ್ಧ ಅಲ್ಲಾ ಎಂತಲೂ ಉಂಟಾ? ತದ್ವತ್ ಭಾಷಾವಿಷಯದಲ್ಲೂ ಎಂತ ತಾತ್ಪರ್ಯ.

**ಭಾಸ್ಕರನ ಮಂಡಲವ ಕಂಡು ನ ।**
**ಮಸ್ಕರಿಸಿ ಮೋದಿಸದೆ ದ್ವೇಷದಿ ।**
**ತಸ್ಕರನು ನಿಂದಿಸಲು ಕುಂದಹುದೇ ದಿವಾಕರಗೆ ॥**
**ಸಂಸ್ಕೃತವಿದಲ್ಲೆಂದು ಕುಹಕ ತಿ ।**
**ರಸ್ಕರಿಸಲೇನಹುದು ಭಕ್ತಿಪು ।**
**ರಸ್ಕರದಿ ಕೇಳ್ವರಿಗೆ ಒಲಿವನು ಪುಷ್ಕರಾಕ್ಷ ಸದಾ ॥ ೩೫ ॥**

ಭಗವನ್ಮಾಹಾತ್ಮ್ಯೆ ಪ್ರಾಕೃತಭಾಷಾದಿಂದ ಇರೋದಾದರೂ ಸರಿಯೆ, ಕೇಳಿದರೆ ಭಗವದನುಗ್ರಹವಾಗತದೆ ಎಂದು ಹೇಳತಾರೆ.

ಭಾಸ್ಕರನ ಮಂಡಲವ ಕಂಡು–ಸೂರ್ಯನ ಮಂಡಲವನ್ನು ಕಂಡು, ನಮಸ್ಕರಿಸಿ–ವಂದನಾ ಮಾಡಿ, ಮೋದಿಸದೆ–ಸಂತೋಷಪಡದೆ, ದ್ವೇಷದಿ–ಸೂರ್ಯೋದಯನಾದನಲ್ಲ ಎಂಬ ದ್ವೇಷದಿಂದ, ತಸ್ಕರನು–ಚೋರತನ ಮಾಡತಕ್ಕ ಪುರುಷನು, ನಿಂದಿಸಲು–ತಾನು ಮಾಡತಕ್ಕ ಚೋರಕಾರ್ಯಕ್ಕೆ ಅನುಕೂಲವಾದ ಅಂಧಕಾರ ಪರಿಹಾರ ಮಾಡಿ, ತನ್ನ ಕಿರಣಗಳಿಂದ ಪ್ರಕಾಶ ಉಂಟುಮಾಡಿ ತನ್ನ ಚೋರತ್ವ ಕಾರ್ಯಕ್ಕೆ ಭಂಗಮಾಡಿದನೆಂದು ಉದಯನಾದ ಸೂರ್ಯನಲ್ಲಿ ದೋಷಾರೋಪಣ ಮಾಡಿ ನಿಂದಿಸಲು, ದಿವಾಕರಗೆ–ಸೂರ್ಯನಿಗೆ ಇವನ ನಿಂದಾದಿಂದ, ಕುಂದಹುದೆ–ಕೊರತೆ ಆಗೋದೇ ? ಆಗೋದಿಲ್ಲವೆಂದು ಅರ್ಥ. ಪೂರ್ಣಪ್ರಕಾಶನಾಗಿ ಇರುತ್ತಾನೆ. ತದ್ವತ್, ಕುಹಕ–ಹಾಂಗೆ ಚೋರಗೆ ಸದೃಶನಾದವ ದುಷ್ಟಬುದ್ಧಿಯಾದವನು, ಇದು–ಸೂರ್ಯಸದೃಶವಾದ, ಅಜ್ಞಾನಾಂಧಕಾರ ಪರಿಹಾರ ಮಾಡಿ, ಜ್ಞಾನಪ್ರಕಾಶ ಮಾಡುವ ಈ ಹರಿಕಥಾಮೃತಸಾರಾಖ್ಯ ಗ್ರಂಥದಲ್ಲಿ ದಾವ ದೋಷವೂ ಇಲ್ಲದೆ, ದೋಷರಹಿತನಾದ ಪರಮಾತ್ಮನ ಮಹಾತ್ಮೆ ಹೇಳತಿರಲಾಗಿ, ಈ ಹರಿಯ ಮಹಾತ್ಮೆಯಲ್ಲಿ ದಾವ ದೋಷವೂ ಹೇಳಲಿಕ್ಕೆ ಬಾರದೆ, ಮಹಾತ್ಮರ ಯಶಸ್ಸು ಚೌರ್ಯ ಇಚ್ಛಾ ಉಳ್ಳ ಕುಹಕಸಾಂಕೇತನಾದ ಚೋರಗೆ, ಈ ಗ್ರಂಥಾಖ್ಯ ಸೂರ್ಯೋದಯದಿಂದ ಯಶಸ್ಸು, ಚೋರತ್ವಕ್ಕೆ ಅನುಕೂಲ ಇಲ್ಲದೆ, ಈ ಗ್ರಂಥ, ಸಂಸ್ಕೃತವು–ಸಂಸ್ಕೃತ ಭಾಷಾದಿಂದ ರಚಿತವಾದದ್ದು, ಇದಲ್ಲೆಂದು–ಅಲ್ಲ ಎಂತ ಹೇಳಿ ನಿಷ್ಪ್ರಯೋಜನ ನಿಮಿತ್ತ ಕಲ್ಪನಾ ಮಾಡಿ, ತಿರಸ್ಕರಿಸಲು–ಸೂರ್ಯನ್ನ ತಸ್ಕರ ನಿಂದಿಸಿದ್ದೋಪಾದಿಯಲ್ಲಿ ತಿರಸ್ಕಾರ ಮಾಡಲು, ಏನಹುದು–ಈ ಗ್ರಂಥಕ್ಕೆ ದೋಷ ಏನಾದರೂ ಪ್ರಾಪ್ತವಾಗೋದೆ ? ಎಂದರೆ ಪ್ರಾಪ್ತವಾಗಲಾರದು. ಮತ್ತು ಭಕ್ತಿಪುರಸ್ಕರದಿ–ಅಹಂಜ್ಞಾನರಹಿತನಾಗಿ, ಸಮೀಚೀನವಾದ ತಾರತಮ್ಯಪಂಚಭೇದ ಜ್ಞಾನದಿಂದ ಯುಕ್ತನಾಗಿ, ವಿರಕ್ತನಾಗಿ, ದೇವರಲ್ಲಿ ಭಕ್ತಿ ಇಟ್ಟು ತತ್ಪುರಸ್ಸರವಾಗಿ, ಕೇಳ್ವರಿಗೆ–ಕೇಳಿ, ತದನುಷ್ಠಾನ ಮಾಡುವವರಿಗೆ, ಸದಾ–

ನಿರಂತರ ಹೃದಯಾಕಾಶದಲ್ಲಿ ಭಗವನ್ಮೂರ್ತಿ ಧ್ಯಾನಿಸತಕ್ಕವರಿಗೆ, ಪುಷ್ಕರಾಕ್ಷ–ಕಮಲ ದಳಾಯತಾಕ್ಷನಾದ ಶ್ರೀ ಪರಮಾತ್ಮ, ಒಲಿವನು–ಒಲಿದು ಪ್ರತ್ಯಕ್ಷನಾಗಿ ಕಾಪಾಡ ತಾನೆಂದು ತಾತ್ಪರ್ಯ.

**ಪತಿತನ ಕಪಾಲದೊಳು ಭಾಗೀ ।**
**ರಥಿಯ ಜಲವಿರೆ ಪೇಯವೆನಿಪುದೆ ।**
**ಇತರ ಕವಿನಿರ್ಮಿತ ಕುಕಾವ್ಯಾಶ್ರಾವ್ಯ ಬುಧರಿಂದ ॥**
**ಕೃತಿಪತಿಕಥಾನ್ವಿತವೆನಿಪ ಪ್ರಾ ।**
**ಕೃತವೆ ತಾ ಸಂಸ್ಕೃತವೆನಿಸಿ ಸ ।**
**ದ್ಗತಿಯನೀವುದು ಭಕ್ತಿಪೂರ್ವಕ ಕೇಳಿ ಪೇಳ್ವರಿಗೆ ॥ ೩೬ ॥**

ಭಗವನ್ಮಹಿಮಾ ಮುಖ್ಯವೇ ಹೊರ್ತು ಭಾಷಾ ಮುಖ್ಯವಲ್ಲ ಎಂತ ಹೇಳತಾರೆ. ಮತ್ತು ಸದ್ಗತಿ ಐದಬೇಕಾದರೆ ಭಾಷಾನೇ ಪ್ರಯೋಜನವಲ್ಲ. ಮುಖ್ಯ ಪ್ರಯೋಜನ ದಾವದೆಂದರೆ, ದಾವ ಭಾಷಾ ಆದಕಾಲಕ್ಕೂ ತಾರತಮ್ಯ ಪಂಚಭೇದದಿಂದ ಯುಕ್ತವಾಗಿ ಹರಿಸರ್ವೋತ್ತಮ, ವಾಯುಜೀವೋತ್ತಮ ಪೂರ್ವಕವಾಗಿ, ವಿಷ್ಣುಮಹಿಮಾದಿಂದ ಯುಕ್ತವಾದ ಕಾವ್ಯ, ದಾವ ಭಾಷಾದಿಂದ ಇದ್ದರೂ ಸದ್ಗತಿ ಕೊಡತದೆ, ತದನ್ಯಗಳ ಕೊಡೋದಿಲ್ಲ ಎಂತ ದೃಷ್ಟಾಂತದಿಂದ ಹೇಳತಾರೆ.

ಪತಿತನ ಕಪಾಲದೊಳು–ಜಾತಿಭ್ರಷ್ಟನಾದ ಬ್ರಾಹ್ಮಣನ ಶಿರದಲ್ಲಿ, ಭಾಗೀರಥಿಯ ಜಲವಿರೆ–ತ್ರಿವಿಕ್ರಮದೇವರ ನಖದಿಂದ ಅಂಡಖರ್ಪರ ಭಿನ್ನವಾಗಿ ಬಹಿರಾವರಣದಿಂದ ಬಂದ ಪರಿಶುದ್ಧವಾದ ಗಂಗಾಜಲವಿದ್ದ ಮಾತ್ರಕ್ಕೆ, ಪೇಯವೆನಿಪುದೆ–ಭಾಗೀರಥಿ ಪರಮ ಶುದ್ಧಳೆಂಮ ಪಾನಕ್ಕೆ ಯೋಗ್ಯವಾಗೋದೆ? ಯೋಗ್ಯವಾಗಲಾರದು. ಪತಿತನ ಸ್ಪರ್ಶ ವಾದ್ದರಿಂದ ಪಾನಕ್ಕೆ ಯೋಗ್ಯವಾಗಲಿಲ್ಲ. ತದಪೇಕ್ಷಯಾ, ಅತ್ಯಂತ ನೀಚವಾದ ಕೂಪೋದಕ, ಪತಿತನಲ್ಲದ ಭಗವದ್ಭಕ್ತನ ಕಪಾಲಗತ ಉದಕ, ಶ್ರೇಷ್ಠ ಎಂತ ಎನಿಸಿ ಪಾನಕ್ಕೆ ಯೋಗ್ಯವಾದಂತೆ, ಇದು ಹ್ಯಾಂಗೋ ತದ್ವತ್, ಇತರ ಕವಿ–ಭಗವದ್ಭಕ್ತರಲ್ಲದ ಇತರರಾದ ಮಿಶ್ರಜ್ಞಾನಿ, ಮಿಥ್ಯಾಜ್ಞಾನಿಗಳಾದ ಕವಿಗಳಾದ, ಏತಾದೃಶ ಜ್ಞಾನವುಳ್ಳವ ರಿಂದ, ನಿರ್ಮಿತ–ನಿರ್ಮಿತವಾದ, ಕುಕಾವ್ಯ–ಭಗವನ್ಮಹಿಮಾದಿಂದ ರಹಿತವಾದ ಸಂಸ್ಕೃತ ಭಾಷಾದಿಂದ ರಚಿತವಾದ ಕಾವ್ಯ ದಾವದದೆ ಅದು, ಕುತ್ಸಿತ ಕಾವ್ಯವೆಂದು ಕರಿಸುತ್ತದೆ. ಇಂಥಾ ಕಾವ್ಯ, ಬುಧರಿಂದ–ಭಗವದ್ಭಕ್ತರಾದ ಜ್ಞಾನಿಗಳಿಂದ, ಅಶ್ರಾವ್ಯ–ಶ್ರವಣಮಾಡೋ ದಕ್ಕೆ ಯೋಗ್ಯವಲ್ಲ. ಗಂಗಾ, ಯದ್ಯಪಿ ಉತ್ತಮಳಾದಕಾಲಕ್ಕೂ ಪತಿತನ ಸ್ಪರ್ಶವಾದ್ದ ರಿಂದ ತ್ಯಾಗಕ್ಕೆ ಕಾರಣಳು ಹ್ಯಾಂಗೋ, ಅದರಂತೆ ಭಾಗೀರಥಿ ಸದೃಶವಾದ ಸಂಸ್ಕೃತ ಭಾಷಾ, ಪರಮಾತ್ಮನ ಮಾಹಾತ್ಮ್ಯವನ್ನು ಸ್ಪರ್ಶಮಾಡಿದರೇ ಶ್ರೇಷ್ಠತ್ವ ಬಂದೀತೆ ಹೊರ್ತು, ಅನ್ಯಥಾ ಬರಲಾರದು. ಭಾಷಾದೊಳಗೆ ಶ್ರೇಷ್ಠ ಭಾಷಾನೇ. ಬ್ರಾಹ್ಮಣ

ಪತಿತನಾದರೆ ಶೂದ್ರನಕಿಂತಲೂ ನೀಚ ಎಂತ ಕರಿಸುತ್ತಾನೆ. ಹೂವಿನಿಂದ ನಾರೂ ತಲೆಗೆ ಸೇರಿದಂತೆ ಸಂಸ್ಕೃತ ಭಾಷಾ ಎಂತ ತಿಳಿಯಬೇಕು. ಕೃತಿಪತಿ–ಕೃತೀನಾಮಕ ಲಕ್ಷ್ಮೀದೇವೇರ ಪತಿಯಾದ ಶ್ರೀ ಪ್ರದ್ಯುಮ್ನಾಭಿನ್ನ ಶ್ರೀ ನಾರಾಯಣದೇವರ, ಕಥಾ-ಅವನ ಗುಣಗಾನ, ಅವನ ಮಹಾತ್ಮ್ಯ, ಇತ್ಯಾದಿ ಕಥೆಗಳಿಂದ, ಅನ್ವಿತವೆನಿಪ-ಯುಕ್ತವಾದದ್ದು ಎಂತ ಎನಿಸತಕ್ಕ, ಪ್ರಾಕೃತವೆ–ಕೂಪೋದಕಕ್ಕೆ ಸಾಮ್ಯವಾದ ಪ್ರಾಕೃತಭಾಷಾವೇ, ತಾ ಸಂಸ್ಕೃತವೆನಿಸಿ–ತಾನು ಸಂಸ್ಕೃತತುಲ್ಯ ಎಂತ ಎನಿಸಿ, ಸದ್ಗತಿಯನೀವುದು–ಸಮೀಚೀನವಾದ, ಭಕ್ತಿ, ವೈರಾಗ್ಯಗಳಿಂದ ಸಹಿತವಾದ, ಭಗವದ್ವಿಷಯವಾದ ಜ್ಞಾನವನ್ನ ಕೊಡೋದಾಗತದೆ. ಸಂಸ್ಕೃತಭಾಷಾ ಶ್ರೇಷ್ಠವೆಂದು ಅದರಲ್ಲಿ ದೃಷ್ಟಿ ಇಟ್ಟು, ಭಗವನ್ಮಹಿಮಾರಹಿತವಾದ ಕಾವ್ಯಗಳ ಕೇಳೋಣದರಿಂದ, ಅದು ಸದ್ಗತಿ ಕೊಡೋದಿಲ್ಲ, ಎಂತ ತಾತ್ಪರ್ಯ. ಭಕ್ತಿಪೂರ್ವಕ–ಭಗವನ್ಮಹಿಮಾ ಹೇಳತಕ್ಕ ಪ್ರಾಕೃತವೇ ಆಗಲಿ, ಸಂಸ್ಕೃತವೇ ಆಗಲಿ, ತಾರತಮ್ಯ ಪಂಚಭೇದದಿಂದ ಯುಕ್ತವಾದ ಭಕ್ತಿಯಿಂದ ಸಹಿತರಾಗಿ, ಕೇಳಿ–ಕೇಳತಕ್ಕವರಿಗೆ, ಪೇಳ್ವರಿಗೆ–ಹೇಳತಕ್ಕವರಿಗೆ ಸದ್ಗತಿ ಕೊಡತದೆ. ತದ್ವ್ಯತಿರಿಕ್ತ ಸದ್ಗತಿ ಆಗೋದಿಲ್ಲ. ಸಂಸ್ಕೃತ, ಅನ್ಯಮಹಾತ್ಮ್ಯ ಹೇಳಿ, ಭಗವನ್ಮಹಾತ್ಮ್ಯ ಬಿಡೋಣದರಿಂದ ಪ್ರಾಕೃತಭಾಷಾತುಲ್ಯವೇ ಆಗತದೆ. ಪ್ರಾಕೃತಭಾಷಾ ಆದರೂ, ಭಗವನ್ಮಹಾತ್ಮ್ಯ ಹೇಳಿದರೆ, ಅದೇ ಸಂಸ್ಕೃತತುಲ್ಯವಾಗತದೆ. ದಾವ ಭಾಷಾವಾದರೂ ಭಗವನ್ಮಹಾತ್ಮ್ಯ ಇರಬೇಕು, ಭಕ್ತಿರಸ ಇರಬೇಕು ಎಂತ ತಾತ್ಪರ್ಯ.

**ವೇದಶಾಸ್ತ್ರಸಯುಕ್ತಿಗ್ರಂಥಗ |**
**ಳೋದಿ ಕೇಳ್ದವನಲ್ಲ ಸಂತತ |**
**ಸಾಧುಗಳ ಸಹವಾಸಸಲ್ಲಾಪಗಳು ಮೊದಲಿಲ್ಲ ||**
**ಮೋದತೀರ್ಥಾರ್ಯರ ಮತಾನುಗ |**
**ರಾದವರ ಕರುಣದಲಿ ಪೇಳ್ದ ರ |**
**ಮಾಧವ ಜಗನ್ನಾಥವಿಠ್ಠಲ ತಿಳಿಸಿದದರೊಳಗೆ || ೩೭ ||**

ಶ್ರೀ ಹರಿಕಥಾಮೃತಸಾರವನ್ನ ಅಪರೋಕ್ಷಜ್ಞಾನದಿಂದ ಹೇಳಿದ್ದು ಎಂತ ಹೇಳತಾರೆ.

ವೇದ–ಈ ವರ್ತಮಾನ ಜನ್ಮದಲ್ಲಿ ಅಪೌರುಷೇಯವಾದ ವೇದಗಳೇನು, ಶಾಸ್ತ್ರ–ಶ್ರೀ ಭಾಗವತ, ಭಾರತ ಇನ್ನೂ ಅನೇಕವಾದ ಪುರಾಣಗಳು ಹಾಗೇ, ಶ್ರೀ ಸರ್ವಜ್ಞರಾಯರ ಗ್ರಂಥಗಳು, ಇನ್ನೂ ಟೀಕಾ ಮೊದಲಾದ, ಸಯುಕ್ತಿಗ್ರಂಥಗಳ–ಅನೇಕ ಯುಕ್ತಿಗಳಿಂದ ಸಹಿತವಾದ ಗ್ರಂಥಗಳ, ಓದಿ ಕೇಳ್ದವನಲ್ಲ–ಪಠನಮಾಡಿದವನೂ ಅಲ್ಲ, ಅನ್ಯರಿಂದ ಕೇಳಿದವನೂ ಅಲ್ಲ, ಸಂತತ–ನಿರಂತರದಲ್ಲೂ, ಸಾಧುಗಳ ಸಹವಾಸ–ಸಜ್ಜನರ ಸಹವಾಸ, ಸಲ್ಲಾಪಗಳು–ಅವರಸಂಗಡ ಶ್ರೀ ಭಗವತ್ತತ್ತ್ವ ವಿಚಾರರೂಪವಾದ ಮಾತುಗಳು, ಮೊದಲಿಲ್ಲ–ಆದಿ ಆರಭ್ಯ ಅಂತ್ಯವರಿಗ್ಯೂ ಇಲ್ಲ. ಇತ್ಯಾದಿ ಕಾರಣಗಳಿಂದ ಈ ಗ್ರಂಥ ರಚನ ಮಾಡಿದವನಲ್ಲ. ಮೋದತೀರ್ಥಾರ್ಯರ–ಆರ್ಯರಾದ ಶ್ರೀಮದಾನಂದತೀರ್ಥರ,

ಮತಾನುಗರಾದವರ ಕರುಣದಲಿ–ಮತಶಾಸ್ತ್ರಕ್ಕೆ ಸಮ್ಮತವಾದ ಶಾಸ್ತ್ರವನ್ನ ಅನುಸರಿಸಿದವರಾದ ನಮ್ಮ ಗುರುಗಳಾದ ಭಾಗಣ್ಣದಾಸರಾಯರ ಪರಮಾನುಗ್ರಹದಿಂದ, ರಮಾಧವ–ಲಕ್ಷ್ಮೀಪತಿ ನಾರಾಯಣಾಭಿನ್ನನಾದ, ಜಗನ್ನಾಥವಿಠ್ಠಲ – ಜಗತ್ತಿಗೆ ಸ್ವಾಮಿಯಾದ ಪಾಪಪರಿಹಾರಕನಾದ ಶ್ರೀ ಪರಮಾತ್ಮ, ಎನಗೆ ಪ್ರತ್ಯಕ್ಷನಾಗಿ ಒಲಿದು ಹಿಂದಿನ ಜನ್ಮಗಳಲ್ಲಿ ಓದಿದ ವೇದಶಾಸ್ತ್ರ, ಪುರಾಣ, ಸಚ್ಛಾಸ್ತ್ರಾರ್ಥಗಳನ್ನು ಸ್ಮೃತಿಗೆ ತಂದುಕೊಟ್ಟು, ತಿಳಿಸಿದದರೊಳಗೆ–ತಿಳಿಸಿದ್ದರ ಒಳಗೆ ಕೆಲವುಮಟ್ಟಿಗೆ, ಪೇಳ್ದೆ–ವಾಕ್ಕಿನಲ್ಲಿ ಪರಮಾತ್ಮನು ನುಡಿಸಿದೋಪಾದಿಯಲ್ಲಿ ಪೇಳೋವನಾಗಿದ್ದೇನೆ. ಅಷ್ಟೇಹೊರ್ತು ಇತರ ಸಹಾಯದಿಂದಲೂ, ನನ್ನ ಬುದ್ಧಿಬಲದಿಂದಲೂ, ಹೇಳಿದ್ದಲ್ಲ ಎಂತ ತಾತ್ಪರ್ಯ. ಇನ್ನೂ ನಾನು ಈ ಜನ್ಮದಲ್ಲಿ ನಮ್ಮ ಗುರುಗಳ ಪರಮಾನುಗ್ರಹದಿಂದ ಉಪದಿಷ್ಟವಾದ ಶಾಸ್ತ್ರಾರ್ಥಗಳ ಹೇಳಿದ್ದೇನೆ ಎಂತ ಶ್ರೀ ಜಗನ್ನಾಥದಾಸಾರ್ಯರು ಹೇಳಿದರು. ಆದ್ದರಿಂದ, ಅಪರೋಕ್ಷ ಜ್ಞಾನದಿಂದ ಜನ್ಮಾಂತರ ಸಂಸ್ಕಾರ ವ್ಯಕ್ತವಾಗಿ ಹೇಳಿದ ಕಾವ್ಯ ಎಂತ ತಿಳೀಬೇಕು.

ಈ ಸಂಧಿಯಲ್ಲಿ ವಿಚಾರಕ್ರಮ.

| | |
|---|---|
| ಶ್ಲೋಕ ೧, ೨ | ದತ್ತ ಸ್ವಾತಂತ್ರ್ಯವಿಚಾರ. ಅದರ ಕೃತ್ಯ. |
| ಶ್ಲೋಕ ೪, ೫ | ನಿತ್ಯಸಂಸಾರಿಗಳಿಗೂ ೪೦೦ ಗುಣದಲ್ಲೇ ವಿಭಾಗ |
| ಶ್ಲೋಕ ೯ | ಅನ್ನರೂಪದಿಂದ ಪರಮಾತ್ಮ ಪ್ರವೇಶ |
| ಶ್ಲೋಕ ೧೦ | ಸಲಿಲಬಿಂದು ಪಯೋಬ್ಧಿಯೊಳು ಬೀಳಲು ದ್ವಂದ್ವಕರ್ಮ ಅರ್ಪಣೆ. |
| ಶ್ಲೋಕ ೧೩ | ಅನ್ಯ ದೇವತೆಗಳಾದ ಬ್ರಹ್ಮಾದಿಗಳ ಭಜನ. |
| ಶ್ಲೋಕ ೧೭ | ಚಿದಾನಂದ ಭೇದ ವಿಚಾರ. |
| ಶ್ಲೋಕ ೧೮ | ಜೀವ ಪರಮಾತ್ಮರಿಗೆ ಕರ್ಮಫಲಭೋಗ ವಿಚಾರ. |
| ಶ್ಲೋಕ ೩೪, ೩೫ | ಪ್ರಾಕೃತಭಾಷಾ. ಸಮಾಧಾನ. |

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ದತ್ತಸ್ವಾತಂತ್ರ್ಯಸಂಧಿವ್ಯಾಖ್ಯಾನಂ ಸಂಪೂರ್ಣಂ.**

|| ಶ್ರೀ ಕೃಷ್ಣಾರ್ಪಣಮಸ್ತು ||

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಹದಿನೇಳನೆಯ ಸಂಧಿ

## ಸ್ವಗತಸ್ವಾತಂತ್ರ್ಯ ಸಂಧಿ

**ಹರಿಕಥಾಮೃತಸಾರ ಗುರುಗಳ ।**
**ಕರುಣದಿಂದಾಪನಿತು ಪೇಳುವೆ ।**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪ ॥**

**ಮೂಲ :**

**ಸ್ವಗತಸ್ವಾತಂತ್ರ್ಯ ಗುಣವ ಹರಿ ।**
**ತೆಗೆದು ಬ್ರಹ್ಮಾದ್ಯರಿಗೆ ಕೊಟ್ಟಿದು ।**
**ಭೃಗುಮುನಿಪ ಪೇಳಿದನು ಇಂದ್ರದ್ಯುಮ್ನ ಕ್ಷಿತಿಪನಿಗೆ ॥**

**ವಿಶೇಷಾರ್ಥ :–** ಹಿಂದೆ ಹೇಳಿದ್ದು ದತ್ತಸ್ವಾತಂತ್ರ್ಯಸಂಧಿ. ದತ್ತ ಎಂತ ಏಕೆ ನಾಮ ಬಂತು ಎಂದರೆ, ಜೀವಗೆ ಅನಾದಿಸ್ವಾತಂತ್ರ್ಯವದೆ. ಅದರಲ್ಲಿ ಪರಮಾತ್ಮ ಅನಾದಿ ಯಿಂದ ಸ್ವತಂತ್ರರೂಪನಾಗಿ ಸ್ವಾತಂತ್ರ್ಯಕ್ಕೆ ಬಿಂಬನಾಗಿ ಇದ್ದಾನೆ. ಇದು ಮೋಕ್ಷದಲ್ಲಿ ಕಾರ್ಯಮಾಡಸತಕ್ಕದ್ದು. ತ್ರಿಗುಣಕಾರ್ಯ ಮಾಡಸೋದಕ್ಕೆ ತ್ರಿಗುಣಾತ್ಮಕ ಜಡದೇಹ ದತ್ತಮಾಡಿದಂತೆ, ಜಡಸ್ವಾತಂತ್ರ್ಯ ದತ್ತಮಾಡತಾನೆ. ದತ್ತಶಬ್ದ ಅನೇಕ ಪ್ರಕಾರ ಸಮನ್ವಯವು. ಜಡಕಾರ್ಯಗಳ ನಿಯಮನ ಮಾಡಬೇಕಾದರೆ, ಆದಿಯಲ್ಲಿ ಜೀವನ ಸ್ವರೂಪದಲ್ಲಿ ಇಚ್ಛಾ ಹುಟ್ಟಬೇಕು. ಆದ್ದರಿಂದ ಸೃಷ್ಟಿಗೆ ಪ್ರಾರಂಭದಲ್ಲಿ ಜೀವನ ಸ್ವರೂಪ ಸ್ವಾತಂತ್ರ್ಯಕ್ಕೆ ತನ್ನ ಸ್ವಾತಂತ್ರ್ಯ ದತ್ತಮಾಡಿದ. ಸ್ಥೂಲದೇಹಪ್ರಾಪ್ತಿಕಾಲಕ್ಕೆ ಜಡ ಸ್ವಾತಂತ್ರ್ಯ ದತ್ತ. ದತ್ತಸ್ವಾತಂತ್ರ್ಯ ಎಂಥಾದ್ದಾಗಿ ನಡಸತಾನೆ ಎಂದರೆ, ಜೀವನಿಂದ ನಡಸತಕ್ಕ ಪ್ರಯತ್ನ ದಾವದದೆ, ಅದರನ್ನ ಆ ಪ್ರಯತ್ನಾನುಸಾರವೇ ಕಾರ್ಯಸಿದ್ಧಿ ಮಾಡಸತಾನೆ. ಇಂಥಾದ್ದೇ ದತ್ತಮಾಡಿ ತನ್ನ ಸ್ವಾತಂತ್ರ್ಯ ಜೀವನ ಸ್ವಾತಂತ್ರ್ಯದಲ್ಲಿ ಇಟ್ಟಿದ್ದಾನೆ. ಇದಕ್ಕೆ 'ದತ್ತಸ್ವಾತಂತ್ರ್ಯ' ಎಂತ ಹೆಸರು. ಪ್ರಯತ್ನಾನುಸಾರ ಕಾರ್ಯ ನೆರವೇರಿದರೆ ದತ್ತಸ್ವಾತಂತ್ರ್ಯಕಾರ್ಯ ಎಂದು ತಿಳಿಯಬೇಕು.

ಸ್ವಗತಸ್ವಾತಂತ್ರ್ಯದ ಕಾರ್ಯ ಎಂಥಾದ್ದೆಂದರೆ, ಸ್ವಗತಸ್ವಾತಂತ್ರ್ಯದ್ವಾರಾ ಜೀವನ ಕಡಿಯಿಂದ ಪ್ರಯತ್ನಮಾಡಿಸಿ ಆ ಪ್ರಯತ್ನಾನುಸಾರ ಕಾರ್ಯ ನೆರವೇರಿಸದೇ ಹೋಗೋಣ ದಾವದದೆ ಇದು, ಸ್ವಗತಸ್ವಾತಂತ್ರ್ಯದ ಕಾರ್ಯವೆಂದು ತಿಳಿಯಬೇಕು.

ಇದೇ ಪಕ್ವಾಪಕ್ವಕಾಲದಲ್ಲಿ ಉಪಯೋಗಿಸತಕ್ಕದ್ದು. ತನ್ನಲ್ಲಿ ವಿಭಾಗ ಮಾಡಿ ಇಟ್ಟು ಕೊಂಡು ತನ್ನಗತ ಸ್ವಾತಂತ್ರ್ಯವಿಭಾಗ ಮಾಡಿ ಮತ್ತು ಬ್ರಹ್ಮಾದಿಗಳಿಗೆ ವಿಭಾಗವಮಾಡಿ ಕೊಡತಾನಾದಕಡಿಯಿಂದ ಸ್ವಗತಸ್ವಾತಂತ್ರ್ಯ ಎಂತ ನಾಮ ಬಂತು.

ಸರ್ವಸ್ವಾತಂತ್ರ್ಯದ ಕಾರ್ಯ ಎಂಥಾದ್ದೆಂದರೆ, ಕಾರ್ಯಾನುಕೂಲವಾಗಬೇಕು ಎಂಬ ಇಚ್ಛಾ ಮಾತ್ರ ಹುಟ್ಟಿಸಿಕೊಡೋಣ. ಅದು ಪ್ರಯತ್ನಕ್ಕೆ ಸಾಧ್ಯವಲ್ಲದೆ ಪ್ರಯತ್ನ ರಹಿತನಾಗಿ ಇರೋಣ. ಅಂಥಾದ್ದು ಆ ಪ್ರಯತ್ನದಿಂದ ಕಾರ್ಯಸಿದ್ಧಿ ಆಗೋಣ, ಇದೆಂಬುದೇ ಸರ್ವಸ್ವಾತಂತ್ರ್ಯ.

ಈ ಸ್ವಾತಂತ್ರ್ಯವಿಷಯವನ್ನ ಭೃಗುಕುಲವನ್ನ ಪಾಲನಿಮಾಡಿದ ಶ್ರೀ ಪರಶುರಾಮ ದೇವರು, ಇಂದ್ರದ್ಯುಮ್ನರಾಯಗೆ ಹೇಳೋವನಾಗಿದ್ದಾನೆ. ಅದರನ್ನ ವಿವರಮಾಡತೇವೆ ಎಂತ ಶ್ರೀ ಜಗನ್ನಾಥದಾಸರ ಪ್ರಾರ್ಥನಾ.

**ಮೂಲ :**

**ಪರಮವಿಷ್ಣು ಸ್ವತಂತ್ರ ಮಾಯಾ ।**
**ತರುಣಿ ವಕ್ಷಸ್ಥಳನಿವಾಸಿಯು ।**
**ಸರಸಿಜೋದ್ಭವಪ್ರಾಣರೀರ್ವರು ಸಚಿವರೆನಿಸುವರು ॥**
**ಸರ್ವಕರ್ಮಗಳಲ್ಲಿ ತತ್ಕ್ರಿಯು ।**
**ಉರಗಭೂಷಣಹಂಕೃತಿತ್ರಯ ।**
**ಕರಿಸುವಮರೇಂದ್ರಾರ್ಕಮುಖರಿಂದ್ರಿಯಪರೆನಿಸುವರು ॥ ೧ ॥**

ಇಂದ್ರಿಯಾಭಿಮಾನಿದೇವತೆಗಳನ್ನ ಹೇಳತಾರೆ. ಅಂದರೆ, ಸ್ವಗತಸ್ವಾತಂತ್ರ್ಯ ದಾವ ಭಗವದ್ರೂಪದಿಂದ ವಿಭಾಗವಾದದ್ದು, ದಾರದಾರಿಗೆ ವಿಭಾಗಮಾಡಿ ಕೊಟ್ಟದ್ದು ಎಂಬುದನ್ನ ಹೇಳತಾರೆ.

**ಟೀಕಾ :**

ವಿಷ್ಣು–ಸರ್ವತ್ರವ್ಯಾಪ್ತನಾದ ವಿಷ್ಣುಶಬ್ದವಾಚ್ಯ ಶ್ರೀ ಪರಮಾತ್ಮನು, ಪರಮ– ಸರ್ವೋತ್ತಮನಾದವ. ಇವನಿಗಿಂತಲೂ ಉತ್ತಮರು ದಾರೂ ಇಲ್ಲದವ. ಸ್ವತಂತ್ರ– ಅನ್ಯಾಧೀನನಲ್ಲದ ಸ್ವಾಧೀನ ಸ್ವಾತಂತ್ರ್ಯ ಉಳ್ಳವ. ರಮಾ ಬ್ರಹ್ಮಾದಿ ತತ್ವಾಭಿಮಾನಿ ಗಳು ಸ್ವಾಧೀನಸ್ವತಂತ್ರರಲ್ಲ. ವಿಷ್ಣು ಅಧೀನವಾದ ಸ್ವಾತಂತ್ರ್ಯ ಉಳ್ಳವರು. "ಪ್ರಭುರ್ಹಿ ಜೀವೋ ಜಡಮಪೇಕ್ಷ್ಯ ಆಸ್ತೇ ವಾಭಿಮಾನಿಕಂ ಕರ್ತೃತ್ವಂ ಜೀವಸ್ಯ" ಎಂಬ ಗೀತಾ ತಾತ್ಪರ್ಯ. ತರುಣಿ–ಈ ವಿಷ್ಣುವಿನ ತರುವಾಯ ನಿತ್ಯಯೌವ್ವನೆಯರಾದ, ವಕ್ಷಸ್ಥಳ– ಶ್ರೀ ಪರಮಾತ್ಮನ ವಕ್ಷಸ್ಥಳದಲ್ಲಿ, ನಿವಾಸಿಯು–ನಿವಾಸಿನಿಯರಾದ, ಮಾಯಾ–ಮಾಯಾ ಸಾಂಕೇತರಾದ ಲಕ್ಷ್ಮೀದೇವೇರು ತ್ರಿಗುಣಾತ್ಮಕ ಅವ್ಯಕ್ತತತ್ವಾಭಿಮಾನಿಯಾದವರು.

ಸರಸಿಜೋದ್ಭವ–ಶ್ರೀ ಪದ್ಮನಾಭದೇವರ ಲೋಕಾತ್ಮಕ ನಾಭೀಕಮಲದಿಂದ ಜನಿಸಿದ ಚತುರ್ಮುಖ ಬ್ರಹ್ಮದೇವರು, ಪ್ರಾಣರು–ವಿರಾಟ್‌ರೂಪದಿಂದ ಜನಿಸಿದ ವಾಯುದೇವರು, ಈರ್ವರು – ಇವರಿಬ್ಬರು (ಜೀವೋತ್ತಮರು), ಸಚಿವರು – ಸ್ವರೂಪತಃ ಸಮಾನರು. ಸಾಧನಾವಶಿಷ್ಟದಿಂದ ಕಿಂಚಿತ್ ನ್ಯೂನಾಧಿಕ್ಯರು. ಎನಿಸುವರು–ಬ್ರಹ್ಮದೇವರು, ಮಹ ತತ್ತ್ವಾಭಿಮಾನಿಗಳೆಂತಲೂ, ವಾಯುದೇವರು, ವಿಜ್ಞಾನ ತತ್ತ್ವಾಭಿಮಾನಿಗಳೆಂತಲೂ ಎನಿಸುವರು. (ಈ ವಿಷಯವನ್ನ ಮಂಗಳಾಚರಣಸಂಧಿ ಶ್ರೀ ವಾಯುದೇವರ ಸ್ತೋತ್ರ ಭಾಗದಲ್ಲಿ ನೋಡಬಹುದು.) ರಮಾದೇವೇರಕಿಂತಲೂ ನ್ಯೂನರು. ತತ್ಪ್ರಿಯರು–ಈ ಬ್ರಹ್ಮವಾಯುಗಳು ಪೂರ್ವೋಕ್ತ ರಮಾಮಧುಸೂದನರಿಗೆ ಅತ್ಯಂತ ಪ್ರಿಯರು ಹಾಂಗೂ, ಆ ಪರಮಾತ್ಮನ ವಿಷಯಕವಾದ ಸಮಸ್ತ ಕರ್ಮಗಳ ಮಾಡೋದರಲ್ಲೂನೂ ಪ್ರಿಯರಾದ ವರು, ಅನ್ಯ ಕರ್ಮಾಸಕ್ತಿರಹಿತರು ಎಂತ ತಾತ್ಪರ್ಯ. ಈ ಬ್ರಹ್ಮವಾಯುಗಳಿಗೆ ಅತ್ಯಂತ ಪ್ರಿಯರಾದವರು, ಅಹಂಕೃತಿತ್ರಯಕರೆಸುವ–ಅಹಂಕಾರ ತತ್ತ್ವದಲ್ಲಿ ಪ್ರಭೇದ ಗಳಿಂದ ಕರಿಸುವ, ವೈಕಾರಿಕ, ತೈಜಸ, ತಾಮಸ ಈ ಮೂರು ಭೇದಗಳಿಂದ ಯುಕ್ತವಾದ ಅಹಂಕಾರತ್ರಯದಲ್ಲಿ, ಉರಗಭೂಷಣ–ಸರ್ಪಭೂಷಣರಾದ ರುದ್ರದೇವರು, ಉಪಲಕ್ಷ ಣಯಾ ಶೇಷದೇವರೂ ಗರುಡದೇವರೂ ಗ್ರಾಹ್ಯ ; ವೈಕಾರಿಕಕ್ಕೆ ಶೇಷದೇವರು, ತೈಜಸಕ್ಕೆ ಗರುಡದೇವರು, ತಾಮಸಕ್ಕೆ ರುದ್ರದೇವರು, ಈ ಪ್ರಕಾರ ಮೂರು ಮಂದಿ ಅಭಿಮಾನಿ ಗಳು. ಅಮರೇಂದ್ರ–ಮನೋಭಿಮಾನಿಯಾದ ಇಂದ್ರದೇವರು, ಅರ್ಕ–ನೇತ್ರಾಭಿಮಾನಿ ಯಾದ ಸೂರ್ಯದೇವರು, ಮುಖರು – ಇವರೇಮೊದಲಾದ ಇನ್ನೂ ಅನೇಕಮಂದಿ ದೇವತಿಗಳು, ಇಂದ್ರಿಯಪರೆನಿಸುವರು–ಇಂದ್ರಿಯಾಭಿಮಾನಿಗಳೆಂದು ಎನಿಸೋವರಾಗ ತಾರೆ. ಇವರುಗಳು ಬ್ರಹ್ಮವಾಯುಗಳಿಗೆ ಪ್ರಿಯರಾದವರು. ಸರ್ವಕರ್ಮಗಳಲ್ಲಿ–ಸಮಸ್ತ ಪ್ರಾಣಿಗಳ ಏಕಾದಶೇಂದ್ರಿಯಗಳಲ್ಲಿ ಆಯಾ ಇಂದ್ರಿಯಜನಿತ ಕರ್ಮಗಳಲ್ಲಿ ಈ ದೇವತೆ ಗಳನ್ನು ಅನುಸಂಧಾನಮಾಡಬೇಕು, ಮತ್ತು ಸರ್ವೇಂದ್ರಿಯ ನಿಯಾಮಕತ್ವ ವಾಯು ದೇವರಿಗೆ ಇರೋದಾಗಿ ಅದೆ. ಆದ್ದರಿಂದ ಸರ್ವೇಂದ್ರಿಯಗಳಲ್ಲಿ ಆಯಾ ಇಂದ್ರಿಯಜನಿತ ಸರ್ವ ಕರ್ಮಗಳಲ್ಲಿ ತತ್ತ್ವದೇವತಾಂತರ್ಗತದಲ್ಲೂ, ಹಾಂಗೆ ಆಯಾ ಕರ್ಮಾಂತರ್ಗತ ರಾದ ದೇವತಾಂತರ್ಗತದಲ್ಲೂ, ವಾಯುದೇವರನ್ನ ಚಿಂತಿಸಿ ತದಂತರ್ಗತ ಪರಮಾತ್ಮನ್ನ ಚಿಂತಿಸಬೇಕೆಂತ ತಾತ್ಪರ್ಯ.

**ಈ ದಿವೌಕಸರಂತೆ ಕಲಿ ಮೊದ ।**
**ಲಾದ ದೈತ್ಯರು ಸರ್ವದೇಹದಿ ।**
**ತೋದಕರು ತಾವಾಗಿ ವ್ಯಾಪಾರಗಳ ಮಾಡುವರು ॥**
**ವೇಧನಂದದಿ ಕಲಿಯುಹಂಕಾ ।**
**ರಾಧಿಪಾಧಮ ಮಧುಕುಕೈಟಭ ।**
**ಕ್ರೋಧಿಶಂಬರಮುಖರು ಮನಸಿಗೆ ಸ್ವಾಮಿಯೆನಿಸುವರು ॥ ೨ ॥**

ದೇವತೆಗಳೋಪಾದಿಯಲ್ಲಿ ಇಂದ್ರಿಯಾಭಿಮಾನಿಗಳಾದ ದೈತ್ಯರನ್ನ ಹೇಳತಾರೆ.

ಈ ದಿವೌಕಸರಂತೆ–ಈ ಉಕ್ತರಾದ ಭಗವದ್ಭಕ್ತರಾದ ಬ್ರಹ್ಮಾದಿ ಇಂದ್ರಿಯಾಭಿಮಾನಿ ದೇವತೆಗಳೋಪಾದಿಯಲ್ಲಿ, ಕಲಿ ಮೊದಲಾದ ದೈತ್ಯರು–ಭಗವದ್ದ್ವೇಷಿಗಳಾದ, ಭಗವಂತನಲ್ಲಿ ಭಕ್ತಿಮಾಡೋದರಲ್ಲಿ ಜೀವೋತ್ತಮರಾದ ವಾಯುದೇವರು ಹ್ಯಾಂಗೋ, ತದ್ವತ್, ಭಗವಂತನಲ್ಲಿ ದ್ವೇಷಮಾಡೋದರಲ್ಲಿ ಉತ್ತಮನಾದವ, ಕಲಿ. ಇವಗೆ ಮಿಂಚಿ ದ್ವೇಷಮಾಡೋವರು ಅಸುರರ ಗಣದಲ್ಲಿ ದಾರೂ ಇಲ್ಲ. ಇಂಥಾ ನೀಚನಾದ ಕಲಿ ಪುರುಷನೇ ಮೊದಲಾದ ದೈತ್ಯರು, ಸರ್ವದೇಹದಿ–ಸಮಸ್ತರಾದ ಪ್ರಾಣಿಗಳ ದೇಹಗಳಲ್ಲಿ ಇರುವ ಇಂದ್ರಿಯಗಳಿಗೆ, ತೋದಕರು–ಪ್ರೇರಕರು, ತಾವಾಗಿ–ಸನ್ಮಾರ್ಗಪ್ರೇರಕರು ದೇವತೆಗಳು ಹ್ಯಾಂಗೋ, ದುರ್ಮಾರ್ಗಪ್ರೇರಣೆಗೆ ತಾವುಗಳು ಹಾಂಗೆ ಅಭಿಮಾನಿಗಳಾಗಿ, ವ್ಯಾಪಾರಗಳ ಮಾಡುವರು–ಆಯಾ ಇಂದ್ರಿಯಾಂತರ್ಗತರಾಗಿ ಇದ್ದು, ತಮ್ಮಂತರ್ಗತ ತಮ್ಮ ಇಂದ್ರಿಯನಿಯಾಮಕರಾದ ದೇವತೆಗಳ ದ್ವಾರಾ ನಿಯಮ್ಯರಾಗಿ ದುಷ್ಟವ್ಯಾಪಾರಗಳ ಮಾಡುವರು. ತದ್ದ್ವಾರಾ ಜೀವರು ದೇಹೇಂದ್ರಿಯಾದಿಗಳಿಂದ ಮಾಡತಾರೆ. ದೇವತೆಗಳೋಪಾದಿ ದೈತ್ಯರು ದೇವತೆಗಳ ದ್ವಾರಾ ಅಂತರ್ನಿಯಾಮಕರಾಗಿ, ಜೀವಗೆ ನಿಯಾಮಕರಾಗತಾರೆ. ವೇಧನಂದದಿ ಕಲಿಯು–ಬ್ರಹ್ಮದೇವರೋಪಾದಿಯಲ್ಲಿ ಕಲಿ ಎಂದರೆ, ಮುಕ್ತಿಯೋಗ್ಯರ ಗಣಕ್ಕೆ ಬ್ರಹ್ಮದೇವರು ಹ್ಯಾಂಗೋ ತದ್ವತ್, ತಮೋಯೋಗ್ಯರ ಗಣಕ್ಕೆ ಕಲಿ ಯಜಮಾನ ಎಂತ ತಾತ್ಪರ್ಯ. ಬ್ರಹ್ಮದೇವರಲ್ಲಿ ನವವಿಧ ಭಕ್ತಿ ಅದೆ, ಕಲಿಯಲ್ಲಿ ನವವಿಧ ದ್ವೇಷವದೆ. ಅಧಮ–ಕಲಿಗಿಂತಲೂ ಕಡಿಮಿ ಆದವರು, ಅಹಂಕಾರಾಧಿಪ–ಅಹಂಕಾರತತ್ತ್ವಕ್ಕೆ ಅಧಿಪರಾದ ಗರುಡ, ಶೇಷ, ರುದ್ರರಿಗೆ ಸಮಾನರಾದ ದೈತ್ಯರು, ಮಧು ಕುಕೈಟಭ ಕ್ರೋಧಿ–ಮಧುನಾಮಕನು, ದುಷ್ಟ ಕೈಟಭನಾಮಕ ದೈತ್ಯ, ಕ್ರೋಧಿ ನಾಮಕ ದೈತ್ಯ ಈ ಮೂರು ಮಂದಿ ಶೇಷಾದಿ ಮೂರು ಮಂದಿಗೆ ಸಮಾನರು. ದೇಹಗತ ವೈಕಾರಿಕಾದಿ ಅಹಂಕಾರತ್ರಯಕ್ಕೆ ಅಭಿಮಾನಿಗಳು, ಶಂಬರ–ಶಂಬರಾಸುರ, ಇಂದ್ರಗೆ ಸಮಾನನು. ಇಂದ್ರದೇವರು ಮನಸ್ಸಿಗೆ ಅಭಿಮಾನಿ. ಈ ಶಂಬರಾಸುರ, ಮನಸ್ಸಿಗೆ–ಮನೋಇಂದ್ರಿಯಕ್ಕೆ ಅಭಿಮಾನಿಯಾದವನು. ಮುಖರು–ಇನ್ನೂ ಅನೇಕ ಮಂದಿ ದೈತ್ಯರು, ಸ್ವಾಮಿಯೆನಿಸುವರು–ಆಯಾ ಇಂದ್ರಿಯಗಳಿಗೆ ದೇವತೆಗಳು ಹ್ಯಾಂಗೆ ನಿಯಾಮಕರೋ ತದ್ವತ್, ದೈತ್ಯರು ಕೂಡ ಇಂದ್ರಿಯಾಭಿಮಾನಿಗಳು ಎಂತ ತಾತ್ಪರ್ಯ.

**ದೇವತೆಗಳೋಪಾದಿ ನಿತ್ಯದಿ ।**
**ಏವಮಾದಿ ಸ್ವನಾಮದಿಂದಲಿ ।**
**ಯಾವದಿಂದ್ರಿಯಗಳೊಳು ವ್ಯಾಪಾರಗಳ ಮಾಡುವರು ॥**
**ಸೇವಕರ ಸೇವಾನುಗುಣ ಫಲ ।**
**ವೀವ ನೃಪನಂದದಲಿ ತನ್ನ ಸ್ವ ।**
**ಭಾವಸ್ವಾತಂತ್ರ್ಯ ವಿಭಾಗವ ಮಾಡಿ ಕೊಟ್ಟ ಹರಿ ॥ ೩ ॥**

ದೇವತಾನಾಮಗಳಿಂದ ದೈತ್ಯರು ಸರ್ವೇಂದ್ರಿಯನಿಯಾಮಕರೆಂದು ಹೇಳುತಾರೆ.

ನಿತ್ಯದಿ – ಪ್ರತಿದಿನದಲ್ಲೂ, ದೇವತೆಗಳೋಪಾದಿ – ಇಂದ್ರಿಯನಿಯಾಮಕರಾದ ದೇವತೆಗಳೋಪಾದಿಯಲ್ಲಿ, ಬ್ರಹ್ಮ, ವಾಯು, ಇಂದ್ರ, ಕಾಮ ಎಂಬ, ಏವಂ–ಈ ಪ್ರಕಾರ, ಆದಿ ಸ್ವನಾಮದಿಂದಲಿ–ಬ್ರಹ್ಮಾದಿ ದೇವತಾನಾಮಗಳಿಂದ ಹ್ಯಾಂಗೊ ಹಾಂಗೆ, ದೇವಶಬ್ದದಿಂದ ದೈತ್ಯರೂ ಕರಿಸಿದವರಾಗಿ, ಯಾವತ್–ಸಮಸ್ತರಾದ ಋಜುಗಣ ವ್ಯತಿರಿಕ್ತ ಸಮಸ್ತ ಪ್ರಾಣಿಗಳ, ಇಂದ್ರಿಯಗಳೊಳು – ದೇಹೇಂದ್ರಿಯಾದಿಗಳಲ್ಲಿದ್ದು, ವ್ಯಾಪಾರಗಳ ಮಾಡುವರು–ತಮ್ಮ ತಮ್ಮ ಕೆಲಸಗಳ ದೇವತಾನಿಯಮನದಿಂದ ಮಾಡುವರು. ತದ್ದ್ವಾರಾ, ಜೀವ, ದೇಹದಿಂದ ಮಾಡುವನು. ಸತ್ಕಾರ್ಯವನ್ನ ಪರಮಾತ್ಮ ದೇವತೆಗಳ ದ್ವಾರಾ ಮಾಡಸತಾನೆ. ದುಷ್ಕಾರ್ಯವನ್ನ ಪರಮಾತ್ಮ ದೇವತೆಗಳ ದ್ವಾರಾ ದೈತ್ಯರಿಗೆ ನಿಯಮನಮಾಡಿ ತದ್ದ್ವಾರಾ ಮಾಡಸತಾನೆ. ತದ್ದ್ವಾರಾ ಜೀವ ಮಾಡತಾನೆ. ಎಂದರೆ ದೇವದೈತ್ಯರು ಕ್ಷೀರನೀರವತ್ ಕಲತು ಇರ್ತಾರೆ. ಇದ್ದರೂ ಕ್ಷೀರವತ್ ದೇವತೆಗಳು ಪ್ರಾಚುರ್ಯರು. ಚಲಿಸಬೇಕಾದರೆ, ಕ್ಷೀರ ನೀರು ಎರಡೂ ಚಲನವಾಗತವೆ. ತದ್ವತ್, ದೇವದೈತ್ಯರ ದ್ವಾರಾ ಇಂದ್ರಿಯವ್ಯಾಪಾರ. ಆ ವ್ಯಾಪಾರದಲ್ಲಿ ದೈತ್ಯರ ವ್ಯಾಪಾರ, ದೇವತೆಗಳಿಗೆ ಅನಂಗೀಕಾರ; ದೇವತೆಗಳ ವ್ಯಾಪಾರ, ದೈತ್ಯರಿಗೆ ಅನಂಗೀಕಾರ, ಇಂಥಾ ದೇವತೆಗಳೂ ದೈತ್ಯರೂ ಮಾಡಿಸೋಣ ಎಂಬುದು, ಸೇವಕರ–ಬ್ರಹ್ಮದೇವರ ಆರಭ್ಯ ತೃಣಾಂತ ತ್ರಿವಿಧ ಜೀವರೂ ಸೇವಕರು ಎಂದರೆ ಸರ್ವೋತ್ತಮರಲ್ಲ, ಪರಮಾತ್ಮಗೆ ಭೃತ್ಯರು. ಇಂಥಾ ಸೇವಕರ, ಸೇವ–ಅವರವರ ಅನಾದಿಸ್ವರೂಪಯೋಗ್ಯತಾವನ್ನನುಸರಿಸಿ ದಾಸೋಹಂ ಎಂತಲೋ, ಸೋಹಂ ಎಂತಲೋ ಉಭಯಮಿಶ್ರದಿಂದಲೋ ಮಾಡತಕ್ಕ ಸೇವಾಕ್ಕೆ, ಅನುಗುಣ–ಅನುಸರಿಸಿದ, ಫಲವೀವ–ಲಿಂಗಭಂಗಾನಂತರ ಮಿಥ್ಯಾವಾದಿಗೆ ದುಃಖ, ಮಿಶ್ರಜ್ಞಾನಿಗೆ ಸುಖದುಃಖ, ಮುಕ್ತಿಯೋಗ್ಯರಿಗೆ ಸುಖ, ಈ ಪ್ರಕಾರ ಸ್ವರೂಪ ಯೋಗ್ಯತಾಕ್ಕೆ ಅನುಸರಿಸಿದ ತ್ರಿವಿಧ ಸೇವಾಕ್ಕೆ ತ್ರಿವಿಧವಾಗಿ ಪರಮಾತ್ಮ ಫಲ ಕೊಡತಾನೆ. ಹರಿ–ಪಾಪಪರಿಹಾರಕನಾದ ಶ್ರೀ ನಾರಾಯಣದೇವರು, ತನ್ನ ಸ್ವಭಾವಸ್ವಾತಂತ್ರಿಯ–ತನ್ನ ಸ್ವರೂಪಭೂತವಾದ ತನಗೆ ಅಭಿನ್ನವಾದ ಸ್ವಾತಂತ್ರ್ಯಗುಣವನ್ನ, ವಿಭಾಗವನಮಾಡಿ–ಅಂಶದಿಂದ ಪ್ರತ್ಯೇಕವಾಗಿ ತೆಗೆದು, ಅದರಲ್ಲಿ ಅನೇಕಪ್ರಕಾರ ವಿಭಾಗಮಾಡಿ, ನೃಪ ನಂದದಲಿ–ಬಾಹ್ಯದಲ್ಲಿ, ರಾಜನು ತನ್ನ ರಾಜ್ಯತಂತ್ರಾಧಿಕಾರವನ್ನು ಭೃತ್ಯರಾದ ಪ್ರಜರಿಗೆ ಅವರವರ ಯೋಗ್ಯತಾನುಸಾರ ಕೊಟ್ಟು, ತದ್ದ್ವಾರಾ ತನ್ನ ರಾಜ್ಯತಂತ್ರ ನಡಿಸುವ ರಾಜನೋಪಾದಿಯಲ್ಲಿ, ಕೊಟ್ಟ–ಮಹಾರಾಜನಾದ ಶ್ರೀಪರಮಾತ್ಮ ಭೃತ್ಯರಾದ ತ್ರಿವಿಧ ಜೀವರಿಗೆ ತನ್ನ ಸ್ವಕೀಯವಾದ ಸ್ವಾತಂತ್ರ್ಯವನ್ನ ವಿಭಾಗಮಾಡಿ ಕೊಡೋವನಾಗಿದ್ದಾನೆ. ತದ್ದ್ವಾರಾ ಜಗತ್ಕಾರ್ಯ ನಡಿಸುತ್ತಾನೆ. ಜೀವರಾದವರಲ್ಲಿ ಇಟ್ಟ ಪರಮಾತ್ಮನ ಸ್ವಾತಂತ್ರ್ಯ ಅಲ್ಪವಾದರೂ, ಮಹತ್ತಾದರೂ, ಎಲ್ಲಾ ಪೂರ್ಣಗಳಾದ್ದರಿಂದ ಕೆಲವರಲ್ಲಿ ಅಲ್ಪವಿಟ್ಟ, ಕೆಲವರಲ್ಲಿ ಬಹಳವಿಟ್ಟ, ಎಂಬುದು ಜೀವರ ಯೋಗ್ಯತಾ, ಅಲ್ಪ, ಮಹತ್ ಎರಡುವಿಧ ಇರೋಣದರಿಂದ ಆಯಾಮಾತ್ರವೇ ಅಭಿವ್ಯಕ್ತಿ, ಎಂತ ತಾತ್ಪರ್ಯ. ಅಷ್ಟೇ

ಹೊರ್ತು, ಪರಮಾತ್ಮನ ಗುಣಗಳಲ್ಲಿ ಅಲ್ಪಮಹತ್ತುಗಳೆಂಬ ವ್ಯತ್ಯಾಸವಿಲ್ಲ. ಎಲ್ಲಾ ಮಹತ್ತುಗಳೆ, ಅಪರಿಚ್ಛಿನ್ನಗಳೆಂತವೇ ಸಿದ್ಧವು.

**ಅಗಣಿತಸ್ವಾತಂತ್ರ್ಯವ ನಾಲ್ ।**
**ಬಗೆ ವಿಭಾಗವ ಮಾಡಿ ಒಂದನು ।**
**ತೆಗೆದು ದಶವಿಧಗೈಸಿ ಪಾದರೆ ಪಂಚಪ್ರಾಣನಲಿ ॥**
**ಮೊಗಚತುಷ್ಟಯನೊಳು ಸಪಾದೈ ।**
**ದುಗುಣವಿರಿಸಿದ ಮತ್ತೆ ದಶವಿಧ ।**
**ಯುಗಳ ಗುಣವನು ಮಾಡಿ ಎರಡು ಸದಾಶಿವನೊಳಿಟ್ಟ ॥ ೪ ॥**

ಸ್ವಗತಸ್ವಾತಂತ್ರ್ಯವಿಭಾಗಕ್ರಮವನ್ನ ಹೇಳತಾರೆ.

ಅಗಣಿತ–ಗಣನೆಗೆ ಸಿಲುಕದ ಶ್ರೀ ಪರಮಾತ್ಮನ, ಹಾಗೂ ಪಾರವಿಲ್ಲದ ತನ್ನ ಸ್ವರೂಪಭೂತವಾದ ಸ್ವಾತಂತ್ರ್ಯವ–(ದತ್ತಸ್ವಾತಂತ್ರ್ಯ, ಸ್ವಗತಸ್ವಾತಂತ್ರ್ಯ, ಸರ್ವ ಸ್ವಾತಂತ್ರ್ಯ ಈ ಮೂರರ ಒಳಗೆ ದತ್ತಸ್ವಾತಂತ್ರ್ಯವಿಭಾಗ ೧೬ನೇ ಸಂಧಿಯಲ್ಲಿ ಹೇಳಲ್ಪಟ್ಟಿತು. ಈಗ ಸ್ವಗತಸ್ವಾತಂತ್ರ್ಯ ಹೇಳತಾರೆ.) ದತ್ತಸ್ವಾತಂತ್ರ್ಯಕಾರ್ಯ ಅಪಕ್ವಕಾಲದಲ್ಲಿ, ಸ್ವಗತಸ್ವಾತಂತ್ರ್ಯದ ಕಾರ್ಯ ಪಕ್ವಾಪಕ್ವಕಾಲದಲ್ಲಿ. ಎರಡನೇದಾದ ಈ ಸ್ವಗತಸ್ವಾತಂತ್ರ್ಯ ಎಂಬುದು ದತ್ತಸ್ವಾತಂತ್ರ್ಯವಿಭಾಗದಲ್ಲಿ ತನ್ನಲ್ಲಿ ೧೩೨–೩/೪ ಗುಣ ಇಟ್ಟುಕೊಂಬೋವನಾಗಿದ್ದಾನೆ. ಇದರಲ್ಲಿ ಒಂದು ಸ್ವಾತಂತ್ರ್ಯ ಗುಣವನ್ನ ತೆಗೆದು, ನಾಲ್‌ಬಗೆ ವಿಭಾಗವ ಮಾಡಿ–೧೩೨–೩/೪ ಸ್ವಗತ, ಈ ಗುಣದೊಳಗೆ ಒಂದು ಗುಣವನ್ನ ತೆಗೆದು, ಈ ಒಂದರನ್ನ ನಾಲ್ಕು ವಿಭಾಗವ ಮಾಡಿ, ಒಂದನು ತೆಗೆದು–ವಿಭಾಗಮಾಡಿದ ನಾಲ್ಕರಲ್ಲಿ ಒಂದು ಭಾಗವನ್ನು ತೆಗೆದು ಕೊಂಡು, ದಶವಿಧಗೈಸಿ–ಈ ತೆಗೆದುಕೊಂಡ ನಾಲ್ಕರಲ್ಲಿ ಒಂದು ಭಾಗವನ್ನ ಹತ್ತುಪ್ರಕಾರ ವಿಭಾಗವ ಮಾಡಿ, ಪಾದರೆ–ಪಾದ+ಅರೆ, ಹತ್ತರಲ್ಲಿ ಪಾದಸಾಂಕೇತ ಎರಡೂವರಿ, ಅರೆ ಪಾದಕ್ಕೆ ಒಂದೂಕಾಲು, ಅಂತು ಮೂರೂಮುಕ್ಕಾಲು, ಪಂಚಪ್ರಾಣನಲಿ–ಪ್ರಾಣಾಪಾನಾದಿ ಪಂಚರೂಪಗಳಿಗೆ ಮೂಲರೂಪನಾದ ಶ್ರೀಮುಖ್ಯಪ್ರಾಣದೇವರಲ್ಲಿ ಮೂರೂ ಮುಕ್ಕಾಲು ಗುಣವನ್ನ ಇಡೋವನಾಗಿದ್ದಾನೆ. ಮೊಗಚತುಷ್ಟಯನೊಳು–ಚತುರ್ಮುಖ ಬ್ರಹ್ಮದೇವರಲ್ಲಿ, ಸಪಾದೈದುಗುಣವ–ಪಾದದಿಂದ ಸಹಿತವಾದ ಐದು ಗುಣ, ಅಂದರೆ ಐದೂಕಾಲು ಗುಣ, ಇರಿಸಿದ–ಇಡೋವನಾದ. ಅಂತು ಬ್ರಹ್ಮವಾಯುಗಳಲ್ಲಿ ಇಟ್ಟದ್ದು ಒಂಭತ್ತು ಗುಣವಾಯಿತು. ನಾಲ್ಕರಲ್ಲಿ ಒಂದು ಭಾಗ ತೆಗೆದುಕೊಂಡು, ಅದನ್ನು ಹತ್ತು ಭಾಗ ಮಾಡಿ, ಬ್ರಹ್ಮವಾಯುಗಳಲ್ಲಿ ಇಟ್ಟ ಒಂಭತ್ತು ಹೋಗತಾ ನಿಂತದ್ದು ಒಂದು ಗುಣ. [ಆಕ್ಷೇಪ :– ಪಾದರೆ ಪಂಚಪ್ರಾಣನಲ್ಲಿ ಎಂಬ ಕಡಿ, ಪ್ರಾಣದೇವರಲ್ಲಿ ೫–೧/೮ ಗುಣ ಇಟ್ಟ ಎಂತ ಹೇಳೋದಕ್ಕೆ ಅವಕಾಶವಿದೆ. ಹಾಂಗೆ ಹೇಳಿದರೆ ೫–೧/೪ ಬ್ರಹ್ಮನಲ್ಲಿ, ೫–೧/೨ ವಾಯುದೇವರಲ್ಲಿ ಹೇಳಿದರೆ ೧೦–೩/೪ ಆಗತದೆ. ಮ್ಯಾಲೆ ವಿಭಾಗಮಾಡಿದ ೧೦ಕ್ಕೆ

ಹೆಚ್ಚಾಗಿ, ವಿಭಾಗ ವ್ಯತ್ಯಾಸವಾಗತದೆ. ಆದ್ದರಿಂದ ವಾಯುದೇವರಲ್ಲಿ ೩-೩/೪ ಎಂತಲೇ ತಾತ್ಪರ್ಯ.] ಮತ್ತೆ ಹತ್ತರಲ್ಲಿ ಅವಶಿಷ್ಟ ಉಳದದ್ದು, ಒಂದು ಗುಣ. ಈ ಒಂದು ಗುಣ ದೊಳಗೆ ನಾಲ್ಕು ವಿಭಾಗವ ಮಾಡಿ ಅದರಲ್ಲಿ ಒಂದು ತೆಗೆದು ದಶವಿಭಾಗವ ಮಾಡಿದ್ದು ಹೋಗತಾ ಉಳದದ್ದು ಮೂರು, ಅಂತು ನಾಲ್ಕು. ಈ ನಾಲ್ಕರನ್ನ, ದಶವಿಧ-ಹತ್ತು ಪ್ರಕಾರ ವಿಭಾಗ ಮಾಡಿ, ಯುಗಳಗುಣವನು ಮಾಡಿ-ಯುಗಳ ಎಂದರೆ ಎರಡು. ಎರಡು ಹತ್ತುಗಳು, ಇಪ್ಪತ್ತು ಗುಣಗಳ ಮಾಡೋವನಾದ ಎಂದರೆ, ನಾಲ್ಕು ಗುಣವನ್ನ ಒಂದೊಂದರನ್ನ ಐದು ಪ್ರಕಾರ ವಿಭಾಗ ಮಾಡಿ, ಐದು ನಾಲ್ಕುಗಳು ಅಂದರೆ ಇಪ್ಪತ್ತು ಗುಣಗಳ ಮಾಡಿದ. ಈ ಇಪ್ಪತ್ತರಲ್ಲಿ, ಎರಡು ಸದಾಶಿವನೊಳಿಟ್ಟ-ಈ ಎರಡು ಗುಣ ರುದ್ರದೇವರಲ್ಲಿ ಇಡೋವನಾದ. ಅವಶಿಷ್ಟ ಇರೋದು ಹದಿನೆಂಟು ಗುಣ.

**ಪಾಕಶಾಸನಕಾಮರೊಳು ಸಾ ।**
**ರ್ಧೈಕವಿಟ್ಟ ದಶೇಂದ್ರಿಯರ ಸುದಿ ।**
**ವೌಕಸಾದ್ಯರೊಳೊಂದು ಯಾವಜ್ಜೀವರೊಳಗೊಂದು ॥**
**ನಾಲ್ಕುವರೆ ಕಲ್ಯಾದಿದೈತ್ಯಾ ।**
**ನೀಕಕಿತ್ತನು ಎರಡು ತ್ರಿವಿಧ ವಿ ।**
**ವೇಕಗೈಸಿಂದಿರೆಗೆ ಒಂದೆರಡಾತ್ಮ ತನ್ನೊಳಗೆ ॥ ೫ ॥**

ಅವಶಿಷ್ಟ ವಿಭಾಗವನ್ನ ಹೇಳತಾರೆ.

ಪಾಕಶಾಸನ-ಇಂದ್ರದೇವರು, ಕಾಮರೊಳು-ಮನ್ಮಥನು, ಈ ಉಭಯರೊಳು, ಸಾರ್ಧೈಕವಿಟ್ಟ-ಅರ್ಧದಿಂದ ಸಹಿತವಾದ, ಏಕ ಎಂದರೆ ಒಂದು, ಅಂತು (೧-೧/೨) ಒಂದೂವರಿ ಇಡೋವನಾದ. ದಶೇಂದ್ರಿಯರ-ದಶೇಂದ್ರಿಯಗಳಿಗೆ ಅಭಿಮಾನಿಗಳಾದ, ಸುದಿವೌಕಸಾದ್ಯರೊಳೊಂದು-ದೇವತೆಗಳಾದವರೊಳು ಒಂದು (ಅಹಂಕಾರ ಪ್ರಾಣದಾ ರಾಭ್ಯ ಪುಷ್ಕರಾಂತವರಿಗೂ ಒಂದು ಗುಣ ಎಂತ ಅರ್ಥ), ಯಾವಜ್ಜೀವರೊಳಗೊಂದು- ಆಜಾನಜರ ಆರಂಭಮಾಡಿ ತೃಣಾಂತ ಈ ಸಜ್ಜೀವರಲ್ಲಿ ಒಂದು, ಪೂರ್ವೋಕ್ತ ಯಾವತ್ತೂ ವಿಭಾಗ ಮುಕ್ತಿಯೋಗ್ಯರಲ್ಲಿ ಎಂತ ತಿಳಕೋತಕ್ಕದ್ದು ನಾಲ್ಕುವರೆ- (೪-೧/೨) ನಾಲ್ಕುವರೆ ಗುಣ, ಕಲ್ಯಾದಿದೈತ್ಯಾನೀಕಕಿತ್ತನು (ಆದಿ ಶಬ್ದದಿಂದ ಅಸುರಗಣ, ನಿತ್ಯಸಂಸಾರಿಗಣ, ಈ ಉಭಯರೂ ಗ್ರಾಹ್ಯ) ಕಲ್ಯಾದಿ ದೈತ್ಯರ ಸಮೂಹಕ್ಕೆ ಕೊಡೋವ ನಾದನು. ಎರಡು-ಲಕ್ಷ್ಮೀನಾರಾಯಣರು ಇಬ್ಬರಿಗೆ ಭಾಗವಾಗಬೇಕಾದ್ದು ಎರಡು ಉಳದದೆ, ಇಬ್ಬರು ಉಳದಿದ್ದಾರೆ : ೧೮ರ ಒಳಗೆ ಈಗ ಹೇಳಿದ್ದು ಹೋಗತಾ, ಉಳದದ್ದು ೧೦ ಗುಣ. ತ್ರಿವಿಧವಿವೇಕಗೈಸಿ-ಈ ಹತ್ತು ಗುಣವನ್ನ ಮೂರು ಪ್ರಕಾರ ವಿಭಾಗ ಮಾಡಿ, ಇಂದಿರೆಗೆ ಒಂದು-ಲಕ್ಷ್ಮೀದೇವೇರಿಗೆ ಒಂದು, ಆತ್ಮ-ತನ್ನೊಳಗೆ ಶ್ರೀ ಪರಮಾತ್ಮ ನಲ್ಲಿ, ಎರಡು-ಎರಡು ಭಾಗವನ್ನ, ತನ್ನೊಳಗೆ-ಈ ತನ್ನ ಗುಣ ತನ್ನೊಳಗೆ ಇಟ್ಟು ಕೊಳ್ಳೋವನಾದ ಎಂತ ತಾತ್ಪರ್ಯ. ಈ ಮೊತ್ತಕ್ಕೆ ವಿವರ ಮಾಡತೇವು.

ನೂರಾ ಮೂವತ್ತೆರಡು ಮುಕ್ಕಾಲು ಗುಣ (೧೩೨-೩/೪) ದತ್ತಸ್ವಾತಂತ್ರ್ಯ, ದೇವರು ತನ್ನಲ್ಲಿ ಇಟ್ಟುಕೊಂಡಿರೋದು.

ಇದರಲ್ಲಿ ಒಂದು ಗುಣ ತೆಗೆದುಕೊಂಡು, ಈ ಒಂದರನ್ನ ನಾಲ್ಕುಭಾಗ ಮಾಡಿದ.

ಈ ನಾಲ್ಕರಲ್ಲಿ ಒಂದು ತೆಗೆದುಕೊಂಡ. ಅವಶಿಷ್ಟ ಇರೋದು ಮೂರು. (ಒಟ್ಟು ನಾಲ್ಕು).

ಈ ಒಂದರನ್ನ ಹತ್ತು ಭಾಗ ಮಾಡಿದ.

ಈ ಹತ್ತರನ್ನ ದಾರು ದಾರಿಗೆ ಕೊಟ್ಟನೆಂದರೆ,

| | |
|---|---|
| ವಾಯುದೇವರಿಗೆ | ೩-೩/೪ ಗುಣ. |
| ಬ್ರಹ್ಮದೇವರಿಗೆ | ೫-೧/೪ ಗುಣ. |
| ಅಂತು (ಒಂಭತ್ತು ಗುಣ) | ೯ ಗುಣ. |

| | |
|---|---|
| ಈ ಹತ್ತರಲ್ಲಿ ಒಂಬತ್ತು ಹೋಗತಾ ಬಾಕಿ ಉಳದದ್ದು | ೧ |
| ಮ್ಯಾಲಿನ ನಾಲ್ಕರಲ್ಲಿ ಅವಶಿಷ್ಟ ಉಳಿದಿರೋದು | ೩ |
| ಅಂತು | ೪ |

ನಾಲ್ಕರಲ್ಲಿ ಒಂದೊಂದಕ್ಕೆ ಐದು ಪ್ರಕಾರ ವಿಭಾಗ ಮಾಡಿ

ಐದು ನಾಲ್ಕುಗಳು (೫ × ೪ = ೨೦) ಇಪ್ಪತ್ತಾಯಿತು.

ಈ ಇಪ್ಪತ್ತರಲ್ಲಿ ವಿಭಾಗ :-

| | | |
|---|---|---|
| ರುದ್ರದೇವರಿಗೆ | — | ೨ ಗುಣ |
| ಇಂದ್ರಕಾಮರಿಗೆ | — | ೧-೧/೨ ಗುಣ |
| ದಶೇಂದ್ರಿಯಾಧಿಪರೊಳಗೆ | — | ೧ ಗುಣ |
| ಯಾವತ್ತೂ ಸಜ್ಜೀವರೊಳಗೆ | — | ೧ ಗುಣ |
| ಕಲ್ಯಾದಿ ದೈತ್ಯರಿಗೆ | — | ೪-೧/೨ ಗುಣ |
| | ಅಂತು | ೧೦ ಗುಣ |

ಇಪ್ಪತ್ತರಲ್ಲಿ ಹತ್ತು ಹೋಗತಾ ಉಳದದ್ದು ಹತ್ತು ;

ಈ ಹತ್ತರನ್ನ ಮೂರು ಭಾಗ ಮಾಡಿದ.

ಇದರ ವಿಭಾಗ :-

| | | |
|---|---|---|
| ರಮಾದೇವೇರಲ್ಲಿ ಇಟ್ಟದ್ದು | — | ೧ ಭಾಗ |
| ತನ್ನಲ್ಲೇ ಇಟ್ಟುಕೊಂಡದ್ದು | — | ೨ ಭಾಗ |
| | ಅಂತು | ೩ ಭಾಗ |

ಸರಿ ಆಯಿತು.

**ವಿಶೇಷಾರ್ಥ :**–ಪರಮಾತ್ಮ ಜೀವನ ಅನಾದಿಸ್ವರೂಪ ಸ್ವಾತಂತ್ರ್ಯದಲ್ಲಿ ಅನಾದಿಯಿಂದ ಸ್ವಾತಂತ್ರ್ಯಶಬ್ದವಾಚ್ಯನಾಗಿ ಇದ್ದ ಕಾಲಕ್ಕೂ, ಈ ಸ್ವಾತಂತ್ರ್ಯಶಬ್ದವಾಚ್ಯನಾದ ಪರಮಾತ್ಮನ ಪ್ರೇರಣೆ, ಮೊಕ್ಷದಲ್ಲಿ ಹೊರ್ತು ಸ್ಥಿತಿಕಾಲದಲ್ಲಿ ಕೂಡಲಾರದು. ಆದ್ದರಿಂದ ಸ್ಥಿತಿ ಕಾಲ ವ್ಯಾಪಾರಕ್ಕಾಗಿ, ತಾನು ಪ್ರತ್ಯೇಕವಾಗಿ ಸ್ವಾತಂತ್ರ್ಯವಿಭಾಗ ಮಾಡಿಕೊಟ್ಟ ಎಂತ ಹೇಳೋಣವಾಯಿತು. ಏಕೆ ಎಂದರೆ, ಸ್ವರೂಪ ದೇಹದ ಕಾರ್ಯ ದಾವಾಗ ನಡೆಯುತದೋ, ತನ್ನಿಷ್ಟಗಳೆಲ್ಲಾ ಆಗಲೇ ನಡಿಯಬೇಕು. ತದ್ವತ್, ಜೀವಸ್ವರೂಪ ಭೂತವಾದ ಪರಾಧೀನಸ್ವಾತಂತ್ರ್ಯದ ಕಾರ್ಯ, ಮೋಕ್ಷದಲ್ಲಿ ನಡಿಯಬೇಕು; ಸ್ಥಿತಿ ಕಾಲದಲ್ಲಿ ಕೂಡಲಾರದು. ಆದ್ದರಿಂದ, ಜೀವಗೆ ಸ್ಥಿತಿಕಾಲದಲ್ಲಿ ಸ್ವರೂಪಭೂತ ಸ್ವಾತಂತ್ರ್ಯಕ್ಕೆ ಅನ್ಯವಾದ ಸ್ವಾತಂತ್ರ್ಯ, ಪ್ರತ್ಯೇಕ ಹೇಳಬೇಕು ಅದು ದಾವದೆಂದರೆ, ಜಡ ಸ್ವಾತಂತ್ರ್ಯ ಒಂದು ಇರೋದಾಗಿ ಅದೆ. ಅದು ಎಲ್ಲಿ ಅದೆ ಎಂದರೆ, ಲಿಂಗದೇಹದ ಪ್ರಥಮ ಪರಿಚ್ಛೇದಗತ ಮನದಲ್ಲಿ; ಅನಾದಿಯಿಂದ ಇರತಕ್ಕ ಜಡಮನಸ್ಸಿನಲ್ಲಿ ಜಡಸ್ವಾತಂತ್ರ್ಯ ಶಕ್ತಿ ಅದೆ. ಆ ಸ್ವಾತಂತ್ರ್ಯ, ಜ್ಞಾನೇಚ್ಛಾಕ್ರಿಯಾಶಕ್ತಿಗಳಿಂದ ಯುಕ್ತವಾಗಿ ಅದೆ, ಅದು ಜಡ. ಅದರಲ್ಲಿ ಸೃಷ್ಟಿಪ್ರಾರಂಭದಲ್ಲಿ ಜೀವನ ಮನಸ್ಸು, ಲಿಂಗಗತ ಜಡಮನಸ್ಸಿನಲ್ಲಿ ಜೀವನ ಪರಾಧೀನ ಸ್ವಾತಂತ್ರ್ಯಶಕ್ತಿ, ಲಿಂಗಗತ ಜಡಮನಗತ ಜಡಸ್ವಾತಂತ್ರ್ಯಶಕ್ತಿಯಲ್ಲಿ ಪ್ರವೇಶಮಾಡಿ, ಆ ಜಡಸ್ವಾತಂತ್ರ್ಯದ್ವಾರಾ ಸ್ಥಿತಿಕಾಲದ ಕಾರ್ಯಗಳು ನಡಿಯೋವಾಗ ತವೆ. ಅಷ್ಟೇ ಹೊರ್ತು ಸಾಕ್ಷಾತ್ ಚಿನ್ಮನಗತ ಪರಾಧೀನವಾದ ಚಿಚ್ಛಕ್ತಿಯಿಂದ ವ್ಯಾಪಾರ ನಡಿಯೋದಿಲ್ಲ. ಸ್ವರೂಪೇಂದ್ರಿಯಗಳಿಗೆ ಜಡೇಂದ್ರಿಯಗಳು ಅಧಿಷ್ಠಾನಗಳಾಗಿದ್ದಂತೆ, ಸ್ವರೂಪಸ್ವಾತಂತ್ರ್ಯಶಕ್ತಿಗೆ, ಜಡಶಕ್ತಿ ಅಧಿಷ್ಠಾನ ಎಂತ ತಿಳಿಯಬೇಕು. ಮೋಕ್ಷದಲ್ಲಿಯೂ ಜಡಸ್ವಾತಂತ್ರ್ಯ ಇರೋದಿಲ್ಲ. ಇನ್ನೂ, ಸ್ವಾತಂತ್ರ್ಯವಿಚಾರ ವಿವರ ಮಾಡತಾರೆ.

ಸ್ವಾತಂತ್ರ್ಯವಿಭಾಗ ಮೂರುಪ್ರಕಾರ. ೧) ದತ್ತಸ್ವಾತಂತ್ರ್ಯ, ೨) ಸ್ವಗತ ಸ್ವಾತಂತ್ರ್ಯ, ೩) ಸರ್ವಸ್ವಾತಂತ್ರ್ಯ. ಈ ಮೂರರಲ್ಲಿ ಪರಸ್ಪರ ಒಂದೊಂದರಲ್ಲಿ ಪ್ರಾಚುರ್ಯಾಪ್ರಾಚುರ್ಯದಿಂದ ಮೂರು ಮೂರು ಇರೋವಾಗಿ ಅವೆ. ಅವುಗಳಲ್ಲಿ ದತ್ತಸ್ವಾತಂತ್ರ್ಯದಲ್ಲಿ ಪ್ರಾಚುರ್ಯವಾಗಿ ಇರೋದು ದತ್ತಸ್ವಾತಂತ್ರ್ಯವು; ಸ್ವಗತ ಸ್ವಾತಂತ್ರ್ಯ, ಸರ್ವಸ್ವಾತಂತ್ರ್ಯ ಎರಡೂ ಅಪ್ರಾಚುರ್ಯ. ಅಹಂಮಮತಾವಿಷ್ಟನಾಗಿ ವಿಷಯಗಳ ಭೋಗಿಸುತ್ತಾ ಇರೋ ಅವಸ್ಥಾಕಾಲದಲ್ಲಿ, ದತ್ತಸ್ವಾತಂತ್ರ್ಯವ್ಯಾಪಾರವು. ಈ ಸ್ವಾತಂತ್ರ್ಯದಿಂದ ಅರಿಷಡ್ವರ್ಗಗಳ ದ್ವಾರಾ, ಆರು ಜ್ಞಾನೇಂದ್ರಿಯಗಳಿಂದ ಪ್ರಯತ್ನಗಳು ಆರು ಪ್ರಕಾರ ಜೀವಗೆ ತಿಳಿಸಿ, ಪರಮಾತ್ಮ ಮಾಡಸತಾನೆ. ಪರಮಾತ್ಮ, ಏಳನೇದಾದ ತನ್ನ ಪ್ರಯತ್ನ, ಎಂದರೆ, ಸ್ವಗತಸ್ವಾತಂತ್ರ್ಯ, ಅದರಲ್ಲಿ ಮೇಳನಮಾಡಿದರೆ, ಜೀವನ ಆರು ಪ್ರಯತ್ನವೂ, ಪ್ರಯತ್ನಾನುಸಾರ ಕಾರ್ಯಾನುಕೂಲವೂ ಆಗತವೆ, ಇಲ್ಲದಿದ್ದರೆ ಅನ್ಯಥಾವಾಗೋವಾಗತವೆ. ಎಂದರೆ, ಪ್ರಯತ್ನಗಳಲ್ಲಿ ಏನೇನೂ ಲೋಪ ವಿಲ್ಲದಕಾಲಕ್ಕೂ, ಈ ಮಾಡತಕ್ಕ ಪ್ರಯತ್ನದಿಂದ ದೃಢವಾಗಿ ಕಾರ್ಯಾನುಕೂಲವಾಗ ತದೆ ಎಂತ ನಿಶ್ಚಯವಾಗಿ ಇದ್ದ ಕಾಲಕ್ಕೂ, ದತ್ತಸ್ಯಾತಂತ್ರ್ಯಗತ, ಅಪ್ರಾಚುರ್ಯವಾಗಿ

ಇದ್ದ ಸ್ವಗತಸ್ವಾತಂತ್ರ್ಯ, ದತ್ತಸ್ವಾತಂತ್ರ್ಯದ ಸಂಗಡ ಕೂಡದೇ ಪ್ರತ್ಯೇಕವಾಗಿ ಇದ್ದರೆ, ಆ ಕಾರ್ಯ ವಿಪರೀತವಾಗಿ ಪ್ರಯತ್ನಾನುಸಾರ ಸಿದ್ಧಿಸೋದಿಲ್ಲ. ಮತ್ತು ದತ್ತಸ್ವಾತಂತ್ರ್ಯ ಗತ ಸ್ವಗತಸ್ವಾತಂತ್ರ್ಯ ಕಲತೂ ಕಲಯದಂತೆ ಇದ್ದರೆ ಯತ್ನಕಾರ್ಯ, ಕೆಲವು ಭಾಗ ಸಾನುಕೂಲವೂ, ಕೆಲವುಭಾಗ ಪ್ರತಿಕೂಲವೂ ಆಗತವೆ. ಎಂದರೆ, ಅನುಕೂಲ ಪ್ರತಿಕೂಲ ಮಿಶ್ರ ಎಂತ ತಾತ್ಪರ್ಯ. ಈ ಎರಡರ ಸಂಗಡ ದತ್ತಸ್ವಾತಂತ್ರ್ಯಗತ ಸರ್ವ ಸ್ವಾತಂತ್ರ್ಯ ಸೇರಿದರೆ, ದೇವತಾರಾಧನಿ ದ್ವಾರಾ ಪ್ರಯತ್ನಗಳು ನಡಿಯುತ್ತವೆ. 'ದೇವರು ಈ ಕಾರ್ಯ ನಡಸತಾನೆ. ಸಂದೇಹವಿಲ್ಲ', ಎಂತ ಹೇಳಿ, ದಾರಢ್ಯ ಉಂಟಾಗಿ ಅದೇ ಪ್ರಕಾರ ಕಾರ್ಯ ಸಾನುಕೂಲವಾಗಿ, ತತ್ಫಲ ಸರ್ವಸ್ವಾತಂತ್ರ್ಯದ್ವಾರಾ ಭೋಗಿಸತಾನೆ. ಇದರಲ್ಲಿ ಅಂತರಾಂತರವಿಚಾರ ಬಹಳ ಉಂಟು, ವಿವರಿಸಲು ಶಕ್ಯವಲ್ಲ. ದತ್ತಸ್ವಾತಂತ್ರ್ಯ ದಿಂದ ಪ್ರಯತ್ನ; ಸ್ವಗತಸ್ವಾತಂತ್ರ್ಯದಿಂದ ಕೆಲವು ಅನುಕೂಲ, ಕೆಲವು ಪ್ರತಿಕೂಲ; ಸರ್ವಸ್ವಾತಂತ್ರ್ಯದಿಂದ ಕಾರ್ಯಾನುಕೂಲ ಈ ಪ್ರಕಾರ ತಿಳಿಯಬೇಕು. ಮತ್ತು ದತ್ತ ಸ್ವಾತಂತ್ರ್ಯ ಸತ್ತ್ವಗುಣದಿಂದ ಪ್ರವಿಷ್ಟವಾಯಿತೇ ಧೈರ್ಯವೂ, ರಜೋಗುಣದಿಂದ ಪ್ರವಿಷ್ಟವಾಯಿತೇ, ಧೈರ್ಯಾಧೈರ್ಯ, ತಮೋಗುಣದಿಂದ ಪ್ರವಿಷ್ಟವಾಯಿತೇ, ಶುದ್ಧ ವಾಗಿ ಅಧೈರ್ಯ. ಈ ದತ್ತಸ್ವಾತಂತ್ರ್ಯ ಉಪಯೋಗಕಾಲ, ಅಪಕ್ವಕಾಲ. ಈ ಕಾಲದಲ್ಲಿ ಅಜ್ಞಾನ, ದುಃಖ, ಅಧೈರ್ಯಗಳ ಪ್ರಾಚುರ್ಯ. ಆದರೂ, ಇದರಲ್ಲಿ ಪೂರ್ವೋಕ್ತಪ್ರಕಾರ ಅಂತರಾಂತರಗಳು ಬಹಳವವೆ. ಮತ್ತು ಕಾರ್ಯ ಆಗತದೆ ಅಂತ ಸಿದ್ಧಮಾಡಿದ ಕಾರ್ಯ ಆಗೋದಿಲ್ಲ; ಆಗೋದಿಲ್ಲ ಎಂತ ಸಿದ್ಧಮಾಡಿದ ಕಾರ್ಯ ಆಗತದೆ. ಇದು ಸರ್ವಸ್ವಾತಂತ್ರ್ಯದ ಪ್ರಭೇದ ಎಂತ ತಿಳಿಯಬೇಕು. ಇದಲ್ಲದೆ ಶುಭಾ ಶುಭಗಳು ಜೀವಗೆ ತಿಳಿಸಿ ಮಾಡತಕ್ಕ ಕಾರ್ಯಗಳು, ಜೀವರಿಗೆ ತಿಳಿಸಧಾಂಗೆ ಅವಶಾತ್ತಾಗಿ ಮಾಡತಕ್ಕ ಕಾರ್ಯಗಳು, ಇತ್ಯಾದಿ ಅನೇಕ ಪ್ರಭೇಧಗಳು ಸರ್ವಸ್ವಾತಂತ್ರ್ಯಕ್ಕೆ ಸೇರಿದ ಕಾರ್ಯಗಳಾಗಿ ತಿಳಿಯಬೇಕು.

ಇನ್ನು ಸ್ವಗತಸ್ವಾತಂತ್ರ್ಯದ ಕಾರ್ಯ ಪಕ್ವಾಪಕ್ವಜ್ಞಾನಕಾಲದಲ್ಲಿ ಉಪಯೋಗ ವಾಗತಕ್ಕದ್ದು; ಇದರಲ್ಲಿ ಸ್ವಗತಸ್ವಾತಂತ್ರ್ಯ ಪ್ರಾಚುರ್ಯ. ದತ್ತಸ್ವಾತಂತ್ರ್ಯ, ಸರ್ವ ಸ್ವಾತಂತ್ರ್ಯ ಅಪ್ರಾಚುರ್ಯವಾಗಿರತವೆ. ಇದರಲ್ಲಿ ಪಕ್ವಾಪಕ್ವಜ್ಞಾನ, ಸಾನುಕೂಲ ವಿಷಯದಲ್ಲಿ ಪೂರ್ವೋಕ್ತಪ್ರಕಾರವೇ ಪ್ರಯೋಜನ; ಇದರಲ್ಲಿ ಪ್ರಯತ್ನ ಸ್ವಲ್ಪ, ಪ್ರತಿಕೂಲವೂ ಸ್ವಲ್ಪವೇ; ಅನುಕೂಲಗಳು ಬಹಳ ಎಂತ ತಿಳಿಯಬೇಕು. ಇದರನ್ನ ದಿಕ್ಪ್ರದರ್ಶನ ರೀತ್ಯಾ, ಅವರವರ ಜ್ಞಾನದಿಂದಲೇ ತಿಳೀಬೇಕು. ಸರ್ವಸ್ವಾತಂತ್ರ್ಯದಲ್ಲಿ ದತ್ತಸ್ವಾತಂತ್ರ್ಯ, ಸ್ವಗತಸ್ವಾತಂತ್ರ್ಯ ಎರಡೂ ಅಪ್ರಾಚುರ್ಯ, ಸರ್ವಸ್ವಾತಂತ್ರ್ಯ ಪ್ರಾಚುರ್ಯ.ಇದು ಪಕ್ವಕಾಲದಲ್ಲಿ ಉಪಯೋಗವು. ಇದರಲ್ಲಿ ಪೂರ್ವಾಪೇಕ್ಷಯಾ ಪ್ರಯತ್ನ ಅತ್ಯಲ್ಪ, ಪ್ರತಿಕೂಲವೂ ಅತ್ಯಲ್ಪ, ಸಾನುಕೂಲ ಬಹಳ. ಇದು ಪಕ್ವಕಾಲದಲ್ಲಿ ಉಪಯೋಗಿಸತಕ್ಕದ್ದು. ಗುಣಸಂಮೇಳನದಿಂದ ಪ್ರಯತ್ನಗಳೇನು, ಪ್ರತಿಕೂಲಗಳೇನು, ಅನುಕೂಲಗಳೇನು, ಬಹುಪ್ರಕಾರದಿಂದ ವಿಭಾಗಗಳಾಗಿ ಪ್ರಕಾಶಮಾನಗಳಾಗತವೆ.

ಅಪರೋಕ್ಷಜ್ಞಾನಿಗಾದರೂ ನಿತಾಂತ ಕಂಡುಹಿಡಿಯೋದಕ್ಕೆ ಶಕ್ಯವಲ್ಲ. ಪಾಮರನಾದ ನನ್ನಿಂದ ನಿತಾಂತ ಹೇಳೋಣವಾದೀತೆ? ಮಹಾನುಭಾವರಾದ ನಿಮ್ಮಿಂದ ತಿಳಕೋತಕ್ಕ ವಿಷಯಗಳು ಬಹಳವವೆ. ನೀತಗುರು ದ್ವಾರಾ ಅವರವರ ಸಂದೇಹ ಅವರವರ ಯೋಗ್ಯತಾನುಸಾರ ಪರಿಹಾರವಾಗಬೇಕು. ಇಷ್ಟುಮಟ್ಟಿಗೆ ತಿಳಿದು ಅನುಷ್ಠಾನ ಮಾಡಿದರೆ ಮುಕ್ತನಾಗತಾನೆ. ಪರಮಾತ್ಮನಿಂದ ಕೊಡಲ್ಪಟ್ಟ ಸ್ವಾತಂತ್ರ್ಯಕ್ಕೆ ಜೀವನ ಸ್ವಾತಂತ್ರ್ಯ ಅಧಿಷ್ಠಾನವಾಯಿತು. ಜೀವನ ಸ್ವರೂಪಭೂತ ಸ್ವಾತಂತ್ರ್ಯಕ್ಕೆ ಜಡದೇಹ, ಜಡ ಸ್ವಾತಂತ್ರ್ಯ ಅಧಿಷ್ಠಾನ; ಸ್ಥೂಲದೇಹಗತ ಜಡಮನಸ್ಸಿನಲ್ಲಿ ಜಡಶಕ್ತಿ ಒಂದು ಇರೋದಾಗಿ ಅದೆ. ಜಡಮನಸ್ಸಿನಲ್ಲಿ ಜೀವನ ಚಿನ್ಮನಸ್ಸು ವ್ಯಾಪ್ತಿ; ಜಡಮನಗತ ಜಡಶಕ್ತಿಯಲ್ಲಿ, ಜೀವನ ಮನಗತ ಸ್ವಾತಂತ್ರ್ಯಶಕ್ತಿ ವ್ಯಾಪ್ತಿ; ಎರಡೂ ಮೇಳನವಾಗಿ ಸ್ಥೂಲದೇಹದಲ್ಲಿ ಕಾರ್ಯ ನಡೀತದೆ. ಲೋಕದಲ್ಲಿ ಜೀವಗೆ ಪರಮಾತ್ಮನು ದತ್ತಸ್ವಾತಂತ್ರ್ಯ ಕೊಟ್ಟಿದ್ದಾನೆ. ಅದರಿಂದ ಪ್ರಯತ್ನಾದಿಗಳು ಮಾಡಬೇಕೆಂತ ಹೇಳತಾರೆ. ತಾತ್ಪರ್ಯವೇನೆಂದರೆ, ಪರಮಾತ್ಮ ತನ್ನ ಅಭಿನ್ನಸ್ವಾತಂತ್ರ್ಯ ಜೀವಗೆ ದತ್ತಮಾಡಿ ಜೀವನ್ನ ಸ್ವಾತಂತ್ರ್ಯದಲ್ಲಿ ಇಟ್ಟಿದ್ದಾನೆ. ಈ ದತ್ತಸ್ವಾತಂತ್ರ್ಯದ್ವಾರಾ ಜೀವ ತನ್ನ ಸ್ವರೂಪಭೂತ ಸ್ವಾತಂತ್ರ್ಯದಿಂದ ಪ್ರಯತ್ನಗಳ ಮಾಡಬೇಕು. ಅಂದರೆ, ಪರಮಾತ್ಮನ ದತ್ತಸ್ವಾತಂತ್ರ್ಯದಿಂದಲೇ ಜೀವ, ತನ್ನ ಸ್ವಾತಂತ್ರ್ಯಗುಣದ ಕಾರ್ಯ ಮಾಡಬೇಕೇ ಹೊರ್ತು ಅನ್ಯಥಾ ಆಗೋದಿಲ್ಲ. ಈ ಪ್ರಕಾರ ತಿಳದು ಪ್ರಯತ್ನಾದಿಗಳ ಮಾಡತಾ, ಆ ಪ್ರಯತ್ನಗಳಲ್ಲಿ ಪೂರ್ವೋಕ್ತಪ್ರಕಾರ ಅನುಸಂಧಾನವಿರಬೇಕು ಎಂತ ತಾತ್ಪರ್ಯ.

"ಸ್ವತಂತ್ರಮಸ್ವತಂತ್ರಂ ಚ ದ್ವಿವಿಧಂ ತತ್ತ್ವಮಿಷ್ಯತೇ" ಎಂಬ ಪ್ರಮಾಣಾನುಸಾರ, ಅಸ್ವತಂತ್ರನಾದ ಜೀವಗೆ, ಪರಮಾತ್ಮನ ವ್ಯತಿರಿಕ್ತ ಸ್ವತಂತ್ರಿಸಿ ಪ್ರಯತ್ನಾದಿಗಳು, ಶಕ್ತಿಗಳು ಎಂಬಿವು ಕೂಡಲಾರವು. ಜೀವಗೆ, ಪರಮಾತ್ಮನ ವ್ಯತಿರಿಕ್ತ ಸ್ವಾತಂತ್ರ್ಯ ಉಂಟು ಎಂಬುದೂ ಅಸಂಭಾವಿತವು. ಲಿಂಗಗತ, ಜಡಮನಗತ ಜಡಸ್ವಾತಂತ್ರ್ಯದ ಅಂಶ ತೆಗೆದು, ಅನಿರುದ್ಧಶರೀರದಲ್ಲಿ ಇಟ್ಟು, ಅದರ ಅಂಶವನ್ನ ಸ್ಥೂಲದೇಹದಲ್ಲಿ ಇಡೋವನಾಗಿ ಇದ್ದಾನೆ. ಇದೇ ಜಡಸ್ವಾತಂತ್ರ್ಯದತ್ತ ಎಂಬುದು.

**ಈ ವಿಧದಿ ಸ್ವಾತಂತ್ರತತ್ತ್ವವ ।**
**ದೇವಮಾನವದಾನವರೊಳು ರ ।**
**ಮಾವಿನೋದಿ ವಿಭಾಗ ಮಾಡಿಟ್ಟಲ್ಲೆ ರಮಿಸುವನು ॥**
**ಮೂವರೊಳಗಿದ್ದವರ ಕರ್ಮವ ।**
**ತಾ ವಿಕಾರವಗೈಸದಲೆ ಕ ।**
**ಲ್ಪಾವಸಾನಕೆ ಕೊಡುವನಾಯಾಸವರವರ ಗತಿಯ ॥ ೬ ॥**

ಅವರವರಿಂದ ಸಾಧನ ಮಾಡಿಸಿ ನಿಜಗತಿ ಕೊಡತಾನೆ ಎಂತ ಹೇಳತಾರೆ.

ಈ ವಿಧದಿ–ಈ ಪೂರ್ವೋಕ್ತಪ್ರಕಾರ, ಸ್ವಾತಂತ್ರ್ಯತತ್ತ್ವವ–ಪರಮಾತ್ಮ ತನ್ನ ಸ್ವಾತಂತ್ರ್ಯತತ್ತ್ವವನ್ನು, ದೇವ–ದೇವಶಬ್ದದಿಂದ ಬ್ರಹ್ಮಾದಿ ತೃಣಾಂತ ಮುಕ್ತಿಯೋಗ್ಯರಲ್ಲಿ, ರಮಾದೇವೇರಲ್ಲಿ, ತನ್ನಲ್ಲಿ, ಮಾನವ–ನಿತ್ಯಸಂಸಾರಿಗಳಲ್ಲಿ, ದಾನವರೊಳು–ದೈತ್ಯರೊಳು, ಈ ತ್ರಿವಿಧಜೀವರೊಳು, ರಮಾವಿನೋದಿ–ರಮಾದೇವೇರ ಕೂಡ ವಿನೋದದಿಂದ ಆಟಗಳ ಆಡತಕ್ಕ ನಾರಾಯಣ, ಅಂದರೆ ಸೃಷ್ಟ್ಯಾದಿರೂಪವಾದ ಆಟಗಳ ಆಡತಕ್ಕ ಶ್ರೀ ನಾರಾಯಣದೇವರು, ವಿಭಾಗಮಾಡಿಟ್ಟು–ಆಯಾ ಜೀವರಲ್ಲಿ ಯೋಗ್ಯತಾನುಸಾರ ವಿಭಾಗಮಾಡಿ ಇಟ್ಟವನಾಗಿ, ಅಲ್ಲೆ ರಮಿಸುವನು–ಜೀವರ ಅನಾದಿಸ್ವಾತಂತ್ರ್ಯದಲ್ಲಿ ಬಿಂಬನಾಗಿ ಸ್ವತಂತ್ರವಾಚ್ಯನಾದ ತನ್ನಲ್ಲಿ ತಾನೇ ವರ್ತಮಾನಸ್ವಾತಂತ್ರ್ಯರೂಪದಿಂದ ಪ್ರವೇಶಮಾಡಿ, ಅದರಿಂದ ಜೀವರಿಗೆ ಪ್ರೇರಣಾದಿ ಕಾರ್ಯಗಳ ನಡಿಸುತ್ತಾ, ತನ್ನ ರೂಪಗಳಿಂದ ತಾನೇ ರಮಿಸುತ್ತಾ ಇರತಾನೆ. ಮೂವರೊಳಗಿದ್ದು–ನಿರ್ದೋಷನಾದ, ವೈಷಮ್ಯಾದಿಗಳಿಂದ ರಹಿತನಾದ ಒಬ್ಬನಾದ ಪರಮಾತ್ಮನೇ ತ್ರಿವಿಧಜೀವರೊಳು ಸ್ವಾತಂತ್ರ್ಯಗುಣವಾಚ್ಯನಾಗಿದ್ದು, ಅವರ ಕರ್ಮವ–ಆಯಾ ತ್ರಿವಿಧಜೀವರ ಸ್ವರೂಪಸ್ವಭಾವಕ್ಕೆ ಅನುಸರಿಸಿದ ಹಾಂಗೆ, ಬಾಹ್ಯಲಿಂಗ ದೇಹಕ್ಕೆ ಅನುಸರಿಸಿದ ಉಭಯಕರ್ಮವನ್ನು, ತಾ ವಿಕಾರಗೈಸದಲೆ–ಪರಮಾತ್ಮನಾದ ತಾನು ಅನ್ಯಥಾಮಾಡದೆ, ಇದ್ದದ್ದರನ್ನ ಅಭಿವ್ಯಕ್ತಿಮಾಡಿ ಅವರವರ ಯೋಗ್ಯತಾನುಸಾರ ಸಾಧನ ಪೂರ್ತಿಮಾಡಿಸಿ, ಕಲ್ಪಾವಸಾನಕೆ–ಬ್ರಹ್ಮಕಲ್ಪದ ಅಂತ್ಯಭಾಗಕ್ಕೆ ಲಿಂಗಭಂಗ ಐದಿಸಿ, ಅನಾಯಾಸ–ಆಯಾಸ ರಹಿತನಾಗಿ, ಅವರವರ ಗತಿಯ – ಆಯಾ ತ್ರಿವಿಧಜೀವರ ಸ್ವರೂಪಗತಿಯನ್ನ, ಕೊಡುವ – ಕೊಡೋವನಾಗಿ ಜನನರಹಿತರನ್ನಾಗಿ ಮಾಡತಾನೆ.

**ಆಲಯಗಳೊಳಗಿಪ್ಪ ದೀಪ ।**
**ಜ್ವಾಲೆವರ್ತಿಗಳನುಸರಿಸಿ ಜನ ।**
**ರಾಲಿಗಳಿಗೊಪ್ಪುವತೆರದಿ ಹರಿತೋರ್ಪ ಸರ್ವತ್ರ ॥**
**ಕಾಲಕಾಲದಿ ಶ್ರೀ ಧರಾ ದು ।**
**ರ್ಗಾಲಲನೆಯರ ಕೂಡಿ ಸುಖಮಯ ।**
**ಲೀಲೆಗೈಯಲು ತ್ರಿಗುಣಕಾರ್ಯಗಳಹವು ಜೀವರಿಗೆ ॥ ೭ ॥**

ಅಪರೋಕ್ಷ ವಿಚಾರ, ಕರ್ಮಮಾಡೋ ವಿಚಾರ ಹೇಳತಾರೆ.

ವರ್ತಿಗಳನುಸರಿಸಿ – ಬತ್ತಿಗಳನ್ನು ಅನುಸರಿಸಿ ಇರತಕ್ಕ, ದೀಪಜ್ವಾಲೆ – ದೀಪ ಸಾಂಕೇತವಾದ ಉರಿ, ಆಲಯಗಳೊಳಗಿಪ್ಪ–ಮನೆ ಮೊದಲಾದದ್ದರಲ್ಲಿ ಇರತಕ್ಕ ಅನೇಕ ಯೋಗ್ಯಾಯೋಗ್ಯ ಪದಾರ್ಥಗಳ, ಜನರ–ಅಂಧಕರಲ್ಲದ ಮನುಷ್ಯರ, ಆಲಿಗಳಿಗೆ–ನೇತ್ರಗಳಿಗೆ ತೋರಿಸೋದಾಗತದೆ. ಅಂಧಕನಿಗೆ, ದೀಪಪ್ರಕಾಶ ಇದ್ದರೂ ದೀಪಪ್ರಕಾಶವೇನು, ಆಲಯ ಪದಾರ್ಥಗಳೇನು ಕಾಣದೆ ಸರ್ವದಾ ಅಂಧಕಾರವೆ ಇರತದೆ. ಒಪ್ಪುವ

ತೆರದಿ–ಈ ಪ್ರಕಾರ, ಅಂಧಕಗೆ, ಅಂಧಕ ಅಲ್ಲದವಗೆ ದೀಪ ತೋರೋದಾಗತದೆ. ಈ ಪ್ರಕಾರ ಅವರವರ ನೇತ್ರಕ್ಕೆ ಒಪ್ಪಿದೋಪಾದಿಯಲ್ಲಿ, ಹರಿ–ಬಿಂಬರೂಪಿಯಾದ ತಾನು, ಸರ್ವತ್ರ–ಸರ್ವ ಚರಾಚರಗಳಿಗೆ ಬಿಂಬನಾಗಿ, ಸರ್ವತ್ರ ವ್ಯಾಪ್ತನಾಗಿ, ದೀಪಸದೃಶನಾಗಿ ಇರುವ ಪರಮಾತ್ಮ, ಬತ್ತಿ ಸದೃಶವಾದ ಜೀವರ ಅನಾದಿ ಸ್ವರೂಪಭೂತ ಸ್ವಾತಂತ್ರ್ಯವನ್ನು ಅನುಸರಿಸಿ, ಪ್ರಕಾಶಮಾನನಾಗಿ ಸರ್ವಜೀವರಲ್ಲಿ ಇರೋವನಾಗಿ ಇದ್ದಾನೆ. ಇದ್ದು, ಆಲಯಗತ ದೀಪ ಅಂಧಕನಲ್ಲದವನ ನೇತ್ರಕ್ಕೆ ಕಾಣಿಸಿದೋಪಾದಿಯಲ್ಲಿ, ಆಲಯಗತ ಸರ್ವಪದಾರ್ಥಗಳು ಆ ದೀಪದ್ವಾರಾ ಅಂಧಕನಲ್ಲದವ ಕಂಡೋಪಾದಿಯಲ್ಲಿ, ದೇಹಾಖ್ಯ ಆಲಯಗತ ದೀಪ ಸದೃಶನಾದ ಪರಮಾತ್ಮ, ಜ್ಞಾನನೇತ್ರವುಳ್ಳ ಅಧಿಕಾರಿಗೆ ಪ್ರತ್ಯಕ್ಷನಾಗಿ ಕಣ್ಣಿಗೆ ಕಾಣತಾನೆ; ಅಪರೋಕ್ಷದಿಂದ ದರ್ಶನ ಕೊಡತಾನೆ. ಕೊಟ್ಟು, ದೇಹಾಖ್ಯ ಆಲಯಗತ ಪದಾರ್ಥ ಸದೃಶರಾದ ದೇಹೇಂದ್ರಿಯಗಳಿಗೆ ನಿಯಾಮಕರಾದ ತತ್ತ್ವದೇವತೆಗಳ ಪರಮಾತ್ಮನೆಂಬೋ ದೀಪಪ್ರಕಾಶ ದ್ವಾರಾ ನೋಡೋವನಾಗತಾನೆ. ಹುಟ್ಟಂಧಗೆ ಸದೃಶರಾದ ಮಿಥ್ಯಾವಾದಿಗಳು, ಮಿಶ್ರವಾದಿಗಳು, ಉಭಯರೂ ಸ್ವರೂಪ ಸ್ವಭಾವದಲ್ಲೇ ಸಜ್ಜ್ಞಾನವೆಂಬ ನೇತ್ರದಿಂದ ಶೂನ್ಯರಾದ್ದರಿಂದ, ಇವರಿಗೆ ಭಗವದಪರೋಕ್ಷವಾಗೋದಿಲ್ಲ. ತೋರ್ಪ–ಈ ಪ್ರಕಾರ ತೋರಿಸೋವನಾಗತಾನೆ. ಸುಖಮಯ–ಸುಖಸ್ವರೂಪಿಯಾದ ಪರಮಾತ್ಮ, ಶ್ರೀ ಧರಾ ದುರ್ಗಾ–ಶ್ರೀದೇವೇರು, ಭೂದೇವೇರು, ದುರ್ಗಾದೇವೇರು, ಲಲನೆಯರ ಕೂಡಿ–ಮೂರು ವಿಧರಾದ ತನ್ನ ಪತ್ನೇರಿಂದ ಕೂಡಿಕೊಂಡು ಎಂದರೆ,

| | | | |
|---|---|---|---|
| ೧. | ಶ್ರೀದೇವೇರು | ವಿಷ್ಣು | ಸತ್ತ್ವಗುಣ |
| ೨. | ಭೂದೇವೇರು | ಬ್ರಹ್ಮರೂಪಿ | ರಜೋಗುಣ |
| ೩. | ದುರ್ಗಾದೇವೇರು | ರುದ್ರರೂಪಿ | ತಮೋಗುಣ |

ಈ ಪ್ರಕಾರ ಮೂರು ರೂಪಗಳಿಂದ ಸರ್ವಪ್ರಾಣಿಗಳ ಲಿಂಗದೇಹಗತ ಗುಣತ್ರಯದಲ್ಲೂ, ಸ್ಥೂಲದೇಹಗತ ಗುಣತ್ರಯದಲ್ಲೂ, ತನ್ನ ಪತ್ನೇರಿಂದ ಕೂಡಿಕೊಂಡು, ಕಾಲಕಾಲದಿ–ಪ್ರತಿಪ್ರತೀ ಕ್ಷಣದಲ್ಲಿ, ಲೀಲೆಗೈಯಲು–ಸ್ಥೂಲದೇಹದಲ್ಲಿ ತದಾಕಾರನಾಗಿ ಇದ್ದು, ಬಿಂಬನಾಗಿ ಬಿಂಬಕ್ರಿಯಾ ರೂಪವಾದ ಆಟಗಳ ಆಡಲು, ಜೀವರಿಗೆ–ಪ್ರಾಣಿಗಳಿಗೆ, ತ್ರಿಗುಣಕಾರ್ಯಗಳಹವು–ತ್ರಿಗುಣಜನಿತ ಕಾರ್ಯರೂಪವಾದ ಕರ್ಮಗಳು ದೇಹೇಂದ್ರಿಯಾದಿಗಳಿಂದ ಆಗೋವಾಗತವೆ; ಅಪರೋಕ್ಷ ವ್ಯತಿರಿಕ್ತ ಈ ನೇಮ ತ್ರಿವಿಧ ಜೀವರಿಗೆ ಒಂದೇ ಪ್ರಕಾರವು, ನ್ಯೂನಾಧಿಕ್ಯವಿಲ್ಲ.

**ಇಂದ್ರಿಯಗಳಿಂ ಮಾಳ್ಪ ಕರ್ಮ ।**
**ದ್ವಂದ್ವಗಳ ತನಗರ್ಪಿಸಲು ಗೋ ।**
**ವಿಂದ ಪುಣ್ಯವ ಕೊಂಡು ಪಾಪವ ಭಸ್ಮವನೆ ಮಾಳ್ಪ ॥**

**ಇಂದಿರೇಶನು ಭಕ್ತಜನರನ ।**
**ನಿಂದಿಸುವರೊಳಗಿಪ್ಪ ಪುಣ್ಯವ ।**
**ತಂದು ತನ್ನವಗೀವ ಪಾಪಗಳವರಿಗುಣಿಸುವನು ॥ ೮ ॥**

ದ್ವಂದ್ವಕರ್ಮ ಸಮರ್ಪಣೆಮಾಡಬೇಕೆಂತಲೂ, ಭಗವದ್ಭಕ್ತರ ನಿಂದಾ ಕೂಡ ದೆಂದೂ ಹೇಳತಾರೆ.

ಇಂದ್ರಿಯಗಳಿಂ–ಏಕಾದಶೇಂದ್ರಿಯಗಳಿಂದ, ಮಾಳ್ಪ–ಬಿಂಬಕ್ರಿಯಾದ್ವಾರಾ ಮಾಡ ತಕ್ಕ, ಕರ್ಮದ್ವಂದ್ವಗಳ–ಪಾಪ, ಪುಣ್ಯ ಉಭಯವಿಧವಾದ ಕರ್ಮಗಳ, ತನಗರ್ಪಿಸಲು– ಹೃದಯಾಕಾಶಗತನಾದ ಬಿಂಬನಾದ ತನಗೆ ಅರ್ಪಣೆಮಾಡಲು, ಗೋವಿಂದ–ವೇದಪ್ರತಿ ಪಾದ್ಯನಾದ ಶ್ರೀ ನಾರಾಯಣದೇವರು, ಪುಣ್ಯವ ಕೊಂಡು–ಮೋಕ್ಷೋಪಯೋಗವಾದ ಪುಣ್ಯವ ತೊಗೊಂಡು ಬ್ಯಾರೆ ಇಟ್ಟು, ಪಾಪವ ಭಸ್ಮವನೆ ಮಾಳ್ಪ–ಜನನಮರಣಕ್ಕೆ ಕಾರಣವಾದ ಪಾಪಪುಣ್ಯಗಳೆರಡೂ, ಪಾಪಸಂಕೇತಗಳೆ ಆಗತವೆ. ಇಂಥಾ ಪಾಪ ತನ್ನ ಅಪರೋಕ್ಷದಿಂದ ಭಸ್ಮಮಾಡತಾನೆ; ಅಪರೋಕ್ಷದವರಿಗೂ ಇದ್ದೇ ಇರುತ್ತದೆ. ಅಪರೋ ಕ್ಷಕ್ಕೆ ಕಾರಣವಾದ ಕರ್ಮ, ಅಹಂಮಮತಾದಿಗಳ ತ್ಯಜಿಸಿ ನಿಸ್ಪೃಹನಾಗಿ ತಾರತಮ್ಯ ಪಂಚಭೇದದಿಂದ ಯುಕ್ತವಾದ, ಜ್ಞಾನಭಕ್ತಿವೈರಾಗ್ಯಗಳಿಂದ ಮಾಹಾತ್ಮ್ಯಜ್ಞಾನಪೂರ್ವಕ, ಸುದೃಢಸ್ನೇಹ ಪರಮಾತ್ಮನಲ್ಲಿ ಮಾಡೋಣ ದಾವದದೆ ಅವೇ, ಅಪರೋಕ್ಷಕ್ಕೆ ಕಾರಣ ವಾದ ಕಾರ್ಯಗಳೆಂದು ತಾತ್ಪರ್ಯ. ಪಾಪವಾಗಲೀ, ಪುಣ್ಯವಾಗಲೀ ಮಾಡೋದಕ್ಕೆ ಅಧಿಕಾರಿ ಸ್ವತಂತ್ರನಲ್ಲ. ಅನಾದಿಕರ್ಮವನ್ನನುಸರಿಸಿ ಪಾಪವೋ, ಪುಣ್ಯವೋ ಕ್ಷಣಲವ ಕಾಲ ಬಿಡದೆ, ಪರಮಾತ್ಮ ಮಾಡಸತಾ ಇರ್ತಾನೆ ಆದ್ದರಿಂದ, ಅಧಿಕಾರಿ ಮಾಡತಾನೆ. ಇಂದಿರೇಶನು – ಲಕ್ಷ್ಮೀಪತಿಯಾದ ಶ್ರೀ ನಾರಾಯಣನು, ಭಕ್ತಜನರನ – ತನ್ನಲ್ಲಿ ಪೂರ್ವೋಕ್ತ ಪೂರ್ಣ ಭಕ್ತಿವುಳ್ಳ ಜನರನ್ನ, ನಿಂದಿಸುವರೊಳಗಿಪ್ಪ–ನಿಂದಾಮಾಡತಕ್ಕವ ರಲ್ಲಿ ಇದ್ದಂಥಾ, ಪುಣ್ಯವ–ಅವರು ಮಾಡಿದ ಪುಣ್ಯಕರ್ಮವನ್ನ, ತಂದು–ಅವರಲ್ಲಿ ಇರಗೊಡದೆ ನಿಂದಾಕ್ಕೆ ಸರಿದೂಗುವ ಪುಣ್ಯಕರ್ಮವನ್ನ ಅವರಲ್ಲಿಂದ ತೆಗೆದು ತಂದು, ತನ್ನವಗೀವ–ತನ್ನ ಭಕ್ತರಿಗೆ ಕೊಡೋವನಾಗತಾನೆ. ಪಾಪಗಳ–ತನ್ನ ಭಕ್ತರಲ್ಲಿ ಇರುವ ಪಾಪಗಳ, ಅವರಿಗುಣಿಸುವನು–ನಿಂದಾಮಾಡತಕ್ಕವರಿಗೆ ಭೋಗಕ್ಕೆ ಕೊಡತಾನೆ ಎಂತ ತಾತ್ಪರ್ಯ.

**ಹೊತ್ತುಹೊತ್ತಿಗೆ ಪಾಪಕರ್ಮ ಪ್ರ ।**
**ವರ್ತಕರ ನಿಂದಿಸದೆ ತನಗಿಂ ।**
**ದುತ್ತಮರ ಗುಣಕರ್ಮಗಳ ಕೊಂಡಾಡದಲೆ ಇಪ್ಪ ॥**
**ಮರ್ತ್ಯರಿಗೆ ಗೋಬ್ರಾಹ್ಮಣಸ್ತ್ರೀ ।**
**ಹತ್ಯ ಮೊದಲಾದಖಿಳದೋಷಗ ।**
**ಳಿತ್ತಪನು ಸಂದೇಹಪಡಸಲ್ಲಖಿಳಶಾಸ್ತ್ರಮತ ॥ ೯ ॥**

ಭಗವದ್ಭಕ್ತರಾದವರನ್ನ ಭೂಷಣಮಾಡಬೇಕೆಂತಲೂ, ತಮೋಯೋಗ್ಯರನ್ನ ದೂಷಣಮಾಡಬೇಕೆಂತಲೂ ಹೇಳತಾರೆ.

ಪಾಪಕರ್ಮ ಪ್ರವರ್ತಕರ–ಜಗನ್ಮಿಥ್ಯಾ, ಅಹಂಬ್ರಹ್ಮ ಎಂಬ ಪಾಪಕರ್ಮವೇನು, ತಾರತಮ್ಯ ಅಂಗೀಕರಿಸದೆ ಪಂಚಭೇದ ಮಾತ್ರ ಅಂಗೀಕರಿಸಿ, ಪರಮಾತ್ಮ ಸರ್ವೋತ್ತಮ ನಲ್ಲ ಎಂತ ಹೇಳುವ ಸಂದೇಹಾತ್ಮಕ ಪಾಪಕರ್ಮವೇನು, ಈ ಎರಡು ವಿಧವಾದ ಪಾಪ ಕರ್ಮದಲ್ಲಿ ಪ್ರವರ್ತಕರಾದ ತಮೋಯೋಗ್ಯರ, ನಿತ್ಯಸಂಸಾರಿಗಳ, ಹೊತ್ತುಹೊತ್ತಿಗೆ–ಕಾಲತ್ರಯದಲ್ಲಿ, ಪ್ರತಿಕ್ಷಣದಲ್ಲಿ, ನಿಂದಿಸದೆ–ನಿಂದಾಮಾಡದೆ, ಮತ್ತು ತನಗಿಂದುತ್ತಮರ–ಭಗವತ್ತತ್ತ್ವಗಳ ತಥಾ ಮಾಹಾತ್ಮ್ಯಗಳ, ಗುರುಮುಖದಿಂದ ಸಚ್ಛಾಸ್ತ್ರ ಉಪದೇಶದ್ವಾರಾ, ತನಗಿಂತಲೂ ಹೆಚ್ಚಾಗಿ ತಿಳಿದು ಅನುಷ್ಠಾನಮಾಡತಕ್ಕ ಉತ್ತಮರಾದವರ (ಸ್ವೋತ್ತಮಾಃ ಗುರವಃ ಪ್ರೋಕ್ತಾಃ ಎಂಬ ಪ್ರಮಾಣ), ಗುಣಕರ್ಮಗಳ–ಪರಮಾತ್ಮ ಸರ್ವೋತ್ತಮ, ತಾರತಮ್ಯ ಪಂಚಭೇದ ಸತ್ಯ, ದೇವರು ಅನಂತ ಕಲ್ಯಾಣಗುಣಗಳಿಂದ ಪೂರ್ಣ, ಜೀವ ಅಪೂರ್ಣ, ಈಶಾಧೀಶನಾದವ ಎಂಬ ಏತಾದೃಶವಾದ ಉತ್ತಮಗುಣದಿಂದ ಇರುವ ಭಗವದ್ಭಕ್ತರ, ಕೊಂಡಾಡದಲೆ–ಶ್ಲಾಘನಮಾಡಧಾಂಗೆ, ಇಪ್ಪ–ಇರತಕ್ಕ, ಮರ್ತ್ಯರಿಗೆ–ಮನುಷ್ಯರಿಗೆ (ಅಂದರೆ ವಿಷಮದಿಂದ ದೂಷಣಭೂಷಣ ಮಾಡಿದರೂ ಸರಿಯೆ), ಗೋ ಬ್ರಾಹ್ಮಣ ಸ್ತ್ರೀ–ಆಕಳು, ಬ್ರಾಹ್ಮಣ, ಸ್ತ್ರೀ, ಹತ್ಯಮೊದಲಾದ–ಇವರುಗಳನ್ನ ಕೊಂದ ಪಾಪವೇನು, ಅಖಿಳದೋಷಗಳಿತ್ತಪನು–ಇನ್ನೂ ಸಮಸ್ತಪಾಪಗಳನ್ನೂ ತಂದುಕೊಡೋವ ನಾಗತಾನೆ. ಸಂದೇಹಪಡಸಲ್ಲ – ಆದ್ದರಿಂದ ಭಗವದ್ಭಕ್ತರ ಅನಾದಿಯೋಗ್ಯತಾವನ್ನ ಶ್ಲಾಘನವೂ, ತಮೋಯೋಗ್ಯರ ಅನಾದಿಯೋಗ್ಯತಾವನ್ನ ದೂಷಣವೂ, ಮಾಡೋದರಲ್ಲಿ ಸಂದೇಹಪಡಕೂಡದು. ದೂಷಣ ಭೂಷಣ ಮಾಡಬೇಕೆಂತಲೂ, ಹಾಂಗೆ ಮಾಡದೇ ಹೋದರೆ ಪೂರ್ವೋಕ್ತ ಮಹಾದೋಷಗಳು ಪ್ರಾಪ್ತವಾಗತವೆ ಎಂಬೋದು, ಅಖಿಳ ಶಾಸ್ತ್ರಮತ–ಸರ್ವಶಾಸ್ತ್ರಸಮ್ಮತವು.

**ವಿಶೇಷಾರ್ಥ :–** ಹೊತ್ತುಹೊತ್ತಿಗೆ ಎಂದರೆ ದೇವರ ಪೂಜಾದಿ ಕಾಲಗಳಲ್ಲಿ "ಕಷ್ಟಾತ್ ಕಷ್ಟತರಂ ಯಾಂತು ಸರ್ವೇ ದುರ್ಯೋಧನಾದಯಃ । ಸುಖಾತ್ಸುಖತರಂ ಯಾಂತು ಸರ್ವೇ ಭೀಮಾರ್ಜುನಾದಯಃ ॥" ಎಂಬ ಭಾರತವಾಕ್ಯ ರೀತ್ಯಾ ಪಾಪಕರ್ಮ ಮಾಡುವ ದುರ್ಯೋಧನಾದಿ ದುಷ್ಟರನ್ನ ನಿಂದಿಸುತ್ತ, ತನಗಿಂತ ಉತ್ತಮರಾದ ಸಜ್ಜನರ ಮೊದಲುಮಾಡಿ ಭೀಮಾಂತ ಭಗವದ್ಭಕ್ತರ ಗುಣಕರ್ಮಗಳನ್ನ ಕೊಂಡಾಡಬೇಕೆಂತ ತಾತ್ಪರ್ಯ. ಇನ್ನೂ "ನಿಂದಾಂ ಭಗವತಃ ಶ್ರುತ್ವಾ ತತ್ಪರಸ್ಯ ಜನಸ್ಯ ಚ । ತತೋ ನಾಪೈತಿ ಯಸ್ಥಾನಾತ್ ಯಾತ್ಯಧಃ ಸುಕೃತಾತ್ ಚ್ಯುತಃ ॥ ಛಿಂದ್ಯಾತ್ಪ್ರಹಸ್ಯ ರುಶತೀ ಮಸತಾಂ ಪ್ರಭುಶ್ಚೇತ್ ಜಿಹ್ವಾಮಸೂನಪಿ ತತೋ ವಿಸೃಜೇತ್ಯ ಧರ್ಮಃ ॥ ಎಂತ ಇರುವದ್ದ ರಿಂದ ಶ್ಲೋಕಾರ್ಥಪ್ರಕಾರ ನಡೀಬೇಕೆಂತ ಭಾವ.

**ತನ್ನ ಸ್ವಾತಂತ್ರ್ಯಯಗುಣಗಳ ಹಿ ।**
**ರಣ್ಯಗರ್ಭಾದ್ಯರಿಗೆ ಕಲಿಮುಖ ।**
**ದಾನವರ ಸಂತತಿಗೆ ಅವರಧಿಕಾರವನುಸರಿಸಿ ॥**
**ಪುಣ್ಯಪಾಪಗಳೀವ ಬಹುಕಾ ।**
**ರುಣ್ಯಸಾಗರನಲ್ಪಶಕ್ತಿಗ ।**
**ಳುಣ್ಣಲರಿಯದೆ ಇರಲು ಉಣಗಲಿಸಿದನು ಸರ್ವರಿಗೆ ॥ ೧೦ ॥**

ಅಸ್ವತಂತ್ರರಾದ ಜೀವರಿಗೆ ತನ್ನ ಸ್ವಾತಂತ್ರ್ಯದ್ವಾರಾ, ಪ್ರಾಕೃತಗುಣಜನ್ಯ ಪಾಪ ಪುಣ್ಯಫಲ ಭೋಜನಮಾಡೋದಕ್ಕೆ ಕಲಿಸಿದ ಎಂತ ಹೇಳತಾರೆ.

ತನ್ನ ಸ್ವಾತಂತ್ರ್ಯ–ಶ್ರೀ ಪರಮಾತ್ಮನು ತನ್ನ ಸ್ವಕೀಯವಾದ ಸ್ವಾತಂತ್ರ್ಯ, ಗುಣಗಳ–ಗುಣಗಳನ್ನ, ತ್ರಯ-ಮೂರುವಿಧವಾದದ್ದರನ್ನ ತ್ರಿವಿಧರಾದ, ಹಿರಣ್ಯಗರ್ಭಾದ್ಯರಿಗೆ–ಬ್ರಹ್ಮದೇವರಾರಭ್ಯ ತೃಣಾಂತ ಮುಕ್ತಿಯೋಗ್ಯರಿಗೆ, ಕಲಿಮುಖ ದಾನವರ ಸಂತತಿಗೆ–ಕಲಿ ಮೊದಲಾದ ತಮೋಯೋಗ್ಯರಿಗೆ, ಹಾಂಗೇ ನಿತ್ಯಸಂಸಾರಿಗಳಿಗೆ, ಅವರಧಿಕಾರವನುಸರಿಸಿ–ಈ ಪ್ರಕಾರ ಮೂರೂ ಮಂದಿಗೆ ಅವರವರ ಸ್ವರೂಪಯೋಗ್ಯತಾರೂಪವಾದ ಅಧಿಕಾರವನ್ನು ಅನುಸರಿಸಿ ಕೊಟ್ಟು, ಅವರವರ ಯೋಗ್ಯತಾನುಸಾರ ಅವರವರಿಂದ ಕರ್ಮಗಳ ಮಾಡಿಸಿ, ಪುಣ್ಯಪಾಪಗಳೀವ–ಪುಣ್ಯಪಾಪಗಳ ಅನುಭವಕ್ಕಾಗಿ ಅವರವರದು ಅವರವರಿಗೆ ಕೊಡತಾನೆ. (ಋಜುಗಳಿಗೆ ಪಾಪವೂ ಇಲ್ಲ, ಪಾಪಕರ್ಮಭೋಗವೂ ಇಲ್ಲ; ತದನ್ಯ, ಸರ್ವರಿಗೂ ಉಂಟು), ಅಲ್ಪಶಕ್ತಿಗಳು–ಜೀವರು ಅತ್ಯಣುಸ್ವರೂಪರು, ಅದನ್ನನುಸರಿಸಿದ ಶಕ್ತಿ ಉಳ್ಳವರು, ಉಣಲರಿಯದೆ ಇರಲು–ಆದ್ದರಿಂದ ಕೊಡಲ್ಪಟ್ಟ ಪಾಪಪುಣ್ಯ ಫಲಗಳ ಉಂಬೋದಕ್ಕೆ ಅರಿಯದೆ, ಸ್ಥೂಲದೇಹದಲ್ಲಿ ವಾಸವಾಗಿ ಇರಲು, ಸರ್ವರಿಗೆ–ಸಮಸ್ತ ಪ್ರಾಣಿಗಳಿಗೆ, ಬಹುಕಾರುಣ್ಯಸಾಗರನು–ಬಹಳವಾದ ಅಂತಃಕರಣವುಳ್ಳ ಬಿಂಬರೂಪೀ ಪರಮಾತ್ಮ ದೇಹಾಕಾರನಾಗಿ ದೇಹದಲ್ಲಿ ಇದ್ದು, ಉಣಗಲಿಸಿದನು–ಬಿಂಬಕ್ರಿಯಾ ದ್ವಾರಾ ಉಂಬೋದಕ್ಕೆ ಕಲಿಸಿಕೊಟ್ಟನು.

**ವಿಶೇಷಾರ್ಥ :–** ಜೀವರ ಅನಾದಿಕರ್ಮವನುಸರಿಸಿ ಬಂದ ಸಂಚಿತಾಗಾಮಿ ಕರ್ಮಗಳ ಸಾಧನಾ ಪೂರ್ತಿ ಆಗೋವರಿಗೂ ಉಣಿಸಿ, ಅಪರೋಕ್ಷದಿಂದ ಸಂಚಿತನಾಶ, ಆಗಾಮಿ ನಿರ್ಲಿಪ್ತಮಾಡಿ, ಪ್ರಾರಬ್ಧಕರ್ಮ ಸಂಪೂರ್ಣವಾಗಿ ಉಣಿಸಿ, ನಂತರ ಮೋಕ್ಷ ಕೊಡತಾನೆ. ಅಸೃಜ್ಯರಾಶಿಯಲ್ಲಿ ಅನಾದಿಕರ್ಮವದೆ. ಅದರ ಭೋಗಾನಂತರ ಲಿಂಗಭಂಗವಾಗಬೇಕು. ಅಸೃಜ್ಯದಶಾದಲ್ಲಿ ಉಂಬೋದಕ್ಕೆ ನಿದ್ರಾವಸ್ಥಾವಾದ್ದರಿಂದ ಅರಿಯರು. ಸೃಷ್ಟಿಗೆ ತಂದು ಸ್ಥೂಲದೇಹಗಳ ಕೊಟ್ಟು ತದ್ದ್ವಾರಾ ಉಂಬೋದಕ್ಕೆ ಕಲಿಸಿಕೊಡತಾನೆ ಎಂತ ಭಾವ.

**ಸತ್ಯವಿಕ್ರಮ ಪುಣ್ಯಪಾಪ ಸ ।**
**ಮಸ್ತರಿಗೆ ಕೊಡಲೋಸುಗದಿ ನಾ ।**
**ಲ್ವತ್ತು ಭಾಗವ ಮಾಡಿ ಲೇಶಾಂಶವನು ಜನಕೀವ ॥**
**ಅತ್ಯಲ್ಪಪರಮಾಣುವಿಗೆ ಸಾ ।**
**ಮರ್ಥ್ಯವನು ತಾ ಕೊಟ್ಟು ಸ್ಥೂಲಪ ।**
**ದಾರ್ಥಗಳ ಉಂಡುಣಿಪ ಸರ್ವದ ಸರ್ವಜೀವರಿಗೆ ॥ ೧೧ ॥**

ಜೀವರು ಮಾಡತಕ್ಕ ಪುಣ್ಯಪಾಪಗಳೊಳಗೆ, ಜೀವನ ಭಾಗ, ಜೀವಗೆ ಭೋಗ ಎಷ್ಟು ಎಂದರೆ ಹೇಳತಾರೆ.

ಸತ್ಯವಿಕ್ರಮ–ಅನಾದ್ಯನಂತ ಕಾಲಕ್ಕೂ ಅನ್ಯಾಧೀನನಲ್ಲದ ಸತ್ಯವಾದ ಅಸದೃಶವಾದ ಪರಾಕ್ರಮ ನಿತ್ಯವ್ಯಕ್ತಗಳಾಗಿ ಇರತಕ್ಕ ಶ್ರೀ ಪರಮಾತ್ಮ, ಪುಣ್ಯಪಾಪ–ಆಯಾ ಜೀವರ ಅನಾದಿಕರ್ಮವನ್ನನುಸರಿಸಿ ಬಿಂಬಕ್ರಿಯಾದ್ವಾರಾ ವ್ಯಾಪ್ತನಾದ ಜೀವನಿಂದ, ಸ್ಥೂಲದೇಹದ್ವಾರಾ ಮಾಡಿಸಿದ ಅವರವರ ಪುಣ್ಯಪಾಪಗಳ, ಸಮಸ್ತರಿಗೆ–ಸಮಸ್ತ ಜೀವರಿಗೆ, ಕೊಡಲೋಸುಗದಿ–ಕೊಡೋದಕ್ಕೋಸ್ಕರ, ನಾಲ್ವತ್ತು ಭಾಗವ ಮಾಡಿ – ದಶಸಂಖ್ಯಾ ಶತವಾಚೀ ಸಹಸ್ರವಾಚೀ ಆಗತದೆ, ಸಹಸ್ರಶತವಾಚಕವೂ ಆಗುತ್ತದೆ. ಗುಣತಾರತಮ್ಯದಲ್ಲಿ, ಗ್ರಂಥಾಂತರದಲ್ಲಿಯೂ ಈ ರೀತ್ಯಾ ಇರೋಣದರಿಂದ ನಾಲ್ವತ್ತು ಭಾಗ ಎಂಬುದು, ಅಧಿಕ ಸಂಖ್ಯಾದಿಂದ ನಾನೂರು ಎಂತ ದತ್ತಸ್ವಾತಂತ್ರ್ಯ ವಿಭಾಗದಲ್ಲಿ ಸೂಚಿತವಾಗಿ ಅದೆ. ಪ್ರತಿಜೀವರು ಮಾಡಿದ ಪಾಪಪುಣ್ಯಗಳೆರಡೂ ನಾನ್ನೂರು ಪ್ರಕಾರ ವಿಭಾಗವ ಮಾಡಿ ಅವರವರಿಗೆ ಸ್ವಾತಂತ್ರ್ಯ ಎಷ್ಟೆಷ್ಟು ವಿಭಾಗವ ಮಾಡಿ ಕೊಟ್ಟಿದ್ದಾನೊ, ಅಷ್ಟಷ್ಟು ಪುಣ್ಯಪಾಪಗಳ ಅವರವರಿಗೆ ವಿಭಾಗಮಾಡಿ ಕೊಡೋವನಾಗತಾನೆ. ಅದರಲ್ಲಿ, ಲೇಶಾಂಶವನು–ಅಖಿಳ ಜೀವರಲ್ಲಿ ಒಂದು ಸ್ವಾತಂತ್ರ್ಯಗುಣವಿಟ್ಟಂತೆ ಉಕ್ತವಾಗಿ ಇರೋಣದರಿಂದ, ಈ ರೀತ್ಯಾ ಪ್ರತಿಜೀವರಲ್ಲಿ ಒಂದು ಗುಣದೊಳಗಿನ ಲೇಶದೊಳಗೆ, ಲೇಶಸ್ವಾತಂತ್ರ್ಯಗುಣಾಂಶ ಗುಣ ಇದ್ದಂತಾಯಿತು. ಈ ಲೇಶಾಂಶಕ್ಕೆ ಸರಿಯಾಗತಕ್ಕ ಲೇಶಾಂಶ ಪಾಪಪುಣ್ಯಗಳನ್ನು, ಜನಕೀವ–ಲೇಶಾಂಶ ಸ್ವಾತಂತ್ರ್ಯಗುಣಪ್ರವಿಷ್ಟರಾದ ಜನರುಗಳಿಗೆ ಕೊಡೋವನಾಗತಾನೆ. ಆ ಲೇಶಾಂಶ ಪುಣ್ಯಪಾಪಗಳು ಭೋಗಕಾಲಕ್ಕೆ, ಬೀಜದಿಂದ ವೃಕ್ಷವತ್ ಅನೇಕ ಪುಣ್ಯಪಾಪಗಳು ಬೆಳೆಯುತ್ತವೆ. ಸಮಗ್ರ ಭೋಗಿಸೋಣ ಆಗೋದಿಲ್ಲ. ಭೋಗಿಸಿದ್ದು ಹೋಗತಾ ಉಳದದ್ದು, ಸಂಚಿತವಾಗಿ ರಾಶಿರಾಶಿ ಬಿದ್ದಿರುತ್ತದೆ. ಅತ್ಯಲ್ಪಪರಮಾಣುವಿಗೆ–ಅತ್ಯಂತ ಅಲ್ಪವಾದ ಸ್ವರೂಪದೇಹವುಳ್ಳ ಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರಿಗೆ, ಸಾಮರ್ಥ್ಯವನು ತಾ ಕೊಟ್ಟು–ಸ್ಥೂಲದೇಹಗಳ ಕೊಟ್ಟು, ಅಲ್ಲಿ ಆಯಾ ದೇಹದ್ವಾರಾ ಜೀವರಿಗೆ ಹೆಚ್ಚಾದ ಸಾಮರ್ಥ್ಯ ಕೊಟ್ಟು ಅಂದರೆ, ಗಜಕ್ಕೆ ಇರುವೆ ಜನ್ಮ ಬಂದಾಗ ಸಾಮರ್ಥ್ಯ ಕಡಿಮೆ, ಇರುವೆಗೆ ಗಜ ಜನ್ಮ ಬಂದಾಗ ಸಾಮರ್ಥ್ಯ ಅಧಿಕ ; ಇದು ಸ್ಥೂಲದೇಹ ವಿವಕ್ಷಾದಿಂದ ಕೊಟ್ಟದ್ದು ; ತದ್ವತ್ ಅತಿ

ಪರಮಾಣು ಜೀವಗೆ ದೇಹವಿವಕ್ಷಾದಿಂದ ಅಧಿಕ ಸಾಮರ್ಥ್ಯ ಕೊಟ್ಟು, ಸರ್ವದ–ನಿರಂತರ ದಲ್ಲೂ, ಸರ್ವಜೀವರಿಗೆ–ಸಮಸ್ತ ಜೀವರ, ಅವರವರ ಸ್ಥೂಲದೇಹಗಳಿಗೆ ಯೋಗ್ಯವಾದ, ಸ್ಥೂಲ ಪದಾರ್ಥಗಳ–ಭೋಜನೋಪಯೋಗ ಸ್ಥೂಲ ಪದಾರ್ಥಗಳ, ಸ್ಥೂಲದೇಹದಿಂದ ಮಾಡಲ್ಪಟ್ಟ ಪಾಪಪುಣ್ಯಗಳ, ಉಂಡು–ದೇಹಾಕಾರನಾದ ಬಿಂಬರೂಪಿ ಪರಮಾತ್ಮ, ಜೀವಭುಕ್ತ ಸ್ಥೂಲ ಪದಾರ್ಥಗಳಲ್ಲಿ ತದಾಕಾರನಾಗಿ ಸ್ಥೂಲಶಬ್ದವಾಚ್ಯವಾಗಿನ್ನೂ, ಭಿನ್ನಭಿನ್ನ ಪದಾರ್ಥಗಳ ನಾಮವಾಚ್ಯನಾಗಿನ್ನೂ ಇದ್ದು, ತನ್ನ ಸ್ವಾಖ್ಯ ಸ್ಥೂಲಶಬ್ದವಾಚ್ಯ ಪದಾರ್ಥಗಳ ತಾನು ಉಂಡು ತತ್ಕ್ರಿಯಾದ್ವಾರಾ, ಉಣಿಸಿ–ಸ್ಥೂಲದೇಹದಲ್ಲಿ ವ್ಯಾಪ್ತ ನಾದ ಜೀವಗೆ ಸ್ಥೂಲದೇಹದ್ವಾರಾ ಉಣಸತಾನೆ ಅಂದರೆ, ಜೀವಗೆ ಉಪಚಯ ಭಾಗ ದಾವದೂ ಇಲ್ಲ; ದೇಹಕ್ಕೆ ಮಾತ್ರ ಉಪಚಯ; ಜೀವನ ದ್ವಾರಾ ದೇಹಕ್ಕೆ ಭೋಜನ ಮಾಡಸತಾನಾದಕಡಿಯಿಂದ, ಜೀವರಿಗೆ ಉಣಸತಾನೆ ಎಂತ ಭಾವ, ಜೀವಭುಕ್ತ ಎಂಬುದು ವ್ಯಾಪ್ತವಾದ ಇಂದ್ರಿಯಗಳಿಂದ ನೋಡಿ ಸಂತೋಷಪಡೋಣ; ಇಷ್ಟೇ ಭೋಜನವು.

**ವಿಶೇಷಾರ್ಥ :–** ಈ ಶ್ಲೋಕದಲ್ಲಿ ನಾಲ್ವತ್ತು ಭಾಗ ಎಂತ ಇರುವುದನ್ನು ನಾನ್ನೂರು ಎಂತ ಹ್ಯಾಂಗೆ ತಿಳೀಬೇಕೆಂದರೆ, ಜ್ಞಾನಪೂರ್ವಕ ಪಾಪ ಒಂದು, ಜ್ಞಾನ ಪೂರ್ವಕ ಪುಣ್ಯ ಒಂದು; ಅಜ್ಞಾನಪೂರ್ವಕ ಪಾಪ ಒಂದು, ಅಜ್ಞಾನಪೂರ್ವಕ ಪುಣ್ಯ ಒಂದು, ಅಂತು ನಾಲ್ಕು. ಈ ಜ್ಞಾನಾಜ್ಞಾನಪೂರ್ವಕ ಪಾಪಪುಣ್ಯಗಳ ದಶೇಂದ್ರಿಯ ದಿಂದ ಮಾಡತಾನಾದಕಡಿಯಿಂದ ನಾಲ್ವತ್ತು ಆಯಿತು. ಒಂದೊಂದರಲ್ಲಿ ಹತ್ತುಪ್ರಕಾರ ಗುಣಿಸಿದರೆ ನಾನ್ನೂರು ಆಗತದೆ. ಈ ಪ್ರಕಾರ ಸಮನ್ವಯ ಮಾಡಬೇಕು.

**ತಿಮಿರತರಣಿಗಳೇಕದೇಶದಿ ।**
**ಸಮನಿಸಿಪ್ಪವೆ ಎಂದಿಗಾದರು ।**
**ಭ್ರಮಣಚಳಿಬಿಸಿಲಂಜಿಕಿಗಳುಂಟೇನೊ ಪರ್ವತಕೆ ॥**
**ಅಮಿತಜೀವರೊಳಿದ್ದು ಲಕುಮಿ ।**
**ರಮಣ ವ್ಯಾಪಾರಗಳ ಮಾಡುವ ।**
**ಕಮಲಪತ್ರ ಸರೋವರಗಳೊಳಿಪ್ಪ ತೆರನಂತೆ ॥ ೧೨ ॥**

ಪಾಪಪುಣ್ಯಗಳೆರಡೂ ಜೀವಪರಮಾತ್ಮರು ಮಾಡಿದರೂ ಪರಮಾತ್ಮಗೆ ಮಾತ್ರ ಪುಣ್ಯಪಾಪವಿಲ್ಲ ಎಂತ ಸದೃಷ್ಟಾಂತದಿಂದ ಹೇಳತಾರೆ.

ತಿಮಿರ ತರಣಿಗಳು–ಅಂಧಕಾರ, ಸೂರ್ಯ, ಇವುಗಳು, ಏಕದೇಶದಿ–ಒಂದೇ ಪ್ರದೇಶದಲ್ಲಿ, ಸಮನಿಸಿ–ಸಮಾನವಾಗಿ, ಎಂದಿಗಾದರು ಇಪ್ಪವೆ–ಅನಾದ್ಯನಂತಕಾಲಕ್ಕೂ ಇರೋದಿಲ್ಲ. ಪರ್ವತಕೆ – ಬೆಟ್ಟಕ್ಕೆ, ಭ್ರಮಣ – ಸಂಚಾರಶ್ರಮಾದಿಗಳು, ಚಳಿಬಿಸಿಲ– ಶೀತೋಷ್ಣಗಳ, ಅಂಜಿಕೆಗಳುಂಟೇನೊ-ಇನ್ನೂ ಭಯ ಮೊದಲಾದದ್ದು ಇಲ್ಲ. (ಇದರಂತೆ),

ಅಮಿತ ಜೀವರೊಳಿದ್ದು–ಅಸಂಖ್ಯಾತರಾದ ಜೀವರ ದೇಹದಲ್ಲಿ ಬಿಂಬನಾಗಿದ್ದು, ಲಕುಮಿ ರಮಣ–ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮ, ವ್ಯಾಪಾರಗಳಮಾಡುವ–ಜೀವರ ಅನಾದಿ ಸ್ವರೂಪವನ್ನನುಸರಿಸಿನ್ನೂ ಅನಾದಿಕರ್ಮವನ್ನನುಸರಿಸಿನ್ನೂ ಪ್ರೇರಣಾದಿ ವ್ಯಾಪಾರಗಳನ್ನ ಮಾಡತಾ ಇರತಾನೆ—ಪಾಪಪುಣ್ಯಾಗಳ ಲೇಪವಿಲ್ಲದೆ ಎಂತ ತಾತ್ಪರ್ಯ. ಸೂರ್ಯಗೆ ಅಂಧಕಾರ ಹ್ಯಾಂಗೆ ಲೇಪವಿಲ್ಲವೊ, ಮತ್ತು ಸೂರ್ಯ ಇದ್ದಕಡೆ ಅಂಧಕಾರ ಹ್ಯಾಂಗೆ ಸಮಾನವಾಗಿ ಇರೋದಿಲ್ಲವೊ ತದ್ವತ್, ಪಾಪಗಳೆಂಬ ಅಂಧಕಾರ, ಸೂರ್ಯನೆಂಬ ಪರಮಾತ್ಮನಲ್ಲಿ ಸಮನಿಸಿ ಇರೋದಿಲ್ಲ. ಪರ್ವತಕ್ಕೆ ಗಾಳಿಯಿಂದ ಚಲನ, ಚಳಿ, ಬಿಸಲು, ಅಂಜಿಕಿಗಳು ಇಲ್ಲಧಾಂಗೆ ನಿರ್ಭೀತಿಯಿಂದ ಇದ್ದೋಪಾದಿಯಲ್ಲಿ ನಿರ್ಭೀತಿಯಿಂದ ಜೀವ ರಿಂದ ಪುಣ್ಯಾಪಾಪಗಳ ಮಾಡಿಸುತ್ತಾ, ತದ್ಭಾಗ ತನಗಿಲ್ಲದೆ ತನ್ನ ಸ್ವಾಖ್ಯಗಳ ತಾನು ಸ್ವೀಕರಿಸುತ್ತಾ ಇರ್ತಾನೆ. ಮತ್ತು, ಸರೋವರಗಳೊಳು ಸ್ಥೂಲಸ್ವರೂಪ ದೇಹಾಖ್ಯ ಸರೋವರದೊಳಗೆ, ಇಪ್ಪ – ಇರತಕ್ಕ, ಕಮಲಪತ್ರ – ಕಮಲಪತ್ರಕ್ಕೆ ಸದೃಶನಾದ ಪರಮಾತ್ಮಗೆ, ತೆರನಂತೆ–ಸರೋವರಗತ ಜಲ, ಕಮಲಪತ್ರಕ್ಕೆ ಲೇಪವಿಲ್ಲದೋಪಾದಿಯಲ್ಲಿ ಪಾಪಪುಣ್ಯಾವೆಂಬುದು ಸಂಬಂಧವಿಲ್ಲ. ಕಮಲಪತ್ರದ ಅಧೋಭಾಗಕ್ಕೆ ಸದೃಶನಾದ ಜೀವಗೆ, ಉದಕಸದೃಶವಾದ ಪಾಪಪುಣ್ಯಾಗಳು ಲೇಪವಾಗುತ್ತಾ ಇರುತ್ತವೆ ಎಂತ ತಾತ್ಪರ್ಯ.

**ಅಂಬುಜೋದ್ಭವಮುಖ್ಯಸುರ ಕಲಿ ।**
**ಶಂಬರಾದಿ ಸಮಸ್ತದೈತ್ಯಕ ।**
**ದಂಬಕನುದಿನ ಪುಣ್ಯಪಾಪವಿಭಾಗವನೆ ಮಾಡಿ ॥**
**ಅಂಬುಧಿಯ ಜಲವನು ಮಹಾಘಟ ।**
**ಬಿಂಬರಿತು ತುಂಬುವ ತೆರದಿ ಪ್ರತಿ ।**
**ಬಿಂಬರೊಳು ತಾನಿದ್ದು ಯೋಗ್ಯತೆಯಂತೆ ಫಲವೀವ ॥ ೧೩ ॥**

ದೇಹಗತ ದೇವ ದೈತ್ಯರಿಗೆ ಪುಣ್ಯಾಪಾಪ ವಿಭಾಗಮಾಡಿ ಕೊಡೋಣ ಎಂಬುದು ಸಮವಾಗಿ ಕೊಡತಾನಾ, ವಿಷಮವಾಗಿ ಕೊಡತಾನಾ ಎಂದರೆ ಹೇಳತಾರೆ.

ಅಂಬುಜೋದ್ಭವಮುಖ್ಯ–ಕಮಲದಲ್ಲಿ ಉತ್ಪನ್ನರಾದ ಬ್ರಹ್ಮದೇವರು; ಸರ್ವೇಂ ದ್ರಿಯ ನಿಯಾಮಕತ್ವ ಬ್ರಹ್ಮದೇವರಿಗೆ ಮಾತ್ರವೆ, ಸುರ–ತದನ್ಯರಾದ ತತ್ತ್ವಾಭಿಮಾನಿ ಗಳಾದ ರುದ್ರಾದಿದೇವತೆಗಳಿಗೆ ಸರ್ವೇಂದ್ರಿಯನಿಯಾಮಕತ್ವ ಇಲ್ಲ; ಏಕೈಕ ಇಂದ್ರಿಯ ನಿಯಾಮಕರು. ಈ ಪ್ರಕಾರ ದೇಹದಲ್ಲಿ ತತ್ತ್ವಾಭಿಮಾನಿ ದೇವತೆಗಳು ಸ್ಥೂಲೇಂದ್ರಿಯ ನಿಯಾಮಕರಾಗಿ ಇದ್ದಾರೆ. ಇಂದ್ರಿಯಗಳ ದ್ವಾರಾ ಪುಣ್ಯಕರ್ಮನಿಯಾಮಕರು, ದೇವತೆಗಳು. ಕಲಿಶಂಬರಾದಿ–ದೇವತೆಗಳೋಪಾದಿ ಕಲಿಯೇನು, ಶಂಬರಾಸುರ ಇವರೇ ಆದಿಯಾಗಿ, ಸಮಸ್ತ ದೈತ್ಯ–ಸಮಸ್ತ ಪ್ರಾಣಿಗಳ ಸ್ಥೂಲ ದೇಹೇಂದ್ರಿಯಾದಿಗಳಲ್ಲಿ ಇಂದ್ರಿಯನಿಯಾಮಕರಾಗಿ ಪಾಪಕರ್ಮ ಪ್ರೇರಕರಾಗಿ ದೈತ್ಯರು ಇದ್ದಾರೆ, ಕದಂಬಕೆ–

ಜೀವರ ಸ್ಥೂಲದೇಹಗತ ತತ್ತ್ವನಿಯಾಮಕರಾದ ದೇವತಾಸಮೂಹ, ದೈತ್ಯಸಮೂಹ, ಈ ಉಭಯ ವಿಧ ಸಮೂಹಕ್ಕೆ, ಅನುದಿನ–ಪ್ರತಿದಿನದಲ್ಲೂ ಪರಮಾತ್ಮನ ಆಜ್ಞಾದಿಂದ ದೇವ ದೈತ್ಯರ ದ್ವಾರಾ, ಜೀವನಿಂದ ದೇಹದ್ವಾರಾ ಮಾಡಲ್ಪಟ್ಟ ಪುಣ್ಯ ಪಾಪಕರ್ಮಗಳು, ಪುಣ್ಯ ಪಾಪ ವಿಭಾಗವನೆ ಮಾಡಿ–ಈ ಪುಣ್ಯ ಪಾಪ ಎರಡರ ಒಳಗೆ ಪುಣ್ಯವನ್ನ ವಿಭಾಗ ಮಾಡಿ ದೇಹಗತ ದೇವತೆಗಳಿಗೂ, ಪಾಪಕರ್ಮ ವಿಭಾಗಮಾಡಿ ದೇಹಗತ ದೈತ್ಯರಿಗೂ, ಅವರವರ ಸ್ವಾತಂತ್ರ್ಯವಿಭಾಗಕ್ಕೆ ಸಮತೂಕವಾಗಿ ಅವರವರಿಗೆ ಕೊಡತಾನೆ. ದೇಹಧಾರಿ ಜೀವಗೂ ಇವನಲ್ಲಿ ಇಡಲ್ಪಟ್ಟ ಲೇಶಾಂಶ ಸ್ವಾತಂತ್ರ್ಯಭಾಗಕ್ಕೆ ಸಮತೂಕ ಪುಣ್ಯಪಾಪ ಗಳೆರಡೂ ಕೊಡತಾನೆ. ಇದಕ್ಕೆ ದೃಷ್ಟಾಂತ, ಅಂಬುಧಿಯ ಜಲವನು–ಸಮುದ್ರದಲ್ಲಿರುವ ಜಲವನ್ನು, ಮಹಾಘಟಬಿಂಬರಿತು–ದೊಡ್ಡದಾದ ಗಡಿಗಿ, ಹಾಂಗೆ ಸಣ್ಣಸಣ್ಣವಾದ ತಾರತಮ್ಯಾನುಸಾರ ಇರತಕ್ಕ ಘಟಗಳು, ಅದರದರ ಯೋಗ್ಯತಾ ಎಷ್ಟು ನೀರು ತುಂಬೋದೊ ಅದರ ಯೋಗ್ಯತಾ ಲೋಗರು ಅರಿತು, ತುಂಬುವ ತೆರದಿ–ನೀರು ತುಂಬು ವೋಪಾದಿಯಲ್ಲಿ, ಪ್ರತಿಬಿಂಬರೊಳು – ಪರಮಾತ್ಮಗೆ ಪ್ರತಿಬಿಂಬರಾದ ಜೀವರೊಳು, ತಾನಿದ್ದು–ತಾನು ಇದ್ದವನಾಗಿ, ಯೋಗ್ಯತೆಯಂತೆ–ಘಟಸದೃಶರಾದ ಜೀವರಲ್ಲಿ ಘಟಗತ ಅವಕಾಶ ಸದೃಶವಾದ ಯೋಗ್ಯತೆ ಇದ್ದಂತೆ, ಪುಣ್ಯಪಾಪಗಳೆಂಬ ಸಮುದ್ರಗತ ಫಲಸದೃಶ ವಾದ ಉದಕವೆಂಬ, ಫಲವೀವ–ಅವರವರ ಸ್ವರೂಪಯೋಗ್ಯತಾನುಸಾರ ಅಧಿಕ ನ್ಯೂನ ಗಳಾಗಿ ತಾರತಮ್ಯಾನುಸಾರ, ದೈತ್ಯರಿಗೆ ಪಾಪಕರ್ಮದ ವಿಭಾಗದ ಫಲವೂ, ಹಾಂಗೆ ದೇವತೆಗಳಿಗೆ ಪುಣ್ಯಕರ್ಮದ ವಿಭಾಗದ ಫಲವೂ, ದೇಹಗತ ದೇಹಧಾರಿಯಾದ ಜೀವಗೆ ಅವನ ಯೋಗ್ಯತಾನುಸಾರ ಪುಣ್ಯ, ಪಾಪ ಎರಡೂ ಫಲವೂ ಕೊಡೋವನಾಗತಾನೆ ಎಂತ ತಾತ್ಪರ್ಯ.

**ಇನಿತು ವಿಷ್ಣು ರಹಸ್ಯದೊಳು ಭೃಗು ।**
**ಮುನಿಪ ಇಂದ್ರದ್ಯುಮ್ನಗರುಪಿದ ।**
**ದನು ಬುಧರು ಕೇಳುವದು ನಿತ್ಯದಿ ಮತ್ಸರವ ಬಿಟ್ಟು ॥**
**ಅನುಚಿತೋಕ್ತಿಗಳಿದ್ದರೆಯು ಸರಿ ।**
**ಗಣನೆ ಮಾಡದಿರೆಂದು ವಿದ್ವ ।**
**ಜ್ಜನಕೆ ವಿಜ್ಞಾಪನೆಯ ಮಾಡುವೆ ವಿನಯಪೂರ್ವಕದಿ ॥ ೧೪ ॥**

ಈ ಗ್ರಂಥಕರ್ತರು ಸಜ್ಜನರನ್ನ ಪ್ರಾರ್ಥನೆ ಮಾಡುವುದರನ್ನ ಹೇಳತಾರೆ.

ಇನಿತು–ಈ ಪೂರ್ವೋಕ್ತಪ್ರಕಾರವಾಗಿ ಸ್ವಾತಂತ್ರ್ಯವಿಭಾಗಕ್ರಮ, ವಿಷ್ಣುರಹಸ್ಯ ದೊಳು–ವಿಷ್ಣುರಹಸ್ಯವೆಂಬ ಪುರಾಣದೊಳಗೆ, ಭೃಗುಮುನಿಪ–ಭೃಗುಕುಲೋತ್ಪನ್ನನಾದ ಪರಶುರಾಮದೇವರು, ಇಂದ್ರದ್ಯುಮ್ನಗೆ–ಇಂದ್ರದ್ಯುಮ್ನರಾಯಗೆ, ಅರುಪಿದ–ಉಪದೇಶ ರೂಪದಿಂದ ತಿಳಿಸೋವನಾದನು. (ಅದನ್ನೇ ಉದಹರಿಸಿದ್ದೇವೆ ಎಂತ ಭಾವ), ಅದನು– ಅದರನ್ನ, ಬುಧರು–ಗುರೂಪದೇಶದಿಂದ ಸಚ್ಛಾಸ್ತ್ರಸಂಪ್ರದಾಯಾಭಿಜ್ಞರಾದ ಜ್ಞಾನಿಗಳು,

ಮತ್ಸರವ ಬಿಟ್ಟು–ಪಾಂಡಿತ್ಯಮತ್ಸರ ಬಿಟ್ಟು, ನಿತ್ಯದಿ ಕೇಳುವದು–ಪ್ರತಿದಿನದಲ್ಲೂ, ಶ್ರವಣ ಮಾಡೋವರಾಗಬೇಕು. ಅನುಚಿತೋಕ್ತಿಗಳು–ಸಚ್ಛಾಸ್ತ್ರಕ್ಕೆ ವಿರುದ್ಧವಾದ ಉಕ್ತಿಗಳು, ಇದ್ದರೆಯು ಸರಿ–ಈ ಗ್ರಂಥದಲ್ಲಿ ಇದ್ದ ಪಕ್ಷದಲ್ಲಿ, ಗಣನೆಮಾಡದಿರಿ–ಈ ಕಾವ್ಯವನ್ನ ಗಣನಾಮಾಡದೆ ಇರೋಣವೇ ಸರಿ (ಅಂದರೆ ಸರಿಯಾಗಿ ಅದೆ ಎಂತ ಅರ್ಥ) ಎಂದು–ಎಂತ, ವಿನಯಪೂರ್ವಕದಿ–ವಿಶೇಷ ವಿನಯದಿಂದ, ವಿದ್ವಜ್ಜನಕೆ–ಸಚ್ಛಾಸ್ತ್ರಾಭಿಜ್ಞರಾದ ವಿದ್ವಾಂಸರಿಗೆ, ವಿಜ್ಞಾಪನೆಯ ಮಾಡುವೆ–ಪ್ರಾರ್ಥನ ಮಾಡಿಕೊಂಡಿದ್ದೇನೆ ಎಂತ, ಶ್ರೀ ಜಗನ್ನಾಥದಾಸರಾಯರು ಪ್ರಾರ್ಥನಾ ಮಾಡಿಕೊಂಡಿದ್ದಾರೆ ಎಂತ ತಾತ್ಪರ್ಯ.

**ವೀತಭಯ ವಿಶ್ವೇಶ ವಿಧಿಪಿತ ।**
**ಮಾತುಳಾಂತಕ ಮಧ್ವವಲ್ಲಭ ।**
**ಭೂತಭಾವನನಂತಭಾಸ್ಕರತೇಜ ಮಹರಾಜ ॥**
**ಗೌತಮರ ಮಡದಿಯನು ಕಾಯ್ದಾ ।**
**ನಾಥರಕ್ಷಕ ಗುರುತಮ ಜಗ ।**
**ನ್ನಾಥವಿಠ್ಠಲ ತನ್ನ ನಂಬಿದ ಭಕುತರನೆ ಪೊರೆವ ॥ ೧೫ ॥**

ಶ್ರೀ ಪರಮಾತ್ಮನ್ನ ಸ್ತೋತ್ರ ಮಾಡುತ್ತಾರೆ.

ವೀತಭಯ–ಸುರರೇನು, ಅಸುರರೇನು ದಾರಿಂದಲೂ ಭಯಪಡಿಸಲು ಶಕ್ಯನಲ್ಲದವ, ವಿಶ್ವೇಶ–ಚರಾಚರ ಸಮಸ್ತ ಪ್ರಪಂಚಕ್ಕೆ ಸ್ವಾಮಿಯಾದವ, ವಿಧಿಪಿತ–ಬ್ರಹ್ಮದೇವರಿಗೆ ತಂದಿಯಾದವ, ಮಾತುಳಾಂತಕ–ಭಕ್ತರ ರಕ್ಷಣಾರ್ಥ ಸೋದರಮಾವನ್ನ ಸಂಹಾರ ಮಾಡಿದವ, ಮಧ್ವವಲ್ಲಭ–"ಭಕ್ತ್ಯೈವ ತುಷ್ಟಿಮಭ್ಯೇತಿ ವಿಷ್ಣುರ್ನಾನ್ಯೇನ ಕೇನಚಿತ್" ಎಂತ ನಿರ್ಣಯೋಕ್ತಿ ಇರುವದ್ದರಿಂದ ಅತ್ಯಂತ ಪ್ರಿಯರಾದ ಶ್ರೀ ಮದಾನಂದತೀರ್ಥರಿಗೆ ಪ್ರಿಯನಾದವ, ಭೂತಭಾವನ–ಪ್ರಾಣಿಗಳ ಪಂಚಭೂತಗಳ ಸೃಷ್ಟಿಮಾಡಿದವ, ಅನಂತ ಭಾಸ್ಕರತೇಜ–ಅನಂತ ಸೂರ್ಯಪ್ರಕಾಶನಾದವ, ಮಹರಾಜ–ಚರಚರಾತ್ಮಕ ಇನ್ನೂ ಅನಂತಾನಂತ ಬ್ರಹ್ಮಾಂಡಗಳಿಗೆ ರಾಜನಾದವ, ಗೌತಮರ–ಗೌತಮ ಋಷಿಯಿಂದ ಶಾಪಗ್ರಸ್ತಳಾಗಿ ಶಿಲಾರೂಪದಿಂದ ಇದ್ದ, ಮಡದಿಯನು–ಅಹಲ್ಯಾದೇವಿಯನ್ನು ತನ್ನ ಪಾದ ಸ್ಪರ್ಶದಿಂದ, ಕಾಯ್ದು–ಶೈಲತ್ವ ಪರಿಹಾರ ಮಾಡಿ ಪೂರ್ವವತ್ ದಿವ್ಯಸ್ತ್ರೀಯನ್ನಾಗಿ ರಕ್ಷಣ ಮಾಡಿದ ಶ್ರೀರಾಮಾವತಾರನಾದವ, ಅನಾಥರಕ್ಷಕ–ನಾಥರು ಇಲ್ಲದವರನ್ನ ಸಂರಕ್ಷಣ ಮಾಡತಕ್ಕವ, ಗುರುತಮ–ಜ್ಞಾನೋಪದೇಶ ಮಾಡುವ ಗುರುಗಳಕಿಂತಲೂ ಶ್ರೇಷ್ಠನಾದವ. ಜಗನ್ನಾಥವಿಠ್ಠಲ–ಜಗತ್ತಿಗೇ ಸ್ವಾಮಿಯಾಗಿಯೂ, ಪಾಪಪರಿಹಾರಕ ನಾಗಿಯೂ ಇರುವ ಈ ಪರಮಾತ್ಮ, ತನ್ನ ನಂಬಿದ–ನೀನೇ ಗತಿ ಎಂತ ನಂಬಿದ, ಭಕುತರನೆ ಪೊರೆವ–ಏಕಾಂತ ಭಕ್ತರನ್ನ ಸಂರಕ್ಷಣೆ ಮಾಡತಾನೆ ಎಂತ ತಾತ್ಪರ್ಯ.

ಈ ಸಂಧಿಯಲ್ಲಿ ಹೇಳಿದ ಸ್ವಗತಸ್ವಾತಂತ್ರ್ಯವಿಚಾರಕ್ಕೆ 'ವಿಷ್ಣುರಹಸ್ಯಪುರಾಣ' ೩ಂನೇ ಅಧ್ಯಾಯಸ್ಥ ವಚನಗಳು :–

" ಸ್ವತಂತ್ರಃ ಪರಮೋ ವಿಷ್ಣುರ್ಮಾಯಾ ತಸ್ಯಾಂಗಸಂಗಿನೀ |
ಬ್ರಹ್ಮಾ ಪ್ರಾಣಶ್ಚ ಸಚಿವೌ ಸರ್ವಕರ್ಮಸು ತತ್ಪ್ರಿಯೌ || ೧ ||

ತ್ರಿವಿಧಾಹಂಕೃತಿಃ ಸಾಕ್ಷಾದ್ರುದ್ರೋsಪಿ ಸಚಿವಃ ಸ್ಮೃತಃ |
ಮನಸೋಧಿಪತಿಃ ಶಕ್ರೋsರ್ಕಾದ್ಯಾ ಇಂದ್ರಿಯದೇವತಾಃ || ೨ ||

ಏವಮೇವ ಹಿ ಕಲ್ಯಾದ್ಯಾಃ ಸರ್ವದೇಹೇಷು ಸಂಸ್ಥಿತಾಃ |
ಬ್ರಹ್ಮವಚ್ಚ ಕಲಿಸ್ತೇಷಾಂ ಬಂಧಕೋsಹಂಕೃತಿಃ ಸ್ಮೃತಃ || ೩ ||

ಮಧುಕೈಟಭಮುಖ್ಯಾಶ್ಚ ಶಂಬರಾದ್ಯಾ ಮನೋಧಿಗಾಃ |
ಅನ್ಯೇsಪಿ ದೇವದೈತ್ಯಾಸ್ತು ತತ್ತದಿಂದ್ರಿಯಮಾನಿನಃ || ೪ ||

ಸ್ವತಂತ್ರೋsಪಿ ಹರಿಃ ಸೃಷ್ಟ್ವಾ ಸ್ವಸ್ವಾತಂತ್ರ್ಯಮನೇಕಧಾ |
ವಿಭಜ್ಯಾದಾನ್ನೃಪ ಇವ ಸರ್ವಕಾರ್ಯೇಷು ಲೀಲಯಾ || ೫ ||

ತತ್ತತ್ ಸ್ವಾತಂತ್ರ್ಯಯೋಗೇನ ಫಲಭಾಕ್ ಸ ಪ್ರಜಾಯತೇ |
ಸ್ವಸ್ವಾತಂತ್ರ್ಯಚತುರ್ಥಾಂಶಂ ದಶಧಾ ವ್ಯಭಜದ್ಧರಿಃ || ೬ ||

ಪಾದೋನಪಂಚಕಂ ಪ್ರಾಣೇ ಸಪಾದಂ ಬ್ರಹ್ಮಣೇ ದದೌ |
ದ್ವಿತೀಯೇ ತು ಚತುರ್ಥಾಂಶೇ ದಶಧೈವ ವಿಭಾಜಿತೇ || ೭ ||

ದ್ವಾವೇವಾಂಶಾವಹಂಕಾರೇ ಸಾರ್ಧೈಕಂ ಚಿತ್ತದೈವತೇ |
ಭಗವಾನ್ ಪ್ರದದಾವಿಂದ್ರೇ ಏಕಮೇವೇಂದ್ರಿಯಾಧಿಪೇ || ೮ ||

ಏಕಮೇವ ದದೌ ಜೀವೇ ದೈತ್ಯೇಭ್ಯಃ ಸಾರ್ಧಚಾತುರಾನ್ |
ಅಥ ದ್ವೌ ತು ತುರೀಯಾಂಶೌ ಸ್ವಾತಂತ್ರ್ಯಸ್ಯಾವಶೇಷಿತೌ || ೯ ||

ತೌ ವಿಧಾಯ ತ್ರಿಧಾ ತ್ರ್ಯಂಶಂ ಮಾಯಾಯೈ ಪ್ರದದೌ ಸ್ವಯಂ |
ಶೇಷಂ ಭಾಗದ್ವಯಂ ಸ್ವಸ್ಮಿನ್ ಸ್ಥಾಪಯೇತ್ಸ ನಿಜೇಚ್ಛಯಾ || ೧೦ ||

ಯದಿಂದ್ರಿಯೇನ ಯತ್ಕುರ್ವನ್ ಪುಣ್ಯಂ ಪಾಪಂ ಚ ದೃಶ್ಯತೇ |
ತಸ್ಯ ತತ್ತತ್ಸ್ವತಂತ್ರತ್ವಾತ್ ಫಲಭಾಜೋsಖಿಲಾ ಹಿ ತೇ || ೧೧ ||

ಗೃಹ್ಣಾತಿ ಹಿ ಹರಿಃ ಪುಣ್ಯಂ ಪಾಪಂ ಭಸ್ಮೀಕರೋತಿ ಚ |
ಸ್ವಸ್ಯ ಚ ದ್ರೋಹಿಣಃ ಕಿಂಚಿತ್ ಪಾಪಾಂಶಂ ಪ್ರದದಾತಿ ಸಃ || ೧೨ ||

ತಥೈವ ನಿಜಭಕ್ತಾನಾಂ ಬ್ರಹ್ಮಾದೀನಾಂ ಚ ಯೇ ದ್ರುಹಃ |
ತೇಭ್ಯ ಏವ ಹಿ ತತ್ಪಾಪವಿಭಾಗಂ ಪ್ರದದಾತ್ಯಜಃ || ೧೩ ||

ಪಾಪಕರ್ಮಣಿ ಯೇsಪಿ ಸ್ಯುಃ ಸಹಾಯಾಃ ಪಾಪರೂಪಿಣಃ |
ಯಥಾಪರಾಧಂ ತೇಭ್ಯೋsಪಿ ಪಾಪಾನಾಂ ವಿಭಜತ್ಯಸೌ || ೧೪ ||

ದೈತ್ಯಭಾಗಗತಂ ಪುಣ್ಯಂ ತಥಾ ಭಾಗಂ ದದಾತಿ ಚ |
ಪುಣ್ಯಕರ್ಮಸಹಾಯಾ ಯೇ ತೇಷಾಮಥ ಚ ಯೇ ನರಾಃ || ೧೫ ||

ದೈತ್ಯನಿಂದಾಂ ನ ಕುರ್ವಂತಿ ತೇಽಪಿ ತತ್ಪಾಪಭಾಗಿನಃ |
ಏವಂ ಪುಣ್ಯಸ್ಯ ಪಾಪಸ್ಯ ಚತ್ವಾರಿಂಶತ್ತಮಂ ಲವಮ್ || ೧೬ ||

ಪ್ರಾಪ್ನೋತಿ ಜೀವಸ್ತೇನೈವ ಪೂರ್ಣೋಽಯಂ ಭವತಿ ಧ್ರುವಮ್ |
ಅಲ್ಪಶಕ್ತಿತ್ವತೋಽಲ್ಪಂ ಚ ಪುಣ್ಯಂ ಪಾಪಂ ಪ್ರಜಾಯತೇ || ೧೭ ||

ಸ್ವಯೋಗ್ಯಂ ಜಲಮಾದತ್ತೇ ಸಮುದ್ರಾದುದ್ಧೃತೋ ಘಟಃ |
ತಾವತೈವ ಭವೇತ್ಪೂರ್ಣ ಏವಮತ್ರ ನಿದರ್ಶನಮ್ || ೧೮ ||

ಎಂತ ವಿಷ್ಣುರಹಸ್ಯಪುರಾಣಾರ್ಥ ವಿವರಿಸಿತು. ಈ ಸಂಧಿಯಲ್ಲಿ ಸರ್ವಜೀವರಿಗೆ ಒಂದು ಗುಣ ಕೊಟ್ಟ. ಅಂದರೆ ಕಾಲಾನುಸಾರ ಬಂದ ಒಂದೊಂದೇ ದೇಹದ ಅಭಿಮಾನದಿಂದ ಪುಣ್ಯಪಾಪ ಆಚರಿಸಿ ಸುಖದುಃಖಾನುಭವಿಪ ಜೀವನು ಅತ್ಯಲ್ಪ ಶಕ್ತನು ಎಂತ ಅರ್ಥ. ಇತರ ದೇಹಗಳಲ್ಲಿ ಆಚರಿಸುವ ಮುಂತಾದ ಶಕ್ತಿ ತತ್ತ್ವೇಶರಿಗೆಂದು ಕ್ರಮೇಣ ಯೋಚಿಸಿ ತಿಳಿಯಬೇಕೆಂತ ತಾತ್ಪರ್ಯ.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ಸ್ವಗತಸ್ವಾತಂತ್ರ್ಯಸಂಧಿವ್ಯಾಖ್ಯಾನಂ ಸಂಪೂರ್ಣಂ**

|| ಶ್ರೀ ಕೃಷ್ಣಾರ್ಪಣಮಸ್ತು ||

ಭವಭೀತಿ ಬಿಡಿಸುವ

## ಶ್ರೀ ಲಕ್ಷ್ಮೀನರಸಿಂಹದೇವರ ಸ್ತೋತ್ರ

ಪದ ರಾಗ, ಪಂತುವರಾಳಿ ತ್ರಿವಿಡಿ ತಾಳ

ನೀರ ತರಂಗಿಣಿ ತೀರ ನರಸಿಂಹ |
ಸಾರಿದೆನೊ ತವ ಪಾದ ಪಂಕಜ ||
ತೋರು ಮನದಲಿ ತವಕದಿ || ಪಲ್ಲವಿ ||

ನಾರದ ನುತ ಚಿಚ್ಛರೀರಗ ಶ್ರೀ ಭೂ ದು |
ರ್ಗಾ ರಮಣ ದುರಿತಾರಿ ಬ್ರಹ್ಮ ಸ |
ಮೀರ ಮುಖ ವಿಬುಧಾರ್ಚಿತ ||
ಚಾರು ಚರಣ ಯುಗ ಕ್ಷೀರಾಬ್ಧಿಶಯನ |
ಮದ್ಭಾರ ನಿನ್ನದು ಮೂರುಲೋಕದ |
ಸೂರಿಗಮ್ಯ ಸುಖಾತ್ಮಕ || ೧ ||

ವೇದ ವೇದ್ಯ ಸಂಸಾರೋದಧಿ ತಾರಕ |
ಭೇದ ಭೇದ ವಿಷಾದವೇ ಮೊದ |
ಲಾದ ದೋಷವರ್ಜಿತ ||
ಶ್ರೀದ ಶ್ರೀಶ ಅನಂತ (ಅನ್ನಾದ) ಆಪ್ತಕಾಮ |
ಬಾದರಾಯಣ ಭಕ್ತವರ ಪ್ರ |
ಹ್ಲಾದ ಪೋಷಕ ಪಾಹಿ ಮಾಂ || ೨ ||

ಹೋತ ಹೃದ್ಯ ಜಗನ್ನಾಥವಿಠಲ ನಿನ್ನ |
ಮಾತುಮಾತಿಗೆ ಸ್ಮರಿಸುತಿಹ ಸ |
ಚ್ಚೇತನರನು ನೀ ಸರ್ವದಾ |
ವೀತಶೋಕ ಭವ ಭೀತಿ ಬಿಡಿಸಿ ತವ |
ದೂತರೊಳಗಿಡು ಮಾತರಿಶ್ವಗ ಭೂತಭಾವನ ಭವ್ಯದ || ೩ ||

ವೈಕುಂಠದಲಿ ಮುಕ್ತಿಪ್ರದನಾದ ವೇಂಕಟಾದ್ರಿ

## ಶ್ರೀ ವೇಂಕಟೇಶದೇವರ ಸ್ತೋತ್ರ

ಪದ ರಾಗ, ಸೌರಾಷ್ಟ್ರ ತ್ರಿವಿಡಿ ತಾಳ

ಶರಣು ಶಂಕರ ಭೂಷಣಾದ್ರಿಗೆ | ಶರಣು ಮೇರುತನಯಗೆ ||
ಶರಣು ಖಗ ಮೃಗ ತರು ಲತಾಂಕಗೆ | ಶರಣು ವಿಂಶತಿ ನಾಮಗೆ ಶರಣು || ಪ ||
ವರಹ ನೀಲಾಂಜನ ಕನಕಋಷಿ | ಗರುಡ ಘನ ನಾರಾಯಣಾ |
ಉರಗ ತೀರ್ಥಾನಂದ ಶ್ರೀ ಪು | ಷ್ಕರ ವೃಷಭ ವೈಕುಂಠಗೆ || ೧ ||
ಜ್ಞಾನಪರ್ವತ ಮೇರು ಶೃಂಗಗೆ | ಶ್ರೀನಿವಾಸ ಕ್ರೀಡ ಪಂ |
ಚಾನನಾಹ್ವಯ ವೇಂಕಟಾದ್ರಿಗೆ | ಕ್ಷೋಣಿಯೊಳು ಸುರಮಾನ್ಯಗೆ || ೨ ||
ರತುನ ಕಾಂಚನ ಶ್ರೀನಿವಾಸನ | ಪ್ರತಿಮೆಯಂದ (ಪ್ರತಿಮೆ ಅಂದ) ಪೊಳವಗೆ |
ಕೃತಿ ರಮಣ ಜಗನ್ನಾಥ ವಿಠಲನ | ಅತುಳ ಮಂದಿರನೆನಿಪಗೆ || ೩ ||